ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫—೮

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)

ಒಂಬತ್ತನೆಯ ಸ್ಕಂಧ

**ಭಾಗ ೧**

**ಅಧ್ಯಾಯಗಳು ೧—೨೫**

ಅನುವಾದಕ

ಆಸ್ಥಾನ ಮಹಾವಿದ್ವಾನ್,

**ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,**

ಸಾಹಿತ್ಯವಿದ್ವಾನ್

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೪

# ಮುನ್ನುಡಿ

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

ಈ ಸ್ಕಂಧದಲ್ಲಿ ಪ್ರಕೃತಿಯು ಈ ಜಗತ್ತಿನ ಸೃಷ್ಟಿಯನ್ನು ನೆರವೇರಿಸಲು ದುರ್ಗಾ, ರಾಧಾ, ಲಕ್ಷ್ಮೀ, ಸರಸ್ವತೀ, ಸಾವಿತ್ರೀ ಎಂದು ಐದು ರೂಪಾದುದನ್ನು ವರ್ಣಿಸಿದೆ. ಅಲ್ಲದೆ ಗೋಪಾಲಸುಂದರೀರೂಪನಾದ ಶ್ರೀಕೃಷ್ಣಮೂರ್ತಿಯಿಂದ ಬ್ರಹ್ಮಾ ವಿಷ್ಣು ರುದ್ರರೂ ಸರಸ್ವತೀ ಲಕ್ಷ್ಮೀ ಗೌರೀದೇವಿಯರೂ ಹುಟ್ಟಿದರೆಂದೂ, ಶ್ರೀಕೃಷ್ಣನೇ ಈ ಶಕ್ತಿದೇವಿಯರನ್ನು ಈ ತ್ರಿಮೂರ್ತಿಗಳಿಗೆ ಕೊಟ್ಟನೆಂದೂ ವರ್ಣಿಸಿದೆ. ಆದರೆ ಹಿಂದೆ ಮೂರನೆಯ ಸ್ಕಂಧದಲ್ಲಿ ಸತ್ವರಜಸ್ತಮಸ್ ಎಂಬ ಗುಣತ್ರಯದ ಸಾಮ್ಯಾವಸ್ಥಾರೂಪವಾದ ಮಾಯೆಯೇ ಉಪಾಧಿಯಾಗಿ ಉಳ್ಳ ಬ್ರಹ್ಮತತ್ವಕ್ಕೆ ಎಲ್ಲ ಪ್ರಪಂಚಗಳಿಗೂ ಮೂಲಕಾರಣವಾದ ಪರಾಶಕ್ತಿ ಅಥವಾ ಭಗವತೀಶಕ್ತಿ ಎಂದು ಹೆಸರೆಂದೂ, ಈ ಶಕ್ತಿವಿಶಿಷ್ಟ ಪರಬ್ರಹ್ಮದಿಂದ ತ್ರಿಮೂರ್ತಿಗಳೂ ಹುಟ್ಟಿದರೆಂದೂ, ಗೌರೀ ಲಕ್ಷ್ಮೀ ಸರಸ್ವತಿಯರೂ ಭಗವತೀಶಕ್ತಿಯಿಂದಲೇ ಸಾಕ್ಷಾತ್ತಾಗಿ ಹುಟ್ಟಿದರೆಂದೂ, ಈ ಭಗವತೀದೇವಿಯೇ ಈ ಶಕ್ತ್ಯಂಶರಾದ ದೇವಿಯರನ್ನು ಈ ತ್ರಿಮೂರ್ತಿಗಳಿಗೆ ಕೊಟ್ಟಳೆಂದೂ, ವರ್ಣಿಸದೆ. ಹೀಗೆ ಈ ಎರಡು ಬಗೆಯಾದ ಪ್ರಕ್ರಿಯೆಗಳಿಗೂ ಪರಸ್ಪರವಾಗಿ ಭೇದವಿರುವುದರಿಂದ, ವಿರುದ್ಧವಾಗಿರುವ ಈ ಎರಡೂ ಅಪ್ರಮಾಣಗಳೆಂದು ತಿಳಿಯಬಾರದು. ಕಲ್ಪಭೇದ, ವಕ್ತೃಭೇದ, ಬೋದ್ಧವ್ಯಭೇದ, ಉಪಾಸನಾಭೇದ, ಉದ್ದೇಶಭೇದ ಇವೇ ಮುಂತಾದವುಗಳ ದೃಷ್ಟಿಯಿಂದ ಈ ವಿವರಣೆಗಳಲ್ಲಿ ಭೇದವಿರುವುದು ಸಹಜವಾದುದೆಂಬುದನ್ನು ಮರೆಯಬಾರದು. ಮೂರನೆಯ ಸ್ಕಂಧದಲ್ಲಿ ವ್ಯಾಸನು ವಕ್ತೃವು; ಇಲ್ಲಿ ನಾರಾಯಣನು ವಕ್ತೃವು. ಪೂರ್ವಸಂಸ್ಕಾರ, ರುಚಿಗಳ ಭೇದದಿಂದ ವಿಷ್ಣುಪಾರಮ್ಯದಲ್ಲಿ ಆದರವುಳ್ಳ ವೈಷ್ಣವರ ಉಪಾಸನೆಗಾಗಿ ರಾಧಾಕೃಷ್ಣರ ಸರ್ವೋತ್ಕರ್ಷವನ್ನು ಹೇಳಿದೆ. ಅಷ್ಟುಮಾತ್ರವೇ ಹೊರತು ಇದೇ ಪರಮತತ್ವಸಿದ್ಧಾಂತವಲ್ಲವು. ಆದುದರಿಂದಲೇ ಇಲ್ಲಿ ಹರಿಹರಾಭೇದ ಮತ್ತು ಅರ್ಧನಾರೀಶ್ವರಭಾವವನ್ನೂ ವರ್ಣಿಸಿರುವುದೂ ಒಂದು ವಿಶೇಷ ಗುಣವಾಗಿದೆ.

ಅಲ್ಲದೆ ಹದಿನೆಂಟು ಪುರಾಣಗಳಲ್ಲಿಯೂ ಇಂತಹ ಭೇದಗಳಿರುವುದರಿಂದ ಓದುಗರು ಎಲ್ಲವನ್ನೂ ಅಪ್ರಮಾಣವೆಂದಾಗಲಿ, ತಾವು ನಂಬಿರಬಹುದಾದ ಶಿವಪಾರಮ್ಯ ಅಥವಾಹರಿಸರ್ವೋತ್ತಮತ್ವ ಮುಂತಾದ ಭಾವಗಳನ್ನು ತಿಳಿಸುವ ಪುರಾಣಗಳೇ ಸಾತ್ವಿಕಗಳಾದುದರಿಂದ ಪ್ರಮಾಣವೆಂದಾಗಲಿ ನಂಬಿ, ಇತರ ಪುರಾಣಗಳಲ್ಲೂ ಮತಗಳಲ್ಲೂ ಅವು ತಾಮಸಗಳು ರಾಜಸಗಳು ಎಂಬ ದುರಾಗ್ರಹಮೂಲಕವಾದ ನಂಬಿಕೆಯಿಂದ ಉದಾಸೀನತೆಯನ್ನೋ, ದ್ವೇಷತಿರಸ್ಕಾರಗಳನ್ನೋ ತೋರಿಸುವುದು ನ್ಯಾಯವೂ ಧಾರ್ಮಿಕವೂ ಅಲ್ಲವು. ಅಲ್ಲದೆ ಅಂತಹ ಮನೋವೃತ್ತಿಯಿಂದ ವಿಶ್ವಧರ್ಮದ ಅರಿವು ಆಚರಣೆಗಳಿಗೆ ಅಡ್ಡಿಯುಂಟಾಗಿ, ಅಂಥವರ ಹೃದಯವು ಹೆಚ್ಚು ಹೆಚ್ಚು ಸಂಕೋಚವನ್ನೇ ಪಡೆಯುತ್ತಾ ಎಲ್ಲಕ್ಕೂ ಮಿಗಿಲಾದ ಶ್ರೇಯಸ್ಸನ್ನು ಸಾಧಿಸಲಾರದೆ ಹೋಗುತ್ತದೆ. ಇಂತಹ ಅಪಾಯದಿಂದ ಜನರನ್ನು ಉದ್ಧರಿಸಿ ಕಾಪಾಡುವುದಕ್ಕಾಗಿಯೇ ವ್ಯಾಸಮಹರ್ಷಿಯು ಹದಿನೆಂಟು ಮಹಾಪುರಾಣಗಳನ್ನು ರಚಿಸಿದನು. ಒಂದೊಂದರಲ್ಲೂ ಶಿವ, ವಿಷ್ಣು, ಬ್ರಹ್ಮಾ, ಉಮಾ, ಲಕ್ಷ್ಮೀ, ವಾಣೀ, ರಾಧಾ, ಕೃಷ್ಣ, ಮುಂತಾದ ದೇವತೆಗಳಲ್ಲಿ ಕೆಲವರ ಉತ್ಕರ್ಷವನ್ನು ವರ್ಣಿಸಿದೆ. ಅಲ್ಲದೆ ಒಂದೇ ಮಹಾಪುರಾಣದಲ್ಲಿ ಬೇರೆ ಬೇರೆ ಪ್ರಕರಣಗಳಲ್ಲಿ ಶಿವ, ವಿಷ್ಣು, ಶಕ್ತಿ, ಇವರ ಉತ್ಕರ್ಷವನ್ನೂ ವರ್ಣಿಸಿದೆ. ಇದರಿಂದ ನಾವು ಕಲಿಯಬೇಕಾಗಿರುವ ಪಾಠವೇನೆಂದರೆ, ನಾವು ಎಲ್ಲ ಪುರಾಣಗಳನ್ನೂ ಸಮಾನವಾದ ಆದರಗೌರವಗಳೊಡನೆ ಓದಬೇಕು. ಅವುಗಳಲ್ಲಿ ವರ್ಣಿಸಿರುವ ಎಲ್ಲ ದೇವತೆಗಳನ್ನೂ ಸಮಾನವಾದ ಭಕ್ತಿ ಗೌರವಗಳಿಂದ ಪೂಜಿಸುವಷ್ಟು ಮನಸ್ಸಿನ ವಿಶಾಲತೆಯನ್ನು, ಹೃದಯದ ವಿಸ್ತಾರವನ್ನು, ಬೆಳೆಯಿಸಿಕೊಳ್ಳಬೇಕು. ಹಾಗಿಲ್ಲದೆ ನಮ್ಮ ನಮ್ಮ ಸನ್ನಿವೇಶವಿಶೇಷಗಳಿಗೆ ಅನುಗುಣವಾಗಿ ನಾವು ನಂಬಿರಬಹುದಾದ ದೇವರೇ ಶ್ರೇಷ್ಠವು. ಅದನ್ನು ವರ್ಣಿಸುವ ಪುರಾಣವೇ ಉತ್ತಮವಾದುದು. ಮತ್ತು ಇತರ ದೇವತೆಗಳೂ ಪುರಾಣಗಳೂ ಕೀಳಾದುವು ಎಂದು ವಾದಿಸುವುದೂ ನಂಬುವುದೂ ಹೃದಯಸಂಕೋಚದ ಗುರುತಾಗಿರುತ್ತದೆ. ಎಂಬುದನ್ನು ಮರೆಯಬಾರದು. ನಮ್ಮ ದೇವರು ನಮ್ಮನ್ನು ಕಾಪಾಡುವನೆಂದು ನಾವು ನಂಬಿರುವ ಹಾಗೆ, ಇತರರ ದೇವರೂ ಅವರನ್ನೂ ಕಾಪಾಡುತ್ತಾನೆಂದು ಅವರೂ ನಂಬಿರುತ್ತಾರೆ. ಆದುದರಿಂದ ನಮ್ಮ ಮತಧರ್ಮಗಳು ಆ ದೇವರನ್ನು ಕಾಣುವಮಾರ್ಗವಾಗಿರುವುದಾದರೆ, ಇತರರ ಮತಧರ್ಮಗಳೂ ಅವರಿಗೆ ಹಾಗೆಯೇ. ಎಂದು ಮನಗಂಡು ಎಲ್ಲ ಮತಧರ್ಮಗಳನ್ನೂ ಎಲ್ಲ ದೇವತೆಗಳನ್ನೂ ಸಹನೆಯಿಂದ ಭಕ್ತಿಗೌರವಗಳಿಂದ ಆದರಿಸುವುದು ಮನೋವೈಶಾಲ್ಯದ ಗುರುತಾಗಿದೆ ಎಂಬುದನ್ನೂ ಮರೆಯಬಾರದು.

ಈ ವಿಶಾಲಮನೋಭಾವವನ್ನು ವೈದಿಕಾರ್ಯರಲ್ಲೂ ಕಾಣಬಹುದು. ಇಂದ್ರ, ಮಿತ್ರ, ಅಗ್ನಿ, ವಾಯು, ಸೋಮ ಮುಂತಾದ ದೇವತೆಗಳ ಉತ್ಕರ್ಷವನ್ನು ಹೇಳುವ ಸೂಕ್ತಗಳು ವೇದಗಳಲ್ಲಿ ಹೇರಳವಾಗಿಯೇ ಇವೆ. ಆದರೂ ಕಡೆಕಡೆಗೆ ಎಲ್ಲ ದೇವತೆಗಳೂ ಒಂದೇ ತತ್ವದ ರೂಪಾಂತರಗಳೆಂಬುದನ್ನು ವೈದಿಕಋಷಿಗಳು ಮನಗಂಡು " ಏಕಂ ಸತ್ ವಿಪ್ರಾ ಬಹುಧಾವದಂತಿ " ಎಂದು ವರ್ಣಿಸಿದಾರೆ. ಇಲ್ಲಿ ಇತರರನ್ನು ಎಲ್ಲರನ್ನೂ ವಿಪ್ರಾಃ ಎಂದರೆ ತಿಳಿವಳಿಕೆಯುಳ್ಳವರು ಎಂದು ಗೌರವಿಸಿ ಉಲ್ಲೇಖಿಸಿರುವುದು ಪರಮತಸಹನೆಯ, ವಿಶಾಲಹೃದಯದ ಗುರುತಾಗಿದೆ. ಎಂದರೆ ಭಿನ್ನಾಭಿಪ್ರಾಯವಿರಲಾರದು.

ವೇದಾರ್ಥವನ್ನು ಉಪಬೃಂಹಣಮಾಡುವ, ಎಂದರೆ ಸ್ಪಷ್ಟಪಡಿಸಿ ದೃಢಪಡಿಸುವ, ಕಾವ್ಯ, ಪುರಾಣಗಳಲ್ಲೂ ಆ ಹೃದಯವಿಸ್ತಾರವನ್ನು ಮನಗಾಣಬಹುದು. ಇದರಿಂದ ಪ್ರಮಥಗಣಗಳಲ್ಲಿ ಪ್ರಮುಖನಾದ ಪುಷ್ಪದಂತನು ಮಾಡಿರುವ ದೇವತಾಸ್ತೋತ್ರದ " ತ್ರಯೀಸಾಂಖ್ಯಂಯೋಗಃ......" ಎಂಬ ಪದ್ಯವನ್ನೂ, ಅದರ ಭಾವವನ್ನೇ ಮುಂದಿನಕಾಲದಲ್ಲಿ ಹೆಚ್ಚಾಗಿ ಮುಂದುವರಿಯಿಸಿರುವ " ಯಂಶೈವಾಸ್ಸಮುಪಾಸತೇ......" ಎಂಬ ಪದ್ಯವನ್ನೂ, ಈಗಿನ ಕಾಲಕ್ಕೆತಕ್ಕಂತೆ ಆ ಭಾವವನ್ನೇ ಇನ್ನೂ ಮುಂದುವರಿಯಿಸಿ ವರ್ಣಿಸುವ " ಯಶ್ಶೈವೈಸ್ಸಮುಪಾಸ್ಯ ತೇ ಶಿವಇತಿ......" ಎಂಬ ಪದ್ಯವನ್ನೂ ಆರನೆಯ ಸ್ಕಂಧದ ಮುನ್ನುಡಿಯಲ್ಲಿ ಸಂಗ್ರಹಿಸಿರುತ್ತೇನೆ.

ಈ ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ನೆರವೇರಿಸುವ ಮೂಲಕಾರಣವಾದ ತತ್ವವೇ ದೇವರು ಅಥವಾ ಬ್ರಹ್ಮಚೈತನ್ಯವೆಂದು " ಯತೋವಾಇಮಾನಿಭೂತಾನಿ ಜಾಯಂತೇ......" ಎಂದು ಮುಂತಾದ ಶ್ರುತಿವಾಕ್ಯಗಳು ಸಾರಿ ಹೇಳುತ್ತಿವೆ. " ಧಾರಣಾದ್ಧರ್ಮ ಇತ್ಯಾಹುಃ ಧರ್ಮ್ಮೋ ಧಾರಯತಿ ಪ್ರಜಾಃ | " ಎಂದು ಮುಂತಾದ ಧರ್ಮಲಕ್ಷಣಗಳನ್ನೂ ಹಿಂದಿನ ಸಂಪುಟಗಳ ಮುನ್ನುಡಿಗಳಲ್ಲಿ ಮತ್ತು ಟಿಪ್ಪಣಿಗಳಲ್ಲಿ ವಿವರಿಸಿರುತ್ತೇನೆ. ಬ್ರಹ್ಮತತ್ವದ ಇಚ್ಛೆಗೆ ಅನುಸಾರವಾಗಿ, ಪ್ರಾಣಿಗಳ ಕರ್ಮವಶದಿಂದ ಈ ಜಗತ್ಸಂಸಾರವು ಸಾಗುತ್ತಿದೆ. ಆದುದರಿಂದ ದೇವರ ಇಚ್ಛೆಗೆ ಅನುಸರಿಸಿ ನಡೆಯುವುದು ಧರ್ಮವು, ಅದಕ್ಕೆ ವಿರುದ್ಧವಾಗಿ ನಡೆಯಹೋಗುವುದು ಅಧರ್ಮವು, ಎಂದೂ ಗೊತ್ತಾಗುತ್ತದೆ. ನಮ್ಮ ಹೃದಯದಲ್ಲೂ ದುಷ್ಕಾರ್ಯವನ್ನು ಮಾಡಬಾರದು, ಸತ್ಕಾರ್ಯವನ್ನು ಮಾಡಬೇಕು, ಎಂದು ನಿಯಮಿಸುತ್ತಿರುವ ಅಂತರ್ಯಾಮಿ (Consience)ಯೇ ಧರ್ಮರೂಪವಾದುದೂ ಬ್ರಹ್ಮರೂಪವಾದುದೂ ಆಗಿದೆ ಎಂಬುದನ್ನೂ ಮನಗಾಣಬಹುದು.

ಪುರಾಣಗಳಲ್ಲಿ ದೇವರನ್ನು ಶಿವ, ವಿಷ್ಣು, ಮುಂತಾದ ಪುರುಷರೂಪದಲ್ಲೂ, ಶಕ್ತಿ, ದೇವೀ, ವಾಣೀ, ಲಕ್ಷ್ಮೀ, ಗೌರೀ ಮುಂತಾದ ಸ್ತ್ರೀರೂಪದಲ್ಲೂ, ಹರಿಹರ, ಅರ್ಧನಾರೀಶ್ವರ ಮುಂತಾದ ಸಂಯುಕ್ತರೂಪದಲ್ಲೂ ಆರಾಧಿಸಿರುವ, ಸಿದ್ಧಿಯನ್ನು ಪಡೆದಿರುವವರ ಉದಾಹರಣೆಗಳನ್ನು ವರ್ಣಿಸಿದೆ. ಅಲ್ಲದೆ ಸಗುಣಸಾಕಾರಮೂರ್ತಿಯ ಪೂಜಾ, ಧ್ಯಾನಗಳಿಂದ ಸಗುಣ ನಿರಾಕಾರತತ್ವದ ಉಪಾಸನೆಯ ಮೇಲಿನ ಅಂತಸ್ತಿಗೂ, ಅಲ್ಲಿಂದ ನಿರ್ಗುಣನಿರಾಕಾರಪರತತ್ವದ ಸಾಕ್ಷಾತ್ಕಾರಕ್ಕೂ ಮನಸ್ಸು ಏರುವುದು ಸ್ವಾಭಾವಿಕವಾದ ಮಾರ್ಗದ ಕ್ರಮವಾಗಿದೆ. ಹಾಗೆಯೇ ಧರ್ಮವು ವಿಶಾಲವಾದಂತೆಲ್ಲ ವಿಶ್ವಧರ್ಮದ ರೂಪವನ್ನು ಪಡೆಯುತ್ತದೆ. ಈ ವಿಶ್ವ ಧರ್ಮವನ್ನೂ ಪುರಾಣಗಳಲ್ಲಿ ಆಗಾಗ್ಗೆ ವಿವರಿಸಿದೆ. ಅಷ್ಟಾದಶಪುರಾಣೇಷು ವ್ಯಾಸಸ್ಯ ವಚನದ್ವಯಂ । ಎಂದೂ, ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ॥ ಎಂದೂ ಹೇಳಿ, ಕಡೆಗೆ ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥ ಎಂದು ವರ್ಣಿಸಿದೆ. ಇಂತಹ ವಿಶ್ವಧರ್ಮದ ಅರಿವು ಆಚರಣೆಗಳು ಜನಸಾಮಾನ್ಯದ ಹೃದಯದಲ್ಲಿ ಬೇರೂರಿ ಬೆಳೆದು, ಅವರ ದಿನಗಟ್ಟಲೆಯ ವ್ಯವಹಾರದಲ್ಲಿ ಆಚರಣೆಯಲ್ಲಿ ರೂಪಗೊಂಡ ಹಾಗೆಲ್ಲ ವಿಶ್ವಧರ್ಮವೂ ವಿಶ್ವಪ್ರಜಾಭಾವವೂ ಜಗತ್ತಿನಲ್ಲಿ ಶಾಂತಿನೆಮ್ಮದಿಸುಖಗಳನ್ನು ನೆಲೆಸುವಂತೆ ಮಾಡುತ್ತವೆ. ಇಂತಹ ಒಳ್ಳೆಯ ಫಲವು ಪರಮತಸಹಿಷ್ಣುತೆ, ಪರೋತ್ಕರ್ಷದಲ್ಲಿ ಸಹಾನುಭೂತಿ, ಸಹಕಾರ, ವಿಶ್ವಾಸ ಮುಂತಾದ ಸದ್ಗುಣಗಳ ಬೆಳವಳಿಗೆಯಿಂದ ಆಗುತ್ತದೆ. ಈ ದೇವೀಭಾಗವತಮಹಾಪುರಾಣದಲ್ಲಿ ಶಕ್ತಿ ಅಥವಾ ದೇವಿಯ ಪರಮೋತ್ಕರ್ಷವನ್ನು ಹೇಳಿದ್ದರೂ, ಅಲ್ಲಲ್ಲಿ ಶಿವಪಾರಮ್ಯವನ್ನೂ ವರ್ಣಿಸಿದೆ. ಈ ಸ್ಕಂಧದಲ್ಲಿ ವಿಷ್ಣು ಅಥವಾ ಕೃಷ್ಣಪಾರಮ್ಯವನ್ನೂ ವರ್ಣಿಸಿ, ಹರಿಹರಾಭೇದ, ರಾಧಾಕೃಷ್ಣರ ಅರ್ಧನಾರೀಶ್ವರಭಾವವನ್ನೂ ವಿವರಿಸಿದೆ. ಇದು ಪರಬ್ರಹ್ಮವೆಂದು ಶ್ರುತಿಯಲ್ಲಿ ವಿವರಿಸಿರುವ ಏಕತತ್ವಸಿದ್ಧಾಂತಕ್ಕೆ ಸಮೀಪದ ಎರಡನೆಯ ಮೆಟ್ಟಿಲು ಅಥವಾ ಅಂತಸ್ತಾಗಿದೆ. ಸೂತಸಂಹಿತಾಯಜ್ಞವೈಭವಖಂಡದ ಮುನ್ನುಡಿಯ ಪುಟ 45 ರಲ್ಲಿರುವ ಪದ್ಯಾರ್ಥವನ್ನು ನೋಡಬಹುದು. ಪದ್ಯವು ಹೀಗಿದೆ —

ತತ್ವಸ್ಯೈತದ್ಭವತಿ ನಿಯತಂ ಸ್ಯಾತ್ ಸ್ವರೂಪಂ ಹಿ ನಾನ್ಯತ್
ಸರ್ವಂ ತತ್ವಂ ಪರಮಿದಮುವಾಚಾಸ್ಮದಾಚಾರ್ಯ ಏವ ।
ಅಸ್ಮಿನ್ ಭಕ್ತ್ಯಾ ಭವತಿ ನಿಯತಂ ಮುಕ್ತಿರನ್ಯತ್ರ ನ ಸ್ಯಾತ್
ಇತ್ಯಾದ್ಯುಕ್ತಿರ್ನ ಭವತಿ ಮತಂ ಕಿಂ ತು ವೈರಾದಿಮೂಲಂ ॥

ದೇವರು, ಜೀವರು, ಪ್ರಪಂಚ, ಧರ್ಮ, ಕರ್ಮ, ಈ ಮುಂತಾದ ತತ್ವಗಳ ಸ್ವರೂಪವು ಇದೇ ಎಂದರೆ ನಮ್ಮ ಆಚಾರ್ಯರು ಹೇಳಿರುವುದು ಒಂದೇ ನಿಜವಾದುದು.

ಇದು ಹೊರತು ಮತ್ತೊಂದಲ್ಲವು. .ಶ್ರೇಷ್ಠವಾದ ತತ್ವಗಳನ್ನೆಲ್ಲವನ್ನೂ ನಮ್ಮ ಆಚಾರ್ಯರೇ ಉಪದೇಶಮಾಡಿಯೇ ಇರುತ್ತಾರೆ. ಇವಕ್ಕಿಂತ ಹೆಚ್ಚಿನದೇನೂ ಇಲ್ಲವು. ನಮ್ಮ ಆಚಾರ್ಯರ ಉಪದೇಶಗಳಲ್ಲಿ ಭಕ್ತಿಶ್ರದ್ಧೆಯುಳ್ಳವರಿಗೆ ಮಾತ್ರ ಮುಕ್ತಿಯು ದೊರೆಯುತ್ತದೆಯೇ ಹೊರತು ಇತರರಿಗೆ ದೊರೆಯುವುದಿಲ್ಲವು. (ಆದುದರಿಂದ ಜನರನ್ನು ನಮ್ಮ ಮತಕ್ಕೆ ಪರಿವರ್ತನೆಮಾಡಿಸಬೇಕು.) ಇವೇ ಮುಂತಾದ ಅಭಿಪ್ರಾಯಗಳು ಮತ ಎಂಬ ಹಿರಿಯ ಬಿರುದಿಗೆ ತಕ್ಕವಲ್ಲವು. ಮತ್ತೇನೆಂದರೆ, ಇದರಿಂದ ಪರಮತಗಳಲ್ಲಿ ಅಸಹನೆ ತಿರಸ್ಕಾರಗಳುಂಟಾಗಿ ದ್ವೇಷ ಕಲಹಗಳಲ್ಲಿ ಪರಿಣಮಿಸಿ ದೇಶದ ಶಾಂತಿಯು ನಾಶವಾಗುತ್ತದೆ. ಇದನ್ನು ತಪ್ಪಿಸಬೇಕಾದರೆ ಎಲ್ಲ ಮತ, ಪುರಾಣಗಳನ್ನೂ ಸಹನೆಯಿಂದ ಓದಿ ಒಳ್ಳೆಯದನ್ನು ಆಚರಿಸಬೇಕು.

ಇಂತಹ ಮಹತ್ತ್ವಪೂರ್ಣವಾದ ಉಪದೇಶಗಳೂ ಅವನ್ನು ಆಚರಿಸಿದವರ ಉದಾಹರಣೆಗಳೂ ಎಲ್ಲ ಮಹಾಪುರಾಣಗಳಲ್ಲೂ, ಮಹಾಭಾರತ ಮುಂತಾದ ಇತಿಹಾಸಗಳಲ್ಲೂ ಹೇರಳವಾಗಿವೆ. ಆದುದರಿಂದ ಎಲ್ಲ ಮಹಾಪುರಾಣಗಳನ್ನೂ ಕನ್ನಡಭಾಷೆಗೆ ಪರಿವರ್ತಿಸಿ ಮುದ್ರಿಸಿ ಪ್ರಕಟಿಸಬೇಕೆಂದು ನಮ್ಮನ್ನಾಳುತ್ತಿರುವ ಮಹಾಪ್ರಭುಗಳಾದ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದೂರ್ ಮಹಾಸ್ವಾಮಿಯವರ** ಆಜ್ಞೆಯನ್ನು ಅನುಸರಿಸಿ ಈ ಗ್ರಂಥಗಳನ್ನೆಲ್ಲವನ್ನೂ ಪ್ರಕಟಿಸುತ್ತಿರಲಾಗಿದೆ. ಭಾರತಾರ್ಯರ ಧಾರ್ಮಿಕಸಂಸ್ಕೃತಿಯ ದಿವ್ಯಜ್ಯೋತಿಯು ಕನ್ನಡಿಗರೆಲ್ಲರ ಸೌಭಾಗ್ಯಾತಿಶಯದಿಂದ ನಂದದ ರತ್ನದೀಪವಾಗಿ ಬೆಳಗುತ್ತಿರುವಂತಾಗಲೆಂದೂ, ಅದರಿಂದ ಜನಜೀವನದ ಮಟ್ಟವು ಉತ್ತಮಗೊಳ್ಳುತ್ತಿರಲೆಂದೂ, ತ್ರಿಪುರಸುಂದರೀ ಭುವನೇಶ್ವರೀ ಮಹಾತಾಯಿಯನ್ನು ಪ್ರಾರ್ಥಿಸುತ್ತೇನೆ.

ಶ್ರೀತಾರಣಸಂವತ್ಸರದ
ಮಾರ್ಗಶೀರ್ಷ ಶುದ್ಧ ದಶಮಾ
ಶನಿವಾರ, 25-11-1944

**ಎಡತೊರೆ ದೇವಯ್ಯದೀಕ್ಷಿತರ ಮಗ**
**ಚಂದ್ರಶೇಖರಶಾಸ್ತ್ರೀ.**

# ಶ್ರೀದೇವೀಭಾಗವತಮಹಾಪುರಾಣದಲ್ಲಿ ಒಂಬತ್ತನೆಯ ಸ್ಕಂಧದಲ್ಲಿರುವ ವಿಷಯಗಳ ಸೂಚಿಕೆ

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|

॥ಶ್ರೀಃ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಪ್ರಥಮೋಽಧ್ಯಾಯಃ ॥

### ಮೊದಲನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಗಣೇಶಜನನೀ ದುರ್ಗಾ ರಾಧಾ ಲಕ್ಷ್ಮೀಃ ಸರಸ್ವತೀ ।**
**ಸಾವಿತ್ರೀ ಚ ಸೃಷ್ಟಿವಿಧೌ ಪ್ರಕೃತಿಃ ಪಂಚಧಾ ಸ್ಮೃತಾ ॥೧॥**

---

॥ ಶ್ರೀಗಣೇಶಶಾರದಾಗುರುಭ್ಯೋನಮಃ ॥

ಕರ್ಮೈವೇಹ ಜನಸ್ಯ ದುಃಖಸುಖದಂ, ಸತ್ಕರ್ಮ ಕುರ್ವೀತಸದಾ,
ಸಂಸಿದ್ಧಿರ್ನಿಜಕರ್ಮಣಾ ಜನಕವತ್, ತಸ್ಮೈ ನಮಃ ಕರ್ಮಣೇ ।
ನಾಸ್ತ್ಯನ್ಯತ್ಪರಸಾಧನಂ ನಿಜಕೃತೇಃ, ಶ್ರದ್ಧಾಬಲಂ ಕರ್ಮಣಃ,
ಕರ್ಮಣ್ಯೇವ ಮುಮುಕ್ಷುಧೀಃ, ನ ತು ಫಲೇ, ಹೇ ಕರ್ಮ ಮಾಂತಾರಯ ॥

ಈ ಲೋಕದಲ್ಲಿ ಪ್ರಾಣಿಗಳಿಗೆ ಸುಖವನ್ನಾಗಲಿ ದುಃಖವನ್ನಾಗಲಿ ಉಂಟು ಮಾಡಿಕೊಡುವ ಕಾರಣವು ಅವರವರು ಆಚರಿಸಿರುವ ಕರ್ಮಗಳೇ ಆಗಿವೆ. ಆದುದರಿಂದ ವಿವೇಕಿಯಾದವನು ದುಃಖಕ್ಕೆ ಕಾರಣವಾದುದರಿಂದ ದುಷ್ಕರ್ಮಗಳನ್ನು ಬಿಟ್ಟು, ಸುಖಕ್ಕೆ ಕಾರಣವಾದ ಸತ್ಕರ್ಮಗಳನ್ನೇ ಮಾಡುತ್ತಿರಬೇಕೆಂದು ಗೊತ್ತು ಮಾಡಿಕೊಳ್ಳುತ್ತಾನೆ. ಹೀಗೆ ಸತ್ಕಾಮನೆಗಳಿಂದ ಕರ್ಮಗಳನ್ನು ಎಂದರೆ ತನಗೆ ವಿಹಿತವಾದ ಸ್ವಧರ್ಮವನ್ನು ಆಚರಿಸುತ್ತಾ ಅವುಗಳ ಫಲಗಳನ್ನು ಅನುಭವಿಸಲು ಅವನು ಜನ್ಮವನ್ನು ಪಡೆಯುತ್ತಿರುತ್ತಾನೆ. ಹೀಗೆ ಅನಿತ್ಯವೂ, ಸಾತಿಶಯವೂ, ದುಃಖಮಿಶ್ರವೂ, ಆದ ಆ ವರ್ಣಾಶ್ರಮಧರ್ಮರೂಪವಾದ ಕರ್ಮಗಳ ಫಲಗಳನ್ನು ಅನುಭವಿಸುವುದರಲ್ಲೂ ಮಾನವನಿಗೆ ಕಾಲಕ್ರಮದಲ್ಲಿ ಬೇಸರವುಂಟಾಗುತ್ತದೆ. ಆಗ

ವಿವೇಚನೆ, ಮುಂದಾಲೋಚನೆಗಳಿಂದ, ಅಲ್ಲಿಂದ ಮುಂದಕ್ಕೆ ಸಕಾಮುಕರ್ಮಾಚರಣೆ ಯನ್ನೂ ಬಿಟ್ಟು, ನಿಷ್ಕಾಮುಕರ್ಮಾಚರಣೆಯನ್ನು ಮಾಡುತ್ತಾನೆ. ಅದರಿಂದ ಚಿತ್ತ ಶುದ್ಧಿಯೂ ಜ್ಞಾನಪ್ರಾಪ್ತಿಯೂ ಕ್ರಮವಾಗಿ ಉಂಟಾಗಿ, ಪರಮಪುರುಷಾರ್ಥದ ಸಿದ್ಧಿಯೂ ಉಂಟಾಗಿ ಜೀವನ್ಮುಕ್ತನಾಗಿರುತ್ತಾನೆ. ಹೀಗೆ ಸಿದ್ಧಿಯನ್ನು ಪಡೆದಿರು ವಂತಹ ಮಹನೀಯರ ಉದಾಹರಣೆಗಳೂ ಇವೆ. ಜನಕಚಕ್ರವರ್ತಿಯು ತನಗೆ ವಿಹಿತವಾದ ವರ್ಣಾಶ್ರಮ ಧರ್ಮಗಳನ್ನು ಆಚರಿಸಿ ಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಮುಕ್ತಿಯನ್ನು ಇಲ್ಲಿಯೇ ಈಗಲೇ, ಎಂದರೆ ದೇಶಾಂತರ ಕಾಲಾಂತರಗಳನ್ನು ನಿರೀಕ್ಷಿಸಬೇಕಾದ ಅವಶ್ಯಕತೆ ಇಲ್ಲದೆ, ಪಡೆದು ಜೀವನ್ಮುಕ್ತನಾಗಿದಾನೆಂದು ಈ ಪುರಾಣದಲ್ಲೂ ಚನ್ನಾಗಿ ಸನ್ಮಿತ್ರನಂತೆ ತಿಳಿಯಹೇಳಿದೆ. ದೇವೀಭಾಗವತ ಸ್ಕಂಧ ೧ ಅಧ್ಯಾಯ ೧೩-೧೯ರ ವರೆಗಿನ ಭಾಗವನ್ನು ನೋಡಬೇಕು. ಆದುದರಿಂದ ಎಲ್ಲರ ಉದ್ಧಾರಕ್ಕೂ ಸಾಧನವಾಗಿರುವ ಈ ಕರ್ಮಕ್ಕೆ ನಮ್ಮ ಕೃತಜ್ಞತಾಪೂರ್ವಕವಾದ ಆದರವು ಸಲ್ಲತಕ್ಕದ್ದಾಗಿರುತ್ತದೆ. ಅಲ್ಲದೆ ಸದ್ಗತಿಯನ್ನೂ, ಕಡೆಗೆ ಮೋಕ್ಷವನ್ನೂ, ಪಡೆಯಲು ಪ್ರತಿಯೊಬ್ಬರಿಗೂ ಅವರವರ ಜನ್ಮ, ಗುಣ, ಕರ್ಮಗಳಿಗೆ ಅನುಸಾರ ವಾಗಿ ವಿಹಿತವಾಗಿರುವ ಸ್ವಧರ್ಮಾಚರಣೆಯೊಂದೇ ಗೊತ್ತಾದ ಸಾಧನೆಯೂ ಮಾರ್ಗವೂ ಆಗಿದೆ. ಈ ಕರ್ಮವು ತನ್ನ ಫಲವನ್ನು ಕೊಡಬೇಕಾದರೆ ಶಕ್ತಿಯುಳ್ಳ ದ್ದಾಗಿರಬೇಕು. ಆದುದರಿಂದ ಕರ್ಮಗಳಿಗೆ ಅಂತಹ ಶಕ್ತಿಯು, ಬಲವು, ವೀರ್ಯವು ಶ್ರದ್ಧೆಯಿಂದ ಉಂಟಾಗುತ್ತದೆ. ಶ್ರದ್ಧೆ ಎಂದರೆ ಗುರೂಪದೇಶ, ಶಾಸ್ತ್ರೋಪದೇಶಗಳಲ್ಲಿ ಅಚಲವಾದ ನಂಬಿಕೆಯೂ ಮತ್ತು ಕರ್ಮವನ್ನು ಔದಾಸೀನ್ಯವಿಲ್ಲದೆ, ಆದರಪೂರ್ವಕ ವಾಗಿ ನೆರವೇರಿಸುವಿಕೆಯೂ ಆಗಿದೆ. ಆದುದರಿಂದ ನನ್ನ ಮನಸ್ಸು ಕರ್ಮಾಚರಣೆ ಯಲ್ಲಿ ಮಾತ್ರ ಆಸಕ್ತಿಯುಳ್ಳದ್ದಾಗಿರಲಿ; ಅದರ ಫಲದಲ್ಲಿ ಆಶೆ ಇಲ್ಲದ್ದಾಗಿರಲಿ; ಎಂದು ಪ್ರತಿಯೊಬ್ಬರೂ ನಿಶ್ಚಯಿಸಿಕೊಂಡೇ ಸ್ವಧರ್ಮವನ್ನು ಆಚರಿಸುತ್ತಿರಬೇಕು. ಹೀಗೆ ಈ ನಿಷ್ಕಾಮುಕರ್ಮಾಚರಣೆಯಿಂದ ಚಿತ್ತಶುದ್ಧಿಯೂ ಜ್ಞಾನಪ್ರಾಪ್ತಿಯೂ ಕ್ರಮವಾಗಿ ಉಂಟಾಗಿ ಕಡೆಗೆ ಮುಕ್ತಿಯು ಲಭಿಸುವಂತಾಗಲಿ. ಓ ಕರ್ಮವೇ, ನಿಷ್ಕಾಮುಕರ್ಮಾಚರಣೆ ಎಂಬ ಕರ್ಮಯೋಗವೇ, ನೀನು ನನ್ನನ್ನು ಸಂಸಾರದಲ್ಲಿ, ಎಂದರೆ ಕರ್ತೃತ್ವ, ಭೋಕ್ತೃತ್ವ, ಜನನ, ಮರಣಗಳ ಪ್ರವಾಹದಲ್ಲಿ ನಿರ್ಬಂಧದಿಂದ ಸಿಕ್ಕಿಕೊಂಡಿರುವಿಕೆ ಎಂಬ ದುಃಖದಲ್ಲಿ, ಸಿಲುಕಿಸದೆ, ಆ ಸಂಸಾರವನ್ನು ದಾಟಿಸಿ ಉದ್ಧರಿಸಲು ನನಗೆ ನೆರವಾಗು. ಎಂದು ವಿವೇಕಿಯು ನಿಶ್ಚಯಿಸಿಕೊಂಡು ಸ್ವಧರ್ಮ ಕರ್ಮವನ್ನು ಆಚರಿಸುತ್ತಾ ಕೃತಾರ್ಥನಾಗುತ್ತಾನೆ. ಹೀಗೆಂಬ ಕರ್ಮವಾದದ

**ಆವಿರ್ಬಭೂವ ಸಾ ಕೇನ ಕಾ ವಾ ಸಾ ಜ್ಞಾನಿನಾಂ ವರ ।**
**ಕಿಂ ವಾ ತಲ್ಲಕ್ಷಣಂ ಸಾಧೋ ಬಭೂವ ಪಂಚಧಾ ಕಥಂ ॥೨॥**

॥ ನಾರದ ಉವಾಚ ॥

**ಸರ್ವಾಸಾಂ ಚರಿತಂ ಪೂಜಾವಿಧಾನಂ ಗುಣ ಈಪ್ಸಿತಃ ।**
**ಅವತಾರಃ ಕುತ್ರ ಕಸ್ಯಾಸ್ತನ್ಮೇ ವ್ಯಾಖ್ಯಾತುಮರ್ಹಸಿ ॥೩॥**

---

ಸಿದ್ಧಾಂತದಿಂದ ಮತ್ತು ವೇದಾಂತವ್ಯಾಸಂಗದಿಂದ ಮಾನವನು ಸೋಮಾರಿಯಾಗದೆ ಮಾದರಿಯ ಕರ್ಮಯೋಗಿಯಾಗುತ್ತಾನೆ. ಆದುದರಿಂದ 'ದೈವಂಚೈವಾತ್ರಪಂಚಮಂ' ಎಂದು ಭಗವದ್ಗೀತೆಯೂ ಉಪದೇಶಿಸುವಂತೆ, ಪುರುಷಕಾರದೊಡನೆ ದೈವವೂ ಸಹ ಕರಿಸಿ ಒತ್ತಾಸೆಯಾಗಿ ನೆರವಾಗುತ್ತದೆ. ಯಾರಿಗೂ ನಿರಾಶೆಗೆ ಕಾರಣವಿಲ್ಲವು. ಈ ಕರ್ಮಯೋಗದಿಂದ ಚಿತ್ತವು ನಿರ್ಮಲವಾಗುತ್ತದೆ. ಆಗ ಶೋಕಮೋಹಗಳೆಂಬ ಚಿತ್ತದ ಮಲಗಳೂ, ನಾನು ಸಂಸಾರೀ, ನಾನು ದುಃಖೀ, ಎಂಬ ಎಲ್ಲರಿಗೂ ಇರುವ ಅಜ್ಞಾನವೂ ನಷ್ಟವಾಗುತ್ತದೆ. ಅದರಿಂದ ಆತ್ಮನ ವಾಸ್ತವಸ್ವರೂಪವಾದ ಸಚ್ಚಿದಾನಂದಸ್ವಭಾವವು ಗೊತ್ತಾಗಲು, ಅದರಿಂದ ಬ್ರಹ್ಮಾತ್ಮೈಕ್ಯಸಾಕ್ಷಾತ್ಕಾರದ ಅಪರೋಕ್ಷಾನುಭವವೆಂಬ ನಿತ್ಯಸುಖದಲ್ಲಿ ಪರ್ಯವಸಾನವೆಂಬ ಮೋಕ್ಷವಾಗುತ್ತದೆ.

ಶ್ರೀನಾರಾಯಣನು ನಾರದನನ್ನು ಕುರಿತು ಹೀಗೆ ಹೇಳಿದನು—ಓ ನಾರದನೇ, ಈ ಪ್ರಪಂಚವನ್ನು ಸೃಷ್ಟಿಸುವ ಸಂದರ್ಭದಲ್ಲಿ ಗಣೇಶನ ತಾಯಿಯಾದ ದುರ್ಗಾದೇವಿಯೂ, ರಾಧಾ, ಲಕ್ಷ್ಮೀ, ಸರಸ್ವತೀ, ಸಾವಿತ್ರೀ, ಎಂಬ ಐದು ಪ್ರಕೃತಿಯ ಅವತಾರಗಳೇ ಕಾರಣವೆಂದು ಪ್ರಸಿದ್ಧವಾಗಿರುವುದು. ॥೧॥

ನಾರದನು ಕೇಳಿದನು—ಓ ಜ್ಞಾನಿಗಳಲ್ಲಿ ಶ್ರೇಷ್ಠನಾದ ನಾರಾಯಣ ಮುನಿಯೇ, ಆ ಪ್ರಕೃತಿಯು ಯಾವ ಕಾರಣದಿಂದ ಐದು ಪ್ರಕಾರವಾಗಿ ಆದಳು. ಆ ಪ್ರಕೃತಿಯು ಜಡವೇ? ಚೇತನವೇ? ಆ ಪ್ರಕೃತಿಯ ಲಕ್ಷಣವೇನು? ಆ ಒಂದು ಪ್ರಕೃತಿಯು ಐದು ಬಗೆಯಾದ ರೀತಿ ಎಂತು? ತಾನೇ ಐದು ಅವತಾರಗಳನ್ನು ಅನುಗ್ರಹಿಸಿದಳೇ? ಅಥವಾ ರೂಪಾಂತರದಿಂದ ಗ್ರಹಿಸಿದಳೇ? ಈ ಸಂಶಯಗಳನ್ನು ಪರಿಹರಿಸಬೇಕು. ॥೨॥

ಇದೂ ಅಲ್ಲದೆ ದುರ್ಗಾದಿ ಐದು ಅವತಾರಗಳ ಚರಿತ್ರೆಯನ್ನು ಆ ದೇವಿಯರ ಪೂಜೆಯ ಪ್ರಕಾರವನ್ನೂ ಯಾವ ದೇವತೆಗೆ ಯಾವ ಗುಣವು ಆವಶ್ಯಕವೋ ಆ ಗುಣವನ್ನೂ ಯಾರ ಅವತಾರ ಎಲ್ಲಿ? ಎಂಬುದನ್ನೂ ವಿಸ್ತಾರವಾಗಿ ಹೇಳಬೇಕು. ॥೩॥

|| ಶ್ರೀನಾರಾಯಣ ಉವಾಚ ||

ಪ್ರಕೃತೇರ್ಲಕ್ಷಣಂ ವತ್ಸ ಕೋ ವಾ ವಕ್ತುಂ ಕ್ಷಮೋ ಭವೇತ್ ।
ಕಿಂಚಿತ್ತಥಾಪಿ ವಕ್ಷ್ಯಾಮಿ ಯಚ್ಛ್ರುತಂ ಧರ್ಮವಕ್ತ್ರತಃ ||೪||

ಪ್ರಕೃಷ್ಟವಾಚಕಃ ಪ್ರಶ್ಚ ಕೃತಿಶ್ಚ ಸೃಷ್ಟಿವಾಚಕಃ ।
ಸೃಷ್ಟೌ ಪ್ರಕೃಷ್ಟಾ ಯಾ ದೇವೀ ಪ್ರಕೃತಿಃ ಸಾ ಪ್ರಕೀರ್ತಿತಾ ||೫||

ಗುಣೇ ಸತ್ವೇ ಪ್ರಕೃಷ್ಟೇ ಚ ಪ್ರಶಬ್ದೋ ವರ್ತತೇ ಶ್ರುತಃ ।
ಮಧ್ಯಮೇ ರಜಸಿ ಕೃಶ್ಚ ತಿ ಶಬ್ದಸ್ತಮಸಿ ಸ್ಮೃತಃ ||೬||

ತ್ರಿಗುಣಾತ್ಮಕಸ್ವರೂಪಾ ಯಾ ಸಾ ಚ ಶಕ್ತಿಸಮನ್ವಿತಾ ।
ಪ್ರಧಾನಾ ಸೃಷ್ಟಿಕರಣೇ ಪ್ರಕೃತಿಸ್ತೇನ ಕಥ್ಯತೇ ||೭||

---

ನಾರಾಯಣನು ಹೇಳಿದನು—ಎಲೈ ನಾರದನೇ, ಪ್ರಕೃತಿಯು ಅನಾದಿಯೂ ಅನಿರ್ವಚನೀಯವೂ ಆದುದರಿಂದಲೂ, ಈಚೆಗೆ ಹುಟ್ಟಿದ ನಮ್ಮಂತಹವರ ಬುದ್ಧಿಯು ಅಲ್ಪವಾದುದರಿಂದಲೂ, ಆ ಪ್ರಕೃತಿಯ ಲಕ್ಷಣವನ್ನು ವಿವರಿಸಲು ಯಾರೂ ಸಮರ್ಥರಾಗರು. ಆದರೂ ನಾನು ಧರ್ಮದೇವನಿಂದ ಕೇಳಿದ ಆ ಪ್ರಕೃತಿಯ ಲಕ್ಷಣವನ್ನು ಸ್ವಲ್ಪಮಟ್ಟಿಗೆ ಹೇಳುವೆನು. ||೪||

ಪ್ರ ಎಂಬುದು ಮುಖ್ಯ ಎಂಬರ್ಥವನ್ನು ಕೊಡುವ ಶಬ್ದವು. ಕೃತಿ ಎಂಬುದು ಸೃಷ್ಟಿ ಎಂಬರ್ಥವನ್ನು ಕೊಡುವ ಶಬ್ದವು. ಸೃಷ್ಟಿಕಾರ್ಯದಲ್ಲಿ ಮುಖ್ಯಳಾದ ದೇವಿಯನ್ನು ಪ್ರಕೃತಿ ಎಂದು ಕರೆಯುವರು. ಇದು ತಟಸ್ಥ ಲಕ್ಷಣವು. "ಶಾಖಾಯಾಂ ಚಂದ್ರಃ" ಎಂಬಂತೆ ಮಗುವಿಗೆ ಚಂದ್ರನನ್ನು ತೋರಿಸುವ ತಂದೆಯು ಮೊದಲು ಮಗುವಿನ ಗಮನವನ್ನು ಮರದ ಕೊಂಬೆಯ ಕಡೆಗೆ ಸೆಳೆಯುವನು. ||೫||

ಪ್ರ ಶಬ್ದವು ಸತ್ವಗುಣವನ್ನು ಹೇಳುವುದು. ಕೃ ಶಬ್ದವು ರಜೋಗುಣವನ್ನು ಹೇಳುವುದು. ತಿ ಶಬ್ದವು ತಮೋಗುಣವನ್ನು ಹೇಳುವುದು. ||೬||

ಆವರಣ ವಿಕ್ಷೇಪಶಕ್ತಿಗಳಿಂದ ಕೂಡಿದ, ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥಾಸ್ವರೂಪವಾದ, ಸೃಷ್ಟಿಕಾರ್ಯಕ್ಕೆ ಮುಖ್ಯವಾದ, ಶಕ್ತಿಯನ್ನು ಪ್ರಕೃತಿ ಎಂದು ಕರೆವರು. ಇದು ಸ್ವರೂಪಲಕ್ಷಣವು "ಪ್ರಕೃಷ್ಟ ಪ್ರಕಾಶಃ ಚಂದ್ರಃ" ಎಂಬಂತೆ ಮಗುವಿನ ಗಮನವನ್ನು ವಿಶೇಷವಾದ ಬೆಳಕಿನ ಕಡೆಗೆ ಸೆಳೆವುದು. ||೭||

ಪ್ರಥಮೋ ವರ್ತತೇ ಪ್ರಶ್ಚ ಕೃತಿಶ್ಚ ಸೃಷ್ಟಿವಾಚಕಃ ।
ಸೃಷ್ಟೇರಾದೌ ಚ ಯಾ ದೇವೀ ಪ್ರಕೃತಿಃ ಸಾ ಪ್ರಕೀರ್ತಿತಾ ॥೮॥

ಯೋಗೇನಾತ್ಮಾ ಸೃಷ್ಟಿವಿಧೌ ದ್ವಿಧಾ ರೂಪೋ ಬಭೂವ ಸಃ ।
ಪುಮಾಂಶ್ಚ ದಕ್ಷಿಣಾರ್ಧಾಂಗೋ ವಾಮಾರ್ಧಾ ಪ್ರಕೃತಿಃ ಸ್ಮೃತಾ ॥೯॥

ಸಾ ಚ ಬ್ರಹ್ಮಸ್ವರೂಪಾ ಚ ನಿತ್ಯಾ ಸಾ ಚ ಸನಾತನೀ ।
ಯಥಾತ್ಮಾ ಚ ತಥಾ ಶಕ್ತಿರ್ಯಥಾಽಗ್ನೌ ದಾಹಿಕಾ ಸ್ಥಿತಾ ॥೧೦॥

---

ಪ್ರ ಶಬ್ದವು ಮೊದಲು ಎಂಬರ್ಥವನ್ನು ಕೊಡುವುದು. ಕೃತಿ ಶಬ್ದವು ಸೃಷ್ಟಿ ಎಂಬರ್ಥವನ್ನು ಕೊಡುವುದು. ಸೃಷ್ಟಿಗಿಂತ ಮೊದಲು ಇರತಕ್ಕ ಶಕ್ತಿದೇವಿಯನ್ನು ಪ್ರಕೃತಿ ಎಂದು ಕರೆವರು. ಇದೊಂದು ಲಕ್ಷಣವು. ಈ ಲಕ್ಷಣಗಳಿಂದ ಪ್ರಕೃತಿಸ್ವರೂಪವನ್ನೂ ಗುಣತ್ರಯಸಾಮ್ಯಾವಸ್ಥೆಯೆಂದು ಹೇಳಿ ಆ ಪ್ರಕೃತಿಯು ಜಡವೆಂಬುದನ್ನೂ ಹೇಳಿದಂತೆ ಆಯಿತು. ॥೮॥

ಸೃಷ್ಟಿಕಾರ್ಯಕ್ಕಾಗಿ ಪರಮಾತ್ಮನು ತನ್ನ ಮಾಯಾಶಕ್ತಿರೂಪವಾದ ಯೋಗದಿಂದ ಬಲಭಾಗವು ಪುರುಷರೂಪವಾಗಿಯೂ ಎಡಭಾಗವು ಸ್ತ್ರೀರೂಪವಾಗಿಯೂ ಅರ್ಧನಾರೀಶ್ವರ ರೂಪದಿಂದ ಕಾಣಿಸಿಕೊಂಡನು. ಮಾಯಾಶಬಳಬ್ರಹ್ಮನನ್ನೇ ಭಗವತೀ ಎಂದು ಕರೆವರು. ಅರ್ಧನಾರೀಶ್ವರನೇ ಕೃಷ್ಣನೆಂಬುದಾಗಿ ಮುಂದಿನ ಗ್ರಂಥಸಂದರ್ಭದಿಂದ ತಿಳಿಯಬೇಕು. ॥೯॥

ಬೆಂಕಿಯಲ್ಲಿರುವ ಸುಡುವ ಶಕ್ತಿಯು ಬೆಂಕಿಗಿಂತಲೂ ಬೇರೆಯಾದುದು ಹೇಗೆ ಅಲ್ಲವೋ ಹಾಗೆಯೆ, ಮಾಯಾಶಕ್ತಿಯು ಪರಬ್ರಹ್ಮಸ್ವರೂಪಕ್ಕಿಂತಲೂ ಬೇರೆಯಾದುದಲ್ಲ. ಆದುದರಿಂದ ಬ್ರಹ್ಮನಿಗೂ ಮಾಯಾಶಕ್ತಿಗೂ ಅಭೇದವಾದಂತಾಯಿತು. ಆ ಮಾಯಾಶಕ್ತಿಯು, ಮೋಕ್ಷವಾಗುವ ಪರ್ಯಂತವೂ ಇರುವುದರಿಂದ ನಿತ್ಯವೆಂದೂ, ಅನಾದಿಯಾದುದರಿಂದ ಸನಾತನೀ ಎಂದೂ, ಹೆಸರನ್ನು ಪಡೆದಿರುವುದು. ಶಕ್ತಿಯು ಜಡವಾದುದಾಗಿ ನಿರ್ವಿಕಾರವಾದರೂ ನಿರ್ವಿಕಾರವಾದ ಬ್ರಹ್ಮ ಚೈತನ್ಯ ಸಂಬಂಧದಿಂದ ಸೂಜೀಕಲ್ಲಿನ ಸನ್ನಿಧಾನದಿಂದ ಕಬ್ಬಿಣವು ಚಲಿಸುವಂತೆ ಸವಿಕಾರವಾಗುವುದು. ಇದು ಶ್ರುತಿಸಿದ್ಧವಾದ ವಿಷಯವು. ಮಾಯಾಶಕ್ತಿಯು ನಿರ್ವಿಕಾರವಾದುದಲ್ಲವೆಂದೂ ಅನಾದಿಯೂ ಸಾಂತವೂ ಆದುದೆಂದೂ ಸಿದ್ಧವಾಯಿತು. ಯಾವ ಕಾರಣದಿಂದ ಬ್ರಹ್ಮಚೈತನ್ಯಕ್ಕೂ ಮಾಯಾಶಕ್ತಿಗೂ ನಿತ್ಯಸಂಬಂಧವಿರುವುದೋ ಆಕಾರಣದಿಂದ ಆತ್ಮೋಪಾಸನೆಯಲ್ಲಿ ಶಕ್ತ್ಯುಪಾಸನೆಯೂ ಶಕ್ತ್ಯುಪಾಸನೆ

ಅತ ಏವ ಹಿ ಯೋಗೀಂದ್ರೈಃ ಸ್ತ್ರೀ ಪುಂ ಭೇದೋ ನ ಮನ್ಯತೇ ।
ಸರ್ವಂ ಬ್ರಹ್ಮಮಯಂ ಬ್ರಹ್ಮನ್ ಶಶ್ವತ್ಸದಪಿ ನಾರದ ॥೧೧॥

ಸ್ವೇಚ್ಛಾಮಯಸ್ಯೇಚ್ಛಯಾ ಚ ಶ್ರೀಕೃಷ್ಣಸ್ಯ ಸಿಸೃಕ್ಷಯಾ ।
ಸಾಽಽವಿರ್ಬಭೂವ ಸಹಸಾ ಮೂಲಪ್ರಕೃತಿರೀಶ್ವರೀ ॥೧೨॥

ತದಾಜ್ಞಯಾ ಪಂಚವಿಧಾ ಸೃಷ್ಟಿಕರ್ಮವಿಭೇದಿಕಾ ।
ಅಥ ಭಕ್ತಾನುರೋಧಾದ್ವಾ ಭಕ್ತಾನುಗ್ರಹವಿಗ್ರಹಾ ॥೧೩॥

---

ಯಲ್ಲಿ ಆತ್ಮೋಪಾಸನೆಯೂ ಕೂಡಿಕೊಂಡು ಇರುವುದು. ಆದುದರಿಂದಲೇ "ಯಥಾತ್ಮಾ ಚ ತಥಾಶಕ್ತಿಃ" ಎಂದು ಹೇಳಿರುವುದು. ಅಗ್ನಿಯಲ್ಲಿ ಹೋಮ ಮಾಡಿದರೆ ಅಗ್ನಿಶಕ್ತಿಯಲ್ಲಿಯೂ ಅದರಲ್ಲಿ ಹೋಮಮಾಡಿದರೆ ಅಗ್ನಿಯಲ್ಲಿಯೂ ಹೋಮಮಾಡಿದಂತೆ ಆಗುವ ಹಾಗೆ, ಶಕ್ತಿಪೂಜೆಯನ್ನು ಮಾಡಿದರೆ (ಬ್ರಹ್ಮ) ಆತ್ಮ ಪೂಜೆಯನ್ನು ಮಾಡಿದಂತೆಯೂ, ಆತ್ಮಪೂಜೆಯನ್ನು ಮಾಡಿದರೆ ಶಕ್ತಿಪೂಜೆಯನ್ನು ಮಾಡಿದಂತೆಯೂ ಆಗುವುದು. ಶಕ್ತಿಗೂ ಶಕ್ತಿಯಿಂದ ಕೂಡಿದ ಬ್ರಹ್ಮಪದಾರ್ಥಕ್ಕೂ ಭೇದವಿಲ್ಲವು. ॥೧೦॥

ಆದುದರಿಂದಲೇ ವಿವೇಕಿಗಳು ಸ್ತ್ರೀಪುರುಷ ಭೇದವನ್ನು ತಿಳಿಯುವುದಿಲ್ಲ. ಸ್ತ್ರೀಯಾಗಲೀ ಪುರುಷನಾಗಲೀ ಮಾಯಾವಿಶಿಷ್ಟವಾದ ಬ್ರಹ್ಮಸ್ವರೂಪವೆಂದು ತಿಳಿವರು. ಎಲೈ ನಾರದನೇ, ಶಿವವಿಷ್ಣ್ವಾದಿ ಪುರುಷರೂಪದಿಂದಲೂ, ಗೌರೀ ಲಕ್ಷ್ಮ್ಯಾದಿ ಸ್ತ್ರೀರೂಪದಿಂದಲೂ ಮಾಯಾವಿಶಿಷ್ಟವಾದ ಬ್ರಹ್ಮವಸ್ತುವೇ ಪ್ರಕಾಶಿಸುವುದು. ಶಕ್ತ್ಯುಪಾಸನೆಯೂ, ಶಕ್ತಿಯು ಬ್ರಹ್ಮನಿಗಿಂತ ಬೇರೆ ಅಲ್ಲವಾದುದರಿಂದ, ಮಾಯಾವಿಶಿಷ್ಟಬ್ರಹ್ಮೋಪಾಸನೆಯೇ ಆಗುವುದರಿಂದ "ಸರ್ವಂ ಬ್ರಹ್ಮಮಯಂ" ಎಂದು ಹೇಳಿರುವುದು. ॥೧೧॥

ಪ್ರಕೃತಿಯ ಇಚ್ಛಾಸ್ವರೂಪವಾದ ಶ್ರೀಕೃಷ್ಣಪರಮಾತ್ಮನ ಸೃಷ್ಟಿಮಾಡಬೇಕೆಂಬ ಅಪೇಕ್ಷೆಯಿಂದ ಸರ್ವಶಕ್ತಳಾದ ಮೂಲಪ್ರಕೃತಿಯು ಒಡನೆಯೇ ವ್ಯಕ್ತವಾದಳು. ಅಥವಾ ತನ್ನ ಇಚ್ಛೆಯಸ್ವರೂಪವಾದ ಪರಮಾತ್ಮನ ಅಪೇಕ್ಷೆಯಿಂದ ಶ್ರೀಕೃಷ್ಣನನ್ನು ಸೃಷ್ಟಿಸಬೇಕೆಂಬ ಆಸೆಯಿಂದ ಮೂಲಪ್ರಕೃತಿಯು ಪಂಚಭೂತಗಳ ಅಂಶಗಳನ್ನು ಪರಿಗ್ರಹಿಸಿ ಅವತಾರಮಾಡಿದಳು. ॥೧೨॥

ಆ ಪರಮಾತ್ಮನ ಆಜ್ಞೆಯಿಂದ ದುರ್ಗಾದಿ ಐದು ಪ್ರಕಾರವಾದ, ಸೃಷ್ಟಿಕಾರ್ಯವನ್ನು ಮಾಡಲು ಶಕ್ತರಾದ, ಪ್ರಕೃತಿ ಶಕ್ತಿ ದೇವಿಯರು ಉತ್ಪನ್ನರಾದರು. ಅಥವಾ

ಗಣೇಶಮಾತಾ ದುರ್ಗಾ ಯಾ ಶಿವರೂಪಾ ಶಿವಪ್ರಿಯಾ ।
ನಾರಾಯಣೀ ವಿಷ್ಣುಮಾಯಾ ಪೂರ್ಣಬ್ರಹ್ಮಸ್ವರೂಪಿಣೀ ॥೧೪॥

ಬ್ರಹ್ಮಾದಿ ದೇವೈರ್ಮುನಿಭಿರ್ಮನುಭಿಃ ಪೂಜಿತಾ ಸ್ತುತಾ ।
ಸರ್ವಾಧಿಷ್ಠಾತ್ರೀ ದೇವೀ ಸಾ ಶರ್ವರೂಪಾ ಸನಾತನೀ ॥೧೫॥

ಧರ್ಮಸತ್ಯಾ ಪುಣ್ಯಕೀರ್ತಿರ್ಯಶೋ ಮಂಗಳದಾಯಿನೀ ।
ಸುಖಮೋಕ್ಷಹರ್ಷದಾತ್ರೀ ಶೋಕಾರ್ತಿ ದುಃಖನಾಶಿನೀ ॥೧೬॥

ಶರಣಾಗತ ದೀನಾರ್ತಪರಿತ್ರಾಣಪರಾಯಣಾ ।
ತೇಜಸ್ಸ್ವರೂಪಾ ಪರಮಾ ತದಧಿಷ್ಠಾತೃದೇವತಾ ॥೧೭॥

---

ಭಕ್ತರನ್ನು ಉದ್ಧಾರಮಾಡಬೇಕೆಂದು ಐದು ಪ್ರಕಾರವಾಗಿ ಅವತಾರ ಮಾಡಿದರು. ॥೧೩॥

ಕೃಷ್ಣನು ಗಣೇಶರೂಪದಿಂದ ಅವತಾರಮಾಡಿದನು. ಆ ಗಣೇಶನ ತಾಯಿಯಾದ ಮಾಯಾವಿಶಿಷ್ಟಬ್ರಹ್ಮಸ್ವರೂಪಿಣಿಯಾದ ಮಂಗಳರೂಪಳಾದ, ಪರಬ್ರಹ್ಮನಿಗೆ ಪ್ರೀತಿಪಾತ್ರಳಾದ, ನಾರಾಯಣೀ ಎಂಬ ಹೆಸರನ್ನು ಪಡೆದ ದುರ್ಗಾದೇವಿಯು,॥೧೪॥

ಬ್ರಹ್ಮನೇ ಮೊದಲಾದ ದೇವತೆಗಳಿಂದಲೂ ಮುನಿಗಳಿಂದಲೂ ಮನುಗಳಿಂದಲೂ ಪೂಜಿಸಿ ಸ್ತೋತ್ರಮಾಡಲ್ಪಟ್ಟವಳೂ ಆದ ಆ ದೇವಿಯು ಸಮಸ್ತಕ್ಕೂ ಆಶ್ರಯಳಾದವಳು. ಈಶ್ವರಸ್ವರೂಪಳು. ಅನಾದಿಯಾದವಳು. ॥೧೫॥

ಪ್ರಜಾಪಾಲನೆಯೇ ಮೊದಲಾದ ನಿತ್ಯವಾದ ಧರ್ಮವುಳ್ಳವಳೂ ಪುಣ್ಯಕರವಾದ ಕೀರ್ತಿಯುಳ್ಳವಳೂ ಭಕ್ತರಿಗೆ ಯಶಸ್ಸನ್ನೂ ಮಂಗಳವನ್ನೂ ಸುಖ ಮೋಕ್ಷ ಸಂತೋಷ ಇವುಗಳನ್ನೂ ಕೊಟ್ಟು, ಅವರ ಶರೀರ ಬಾಧೆ ಮನಸ್ಸಿನ ದುಃಖ ಇವುಗಳನ್ನು ನಾಶಮಾಡತಕ್ಕನಳು. ॥೧೬॥

ತನ್ನನ್ನು ಮರೆಹೊಕ್ಕವರನ್ನೂ ದರಿದ್ರರನ್ನೂ ದುಃಖಪಡುವವರನ್ನೂ ಕಾಪಾಡುವುದರಲ್ಲಿ ಆಸಕ್ತಳಾದವಳು. ಶ್ರೇಷ್ಠವಾದ ತೇಜಸ್ಸಿನ ಸ್ವರೂಪಳು. ಕೃಷ್ಣನ ಅಂತಃಕರಣ ರೂಪವಾದ ತೇಜಸ್ಸಿಗೂ ಆಶ್ರಯಳಾದವಳು. ॥೧೭॥

ಸರ್ವಶಕ್ತಿಸ್ವರೂಪಾ ಚ ಶಕ್ತಿರೀಶಸ್ಯ ಸಂತತಂ ।
ಸಿದ್ಧೇಶ್ವರೀ ಸಿದ್ಧರೂಪಾ ಸಿದ್ಧಿದಾ ಸಿದ್ಧಿರೀಶ್ವರೀ ॥೧೮॥

ಬುದ್ಧಿರ್ನಿದ್ರಾ ಕ್ಷುತ್ಪಿಪಾಸಾ ಛಾಯಾ ತಂದ್ರಾ ದಯಾ ಸ್ಮೃತಿಃ ।
ಜಾತಿಃ ಕ್ಷಾಂತಿಶ್ಚ ಭ್ರಾಂತಿಶ್ಚ ಶಾಂತಿಃ ಕಾಂತಿಶ್ಚ ಚೇತನಾ ॥೧೯॥

ತುಷ್ಟಿಃ ಪುಷ್ಟಿಸ್ತಥಾ ಲಕ್ಷ್ಮೀರ್ಧೃತಿರ್ಮಾಯಾ ತಥೈವ ಚ ।
ಸರ್ವಶಕ್ತಿಸ್ವರೂಪಾ ಸಾ ಕೃಷ್ಣಸ್ಯ ಪರಮಾತ್ಮನಃ ॥೨೦॥

ಉಕ್ತಃ ಶ್ರುತೌ ಶ್ರುತಗುಣಶ್ಚಾತಿಸ್ವಲ್ಪೋ ಯಥಾಗಮಂ ।
ಗುಣೋಽಸ್ತ್ಯನಂತೋಽನಂತಾಯಾ ಅಪರಾಂ ಚ ನಿಶಾಮಯ॥೨೧॥

ಶುದ್ಧಸತ್ವಸ್ವರೂಪಾ ಯಾ ಪದ್ಮಾ ಸಾ ಪರಮಾತ್ಮನಃ ।
ಸರ್ವಸಂಪತ್ಸ್ವರೂಪಾ ಸಾ ತದಧಿಷ್ಠಾತೃದೇವತಾ ॥೨೨॥

---

ಆ ದುರ್ಗಾದೇವಿಯು ಸಮಸ್ತಶಕ್ತಿಸ್ವರೂಪಳೂ ಯಾವಾಗಲೂ ಪರಬ್ರಹ್ಮನ ಚೇತನಶಕ್ತಿಯಿಂದ ಕೂಡಿದವಳೂ ಸಿದ್ಧರಿಗೆ ಒಡೆಯಳೂ ಫಲಸ್ವರೂಪಳೂ ಫಲವನ್ನು ಕೊಡತಕ್ಕವಳು. ಅಣಿಮಾದಿ ಸಿದ್ಧಿಸ್ವರೂಪಳು. ಸಮಸ್ತಕ್ಕೂ ಒಡೆಯಳು. ||೧೮||

ಯುಕ್ತಾಯುಕ್ತವಿವೇಚನೆ ನಿದ್ದೆ ಹಸಿವು ಬಾಯಾರಿಕೆ ನೆರಳು ತೂಕಡಿಕೆ ಕರುಣೆ ಜ್ಞಾಪಕಶಕ್ತಿ ಜಾತಿ ಸಹನೆ ಭ್ರಾಂತಿ ಶಾಂತಿ ಪ್ರಕಾಶ ಜೀವಶಕ್ತಿ ಈ ರೂಪಗಳುಳ್ಳವಳು. ||೧೯||

ತೃಪ್ತಿ, ಬಲ, ಸಂಪತ್ತು, ಧೈರ್ಯ, ಅಜ್ಞಾನ ಈ ಸ್ವರೂಪವಾದವಳು. ಬುದ್ಧಿಯಲ್ಲಿ ಸಮಸ್ತ ಶಕ್ತಿಗಳೂ ಇರುವುದರಿಂದ ಕೃಷ್ಣನ ಬುದ್ಧಿಗೆ ಆಧಾರಸ್ವರೂಪಳಾದ ದುರ್ಗಾದೇವಿಯು ಸಮಸ್ತ ಶಕ್ತಿಸ್ವರೂಪಳಾಗಿರುವಳು. ||೨೦||

ವೇದದಲ್ಲಿ ಹೇಳಿದ ದುರ್ಗಾದೇವಿಯ ಪ್ರಸಿದ್ಧವಾದ ಗುಣಗಳಲ್ಲಿ ಕೆಲವನ್ನು ಮಾತ್ರ ಹೇಳಿರುವೆನು. ನಾಶರಹಿತಳಾದ ಆ ದೇವಿಗೆ ಅನೇಕ ಗುಣಗಳಿರುವುವು. ಅವುಗಳನ್ನು ಹೇಳಲು ನನಗೆ ಶಕ್ತಿಯಿಲ್ಲ. ದುರ್ಗೆಯ ಅವತಾರವನ್ನು ಹೇಳಿಯಾಯ್ತು. ಎರಡನೆಯ ಅವತಾರ ವಿಷಯವನ್ನು ಹೇಳುವೆನು ಕೇಳು. ||೨೧||

ಪರಿಶುದ್ಧವಾದ ಸತ್ವಗುಣಸ್ವರೂಪಳಾದ ಲಕ್ಷ್ಮಿಯು ಪರಮಾತ್ಮನ ಎರಡನೆಯ ಶಕ್ತಿಯ ಅವತಾರವು. ಅವಳು ಸಮಸ್ತ ಸಂಪತ್ತಿನ ಸ್ವರೂಪಳು. ಪರಮೇಶ್ವರನ ಸಂಪತ್ತಿಗೆ ಆಶ್ರಯಸ್ವರೂಪವಾದವಳು. ||೨೨||

ಕಾಂತಾಽತಿದಾಂತಾ ಶಾಂತಾ ಚ ಸುಶೀಲಾ ಸರ್ವಮಂಗಳಾ ।
ಲೋಭಮೋಹಕಾಮರೋಷಮದಾಹಂಕಾರ ವರ್ಜಿತಾ ॥೨೩॥

ಭಕ್ತಾನುರಕ್ತಾ ಪತ್ಯುಶ್ಚ ಸರ್ವಾಭ್ಯಶ್ಚ ಪತಿವ್ರತಾ ।
ಪ್ರಾಣತುಲ್ಯಾ ಭಗವತಃ ಪ್ರೇಮಪಾತ್ರಂ ಪ್ರಿಯಂವದಾ ॥೨೪॥

ಸರ್ವಸಸ್ಯಾತ್ಮಿಕಾ ದೇವೀ ಜೀವನೋಪಾಯರೂಪಿಣೀ ।
ಮಹಾಲಕ್ಷ್ಮೀ ಚ ವೈಕುಂಠೇ ಪತಿಸೇವಾರತಾ ಸತೀ ॥೨೫॥

ಸ್ವರ್ಗೇ ಚ ಸ್ವರ್ಗಲಕ್ಷ್ಮೀಶ್ಚ ರಾಜಲಕ್ಷ್ಮೀಶ್ಚ ರಾಜಸು ।
ಗೃಹೇಷು ಗೃಹಲಕ್ಷ್ಮೀಶ್ಚ ಮರ್ತ್ಯಾನಾಂ ಗೃಹಿಣಾಂ ತಥಾ ॥೨೬॥

ಸರ್ವಪ್ರಾಣಿಷು ದ್ರವ್ಯೇಷು ಶೋಭಾ ರೂಪಾ ಮನೋಹರಾ ।
ಕೀರ್ತಿರೂಪಾ ಪುಣ್ಯವತಾಂ ಪ್ರಭಾರೂಪಾ ನೃಪೇಷು ಚ ॥೨೭॥

ವಾಣಿಜ್ಯರೂಪಾ ವಣಿಜಾಂ ಪಾಪಿನಾಂ ಕಲಹಾಂಕುರಾ ।
ದಯಾರೂಪಾ ಚ ಕಥಿತಾ ವೇದೋಕ್ತಾ ಸರ್ವಸಮ್ಮತಾ ॥೨೮॥

---

ಆ ಮಹಾಲಕ್ಷ್ಮಿಯು ಸುಂದರಿಯು, ಇಂದ್ರಿಯಮನೋನಿಗ್ರಹವುಳ್ಳವಳು, ಸಮಾಧಾನಚಿತ್ತಳು, ಒಳ್ಳೆಯ ನಡತೆಯುಳ್ಳವಳು. ಸಮಸ್ತ ಶುಭಗಳಿಂದ ಕೂಡಿದವಳು, ಅತ್ಯಾಶೆ, ಅಜ್ಞಾನ, ಅಪೇಕ್ಷೆ, ಕೋಪ, ಮದ, ಅಹಂಕಾರ ಇವುಗಳಿಲ್ಲದವಳು, ಭಕ್ತರಲ್ಲಿ ದಯೆಯುಳ್ಳವಳು. ಪತಿವ್ರತೆಯೂ ಎಲ್ಲಕ್ಕೂ ಮಿಗಿಲಾದ ಪತಿವ್ರತಾಧರ್ಮ ಉಳ್ಳವಳು. ಭಗವಂತನಾದ ವಿಷ್ಣುವಿಗೆ ಪ್ರಾಣಸಮಾನಳಾಗಿ ಪ್ರೀತಿಪಾತ್ರಳಾಗಿ ಹಿತವಾದ ಮಾತನಾಡತಕ್ಕವಳು. ॥೨೩-೨೪॥

ಆ ಲಕ್ಷ್ಮೀದೇವಿಯು ಸಮಸ್ತ ಸಸ್ಯರೂಪಳಾಗಿ ಪ್ರಾಣಿಗಳಿಗೆ ಜೀವನೋಪಾಯರೂಪಳಾಗಿರುವಳು. ವೈಕುಂಠದಲ್ಲಿ ಮಹಾಲಕ್ಷ್ಮೀಯಾಗಿ ಪತಿಸೇವೆಮಾಡುತ್ತಿರುವಳು. ಸ್ವರ್ಗದಲ್ಲಿ ಸ್ವರ್ಗಲಕ್ಷ್ಮಿಯಾಗಿಯೂ ರಾಜರಲ್ಲಿ ರಾಜಲಕ್ಷ್ಮಿಯಾಗಿಯೂ ಇರುವಳು. ॥೨೫-೨೬॥

ಸಮಸ್ತ ಪ್ರಾಣಿಗಳಲ್ಲಿಯೂ ಪದಾರ್ಥಗಳಲ್ಲಿಯೂ ಮನೋಹರವಾದ ಕಾಂತಿಸ್ವರೂಪಳು. ಪುಣ್ಯವಂತರಲ್ಲಿ ಯಶಸ್ಸಿನ ಸ್ವರೂಪಳು. ರಾಜರಲ್ಲಿ ತೇಜಸ್ಸಿನ ಸ್ವರೂಪಳು. ವರ್ತಕರಲ್ಲಿ ವ್ಯಾಪಾರಸ್ವರೂಪಳು. ಪಾಪಿಗಳಲ್ಲಿ ಜಗಳದ ಮೊಳಕೆಯ

ಸರ್ವಪೂಜ್ಯಾ ಸರ್ವವಂದ್ಯಾ ಚಾನ್ಯಾಂ ಮತ್ತೋ ನಿಶಾಮಯ ।
ವಾಗ್ಬುದ್ಧಿವಿದ್ಯಾಜ್ಞಾನಾಧಿಷ್ಠಾತ್ರೀ ಚ ಪರಮಾತ್ಮನಃ ॥೨೯॥

ಸರ್ವವಿದ್ಯಾಸ್ವರೂಪಾ ಯಾ ಸಾ ಚ ದೇವೀ ಸರಸ್ವತೀ ।
ಸಾ ಬುದ್ಧಿಃ ಕವಿತಾ ಮೇಧಾ ಪ್ರತಿಭಾ ಸ್ಮೃತಿದಾ ನೃಣಾಂ ॥೩೦॥

ನಾನಾಪ್ರಕಾರ ಸಿದ್ಧಾಂತ ಭೇದಾರ್ಥಕಲನಾ ಮತಾ ।
ವ್ಯಾಖ್ಯಾಬೋಧಸ್ವರೂಪಾ ಚ ಸರ್ವಸಂದೇಹಭಂಜಿನೀ ॥೩೧॥

ವಿಚಾರಕಾರಿಣೀ ಗ್ರಂಥಕಾರಿಣೀ ಶಕ್ತಿರೂಪಿಣೀ ।
ಸ್ವರಸಂಗೀತಸಂಧಾನಕಾಲ ಕಾರಣರೂಪಿಣೀ ॥೩೨॥

ವಿಷಯಜ್ಞಾನವಾಗ್ರೂಪಾ ಪ್ರತಿವಿಶ್ವೋಪಜೀವಿನೀ ।
ವ್ಯಾಖ್ಯಾವಾದಕರೀ ಶಾಂತಾ ವೀಣಾಪುಸ್ತಕಧಾರಿಣೀ ॥೩೩॥

---

ಸ್ವರೂಪಳು. ಸಮಸ್ತರೂ ಈ ಲಕ್ಷ್ಮಿಯನ್ನು ಪೂಜಿಸಿ ನಮಸ್ಕರಿಸುವರು. ಮೂರನೆಯ ಶಕ್ತಿಯ ಅವತಾರ ವಿಷಯವನ್ನು ಕೇಳು. ॥೨೭-೨೮॥

ಪರಮಾತ್ಮಸಂಬಂಧವಾದ ಮತಿಗೂ ಬುದ್ಧಿಗೂ ವಿದ್ಯೆಗೂ ಜ್ಞಾನಕ್ಕೂ ಆಶ್ರಯವಾದವಳಾಗಿ ಸಮಸ್ತ ವಿದ್ಯಾಸ್ವರೂಪಳಾಗಿ, ಮನುಜರಿಗೆ ಯುಕ್ತಾಯುಕ್ತ ವಿವೇಚನಶಕ್ತಿಯನ್ನೂ ಕವಿತಾಶಕ್ತಿಯನ್ನೂ ಜ್ಞಾಪಕಶಕ್ತಿಯನ್ನೂ ವಿಷಯಸ್ಫುರಣ ಶಕ್ತಿಯನ್ನೂ ಗ್ರಂಥಧಾರಣ ಸಾಮರ್ಥ್ಯವನ್ನೂ ಕೊಡತಕ್ಕವಳೇ ಸರಸ್ವತೀ ದೇವಿಯು. ॥೨೯-೩೦॥

ಅನೇಕಬಗೆಯ ಸಿದ್ಧಾಂತಭೇದಗಳ ಅಭಿಪ್ರಾಯಗಳನ್ನು ಜನರಿಗೆ ಉಂಟುಮಾಡತಕ್ಕವಳು. ವಿಸ್ತಾರವಾದ ತಿಳಿವಳಿಕೆಯನ್ನುಂಟುಮಾಡಿ ಸಮಸ್ತ ಸಂದೇಹಗಳನ್ನೂ ನಾಶಮಾಡತಕ್ಕವಳು. ॥೩೧॥

ವಿಚಾರಮಾಡುವುದಕ್ಕೂ ಗ್ರಂಥರಚನೆಮಾಡುವುದಕ್ಕೂ ಬೇಕಾದ ಶಕ್ತಿಸ್ವರೂಪವಾದವಳು. ಸಪ್ತಸ್ವರಗಳಿಂದೊಡಗೂಡಿದ ಗಾನಕ್ಕೆ ಸಂಬಂಧಿಸಿದ ತಾಳ ಕಾಲಕ್ಕೆ ಕಾರಣವಾದ ಸಂಗೀತಶಾಸ್ತ್ರಕ್ಕೆ ಕಾರಣಳಾದವಳು. ॥೩೨॥

ವಿಷಯಜ್ಞಾನಸ್ವರೂಪಳೂ ಮಾತಿನ ಸ್ವರೂಪಳೂ ಆಗಿ ಸಮಸ್ತ ಪ್ರಾಣಿಗಳಿಗೂ ಜೀವನಸ್ವರೂಪಳಾಗಿರುವಳು. ವ್ಯಾಖ್ಯಾನಶಕ್ತಿಯನ್ನೂ ಶಾಸ್ತ್ರಶಕ್ತಿಯನ್ನೂ

ಶುದ್ಧಸತ್ತ್ವಸ್ವರೂಪಾ ಚ ಸುಶೀಲಾ ಶ್ರೀಹರಿಪ್ರಿಯಾ ।
ಹಿಮಚಂದನಕುಂದೇಂದು ಕುಮುದಾಂಭೋಜಸನ್ನಿಭಾ ॥೩೪॥

ಯಜಂತೀ ಪರಮಾತ್ಮಾನಂ ಶ್ರೀಕೃಷ್ಣಂ ರತ್ನಮಾಲಯಾ ।
ತಪಸ್ಸ್ವರೂಪಾ ತಪಸಾಂ ಫಲದಾತ್ರೀ ತಪಸ್ವಿನಾಂ ॥೩೫॥

ಸಿದ್ಧಿವಿದ್ಯಾಸ್ವರೂಪಾ ಚ ಸರ್ವಸಿದ್ಧಿಪ್ರದಾ ಸದಾ ।
ಯಯಾ ವಿನಾ ತು ವಿಪ್ರೌಘೋ ಮೂಕೋ ಮೃತಸಮಃ ಸದಾ ॥೩೬॥

ದೇವೀ ತೃತೀಯಾ ಗದಿತಾ ಶ್ರುತ್ಯುಕ್ತಾ ಜಗದಂಬಿಕಾ ।
ಯಥಾಗಮಂ ಯಥಾ ಕಿಂಚಿದಪರಾಂ ತ್ವಂ ನಿಬೋಧತು ॥೩೭॥

ಮಾತಾ ಚತುರ್ಣಾಂ ವರ್ಣಾನಾಂ ವೇದಾಂಗಾನಾಂ ಚ ಛಂದಸಾಂ ।
ಸಂಧ್ಯಾವಂದನಮಂತ್ರಾಣಾಂ ತಂತ್ರಾಣಾಂ ಚ ವಿಚಕ್ಷಣಾ ॥೩೮॥

---

ಕೊಡತಕ್ಕವಳು. ವೀಣೆಯನ್ನೂ ಪುಸ್ತಕವನ್ನೂ ಹಿಡಿದುಕೊಂಡು ಸಮಾಧಾನಚಿತ್ತದಿಂದಿರತಕ್ಕವಳು. ॥೩೩॥

ಪರಿಶುದ್ಧವಾದ ಸತ್ವಗುಣಸ್ವರೂಪಳು. ಒಳ್ಳೆಯ ನಡತೆಯುಳ್ಳವಳು ಮಹಾವಿಷ್ಣುವಿಗೆ ಪ್ರೀತಿಪಾತ್ರಳಾದವಳು. ಹಿಮ, ಶ್ರೀಗಂಧ, ಮಲ್ಲೆಯ ಹೂ, ಚಂದ್ರ, ಬಿಳಿಯ ತಾವರೆ, ಕೆಂದಾವರೆ ಇವುಗಳಿಗೆ ಸಮನಾದ ಅವಯವಗಳ ಕಾಂತಿಯುಳ್ಳವಳು. ॥೩೪॥

ಪರಮಾತ್ಮನಾದ ಶ್ರೀಕೃಷ್ಣನನ್ನು ರತ್ನದ ಹಾರಗಳಿಂದ ಪೂಜೆಮಾಡುತ್ತಾ ತಾನೇ ತಪಸ್ಸಿನ ರೂಪಳಾಗಿ ತಪಸ್ಸನ್ನು ಮಾಡತಕ್ಕವರಿಗೆ ಆ ತಪಸ್ಸಿನ ಫಲವನ್ನು ಕೊಡತಕ್ಕವಳಾಗಿರುವಳು. ॥೩೫॥

ವಿದ್ಯಾಸಿದ್ಧಿಸ್ವರೂಪವಾದವಳು. ಸಮಸ್ತ ವಾಕ್ಕು, ಮಂತ್ರ, ತಪಸ್ಸು ಮುಂತಾದ ಫಲಸಿದ್ಧಿಯನ್ನು ಕೊಡತಕ್ಕವಳು. ಈ ಸರಸ್ವತಿಯು ಇಲ್ಲದಿದ್ದರೆ ಬ್ರಾಹ್ಮಣರು ಮೂಕರಾಗಿ ಹೆಣಕ್ಕೆ ಸಮಾನವಾಗುತ್ತಿದ್ದರು. ವೇದದಲ್ಲಿ ಹೇಳಿದ ಅನೇಕ ಗುಣಗಳಲ್ಲಿ ಈ ಸರಸ್ವತೀದೇವಿಯ ಕೆಲವು ಗುಣಗಳನ್ನು ಹೇಳಿರುವೆನು. ಇನ್ನು ಶಕ್ತಿದೇವಿಯ ನಾಲ್ಕನೆಯ ಅವತಾರವಿಷಯವನ್ನು ಕೇಳು. ॥೩೬-೩೭॥

ಬ್ರಹ್ಮಲೋಕವಾಸಿನಿಯೂ ಬ್ರಹ್ಮನಿಗೆ ಪ್ರೀತಿಪಾತ್ರಳೂ ಆದ ಪರಿಶುದ್ಧವಾದ ಸವಿತೃದೇವತಾಸ್ವರೂಪಳಾದ ಗಾಯತ್ರೀದೇವಿಯು ಬ್ರಾಹ್ಮಣಾದಿ ನಾಲ್ಕು ವರ್ಣದ

ದ್ವಿಜಾತಿ ಜಾತಿರೂಪಾ ಚ ಜಪರೂಪಾ ತಪಸ್ವಿನೀ ।
ಬ್ರಹ್ಮಣ್ಯತೇಜೋರೂಪಾ ಚ ಸರ್ವಸಂಸ್ಕಾರರೂಪಿಣೀ ॥೩೯॥

ಪವಿತ್ರರೂಪಾ ಸಾವಿತ್ರೀ ಗಾಯತ್ರೀ ಬ್ರಹ್ಮಣಃ ಪ್ರಿಯಾ ।
ತೀರ್ಥಾನಿ ಯಸ್ಯಾಃ ಸಂಸ್ಪರ್ಶಂ ವಾಂಛಂತಿ ಹ್ಯಾತ್ಮಶುದ್ಧಯೇ॥೪೦॥

ಶುದ್ಧಸ್ಫಟಿಕಸಂಕಾಶಾ ಶುದ್ಧಸತ್ವಸ್ವರೂಪಿಣೀ ।
ಪರಮಾನಂದರೂಪಾ ಚ ಪರಮಾ ಚ ಸನಾತನೀ ॥೪೧॥

ಪರಬ್ರಹ್ಮಸ್ವರೂಪಾ ಚ ನಿರ್ವಾಣಪದದಾಯಿನೀ ।
ಬ್ರಹ್ಮತೇಜೋಮಯಾ ಶಕ್ತಿಸ್ತದಧಿಷ್ಠಾತೃದೇವತಾ ॥೪೨॥

ಯತ್ಪಾದರಜಸಾ ಪೂತಂ ಜಗತ್ಸರ್ವಂ ಚ ನಾರದ ।
ದೇವೀ ಚತುರ್ಥೀ ಕಥಿತಾ ಪಂಚಮೀಂ ವರ್ಣಯಾಮಿತೇ ॥೪೩॥

---

ವರಿಗೂ ವೇದಗಳಿಗೂ ವೇದಾಂಗಗಳಿಗೂ ತಾಯಿಯಾಗಿ ಸಂಧ್ಯಾವಂದನಮಂತ್ರಗಳನ್ನೂ ತಂತ್ರಗಳನ್ನೂ ಲೋಕಕ್ಕೆ ಕೊಟ್ಟು, ದ್ವಿಜರಾದ ಬ್ರಹ್ಮಕ್ಷತ್ರವೈಶ್ಯಜಾತಿಸ್ವರೂಪಳಾಗಿ ಜಪರೂಪಳೂ ತಪಸ್ವಿನರೂಪಳೂ ಆಗಿ ಪರಬ್ರಹ್ಮನತೇಜಸ್ಸಿನ ಸ್ವರೂಪಳಾಗಿ ದ್ವಿಜರಿಗೆ ಅವಶ್ಯವಾಗಿ ಆಗಬೇಕಾದ ಗರ್ಭಾಧಾನಾದಿ ಹದಿನಾರು (ಸಂಸ್ಕಾರ) ಕರ್ಮಸ್ವರೂಪಳಾಗಿರುವಳು. ॥೩೮-೩೯॥

ಸಮಸ್ತ ತೀರ್ಥೋದಕಗಳೂ ತಮ್ಮ ಪರಿಶುದ್ಧಿಗಾಗಿ ಗಾಯತ್ರಿಯ ಸ್ಪರ್ಶವನ್ನು ಅಪೇಕ್ಷಿಸುವುವು. ಆ ದೇವಿಯು ಪರಿಶುದ್ಧವಾದ ಸ್ಫಟಿಕಮಣಿಯಂತೆ ಪ್ರಕಾಶವುಳ್ಳವಳು. ಶುದ್ಧಸತ್ವಗುಣಸ್ವರೂಪಳು. ಶ್ರೇಷ್ಠವಾದ ಪರಮಾನಂದಸ್ವರೂಪಳು. ಅನಾದಿಯಾದವಳು. ಪರಬ್ರಹ್ಮಸ್ವರೂಪಳಾಗಿ ಮೋಕ್ಷವನ್ನು ಕೊಡತಕ್ಕವಳು. ಪರಬ್ರಹ್ಮನ ತೇಜಸ್ಸಿನ ಸ್ವರೂಪವಾದ ಚಿದಾಭಾಸನಾದ ಜೀವನಿಗೆ ಆಧಾರವಾದ ದೇವತಾಸ್ವರೂಪಳು. ಯಾವ ಗಾಯತ್ರೀದೇವಿಯ ಪಾದಧೂಳಿಯಿಂದ ಸಮಸ್ತ ಲೋಕವೂ ಪರಿಶುದ್ಧವಾಗುವುದೋ ಆ ಶಕ್ತಿದೇವಿಯ ನಾಲ್ಕನೆಯ ಅವತಾರವನ್ನು ಹೇಳಿದೆನು. ಇನ್ನು ಐದನೆಯ ಅವತಾರವನ್ನು ಹೇಳುವೆನು. ॥೪೦-೪೧-೪೨-೪೩॥

ಪಂಚಪ್ರಾಣಾಧಿದೇವೀ ಯಾ ಪಂಚಪ್ರಾಣಸ್ವರೂಪಿಣೀ ।
ಪ್ರಾಣಾಧಿಕಪ್ರಿಯತಮಾ ಸರ್ವಾಭ್ಯಃ ಸುಂದರೀ ಪರಾ ॥೪೪॥

ಸರ್ವಯುಕ್ತಾ ಚ ಸೌಭಾಗ್ಯಮಾನಿನೀ ಗೌರವಾನ್ವಿತಾ ।
ವಾಮಾಂಗಾರ್ಧಸ್ವರೂಪಾ ಚ ಗುಣೇನ ತೇಜಸಾ ಸಮಾ ॥೪೫॥

ಪರಾವರಾಸಾರ ಭೂತಾ ಪರಮಾದ್ಯಾ ಸನಾತನೀ ।
ಪರಮಾನಂದರೂಪಾ ಚ ಧನ್ಯಾ ಮಾನ್ಯಾ ಚ ಪೂಜಿತಾ ॥೪೬॥

ರಾಸಕ್ರೀಡಾಧಿದೇವೀ ಶ್ರೀಕೃಷ್ಣಸ್ಯ ಪರಮಾತ್ಮನಃ ।
ರಾಸಮಂಡಲಸಂಭೂತಾ ರಾಸಮಂಡಲಮಂಡಿತಾ ॥೪೭॥

ರಾಸೇಶ್ವರೀ ಸುರಸಿಕಾ ರಾಸಾವಾಸ ನಿವಾಸಿನೀ ।
ಗೋಲೋಕವಾಸಿನೀ ದೇವೀ ಗೋಪವೇಷವಿಧಾಯಿಕಾ ॥೪೮॥

ಪರಮಾಹ್ಲಾದರೂಪಾ ಚ ಸಂತೋಷಹರ್ಷರೂಪಿಣೀ ।
ನಿರೀಹಾ ನಿರಹಂಕಾರಾ ಭಕ್ತಾನುಗ್ರಹವಿಗ್ರಹಾ ॥೪೯॥

---

ರಾಧಾದೇವಿಯು ಪಂಚಪ್ರಾಣಗಳಿಗೂ ಆಶ್ರಯವಾದವಳು ಮತ್ತು ಪ್ರಾಣ ಸ್ವರೂಪಳು. ಸಮಸ್ತ ಶಕ್ತಿದೇವಿಯರಿಗಿಂತಲೂ ಶ್ರೇಷ್ಠವಾದ ಸೌಂದರ್ಯವುಳ್ಳವಳು. ಸಮಸ್ತ ಸೌಭಾಗ್ಯಲಕ್ಷಣಗಳಿಂದಲೂ ಕೂಡಿ ಗೌರವಕ್ಕೂ ಮರ್ಯಾದೆಗೂ ಅರ್ಹವಾದವಳು. ಪರಬ್ರಹ್ಮನಾದ ಶ್ರೀಕೃಷ್ಣನ ಎಡಭಾಗದ ಅರ್ಧಶರೀರ ರೂಪಳಾಗಿ ಆ ಪರಬ್ರಹ್ಮನ ಗುಣ ಮತ್ತು ತೇಜಸ್ಸಿಗೆ ಸಮಾನವಾದವಳಾಗಿ ಪ್ರಾಣಕ್ಕಿಂತಲೂ ವಿಶೇಷ ಪ್ರೀತಿಪಾತ್ರಳಾಗಿರುವಳು. ॥೪೪-೪೫॥

ಅತ್ಯಂತ ಶ್ರೇಷ್ಠಳು. ಸಮಸ್ತ ವಸ್ತುಗಳಿಗೂ ಸಾರಸ್ವರೂಪವಾದವಳು. ಅನಾದಿಯಾದವಳು. ಪರಮಾನಂದಸ್ವರೂಪಳಾಗಿ ಗೌರವಕ್ಕೆ ಪಾತ್ರಳಾಗಿ ಪೂಜ್ಯಳಾಗಿರುವಳು. ಶ್ರೀಕೃಷ್ಣಪರಮಾತ್ಮನ ರಾಸಕ್ರೀಡೆಗೆ ಮುಖ್ಯದೇವತೆಯಾಗಿ ರಾಸಕ್ರೀಡಾ ಭವನದಲ್ಲಿಯೇ ವಾಸಮಾಡುತ್ತಾ ಕ್ರೀಡೆಗೆ ತಾನೇ ಅಧಿಪತಿಯಾಗಿ ರಾಸಮಂಡಲಕ್ಕೆ ಅಲಂಕಾರವಾಗಿರುವಳು. ॥೪೬-೪೭॥

ರಾಧೆಯು ಗೋಲೋಕ (ತೇಜೋಲೋಕ)ದಲ್ಲಿ ವಾಸಮಾಡುತ್ತಾ ಗೋಪಿಕಾ ರೂಪಗಳನ್ನು ಸೃಷ್ಟಿಸತಕ್ಕವಳು. ಆಶ್ಚರ್ಯ, ಹರ್ಷ, ತೃಪ್ತಿಸ್ವರೂಪವಾದವಳು.

ವೇದಾನುಸಾರಿಧ್ಯಾನೇನ ವಿಜ್ಞಾತಾ ಸಾ ವಿಚಕ್ಷಣೈಃ ।
ನಿರ್ಗುಣಾ ಚ ನಿರಾಕಾರಾ ನಿರ್ಲಿಪ್ತಾಽಽತ್ಮಸ್ವರೂಪಿಣೀ ॥೫೦॥

ದೃಷ್ಟಿದೃಷ್ಟಾ ನ ಸಾ ಚೇಶೈಃ ಸುರೇಂದ್ರೈರ್ಮುನಿಪುಂಗವೈಃ ।
ವಹ್ನಿಶುದ್ಧಾಂಶುಕಧರಾ ನಾನಾಲಂಕಾರಭೂಷಿತಾ ॥೫೧॥

ಕೋಟಿಚಂದ್ರಪ್ರಭಾಪುಷ್ಟ-ಸರ್ವಶ್ರೀಯುಕ್ತವಿಗ್ರಹಾ ।
ಶ್ರೀಕೃಷ್ಣಭಕ್ತಿದಾಸ್ಯೈಕಕರಾ ಚ ಸರ್ವಸಂಪದಾಂ ॥೫೨॥

ಅವತಾರೇ ಚ ವಾರಾಹೇ ವೃಷಭಾನುಸುತಾ ಚ ಯಾ ।
ಯತ್ಪಾದಪದ್ಮಸಂಸ್ಪರ್ಶ ಪವಿತ್ರಾ ಚ ವಸುಂಧರಾ ॥೫೩॥

ಬ್ರಹ್ಮಾದಿಭಿರದೃಷ್ಟಾಯಾ ಸರ್ವೈರ್ದೃಷ್ಟಾ ಚ ಭಾರತೇ ।
ಸ್ತ್ರೀರತ್ನಸಾರಸಂಭೂತಾ ಕೃಷ್ಣವಕ್ಷಸ್ಸ್ಥಲೇ ಸ್ಥಿತಾ ॥೫೪॥

---

ಹೇಗಿದ್ದರೂ ಆತ್ಮಸ್ವರೂಪದಿಂದ ಯಾವ ಆಕಾರವೂ ಗುಣವೂ ಇಲ್ಲದವಳಾಗಿ ಯಾವ ಆಸೆಯೂ ಅಹಂಭಾವವೂ ಇಲ್ಲದೆ ಸುಖದುಃಖಾದಿ ಸಂಬಂಧವಿಲ್ಲದೆ ಭಕ್ತರಿಗೆ ಅನುಗ್ರಹವನ್ನು ಮಾಡುತ್ತಾ ವೇದವನ್ನನುಸರಿಸಿ ಧ್ಯಾನಮಾಡುವ ವಿವೇಕಿಗಳಿಂದ ತಿಳಿಯಲ್ಪಡತಕ್ಕವಳಾಗಿರುವಳು. ॥೪೮-೪೯-೫೦॥

ರಾಧಾದೇವಿಯು ಈಶ್ವರರು ದೇವೇಂದ್ರರು ಮುನಿಶ್ರೇಷ್ಠರು ಇವರುಗಳ ಕಣ್ಣಿಗೂ ಗೋಚರವಾಗತಕ್ಕವಳಲ್ಲ. ಬೆಂಕಿಗೆ ಹಾಕಿದರೂ ಸುಟ್ಟುಹೋಗದಿರುವ ನೂಲಿನಿಂದ ಮಾಡಿದ ವಸ್ತ್ರವನ್ನುಟ್ಟು ಬಗೆಬಗೆಯ ಅಲಂಕಾರವನ್ನು ಮಾಡಿಕೊಂಡು ಕೋಟಿಚಂದ್ರರ ಕಾಂತಿಯಂತೆ ಪ್ರಕಾಶಿಸುತ್ತಾ ಸಂಪೂರ್ಣವಾದ ಸಮಸ್ತ ಸಂಪತ್ತಿನಿಂದ ಕೂಡಿದವಳಾಗಿ ಭಕ್ತರಿಗೆ ಶ್ರೀಕೃಷ್ಣನಲ್ಲಿ ಭಕ್ತಿಯನ್ನೂ ಸೇವಕಭಾವವನ್ನೂ ಸಕಲ ಸಂಪತ್ತನ್ನೂ ಉಂಟುಮಾಡತಕ್ಕವಳಾಗಿರುವಳು. ॥೫೧-೫೨॥

ಆ ರಾಧೆಯು ವರಾಹಕಲ್ಪದಲ್ಲಿ ವ್ರಜದಲ್ಲಿದ್ದ ವೃಷಭಾನುವೆಂಬ ಗೊಲ್ಲನ ಮಗಳಾಗಿ ಹುಟ್ಟಿ ತನ್ನ ಪಾದಪದ್ಮಸಂಬಂಧದಿಂದ ಭೂಮಿಯನ್ನು ಪರಿಶುದ್ಧ ಮಾಡುತ್ತಾ ಬ್ರಹ್ಮಾದಿಗಳಿಗೂ ಗೋಚರವಾಗದವಳಾದರೂ, ಭಾರತಭೂಮಿಯಲ್ಲಿ ಸರ್ವರಿಗೂ ಗೋಚರಳಾಗಿ ಸ್ತ್ರೀಯರಲ್ಲಿ ಅತ್ಯಂತ ಶ್ರೇಷ್ಠಳಾಗಿ ಕೃಷ್ಣನ ಹೃದಯದಲ್ಲಿ ಯಾವಾಗಲೂ ನೆಲೆಸಿರುವಳು. ॥೫೩-೫೪॥

ಯಥಾಂಬರೇ ನವಘನೇ ಲೋಲಾ ಸೌದಾಮನೀ ಮುನೇ ।
ಷಷ್ಟಿವರ್ಷಸಹಸ್ರಾಣಿ ಪ್ರತಪ್ತಂ ಬ್ರಹ್ಮಣಾ ಪುರಾ ॥೫೫॥

ಯತ್ಪಾದಪದ್ಮನಖರದೃಷ್ಟಯೇ ಚಾತ್ಮಶುದ್ಧಯೇ ।
ನ ಚ ದೃಷ್ಟಂ ಚ ಸ್ವಪ್ನೇಽಪಿ ಪತ್ಯಕ್ಷಸ್ಯಾಪಿ ಕಾ ಕಥಾ ॥೫೬॥

ತೇನೈವ ತಪಸಾ ದೃಷ್ಟ್ವಾ ಭುವಿ ವೃಂದಾವನೇ ವನೇ ।
ಕಥಿತಾ ಪಂಚಮೀ ದೇವೀ ಸಾ ರಾಧಾ ಚ ಪ್ರಕೀರ್ತಿತಾ ॥೫೭॥

---

ಎಲೈ ನಾರದನೇ! ಆ ರಾಧಾದೇವಿಯು ಆಕಾಶದಲ್ಲಿ ಹೊಸದಾಗಿ ಹುಟ್ಟಿದ ಮೋಡದಲ್ಲಿ ಮಿಂಚು ಹೊಳೆಯುತ್ತಿರುವಂತೆ ಕೃಷ್ಣನ ಹೃದಯದಲ್ಲಿ ಪ್ರಕಾಶಿಸುತ್ತಿರುವಳು. ಹಿಂದೆ ಬ್ರಹ್ಮನು ಅರವತ್ತುಸಾವಿರ ವರ್ಷ ತಪಸ್ಸುಮಾಡಿ ಆತ್ಮಶುದ್ಧಿ ಮಾಡಿಕೊಂಡು ರಾಧಾದೇವಿಯ ಪಾದವನ್ನು ನೋಡಬೇಕೆಂದು ಪ್ರಯತ್ನಮಾಡಿದರೂ ಸ್ವಪ್ನದಲ್ಲಿಯೂ ನೋಡಲಾಗಲಿಲ್ಲ. ಇನ್ನು ಪ್ರತ್ಯಕ್ಷವಾಗುವುದೆಲ್ಲಿ? ॥೫೫-೫೬॥

ಅದೇ ತಪಸ್ಸಿನ ಮಹಿಮೆಯಿಂದಲೇ ಭೂಲೋಕದಲ್ಲಿ ವೃಂದಾವನವೆಂಬ ವನದಲ್ಲಿ ರಾಧೆಯನ್ನು ನೋಡಿದನು. ಐದನೆಯ ಶಕ್ತಿಯಾದ ರಾಧಾದೇವಿಯ ವಿಷಯವನ್ನು ಹೇಳಿದುದಾಯ್ತು.

ಮುಖ್ಯಾಭಿಪ್ರಾಯವೇನೆಂದರೆ ಮಾಯಾವಿಶಿಷ್ಟಬ್ರಹ್ಮರೂಪಿಣಿಯೂ ಸರ್ವೇಶ್ವರಿಯೂ ಆದ ಮೂಲಪ್ರಕೃತಿಯು ಸಮಷ್ಟಿವ್ಯಷ್ಟಿ ಇಂದ್ರಿಯಾಭಿಮಾನಿಗಳಾದ ದಿಕ್ಕು, ವಾಯು, ಸೂರ್ಯ, ವರುಣ, ಅಶ್ವಿನೀದೇವತೆಗಳು, ಅಗ್ನಿ, ಇಂದ್ರ, ಉಪೇಂದ್ರ, ಮಿತ್ರರೆಂಬ ದೇವತೆಗಳನ್ನು ಹೇಗೆ ಸೃಷ್ಟಿಮಾಡಿದಳೋ ಹಾಗೆಯೇ ಸಮಷ್ಟಿವ್ಯಷ್ಟಿರೂಪವಾದ ಅಂತಃಕರಣಗಳಿಗೆ ಆಧಾರಳೂ ಅಭಿಮಾನಿನಿಯೂ ಆದ ದುರ್ಗಾದೇವಿಯನ್ನೂ, ಹಾಗೆಯೇ ಅಂತಹ ಸಂಪತ್ತಿಗೆ ಆಧಾರಳಾದ ಲಕ್ಷ್ಮಿಯನ್ನೂ, ಸಮಷ್ಟಿಯೂ ವ್ಯಷ್ಟಿಯೂ ಆಗಿರುವ ಬುದ್ಧಿಜ್ಞಾನಗಳಿಗೆ ಆಶ್ರಯಳಾದ ಸರಸ್ವತಿಯನ್ನೂ, ಅಂತಹ ಬ್ರಹ್ಮತೇಜಸ್ಸಿನ ರೂಪವಾದ ಜೀವನಿಗೆ ಅಧಿಷ್ಠಾನಭೂತಳಾಗಿ ಆಶ್ರಯಳಾದ ಸಾವಿತ್ರಿಯನ್ನೂ, ಹಾಗೆಯೇ ಪಂಚಪ್ರಾಣಗಳಿಗೂ ಆಶ್ರಯಳಾದ ರಾಧೆಯನ್ನೂ, ಶ್ರೀಕೃಷ್ಣನ ಸ್ವರೂಪವನ್ನು ಧರಿಸಿ, ಅದೇ ಸ್ವರೂಪವನ್ನು ಧರಿಸಿದ ಶಕ್ತಿಯಿಂದ (ಅರ್ಧನಾರೀಶ್ವರನಾಗಿ) ನಿರ್ಮಾಣಮಾಡಿದಳು. ಈ ಐದು ದೇವಿಯರೂ ಮೂಲಪ್ರಕೃತಿಯ ಅವತಾರವೇ ಆದುದರಿಂದ ಇವರಲ್ಲಿಯೂ ಸರ್ವವ್ಯಾಪಕತ್ವವೂ, ಮೂಲಪ್ರಕೃತಿಗೆ ಸಮಾನವಾದ ಮಹಿಮೆಯೂ, ಇರುವುದು. **ಮಾಯಾ**

ಅಂಶರೂಪಾಃ ಕಲಾರೂಪಾಃ ಕಲಾಂಶಾಂಶಾಂಶ ಸಂಭವಾಃ ।
ಪ್ರಕೃತೇಃ ಪ್ರತಿವಿಶ್ವೇಷು ದೇವ್ಯಶ್ಚ ಸರ್ವಯೋಷಿತಃ ॥೫೮॥

ಪರಿಪೂರ್ಣತಮಾಃ ಪಂಚವಿದ್ಯಾದೇವ್ಯಃ ಪ್ರಕೀರ್ತಿತಾಃ ।
ಯಾ ಯಾಃ ಪ್ರಧಾನಾಂ ಶರೂಪಾವರ್ಣಯಾಮಿ ನಿಶಾಮಯ ॥೫೯॥

ಪ್ರಧಾನಾಂಶ ಸ್ವರೂಪಾ ಸಾ ಗಂಗಾಭುವನಪಾವನೀ ।
ವಿಷ್ಣುವಿಗ್ರಹಸಂಭೂತಾ ದ್ರವರೂಪಾ ಸನಾತನೀ ॥೬೦॥

---

ವಿಶಿಷ್ಟಬ್ರಹ್ಮರೂಪಿಣಿಯಾದ ಮೂಲಪ್ರಕೃತಿಗೆ ಆಧಾರವಾದವಳು ಶ್ರೀಭುವನೇಶ್ವರೀ ದೇವಿಯೆಂಬುದನ್ನು ಮೂರನೆಯ ಸ್ಕಂಧದಲ್ಲಿ ಹೇಳಿದುದನ್ನು ಮರೆಯಬಾರದು. ಸಮಸ್ತ ಪದಾರ್ಥಗಳೂ ಮೂಲಪ್ರಕೃತಿಯ ಅಂಶರಾದವರೇ ಎಂಬುದು ವಾಸ್ತವವು. ಆದರೆ ಸ್ತ್ರೀಯರಲ್ಲಿ ಪ್ರಸವಧರ್ಮವೊಂದು ವಿಶೇಷವಿರುವುದರಿಂದ ಆತ್ಮಶಕ್ತಿಯ ಅಂಶವು ಸ್ತ್ರೀಯರಲ್ಲಿ ವಿಶೇಷವಾಗಿರುವುದೆಂದು ಹೇಳಿರುವರು. ಆ ಕಾರಣದಿಂದಲೇ ಶ್ರೀಶಂಕರಾಚಾರ್ಯರು ಪ್ರಪಂಚಸಾರದಲ್ಲಿ "ಪುನ್ನಪುಂಸಕಯೋಸ್ತುಲ್ಯಾಪ್ಯಂಗನಾ ಸುವಿಶಿಷ್ಯತೇ । ಸರ್ವಂ ದೇವೀಮಯಂ ಜಗತ್" ಎಂದೂ ಹೇಳಿರುವುದು "ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ । ತಯೋರ್ವಿಭೂತಿ ಲೇಶೋ ವೈ ಜಗದೇತಚ್ಚರಾಚರಂ" ಎಂಬ ಶ್ರುತಿಗೆ ಅನುಸಾರವಾಗಿದೆ. ಎಂಬುದನ್ನು ಗಮನಿಸಬೇಕು. ॥೫೭॥

ಈ ಐದು ಶಕ್ತಿದೇವಿಯರಲ್ಲದೆ ಪ್ರಪಂಚದಲ್ಲಿ ಪ್ರಕೃತಿಯ ಅರ್ಧಾಂಶದಿಂದಲೂ ಹದಿನಾರರಲ್ಲಿ ಒಂದುಪಾಲು ಅಂಶದಿಂದಲೂ, ಇನ್ನೂ ಸೂಕ್ಷ್ಮಾಂಶದಿಂದಲೂ ಅವತರಿಸಿರುವ ಅನೇಕ ದೇವಿಯರಿರುವರು. ಹೆಚ್ಚು ಹೇಳಿ ಏನು? ಸಮಸ್ತ ಲೋಕದಲ್ಲಿರುವ ಸ್ತ್ರೀಯರೆಲ್ಲರೂ ದೇವಿಯ ಅಂಶಾಂಶರೂಪರೆಂದು ತಿಳಿಯಬೇಕು. ॥೫೮॥

ಹಾಗಿದ್ದರೂ ದುರ್ಗಾದಿಪಂಚದೇವಿಯರು ಮಾತ್ರ ಪ್ರಕೃತಿಯ ಪೂರ್ಣವಾದ ಅವತಾರರೂಪರು. ಇನ್ನುಮುಂದೆ ಮೂಲಪ್ರಕೃತಿಯ ಅಂಶರೂಪರಾದ ದೇವಿಯರಲ್ಲಿ ಕೆಲವರನ್ನು ವರ್ಣಿಸುವೆನು ಕೇಳು. ॥೫೯॥

ಪ್ರಪಂಚವನ್ನು ಪರಿಶುದ್ಧಮಾಡುವ ಗಂಗೆಯು ಪ್ರಧಾನವೆಂದೂ ಪ್ರಸಿದ್ಧವಾಗಿರುವ ಮೂಲಪ್ರಕೃತಿಯ ಅಂಶಸ್ವರೂಪಳು. ಪ್ರಕೃತಿಗೆ ಅಭಿನ್ನವಾದ ವಿಷ್ಣುವಿನ ಶರೀರದಿಂದ ದ್ರವರೂಪವಾಗಿ ಹುಟ್ಟಿ ಬಹುಕಾಲದಿಂದ ಲೋಕಪಾವನಳಾಗಿ ಇರು

ಪಾಪಿಪಾಪೇಧ್ಮದಾಹಾಯ ಜ್ವಲದಗ್ನಿಸ್ವರೂಪಿಣೀ ।
ಸುಖಸ್ಪರ್ಶಾ ಸ್ನಾನಪಾನೈರ್ನಿರ್ವಾಣಪದದಾಯಿನೀ ॥೬೦॥

ಗೋಲೋಕಸ್ಥಾನಪ್ರಸ್ಥಾನ ಸುಖಸೋಪಾನರೂಪಿಣೀ ।
ಪವಿತ್ರರೂಪಾ ತೀರ್ಥಾನಾಂ ಸರಿತಾಂ ಚ ಪರಾವರಾ ॥೬೨॥

ಶಂಭುಮೌಳಿ ಜಟಾಮೇರು ಮುಕ್ತಾಪಂಙ್ತಿಸ್ವರೂಪಿಣೀ ।
ತಪಸ್ಸಂಪಾದಿನೀ ಸದ್ಯೋ ಭಾರತೇಷು ತಪಸ್ವಿನಾಂ ॥೬೩॥

ಚಂದ್ರಪದ್ಮಕ್ಷೀರನಿಭಾ ಶುದ್ಧಸತ್ವಸ್ವರೂಪಿಣೀ ।
ನಿರ್ಮಲಾ ನಿರಹಂಕಾರಾ ಸಾಧ್ವೀ ನಾರಾಯಣಪ್ರಿಯಾ ॥೬೪॥

ಪ್ರಧಾನಾಂಶಸ್ವರೂಪಾ ಚ ತುಲಸೀ ವಿಷ್ಣುಕಾಮಿನೀ ।
ವಿಷ್ಣುಭೂಷಣರೂಪಾ ಚ ವಿಷ್ಣುಪಾದಸ್ಥಿತಾ ಸತೀ ॥೬೫॥

---

ವಳು. ಇದರಿಂದ ಸಮಸ್ತ ದೇವತೆಗಳೂ ಶಕ್ತ್ಯಂಶರೂಪರು ಮಾತ್ರರಲ್ಲವು. ಮತ್ತೇನೆಂದರೆ ಶಕ್ತಿವಿಶಿಷ್ಟಬ್ರಹ್ಮರೂಪರೂ ಆಗಿದಾರೆಂದು ಹೇಳಿದ ಹಾಗಾಯಿತು. ॥೬೦॥

ಗಂಗೆಯು ಪಾಪಿಗಳ ಪಾಪವೆಂಬ ಕಟ್ಟಿಗೆಯನ್ನು ಸುಡುವ ಅಗ್ನಿಸ್ವರೂಪಳು. ಮುಟ್ಟಿದರೆ ಸುಖವನ್ನುಂಟುಮಾಡುವಳು. ಸ್ನಾನಪಾನಗಳಿಂದ ಮೋಕ್ಷವನ್ನು ಕೊಡುವಳು. ಗೋಲೋಕಕ್ಕೆ ಹೋಗುವುದಕ್ಕೆ ಸುಖವಾದ ಮೆಟ್ಟಲಿನಂತಿರತಕ್ಕವಳು. ನದಿಗಳಲ್ಲಿ ಶ್ರೇಷ್ಠಳಾಗಿ ತೀರ್ಥಗಳಲ್ಲಿ ಪರಿಶುದ್ಧವಾದವಳು. ಶಿವನ ಜಟೆ ಎಂಬ ಮೇರುಪರ್ವತಕ್ಕೆ ಮುತ್ತಿನಹಾರದಂತಿರುವಳು. ಭಾರತಭೂಮಿಯಲ್ಲಿ ತಪಸ್ಸನ್ನು ಮಾಡುವವರಿಗೆ ಬೇಗನೆ ತಪಸ್ಸಿನ ಫಲವನ್ನು ಕೊಡತಕ್ಕವಳು. ॥೬೧-೬೨-೬೩॥

ಚಂದ್ರ, ಬಿಳಿಯ ತಾವರೆ, ಹಾಲು ಇವುಗಳ ಕಾಂತಿಗೆ ಸಮಾನವಾದ ಕಾಂತಿಯುಳ್ಳವಳು. ಪರಿಶುದ್ಧವಾದ ಸತ್ವಗುಣಸ್ವರೂಪಳು. ಶುದ್ಧಳು. ಅಹಂಕಾರವಿಲ್ಲದವಳು. ಪತಿಭಕ್ತಿಯುಳ್ಳವಳು. ನಾರಾಯಣನಿಗೆ ಪ್ರೀತಿಪಾತ್ರಳಾದವಳು. ॥೬೪॥

ಪ್ರಕೃತಿಯ ಅಂಶರೂಪಳಾದ ತುಲಸಿಯು ವಿಷ್ಣುಪತ್ನಿಯಾಗಿ ಅವನಿಗೆ ಆಭರಣರೂಪಳಾಗಿ ಆತನ ಪಾದದಲ್ಲಿರುವಳು. ತಪಸ್ಸು, ಪೂಜೆ ಮುಂತಾದುವನ್ನು ಮಾಡುವವರು ತುಲಸಿಯನ್ನು ತರುವರು. ಈ ತುಲಸಿಯು ಪರಿಶುದ್ಧವಾದುದು. ಪುಣ್ಯವನ್ನು ಕೊಡತಕ್ಕುದು. ಹೂಗಳಲ್ಲೆಲ್ಲಾ ಶ್ರೇಷ್ಠವಾದುದು. ಇದನ್ನು ನೋಡು

ತಪಸ್ಸಂಕಲ್ಪಪೂಜಾದಿ ಸಂಘಸಂಪಾದಿನೀ ಮುನೇ ।
ಸಾರಭೂತಾ ಚ ಪುಷ್ಪಾಣಾಂ ಪವಿತ್ರಾ ಪುಣ್ಯದಾ ಸದಾ ॥೬೬॥

ದರ್ಶನಸ್ಪರ್ಶನಾಭ್ಯಾಂ ಚ ಸದ್ಯೋ ನಿರ್ವಾಣದಾಯಿನೀ ।
ಕಲೌ ಕಲುಷಶುಷ್ಕೇಧ್ಮದಹನಾಯಾಗ್ನಿರೂಪಿಣೀ ॥೬೭॥

ಯತ್ಪಾದಪದ್ಮಸಂಸ್ಪರ್ಶಾತ್ಸದ್ಯಃ ಪೂತಾ ವಸುಂಧರಾ ।
ಯತ್ಸ್ಪರ್ಶದರ್ಶನೇ ಚೈವೇಚ್ಛಂತಿ ತೀರ್ಥಾನಿ ಶುದ್ಧಯೇ ॥೬೮॥

ಯಯಾ ವಿನಾ ಚ ವಿಶ್ವೇಷು ಸರ್ವಕರ್ಮ ಚ ನಿಷ್ಫಲಂ ।
ಮೋಕ್ಷದಾ ಯಾ ಮುಮುಕ್ಷೂಣಾಂ ಕಾಮಿನೀ ಸರ್ವಕಾಮದಾ॥೬೯॥

ಕಲ್ಪವೃಕ್ಷಸ್ವರೂಪಾ ಯಾ ಭಾರತೇ ವೃಕ್ಷರೂಪಿಣೀ ।
ಭಾರತೀನಾಂ ಪ್ರೀಣನಾಯ ಜಾತಾ ಯಾ ಪರದೇವತಾ ॥೭೦॥

ಪ್ರಧಾನಾಂಶಸ್ವರೂಪಾ ಯಾ ಮನಸಾ ಕಶ್ಯಪಾತ್ಮಜಾ ।
ಶಂಕರಪ್ರಿಯಶಿಷ್ಯಾ ಚ ಮಹಾಜ್ಞಾನವಿಶಾರದಾ ॥೭೧॥

---

ವುದರಿಂದಲೂ ಮುಟ್ಟುವುದರಿಂದಲೂ ಮೋಕ್ಷವುಂಟಾಗುವುದು. ಈ ತುಲಸಿಯ ಅಭಿಮಾನಿಯಾಗಿರುವ ದೇವತೆಯು ಕಲಿಯುಗದಲ್ಲಿ ಪಾಪವೆಂಬ ಒಣಗಿದ ಸೌದೆಗೆ ಅಗ್ನಿ ಸ್ವರೂಪಳಾದವಳು. ॥೬೫-೬೬-೬೭॥

ತುಲಸೀದೇವಿಯ ಪಾದಸ್ಪರ್ಶದಿಂದ ಭೂಮಿಯು ಶುದ್ಧವಾಯಿತು. ತೀರ್ಥಗಳು ತಮ್ಮ ಶುದ್ಧಿಗೋಸ್ಕರ ತುಲಸಿಯ ದರ್ಶನ ಸ್ಪರ್ಶನಗಳನ್ನು ಅಪೇಕ್ಷಿಸುವುವು. ಪ್ರಪಂಚದಲ್ಲಿ ತುಲಸಿಯಿಲ್ಲದೆ ಮಾಡಿದ ಸಮಸ್ತ ಕರ್ಮಗಳೂ ಫಲವಿಲ್ಲದ್ದಾಗುವುವು.

ತುಲಸಿಯು ಕಲ್ಪವೃಕ್ಷದಂತೆ ಕಾಮಿಗಳಿಗೆ ಅವರವರ ಕೋರಿಕೆಗಳನ್ನೂ, ಮೋಕ್ಷಾಪೇಕ್ಷೆಯುಳ್ಳವರಿಗೆ ಮೋಕ್ಷವನ್ನೂ, ಹೀಗೆ ಭಕ್ತರಿಗೆ ಎಲ್ಲ ಬಗೆಯ ಇಷ್ಟಾರ್ಥಗಳನ್ನೂ ಕೊಡುವಳು. ಭಾರತದೇಶದ ಜನರನ್ನು ತೃಪ್ತಿಪಡಿಸುವುದಕ್ಕಾಗಿ ಪ್ರಕೃತಿಸ್ವರೂಪಳಾದ ಪರಾದೇವಿಯೇ ತುಲಸೀವೃಕ್ಷರೂಪವಾಗಿ ಹುಟ್ಟಿದಳು. ॥೬೮-೬೯-೭೦॥

ಪ್ರಕೃತಿಯ ಅಂಶದಿಂದ ಹುಟ್ಟಿದ, ಕಶ್ಯಪರ ಮನಸ್ಸಿನಿಂದ ಉಂಟಾದ ಮಗಳಾದ ತುಲಸೀದೇವಿಯು ಈಶ್ವರನ ಶಿಷ್ಯಳಾದುದರಿಂದ ಮಹಾಜ್ಞಾನಿಯಾದ

ನಾಗೇಶ್ವರಸ್ಯಾನಂತಸ್ಯ ಭಗಿನೀ ನಾಗಪೂಜಿತಾ ।
ನಾಗೇಶ್ವರೀ ನಾಗಮಾತಾ ಸುಂದರೀ ನಾಗವಾಹಿನೀ ॥೭೨॥

ನಾಗೇಂದ್ರಗಣಸಂಯುಕ್ತಾ ನಾಗಭೂಷಣಭೂಷಿತಾ ।
ನಾಗೇಂದ್ರವಂದಿತಾ ಸಿದ್ಧಾ ಯೋಗಿನೀ ನಾಗಶಾಯಿನೀ ॥೭೩॥

ವಿಷ್ಣುರೂಪಾ ವಿಷ್ಣುಭಕ್ತಾ ವಿಷ್ಣುಪೂಜಾ ಪರಾಯಣಾ ।
ತಪಸ್ಸ್ವರೂಪಾ ತಪಸಾಂ ಫಲದಾತ್ರೀ ತಪಸ್ವಿನೀ ॥೭೪॥

ದಿವ್ಯಂ ತ್ರಿಲಕ್ಷ ವರ್ಷಂ ಚ ತಪಸ್ತಪ್ತ್ವಾ ಚ ಯಾ ಹರೇಃ ।
ತಪಸ್ವಿನೀಷು ಪೂಜ್ಯಾ ಚ ತಪಸ್ವಿಷು ಚ ಭಾರತೇ ॥೭೫॥

ಸರ್ವಮಂತ್ರಾಧಿದೇವೀ ಚ ಜ್ವಲಂತೀ ಬ್ರಹ್ಮತೇಜಸಾ ।
ಬ್ರಹ್ಮಸ್ವರೂಪಾ ಪರಮಾ ಬ್ರಹ್ಮಭಾವನತತ್ಪರಾ ॥೭೬॥

ಜರತ್ಕಾರುಮುನೇಃ ಪತ್ನೀ ಕೃಷ್ಣಾಂಶಸ್ಯ ಪತಿವ್ರತಾ ।
ಆಸ್ತಿಕಸ್ಯ ಮುನೇರ್ಮಾತಾ ಪ್ರವರಸ್ಯ ತಪಸ್ವಿನಾಂ ॥೭೭॥

---

ವಳು. ಇವಳು ನಾಗರಾಜನಾದ ಅನಂತನ ತಂಗಿಯು. ನಾಗಲೋಕದಲ್ಲಿರುವ ನಾಗದೇವತೆಗಳೆಲ್ಲವೂ ಈಕೆಯನ್ನು ಪೂಜಿಸುವುವು. ಇವಳು ಸರ್ಪಗಳಿಗೆ ಅಧಿಪತಿಯಾಗಿ ಅವುಗಳಿಗೆ ತಾಯಿಯಂತಿರುವಳು. ಸರ್ಪಗಳೇ ಈಕೆಗೆ ವಾಹನಗಳು. ಯಾವಾಗಲೂ ಸರ್ಪಗಳ ಸಮೂಹದಿಂದ ಕೂಡಿ, ಅವುಗಳನ್ನೇ ಆಭರಣವಾಗಿ ಮಾಡಿಕೊಂಡು, ಅವುಗಳಿಂದ ಪೂಜಿಸಲ್ಪಡುತ್ತಲೂ ಅವುಗಳ ಹಾಸಿಗೆಯಲ್ಲಿ ಮಲಗುತ್ತಾ, ಯೋಗಸಿದ್ಧಿಯನ್ನು ಪಡೆದಿರುವಳು. ||೭೧-೭೨-೭೩||

ಮನಸ್ತತ್ತ್ವಾಭಿಮಾನಿನಿಯಾದ ಈ ದೇವಿಯು ವಿಷ್ಣುಸ್ವರೂಪಳಾಗಿ ವಿಷ್ಣುಭಕ್ತಳಾಗಿ ವಿಷ್ಣುಪೂಜೆಯಲ್ಲಿ ಆಸಕ್ತಳಾಗಿರುವಳು. ತಪಸ್ಸಿನ ಸ್ವರೂಪಳಾಗಿ ಇತರರು ಮಾಡುವ ತಪಸ್ಸಿಗೆ ಫಲವನ್ನು ಕೊಡತಕ್ಕವಳಾಗಿರುವಳು. ದೇವಮಾನದಲ್ಲಿ ಮೂರು ಲಕ್ಷವರ್ಷಗಳ ವರೆಗೆ ತಪಸ್ಸನ್ನು ಮಾಡಿ ಭರತಖಂಡದಲ್ಲಿ ತಪಸ್ವಿಗಳಿಗೆ ಪೂಜ್ಯಳಾಗಿರುವಳು. ಸಮಸ್ತ ಮಂತ್ರಗಳಿಗೂ ದೇವತಾಸ್ವರೂಪಳಾಗಿ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಿರುವಳು. ಯಾವಾಗಲೂ ಪರಬ್ರಹ್ಮಸ್ವರೂಪಳಾಗಿ ಬ್ರಹ್ಮನನ್ನೇ ಭಾವನೆ ಮಾಡುತ್ತಿರುವಳು. ಕೃಷ್ಣನ ಅಂಶದಿಂದ ಹುಟ್ಟಿದ ಜರತ್ಕಾರುಮುನಿಯ ಪತ್ನಿಯಾದ

ಪ್ರಧಾನಾಂಶಸ್ವರೂಪಾ ಯಾ ದೇವಸೇನಾ ಚ ನಾರದ ।
ಮಾತೃಕಾಸು ಪೂಜ್ಯತಮಾ ಸಾ ಷಷ್ಠೀ ಚ ಪ್ರಕೀರ್ತಿತಾ ॥೭೮॥

ಪುತ್ರಪೌತ್ರಾದಿದಾತ್ರೀ ಚ ಧಾತ್ರೀ ತ್ರಿಜಗತಾಂ ಸತೀ ।
ಷಷ್ಠಾಂಶರೂಪಾ ಪ್ರಕೃತೇಃ ತೇನ ಷಷ್ಠೀ ಪ್ರಕೀರ್ತಿತಾ ॥೭೯॥

ಸ್ಥಾನೇ ಶಿಶೂನಾಂ ಪರಮಾ ವೃದ್ಧರೂಪಾ ಚ ಯೋಗಿನೀ ।
ಪೂಜಾ ದ್ವಾದಶಮಾಸೇಷು ಯಸ್ಯಾ ವಿಶ್ವೇಷು ಸಂತತಂ ॥೮೦॥

ಪೂಜಾ ಚ ಸೂತಿಕಾಗಾರೇ ಪುರಾ ಷಷ್ಠದಿನೇ ಶಿಶೋಃ ।
ಏಕವಿಂಶತಿಮೇ ಚೈವ ಪೂಜಾ ಕಲ್ಯಾಣಹೇತುಕೀ ॥೮೧॥

ಮುನಿಭಿರ್ನಮಿತಾ ಚೈಷಾ ನಿತ್ಯಕಾಮಾಪ್ಯತಃಪರಾ ।
ಮಾತೃಕಾ ಚ ದಯಾರೂಪಾ ಶಶ್ವದ್ರಕ್ಷಣಕಾರಿಣೀ ॥೮೨॥

---

ಇವಳು ತಪಸ್ವಿಗಳಲ್ಲಿ ಶ್ರೇಷ್ಠನಾದ ಆಸ್ತಿಕಮುನಿಯ ತಾಯಿಯಾಗಿರುವಳು. ||೭೪-೭೫-೭೬-೭೭||

ಓ ನಾರದನೇ! ಪ್ರಕೃತಿಯ ಅಂಶರೂಪವಾದ ದೇವಸೇನಾದೇವಿಯು ಮಾತೃಕಾದೇವಿಯರಲ್ಲಿ ಅತ್ಯಂತ ಪೂಜ್ಯಳಾದವಳು. ಆಕೆಗೆ ಷಷ್ಠೀದೇವೀ ಎಂದೂ ಹೆಸರು. ಪ್ರಕೃತಿದೇವಿಯ ಆರನೇ ಒಂದಂಶದಿಂದ ಉಂಟಾದವಳಾದುದರಿಂದ ಈ ಹೆಸರು ಬಂದಿದೆ. ಈ ದೇವಿಯು ಮಕ್ಕಳು, ಮೊಮ್ಮಕ್ಕಳು ಮುಂತಾಗಿ ಸಂತಾನಾಭಿವೃದ್ಧಿಯಾಗುವ ವರವನ್ನು ಕೊಡತಕ್ಕವಳಾಗಿಯೂ, ಜಗತ್ತಿಗೆ ತಾಯಿಯಾಗಿಯೂ ಇರುವಳು. ||೭೮-೭೯||

ಈ ಷಷ್ಠೀದೇವಿಯು ಮುದುಕಿಯ ರೂಪದಲ್ಲಿ ಯೋಗಿನಿಯಾಗಿ ಮಕ್ಕಳಿರುವ ಸ್ಥಳದಲ್ಲಿರುವಳು. ಪ್ರಪಂಚದಲ್ಲಿ ಮಕ್ಕಳು ಹುಟ್ಟಿದ ಮೊದಲು ಹನ್ನೆರಡು ತಿಂಗಳವರೆಗೆ ಪ್ರತಿತಿಂಗಳಲ್ಲಿಯೂ ಸಂತತವಾಗಿ ಈ ದೇವಿಯನ್ನು ಪೂಜಿಸುವರು. ಮಗು ಹುಟ್ಟಿದ ಆರನೆಯ ದಿನದಲ್ಲಾಗಲೀ ಇಪ್ಪತ್ತೊಂದನೆಯ ದಿನದಲ್ಲಿಯಾಗಲೀ ಪೂಜಿಸುವವರಿಗೆ ಈ ದೇವಿಯು ಮಂಗಳವನ್ನುಂಟುಮಾಡುವಳು. ಈ ದೇವಿಯು ದಯಾಶಾಲಿನಿಯಾದ ಮಾತೃಕಾದೇವಿಯಾದುದರಿಂದ ಆಗಾಗ್ಗೆ ಮಕ್ಕಳನ್ನು ನೀರಿನಲ್ಲಿಯೂ ನೆಲದಮೇಲೂ ಆಕಾಶದಲ್ಲೂ ಮನೆಯಲ್ಲಿಯೂ ಕಾಪಾಡುತ್ತಿರುವಳು.

ಜಲೇ ಸ್ಥಲೇ ಚಾಂತರಿಕ್ಷೇ ಶಿಶೂನಾಂ ಸದ್ಮಗೋಚರೇ ।
ಪ್ರಧಾನಾಂಶಸ್ವರೂಪಾ ಚ ದೇವೀ ಮಂಗಲಚಂಡಿಕಾ ॥೮೩॥

ಪ್ರಕೃತೇರ್ಮುಖಸಂಭೂತಾ ಸರ್ವಮಂಗಲದಾ ಸದಾ ।
ಸೃಷ್ಟೌ ಮಂಗಲರೂಪಾ ಚ ಸಂಹಾರೇ ಕೋಪರೂಪಿಣೀ ॥೮೪॥

ತೇನ ಮಂಗಲಚಂಡೀ ಸಾ ಪಂಡಿತೈಃ ಪರಿಕೀರ್ತಿತಾ ।
ಪ್ರತಿಮಂಗಲವಾರೇಷು ಪ್ರತಿವಿಶ್ವೇಷು ಪೂಜಿತಾ ॥೮೫॥

ಪುತ್ರಪೌತ್ರಧನೈಶ್ವರ್ಯ ಯಶೋಮಂಗಲದಾಯಿನೀ ।
ಪರಿತುಷ್ಟಾ ಸರ್ವವಾಂಛಾ ಪ್ರದಾತ್ರೀ ಸರ್ವಯೋಷಿತಾಂ ॥೮೬॥

ರುಷ್ಟಾ ಕ್ಷಣೇನ ಸಂಹರ್ತುಂ ಶಕ್ತಾ ವಿಶ್ವಂ ಮಹೇಶ್ವರೀ ।
ಪ್ರಧಾನಾಂಶಸ್ವರೂಪಾ ಸಾ ಕಾಲೀ ಕಮಲಲೋಚನಾ ॥೮೭॥

ದುರ್ಗಾಲಲಾಟಸಂಭೂತಾ ರಣೇ ಶುಂಭನಿಶುಂಭಯೋಃ ।
ದುರ್ಗಾರ್ಧಾಂಶಸ್ವರೂಪಾ ಸಾ ಗುಣೇನ ತೇಜಸಾ ಸಮಾ ॥೮೮॥

---

ಆದುದರಿಂದ ಶ್ರೇಷ್ಠಳಾದ ಮತ್ತು ಸತ್ಯಕಾಮಳಾದ ಈ ದೇವಿಗೆ ಸಮಸ್ತಮುನಿಗಳೂ ನಮಸ್ಕರಿಸುವರು. ॥೮೦-೮೧-೮೨॥

ಪ್ರಕೃತಿಯ ಅಂಶಾವತಾರವಾದ ದುರ್ಗಾದೇವಿಯ ಮುಖದಿಂದ ಹುಟ್ಟಿದ ಮಂಗಲಚಂಡಿಕಾದೇವಿಯು ಯಾವಾಗಲೂ ಸಮಸ್ತ ಮಂಗಲಗಳನ್ನೂ ಕೊಡತಕ್ಕವಳು. ಸೃಷ್ಟಿಕಾಲದಲ್ಲಿ ಶುಭರೂಪಳಾಗಿಯೂ ಸಂಹಾರಕಾಲದಲ್ಲಿ ಕೋಪಸ್ವರೂಪಳಾಗಿಯೂ ಇರುವಳು. ಇದರಿಂದಲೇ ಇವಳಿಗೆ ಮಂಗಲಚಂಡಿಕೆ ಎಂದು ಹೆಸರು ಬಂದಿರುವುದು. ಪ್ರತಿಯೊಂದು ಮಂಗಲವಾರದಲ್ಲೂ ಪೂಜೆಮಾಡಿದ ಜನರಿಗೆ ಮಕ್ಕಳು, ಮೊಮ್ಮಕ್ಕಳು, ಹಣ, ಸಂಪತ್ತು, ಕೀರ್ತಿ, ಶುಭ ಇವುಗಳನ್ನು ಕೊಡುವಳು. ಕೋಪಗೊಂಡರೆ ಪ್ರಪಂಚವನ್ನೇ ನಾಶಮಾಡಲು ಶಕ್ತಳಾಗಿರುವಳು. ॥೮೩-೮೪-೮೫-೮೬॥

ಪ್ರಕೃತಿಯ ಅರ್ಧಾಂಶಾವತಾರವಾದ, ಶುಂಭನಿಶುಂಭರೊಡನೆ ಯುದ್ಧದಲ್ಲಿ ದುರ್ಗಾದೇವಿಯ ಹಣೆಯಿಂದ ಹುಟ್ಟಿದ, ಕಮಲದಂತೆ ಕಣ್ಣುಳ್ಳ ಕಾಳಿಕಾದೇವಿಯು ದುರ್ಗಾದೇವಿಯಂತೆ ಮೂಲಪ್ರಕೃತಿಯ ಅರ್ಧಾಂಶವಾಗಿರುತ್ತ ಗುಣದಿಂದಲೂ

ಕೋಟಿಸೂರ್ಯಸಮಾ ಜುಷ್ಟ ಪುಷ್ಟಜಾಜ್ವಲವಿಗ್ರಹಾ ।
ಪ್ರಧಾನಾ ಸರ್ವಶಕ್ತೀನಾಂ ಬಲಾಬಲವತೀ ಪರಾ ॥೮೯॥

ಸರ್ವಸಿದ್ಧಿಪ್ರದಾ ದೇವೀ ಪರಮಾ ಯೋಗರೂಪಿಣೀ ।
ಕೃಷ್ಣಭಕ್ತಾ ಕೃಷ್ಣತುಲ್ಯಾ ತೇಜಸಾ ವಿಕ್ರಮೈರ್ಗುಣೈಃ ॥೯೦॥

ಕೃಷ್ಣಭಾವನಯಾ ಶಶ್ವತ್ಕೃಷ್ಣವರ್ಣಾ ಸನಾತನೀ ।
ಸಂಹರ್ತುಂ ಸರ್ವಬ್ರಹ್ಮಾಂಡಂ ಶಕ್ತಾ ನಿಶ್ವಾಸಮಾತ್ರತಃ ॥೯೧॥

ರಣಂ ದೈತ್ಯೈಸ್ಸಮಂ ತಸ್ಯಾಃ ಕ್ರೀಡಯಾ ಲೋಕಶಿಕ್ಷಯಾ ।
ಧರ್ಮಾರ್ಥಕಾಮಮೋಕ್ಷಾಂಶ್ಚ ದಾತುಂ ಶಕ್ತಾ ಚ ಪೂಜಿತಾ ॥೯೨॥

ಬ್ರಹ್ಮಾದಿಭಿಃಸ್ತೂಯಮಾನಾ ಮುನಿಭಿರ್ಮನುಭಿರ್ನರೈಃ ।
ಪ್ರಧಾನಾಂಶಸ್ವರೂಪಾ ಸಾ ಪ್ರಕೃತೇಶ್ಚ ವಸುಂಧರಾ ॥೯೩॥

---

ತೇಜಸ್ಸಿನಿಂದಲೂ ಆ ದೇವಿಗೆ ಸಮಾನವಾಗಿರುವಳು. ಕೋಟಿಸೂರ್ಯರ ಸಮಾನ ಕಾಂತಿಯಿಂದ ಕೂಡಿ ಕೊಬ್ಬಿದ ಪ್ರಕಾಶಮಾನವಾದ ಶರೀರವುಳ್ಳವಳಾಗಿ, ಸಮಸ್ತ ಶಕ್ತಿದೇವಿಯರಲ್ಲಿ ಮುಖ್ಯಳಾಗಿ ವಿಶೇಷ ಬಲವುಳ್ಳವಳಾಗಿ, ಶ್ರೇಷ್ಠವಾದ ಯೋಗಿನಿಯಾಗಿ, ಸಮಸ್ತ ಯೋಗಸಿದ್ಧಿಯನ್ನೂ ಕೊಡತಕ್ಕವಳಾಗಿಯೂ ಇರುವಳು. ಕೃಷ್ಣನ ಭಕ್ತಳಾಗಿ, ತೇಜಸ್ಸು ಪರಾಕ್ರಮ ಗುಣ ಇವುಗಳಲ್ಲಿ ಕೃಷ್ಣನಿಗೆ ಸಮಾನವಾದವಳಾಗಿ, ಯಾವಾಗಲೂ ಕೃಷ್ಣನನ್ನು ಧ್ಯಾನಮಾಡುವುದರಿಂದ ಆ ಕೃಷ್ಣನ ಮೈಬಣ್ಣವುಳ್ಳವಳಾಗಿ, ಉಸಿರುಬಿಡುವುದರಿಂದಲೇ ಸಮಸ್ತ ಬ್ರಹ್ಮಾಂಡವನ್ನೂ ನಾಶಮಾಡಲು ಶಕ್ತಳಾದರೂ ಲೋಕರಂಜನೆಗಾಗಿಯೂ ಆಟಕ್ಕಾಗಿಯೂ ರಾಕ್ಷಸರೊಡನೆ ಯುದ್ಧ ಮಾಡುವಳು. ಈ ದೇವಿಯನ್ನು ಪೂಜೆಮಾಡಿದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಕೊಡುವಳು. ಬ್ರಹ್ಮಾದಿದೇವತೆಗಳೂ ಮುನಿಗಳೂ ಮನುಗಳೂ ಮನುಜರೂ ಈ ದೇವಿಯನ್ನು ಸ್ತೋತ್ರಮಾಡುತ್ತಿರುವರು. ||೮೭-೮೮-೮೯-೯೦-೯೧-೯೨||

ಪ್ರಕೃತಿಯ ಅಂಶರೂಪಳಾದ ಭೂದೇವಿಯು ಸಮಸ್ತ ಪ್ರಾಣಿಗಳಿಗೂ ಆಶ್ರಯಳಾಗಿ, ಸಕಲ ಸಸ್ಯಗಳಿಂದಲೂ ಕೂಡಿರುವಳು. ರತ್ನಗಳ ಗಣಿಗಳುಳ್ಳವಳಾಗಿ, ತನ್ನೊಳಗೆ ರತ್ನಗಳನ್ನಿಟ್ಟುಕೊಂಡು ಇರುವ ಸಮಸ್ತ ಸಮುದ್ರಗಳಿಗೂ ಆಶ್ರಯಳಾಗಿ,

ಆಧಾರರೂಪಾ ಸರ್ವೇಷಾಂ ಸರ್ವರಸ್ಯಾ ಪ್ರಕೀರ್ತಿತಾ ।
ರತ್ನಾಕರಾ ರತ್ನಗರ್ಭಾ ಸರ್ವರತ್ನಾಕರಾಶ್ರಯಾ ॥೯೪॥

ಪ್ರಜಾಭಿಶ್ಚ ಪ್ರಜೇಶೈಶ್ಚ ಪೂಜಿತಾ ವಂದಿತಾ ಸದಾ ।
ಸರ್ವೋಪಜೀವ್ಯರೂಪಾ ಚ ಸರ್ವಸಂಪದ್ವಿಧಾಯಿನೀ ॥೯೫॥

ಯಯಾ ವಿನಾ ಜಗತ್ಸರ್ವಂ ನಿರಾಧಾರಂ ಚರಾಚರಂ ।
ಪ್ರಕೃತೇಶ್ಚ ಕಲಾ ಯಾ ಯಾಸ್ತಾ ನಿಬೋಧ ಮುನೀಶ್ವರ ॥೯೬॥

ಯಸ್ಯ ಯಸ್ಯ ಚ ಯಾ ಪತ್ನೀ ತತ್ಸರ್ವಂ ವರ್ಣಯಾಮಿ ತೇ ।
ಸ್ವಾಹಾದೇವೀ ವಹ್ನಿಪತ್ನೀ ಪ್ರತಿವಿಶ್ವೇಷು ಪೂಜಿತಾ ॥೯೭॥

ಯಯಾ ವಿನಾ ಹವಿರ್ದಾನಂ ನ ಗ್ರಹೀತುಂ ಸುರಾಃ ಕ್ಷಮಾಃ ।
ದಕ್ಷಿಣಾ ಯಜ್ಞಪತ್ನೀ ಚ ದೀಕ್ಷಾ ಸರ್ವತ್ರಪೂಜಿತಾ ॥೯೮॥

---

ಪ್ರಜೆಗಳಿಂದಲೂ ರಾಜರಿಂದಲೂ ಪೂಜೆಯನ್ನು ಪಡೆಯುತ್ತಾ, ಸಮಸ್ತರಿಗೂ ಜೀವನವನ್ನೂ ಸಕಲ ಸಂಪತ್ತನ್ನೂ ಕೊಡತಕ್ಕವಳಾಗಿರುವಳು. ಈ ಭೂದೇವಿಯಿಲ್ಲದಿದ್ದರೆ ಸಮಸ್ತ ಚರಾಚರ ಪ್ರಾಣಿಗಳಿಂದ ಕೂಡಿದ ಜಗತ್ತಿಗೆ ಆಶ್ರಯವಿಲ್ಲದೇ ಹೋಗುತ್ತಿತ್ತು! ॥೯೩-೯೪-೯೫॥

ಋಷಿಗಳಲ್ಲಿ ಶ್ರೇಷ್ಠನಾದ ನಾರದಮುನಿಯೇ, ಪ್ರಕೃತಿಯ ಕಲಾಂಶ ಎಂದರೆ ಕಾಲುಭಾಗಶಕ್ತಿಯಿಂದ ಕೂಡಿದ ಈ ದೇವಿಯಲ್ಲಿ ಯಾರು ಯಾರಿಗೆ ಯಾರು ಯಾರು ಪತ್ನಿಯರೋ ಅದೆಲ್ಲವನ್ನೂ ವರ್ಣಿಸುವೆನು. ಅಗ್ನಿದೇವನಿಗೆ ಸ್ವಾಹಾದೇವಿಯು ಪತ್ನಿಯಾಗಿ ಸಮಸ್ತ ಪ್ರಪಂಚದಲ್ಲಿಯೂ ಪೂಜೆಯನ್ನು ಪಡೆಯುತ್ತಿರುವಳು. ಇವಳಿಲ್ಲದೆ ದೇವತೆಗಳೂ ತಮ್ಮ ಹವಿಸ್ಸಿನ ಭಾಗವನ್ನು ಪಡೆದು ತೆಗೆದುಕೊಳ್ಳಲಾರರು. ॥೯೬-೯೭॥

" ದೀಯತೇ ವಿಮಲಂ ಜ್ಞಾನಂ ಕ್ಷೀಯತೆ ಕರ್ಮವಾಸನಾ | ತೇನ ದೀಕ್ಷೇತಿ ಸಾ ಪ್ರೋಕ್ತಾ" ಎಂಬ ಪ್ರಸಿದ್ಧಿಯಿಂದ ಯಜ್ಞಪುರುಷನಿಗೇ ದೀಕ್ಷಾದೇವಿಯೂ, " ದಕ್ಷಿಣಾ ಯಜ್ಞಪತ್ನೀ " ಎಂಬ ಶ್ರುತಿಯಂತೆ ದಕ್ಷಿಣಾದೇವಿಯೂ, ಪತ್ನಿಯರು. ಇವರಿಬ್ಬರೂ ಇಲ್ಲದಿದ್ದರೆ ಪ್ರಪಂಚದಲ್ಲಿ ಮಾಡಿದ ಸಮಸ್ತ ವೇದೋಕ್ತಕರ್ಮಗಳೂ ನಿಷ್ಫಲವಾಗುವುವು. ಸ್ವಧಾದೇವಿಯು ಪಿತೃದೇವನ ಪತ್ನಿಯು. ಇವಳಿಲ್ಲದೆ ಪಿತೃಗಳಿಗೆ ಮಾಡಿದ ಶ್ರಾದ್ಧಾದಿಗಳು ಫಲವಿಲ್ಲದೇಹೋಗುವುವು. ಆದುದರಿಂದ ಮುನಿ

ಯಯಾ ವಿನಾ ಹಿ ವಿಶ್ವೇಷು ಸರ್ವಕರ್ಮ ಹಿ ನಿಷ್ಫಲಂ ।
ಸ್ವಧಾ ಪಿತೄಣಾಂ ಪತ್ನೀ ಚ ಮುನಿಭಿರ್ಮನುಭಿರ್ನರೈಃ ॥೯೯॥

ಪೂಜಿತಾ ಪಿತೃದಾನಂ ಹಿ ನಿಷ್ಫಲಂ ಚ ಯಯಾ ವಿನಾ ।
ಸ್ವಸ್ತಿದೇವೀ ವಾಯುಪತ್ನೀ ಪ್ರತಿವಿಶ್ವೇಷು ಪೂಜಿತಾ ॥೧೦೦॥

ಆದಾನಂ ಚ ಪ್ರದಾನಂ ಚ ನಿಷ್ಫಲಂ ಚ ಯಯಾ ವಿನಾ ।
ಪುಷ್ಟಿರ್ಗಣಪತೇಃ ಪತ್ನೀ ಪೂಜಿತಾ ಜಗತೀತಲೇ ॥೧೦೧॥

ಯಯಾ ವಿನಾ ಪರಿಕ್ಷೀಣಾಃ ಪುಮಾಂಸೋ ಯೋಷಿತೋಽಪಿ ಚ ।
ಅನಂತಪತ್ನೀ ತುಷ್ಟಿಶ್ಚ ಪೂಜಿತಾ ವಂದಿತಾ ಭವೇತ್ ॥೧೦೨॥

ಯಯಾ ವಿನಾ ನಸಂತುಷ್ಟಾಃ ಸರ್ವಲೋಕಾಶ್ಚ ಸರ್ವತಃ ।
ಈಶಾನಪತ್ನೀ ಸಂಪತ್ತಿಃ ಪೂಜಿತಾ ಚ ಸುರೈರ್ನರೈಃ ॥೧೦೩॥
ಸರ್ವೇ ಲೋಕಾ ದರಿದ್ರಾಶ್ಚ ವಿಶ್ವೇಷು ಚ ಯಯಾ ವಿನಾ ।

---

ಗಳೂ, ಮನುಗಳೂ ಮಾನವರೂ ಈ ದೇವಿಯರನ್ನು ಪೂಜಿಸಿ ಪಿತೃಶ್ರಾದ್ಧಾದಿಗಳನ್ನು ಮಾಡುವರು. ॥೯೮-೯೯॥

ಸ್ವಸ್ತಿದೇವಿಯು ವಾಯುದೇವನ ಪತ್ನಿಯಾಗಿ ಸಮಸ್ತ ಪ್ರಪಂಚದಲ್ಲಿಯೂ ಪೂಜೆಗೆ ಯೋಗ್ಯಳಾಗಿರುವಳು. ದಾನ, ಪ್ರತಿಗ್ರಹಗಳೆರಡೂ ಈ ದೇವಿಯವಾಚಕವಾದ ಸ್ವಸ್ತಿಶಬ್ದೋಚ್ಚಾರಣೆಯಿಂದ ಫಲಕಾರಿಗಳಾಗುವುವು; ಮತ್ತು ಅದಿಲ್ಲದೆ ನಿಷ್ಫಲಗಳಾಗುವುವು. ॥೧೦೦॥

ಗಣಪತಿಯ ಪತ್ನಿಯಾದ ಪುಷ್ಟಿದೇವಿಯನ್ನು ಜನರೆಲ್ಲರೂ ಪೂಜಿಸುತ್ತಿರುವರು. ಆ ದೇವಿಯಿಲ್ಲದಿದ್ದರೆ ಸ್ತ್ರೀಯರೂ ಪುರುಷರೂ ಕೃಶರಾಗಿ ಹೋಗುವರು. ॥೧೦೧॥

ಪೂಜೆಗೂ ನಮಸ್ಕಾರಮಾಡುವುದಕ್ಕೂ ಯೋಗ್ಯಳಾದ ಅನಂತನ ಪತ್ನಿಯಾದ ತುಷ್ಟಿದೇವಿಯಲ್ಲಿ ಭಕ್ತಿಯಿಂದ ಪೂಜೆಯು ಇಲ್ಲದಿದ್ದರೆ ಸಮಸ್ತಜನರೂ ತೃಪ್ತಿಯಿಲ್ಲದವರಾಗಿ ಆಗುತ್ತಿದ್ದರು. ॥೧೦೨॥

ದೇವತೆಗಳೂ ಮನುಷ್ಯರೂ ಪೂಜಿಸತಕ್ಕ ಈಶಾನದೇವನ ಪತ್ನಿಯಾದ ಸಂಪತ್ತಿದೇವಿಯಲ್ಲಿ ಭಕ್ತಿಯೂ ಪೂಜೆಯೂ ಇಲ್ಲದಿದ್ದರೆ ಪ್ರಪಂಚದಲ್ಲಿ ಸಮಸ್ತ ಜನರೂ ದರಿದ್ರರಾಗುತ್ತಿದ್ದರು. ॥೧೦೩॥

ಧೃತಿಃ ಕಪಿಲಪತ್ನೀ ಚ ಸರ್ವೈಃ ಸರ್ವತ್ರ ಪೂಜಿತಾ ॥೧೦೪॥

ಸರ್ವೇ ಲೋಕಾ ಅಧೈರ್ಯಾಶ್ಚ ಜಗತ್ಸು ಚ ಯಯಾ ವಿನಾ ।
ಸತ್ಯಪತ್ನೀ ಸತೀ ಮುಕ್ತೈಃ ಪೂಜಿತಾ ಜಗತೀಪ್ರಿಯಾ ॥೧೦೫॥

ಯಯಾ ವಿನಾ ಭವೇಲ್ಲೋಕೋ ಬಂಧುತಾರಹಿತಸ್ಸದಾ ।
ಮೋಹಪತ್ನೀ ದಯಾ ಸಾಧ್ವೀ ಪೂಜಿತಾ ಚ ಜಗತ್ಪ್ರಿಯಾ ॥೧೦೬॥

ಸರ್ವೇ ಲೋಕಾಶ್ಚ ಸರ್ವತ್ರ ನಿಷ್ಫಲಾಶ್ಚ ಯಯಾ ವಿನಾ ।
ಪುಣ್ಯಪತ್ನೀ ಪ್ರತಿಷ್ಠಾ ಸಾ ಪೂಜಿತಾ ಪುಣ್ಯದಾ ಸದಾ ॥೧೦೭॥

ಯಯಾ ವಿನಾ ಜಗತ್ಸರ್ವಂ ಜೀವನ್ಮೃತಸಮಂ ಮುನೇ ।
ಸುಕರ್ಮಪತ್ನೀ ಸಂಸಿದ್ಧಾ ಕೀರ್ತಿರ್ಧನ್ಯೈಶ್ಚ ಪೂಜಿತಾ ॥೧೦೮॥

ಯಯಾ ವಿನಾ ಜಗತ್ಸರ್ವಂ ಯಶೋಹೀನಂ ಮೃತಂ ತಥಾ ।
ಕ್ರಿಯಾ ತೂದ್ಯೋಗಪತ್ನೀ ಚ ಪೂಜಿತಾ ಸರ್ವಸಮ್ಮತಾ ॥೧೦೯॥

---

ಕಪಿಲಮುನಿಯ ಪತ್ನಿಯಾದ ಧೃತಿದೇವಿಯು ಎಲ್ಲ ಕಡೆಯಲ್ಲಿಯೂ ಪೂಜೆಯನ್ನು ಪಡೆಯುತ್ತಿರುವಳು. ಪ್ರಪಂಚದಲ್ಲಿ ಈ ದೇವಿಯು ಇಲ್ಲದಿದ್ದರೆ ಸಮಸ್ತ ಜನರೂ ಧೈರ್ಯವಿಲ್ಲದವರಾಗಿರುತ್ತಿದ್ದರು. ॥೧೦೪॥

ಸತ್ಯದೇವನ ಪತ್ನಿಯಾದ ಸತೀದೇವಿಯನ್ನು ಮುಕ್ತರಾದವರೂ ಪೂಜಿಸುತ್ತಿರುವರು. ಈ ಸತೀಶಕ್ತಿಯ ಅನುಗ್ರಹವಿಲ್ಲದಿದ್ದರೆ ಪ್ರಪಂಚದ ಜನರಲ್ಲಿ ಪರಸ್ಪರ ಬಾಂಧವ್ಯದ ಸಹಾನುಭೂತಿಯ ಸಂಬಂಧವು ಇರುತ್ತಿರಲಿಲ್ಲವು. ॥೧೦೫॥

ಎಲ್ಲಿ ಮೋಹವಿದೆಯೋ ಅಲ್ಲಿ ದಯೆಯೂ ಇರುವುದರಿಂದ ದಯೆಯು ಮೋಹದೇವನ ಪತ್ನಿಯು. ದಯೆಯಿಲ್ಲದಿದ್ದರೆ ಪ್ರಪಂಚದಲ್ಲಿ ಜೀವಿಸುವುದೇ ಅಸಾಧ್ಯವು. ॥೧೦೬॥

ಓ ನಾರದಮುನಿಯೇ, ಪುಣ್ಯದೇವನಿಗೆ ಪ್ರತಿಷ್ಠಾದೇವಿಯೇ ಪತ್ನಿಯು. ಈ ಪ್ರತಿಷ್ಠೆಯಿಲ್ಲದ ಮನುಷ್ಯನು ಜೀವಿಸಿದ್ದರೂ ಮೃತನಾದಂತೆಯೇ. ॥೧೦೭॥

ಓ ನಾರದಮುನಿಯೇ, ಒಳ್ಳೆಯ ಕಾರ್ಯಗಳಿಗೆ ಪತ್ನಿಯಂತೆ ಸಹಚಾರಿಣಿಯಾಗಿರುವ ಕೀರ್ತಿಯೇ ಶಕ್ತಿಯು. ಉದ್ಯೋಗ ಎಂದರೆ ಪ್ರಯತ್ನಕ್ಕೆ ಕ್ರಿಯೆಯೇ ಶಕ್ತಿಯು. ಅಧರ್ಮಕ್ಕೆ ಯಾವಾಗಲೂ ಜತೆಯಲ್ಲಿರುವ ಸುಳ್ಳೇ ಶಕ್ತಿಯು. ಈ

**ಯಯಾ ವಿನಾ ಜಗತ್ಸರ್ವಂ ವಿಧಿಹೀನಂ ಚ ನಾರದ ।**
**ಅಧರ್ಮಪತ್ನೀ ಮಿಥ್ಯಾ ಸಾ ಸರ್ವಧೂರ್ತೈಶ್ಚ ಪೂಜಿತಾ ॥೧೧೦॥**

**ಯಯಾ ವಿನಾ ಜಗತ್ಸರ್ವಮುಚ್ಛಿನ್ನಂ ವಿಧಿನಿರ್ಮಿತಂ ।**
**ಸತ್ಯೇ ಅದರ್ಶನಾ ಯಾ ಚ ತ್ರೇತಾಯಾಂ ಸೂಕ್ಷ್ಮರೂಪಿಣೀ॥೧೧೧॥**

**ಅರ್ಧಾವಯವರೂಪಾ ಚ ದ್ವಾಪರೇ ಚೈವ ಸಂವೃತಾ ।**
**ಕಲೌ ಮಹಾಪ್ರಗಲ್ಭಾ ಚ ಸರ್ವತ್ರ ವ್ಯಾಪಿಕಾ ಬಲಾತ್ ॥೧೧೨॥**

**ಕಪಟೇನ ಸಮಂ ಭ್ರಾತ್ರಾ ಭ್ರಮತೇ ಚ ಗೃಹೇ ಗೃಹೇ ।**
**ಶಾಂತಿರ್ಲಜ್ಜಾ ಚ ಭಾರ್ಯೇ ದ್ವೇ ಸುಶೀಲಸ್ಯ ಚ ಪೂಜಿತಾ ॥೧೧೩॥**

**ಯಾಭ್ಯಾಂ ವಿನಾ ಜಗತ್ಸರ್ವಮುನ್ಮತ್ತಮಿವ ನಾರದ ।**
**ಜ್ಞಾನಸ್ಯ ತಿಸ್ರೋ ಭಾರ್ಯಾಶ್ಚ ಬುದ್ಧಿರ್ಮೇಧಾ ಧೃತಿಸ್ತಥಾ ॥೧೧೪॥**

---

ಶಕ್ತಿಗಳಿಲ್ಲದಿದ್ದರೆ ಒಳ್ಳೆಯ ಹೆಸರಿಲ್ಲದೆಯೂ ಉದ್ಯೋಗವು ಬೆಂಬಲವಿಲ್ಲದೆಯೂ, ಸಫಲಗಳಾಗದೆ ನಷ್ಟವಾದುದಾಗಿ ಹೋಗುವುವು. ॥೧೦೮-೧೦೯-೧೧೦॥

ಧೂರ್ತರಿಂದ ಪೂಜಿತಳಾದ ಸುಳ್ಳು ಎಂಬ ಶಕ್ತಿದೇವಿಯು ಕೃತಯುಗದಲ್ಲಿ ಕಾಣುವುದೇ ಇಲ್ಲವು. ತ್ರೇತಾಯುಗದಲ್ಲಿ ಸೂಕ್ಷ್ಮವಾಗಿ ಕಾಣಿಸಿಕೊಳ್ಳುವಳು. ದ್ವಾಪರದಲ್ಲಿ ಅರ್ಧಶರೀರದಿಂದ ವ್ಯಕ್ತಳಾಗಿರುವಳು. ಕಲಿಯುಗದಲ್ಲಿ ಮಹಾಪ್ರೌಢಿಮೆಯುಳ್ಳವಳಾಗಿ ಎಲ್ಲೆಡೆಯಲ್ಲಿಯೂ ಕಾಣಿಸಿಕೊಳ್ಳುತ್ತಾ ತನ್ನ ಸಹೋದರನಾದ ಕಪಟನೊಂದಿಗೆ ಮನೆ ಮನೆಯಲ್ಲಿಯೂ ತಿರುಗಾಡುತ್ತಿರುವಳು. ॥೧೧೧-೧೧೨॥

ಸುಶೀಲನಿಗೆ ಶಾಂತಿ, ಲಜ್ಜೆ ಎಂಬಿಬ್ಬರು ಸಹಧರ್ಮಚಾರಿಣಿಯರಾಗಿರುವ ಪತ್ನಿಯರು. ಒಳ್ಳೆಯ ನಡತೆಯುಳ್ಳವನಿಗೆ ಸಮಾಧಾನಚಿತ್ತವೂ ಕೆಟ್ಟಕೆಲಸ ಮಾಡುವುದರಲ್ಲಿ ನಾಚಿಕೆಯೂ ಇರಬೇಕೆಂದು ಅಭಿಪ್ರಾಯವು. ಇದಿಲ್ಲದಿದ್ದರೆ ಲೋಕದ ಜನರು ಮರ್ಯಾದೆಯನ್ನು ಮೀರಿರುವ ಹುಚ್ಚರಂತಾಗುವರು. ॥೧೧೩॥

ಜ್ಞಾನನಿಗೆ ಬುದ್ಧಿ, ಮೇಧಾ, ಧೃತಿ ಎಂಬ ಮೂವರು ಯಾವಾಗಲೂ ಸಹಕರಿಸುತ್ತಿರುವ ಪತ್ನಿಯರು. ಯುಕ್ತಾಯುಕ್ತವಿವೇಚನಶಕ್ತಿಯೂ ಗ್ರಂಥಧಾರಣ ಶಕ್ತಿಯೂ ಧೈರ್ಯವೂ ಇದ್ದರೆ ಜ್ಞಾನಸಿದ್ಧಿಯೂ ಆಗುವುದೆಂದು ತಾತ್ಪರ್ಯವು. ಇವಿಲ್ಲದಿದ್ದರೆ ಪ್ರಪಂಚವೇ ಅಜ್ಞಾನದಲ್ಲಿರುವುದು. ॥೧೧೪॥

**ಯಾಭಿರ್ವಿನಾ ಜಗತ್ಸರ್ವಂ ಮೂಢಂ ಮತ್ತಸಮಂಸದಾ ।**
**ಮೂರ್ತಿಶ್ಚ ಧರ್ಮಪತ್ನೀ ಸಾ ಕಾಂತಿರೂಪಾ ಮನೋಹರಾ ॥೧೧೫॥**

**ಪರಮಾತ್ಮಾ ಚ ವಿಶ್ವೌಘೋ ನಿರಾಧಾರೋ ಯಯಾ ವಿನಾ ।**
**ಸರ್ವತ್ರ ಶೋಭಾರೂಪಾ ಚ ಲಕ್ಷ್ಮೀರ್ಮೂರ್ತಿಮತೀ ಸತೀ ॥೧೧೬॥**

**ಶ್ರೀರೂಪಾ ಮೂರ್ತಿರೂಪಾ ಚ ಮಾನ್ಯಾ ಧನ್ಯಾಽತಿಪೂಜಿತಾ ।**
**ಕಾಲಾಗ್ನಿರುದ್ರಪತ್ನೀ ಚ ನಿದ್ರಾ ಸಾ ಸಿದ್ಧಯೋಗಿನೀ ॥೧೧೭॥**

**ಸರ್ವೇ ಲೋಕಾಸ್ಸಮಾಚ್ಛನ್ನಾ ಯಯಾ ಯೋಗೇನ ರಾತ್ರಿಷು ।**
**ಕಾಲಸ್ಯ ತಿಸ್ರೋ ಭಾರ್ಯಾಶ್ಚ ಸಂಧ್ಯಾ ರಾತ್ರಿ ದಿನಾನಿ ಚ ॥೧೧೮॥**

**ಯಾಭಿರ್ವಿನಾ ವಿಧಾತಾ ಚ ಸಂಖ್ಯಾಂ ಕರ್ತುಂ ನ ಶಕ್ಯತೇ ।**
**ಕ್ಷುತ್ಪಿಪಾಸೇ ಲೋಭಭಾರ್ಯೇ ಧನ್ಯೇ ಮಾನ್ಯೇ ಚ ಪೂಜಿತೇ ॥೧೧೯॥**

---

ಧರ್ಮನ ಪತ್ನಿಯು ಕಾಂತಿರೂಪಳಾದ ಮೂರ್ತಿದೇವಿಯು. ಅವಳು ಮನೋಹರವಾದ ಪ್ರಕಾಶಸ್ವರೂಪಳು. ಆ ಕಾಂತಿಯ ಪ್ರಭೆಯಿಲ್ಲದಿದ್ದರೆ ಪರಮಾತ್ಮನೂ ಪ್ರಪಂಚಗಳ ಸಮುದಾಯವೂ ಆಶ್ರಯವಿಲ್ಲದಂತಾಗುವುದು. ॥೧೧೫॥

ಎಲ್ಲೆಡೆಯಲ್ಲಿಯೂ ಲಕ್ಷ್ಮಿಯು ಪ್ರಕಾಶಸ್ವರೂಪಳಾಗಿಯೂ ಸಂಪತ್ತಿನ ಸ್ವರೂಪಳಾಗಿಯೂ ವಿಶೇಷವಾಗಿ ಪೂಜೆಯನ್ನು ಸ್ವೀಕರಿಸುತ್ತಿರುವಳು. ॥೧೧೬॥

ಕಾಲಾಗ್ನಿರುದ್ರನ ಪತ್ನಿಯಾದ ನಿದ್ರಾದೇವಿಯು ಯೋಗಸಿದ್ಧಿಯುಳ್ಳವಳು. ಸಮಸ್ತಪ್ರಪಂಚದ ಪ್ರಾಣಿಗಳೂ ರಾತ್ರಿಕಾಲದಲ್ಲಿ ಈ ನಿದ್ರಾದೇವಿಯ ಸಂಬಂಧದಿಂದ ಆವೃತವಾಗಿರುವುವು. ॥೧೧೭॥

ಕಾಲನಿಗೆ ಸಂಧ್ಯಾ, ರಾತ್ರಿ, ದಿನ ಎಂಬ ಮೂವರು ಪತ್ನಿಯರು. ಇವರಿಲ್ಲದಿದ್ದರೆ ಬ್ರಹ್ಮನೂ ಕಾಲದ ಲೆಕ್ಕವನ್ನು ಮಾಡಲಾರನು. ॥೧೧೮॥

ಅತ್ಯಾಸೆಗೆ ಹಸಿವು ಬಾಯಾರಿಕೆಗಳೇ ಹೆಂಡಿರು. ಇವರಿಂದ ಎಲ್ಲ ಪ್ರಪಂಚವೂ ತುಂಬಿಕೊಂಡು ಪ್ರಾಣಿಗಳು ಅನ್ನ ನೀರಿನ ಆಲೋಚನೆ ಎಂಬ ರೋಗವನ್ನು ಪಡೆದಿರುವುವು. ಇವುಗಳಿಗಾಗಿಯೇ ಜನರೆಲ್ಲರೂ ದುಡಿಯುತ್ತಿರುವರು. ॥೧೧೯॥

ಯಾಭ್ಯಾಂ ವ್ಯಾಪ್ತಂ ಜಗತ್ಸರ್ವಂ ನಿತ್ಯಂ ಚಿಂತಾತುರಂ ಭವೇತ್ ।
ಪ್ರಭಾ ಚ ದಾಹಿಕಾ ಚೈವ ದ್ವೇ ಭಾರ್ಯೇ ತೇಜಸಸ್ತಥಾ॥ ೧೨೦॥

ಯಾಭ್ಯಾಂ ವಿನಾ ಜಗತ್ಸ್ರಷ್ಟುಂ ವಿಧಾತುಂ ಚ ನ ಹೀಶ್ವರಃ ।
ಕಾಲಕನ್ಯೇ ಮೃತ್ಯುಜರೇ ಪ್ರಜ್ವಾರಸ್ಯ ಪ್ರಿಯಾ ಪ್ರಿಯೇ ॥೧೨೧॥

ಯಾಭ್ಯಾಂ ಜಗತ್ಸಮುಚ್ಛಿನ್ನಂ ವಿಧಾತ್ರಾ ನಿರ್ಮಿತಂ ವಿಧೌ ।
ನಿದ್ರಾ ಕನ್ಯಾ ಚ ತಂದ್ರಾ ಸಾ ಪ್ರೀತಿರನ್ಯಾ ಸುಖಪ್ರಿಯೇ ॥೧೨೨॥

ಯಾಭ್ಯಾಂ ವ್ಯಾಪ್ತಂ ಜಗತ್ಸರ್ವಂ ವಿಧಿಪುತ್ರ ವಿಧೇರ್ವಿಧೌ ।
ವೈರಾಗ್ಯಸ್ಯ ಚ ದ್ವೇ ಭಾರ್ಯೇ ಶ್ರದ್ಧಾ ಭಕ್ತಿಶ್ಚ ಪೂಜಿತೇ ॥೧೨೩॥

ಯಾಭ್ಯಾಂ ಶಶ್ವಜ್ಜಗತ್ಸರ್ವಂ ಯಜ್ಜೀವನ್ಮುಕ್ತಿಮುನ್ಮುನೇ ।
ಅದಿತಿರ್ದೇವಮಾತಾ ಚ ಸುರಭೀ ಚ ಗವಾಂ ಪ್ರಸೂಃ ॥೧೨೪॥

ದಿತಿಶ್ಚ ದೈತ್ಯಜನನೀ ಕದ್ರೂಶ್ಚ ವಿನತಾ ದನುಃ ।
ಉಪಯುಕ್ತಾಃ ಸೃಷ್ಟಿವಿಧೌ ಏತಾಸ್ತು ಕೀರ್ತಿತಾಃ ಕಲಾಃ ॥೧೨೫॥

---

ತೇಜಸ್ಸಿಗೆ ಕಾಂತಿಶಕ್ತಿ, ಸುಡುವಶಕ್ತಿ ಎಂಬಿಬ್ಬರು ಹೆಂಡಿತಿಯರು. ಇವೆರಡೂ ಇಲ್ಲದಿದ್ದರೆ ಪ್ರಪಂಚವನ್ನು ಸೃಷ್ಟಿಮಾಡುವುದೂ, ಒಂದು ನಿಯಮದಲ್ಲಿಡುವುದೂ, ಅಸಾಧ್ಯವಾಗುತ್ತಿತ್ತು. ||೧೨೦||

ಯಮನ ಮಕ್ಕಳಾದ ಮೃತ್ಯು, ಜರೆ ಎಂಬಿಬ್ಬರೂ ಜ್ವರನ ಹೆಂಡಿರು. ಬ್ರಹ್ಮನು ಸೃಷ್ಟಿಮಾಡಿದ ಪ್ರಪಂಚವು ಈ ಇಬ್ಬರಿಂದ ನಾಶವಾಗುವುದು ||೧೨೧||

ನಿದ್ರಾದೇವಿಯ ಮಕ್ಕಳಾದ ತಂದ್ರಾ, ಪ್ರೀತಿ ಎಂಬಿಬ್ಬರೂ ಸುಖನ ಹೆಂಡಿರು. ನಾರದನೇ! ಬ್ರಹ್ಮನ ನಿಯಮದಿಂದ ಇವರಿಬ್ಬರಿಂದ ಸಮಸ್ತ ಜಗತ್ತೂ ವ್ಯಾಪಿಸಿರುವುದು. ||೧೨೨||

ವೈರಾಗ್ಯನಿಗೆ ಶ್ರದ್ಧೆ, ಭಕ್ತಿ ಎಂಬಿಬ್ಬರು ಹೆಂಡಿರು. ಪೂಜಾಯೋಗ್ಯರಾದ ಇವರಿಂದ ಪ್ರಪಂಚದಲ್ಲಿ ಜೀವನ್ಮುಕ್ತಿಸ್ವರೂಪದಿಂದಿರುವುದು ಸಾಧ್ಯವೆನ್ನುವರು. ||೧೨೩||

ಅದಿತಿ, ಸುರಭಿ, ದಿತಿ, ಕದ್ರೂ, ವಿನತಾ, ದನು ಇವರು ಸೃಷ್ಟಿಕಾರ್ಯಕ್ಕೆ ಉಪಯುಕ್ತರಾದ ಕಶ್ಯಪ ಪತ್ನಿಯರು. ಇವರೆಲ್ಲರೂ ಪ್ರಕೃತಿಯ ಕಾಲು ಅಂಶದ ಅವತಾರವಾದವರು. ||೧೨೪-೧೨೫||

ಕಲಾ ಅನ್ಯಾಃ ಸಂತಿ ಬಹ್ವ್ಯಃ ತಾಸು ಕಾಶ್ಚಿನ್ನಿಬೋಧ ಮೇ ।
ರೋಹಿಣೀ ಚಂದ್ರಪತ್ನೀ ಚ ಸಂಜ್ಞಾ ಸೂರ್ಯಸ್ಯ ಕಾಮಿನೀ ॥೧೨೬॥

ಶತರೂಪಾ ಮನೋರ್ಭಾರ್ಯಾ ಶಚೀಂದ್ರಸ್ಯ ಚ ಗೇಹಿನೀ ।
ತಾರಾ ಬೃಹಸ್ಪತೇರ್ಭಾರ್ಯಾ ವಸಿಷ್ಠಸ್ಯಾಽಪ್ಯರುಂಧತೀ ॥೧೨೭॥

ಅಹಲ್ಯಾ ಗೌತಮಸ್ತ್ರೀ ಸಾಽಪ್ಯನಸೂಯಾಽತ್ರಿಕಾಮಿನೀ ।
ದೇವಹೂತೀ ಕರ್ದಮಸ್ಯ ಪ್ರಸೂತಿರ್ದಕ್ಷಕಾಮಿನೀ ॥೧೨೮॥

ಪಿತೄಣಾಂ ಮಾನಸೀಕನ್ಯಾ ಮೇನಕಾ ಸಾಽಂಬಿಕಾಪ್ರಸೂಃ
ಲೋಪಾಮುದ್ರಾ ತಥಾ ಕುಂತೀ ಕುಬೇರಕಾಮಿನೀ ತಥಾ ॥೧೨೯॥

ವರುಣಾನೀ ಪ್ರಸಿದ್ಧಾ ಚ ಬಲೇರ್ವಿಂಧ್ಯಾವಲಿಸ್ತಥಾ ।
ಕಾಂತಾ ಚ ದಮಯಂತೀ ಚ ಯಶೋದಾ ದೇವಕೀ ತಥಾ ॥೧೩೦॥

ಗಾಂಧಾರೀ ದ್ರೌಪದೀ ಶೈಬ್ಯಾ ಸಾ ಚ ಸತ್ಯವತೀ ಪ್ರಿಯಾ ।
ವೃಷಭಾನುಪ್ರಿಯಾ ಸಾಧ್ವೀ ರಾಧಾ ಮಾತಾ ಕುಲೋದ್ವಹಾ ॥೧೩೧॥

---

ಪ್ರಕೃತಿಯ ಕಲಾಂಶರಾದ ಇನ್ನೂ ಅನೇಕ ಶಕ್ತಿದೇವಿಯರಿರುವರು. ಅವರಲ್ಲಿ ಕೆಲವರನ್ನು ಹೇಳುವೆನು ಕೇಳು. ಚಂದ್ರನ ಹೆಂಡಿತಿ ರೋಹಿಣಿ, ಸೂರ್ಯಪತ್ನಿ, ಸಂಜ್ಞೆ, ಮನುಪತ್ನೀ ಶತರೂಪಾ, ಇಂದ್ರಪತ್ನೀ ಶಚೀ. ಗುರುವಿನ ಹೆಂಡಿತಿ ತಾರೆ, ವಸಿಷ್ಠನ ಹೆಂಡಿತಿ ಅರುಂಧತೀ, ಗೌತಮನ ಹೆಂಡಿತಿ ಅಹಲ್ಯೆ, ಅತ್ರಿಯ ಹೆಂಡಿತಿ ಅನಸೂಯೆ, ಕರ್ದಮನ ಹೆಂಡಿತಿ ದೇವಹೂತಿ, ದಕ್ಷಬ್ರಹ್ಮನ ಹೆಂಡಿತಿ ಪ್ರಸೂತಿ. ||೧೨೬-೧೨೭-೧೨೮||

ಪಿತೃದೇವತೆಗಳ ಮಾನಸಪುತ್ರಿಯೂ ಪಾರ್ವತಿಯ ತಾಯಿಯೂ ಆದ ಮೇನಕೆ, ಲೋಪಾಮುದ್ರೆ, ಕುಂತೀ, ಕುಬೇರನ ಹೆಂಡಿತಿ, ವರುಣನ ಹೆಂಡಿತಿ ಬಲಿ ಚಕ್ರವರ್ತಿಯ ಹೆಂಡಿತಿ ವಿಂಧ್ಯಾವಲಿ, ದಮಯಂತೀ, ಯಶೋದಾ, ದೇವಕೀ, ಗಾಂಧಾರೀ, ದ್ರೌಪದೀ, ಶೈಬ್ಯೆ ಅಥವಾ ಸತ್ಯವತೀ, ರಾಧೆಯ ತಾಯಿಯಾದ ವೃಷಭಾನುವಿನ ಪತ್ನಿಯು. ||೧೨೯-೧೩೦-೧೩೧||

ಮಂಡೋದರೀ ಚ ಕೌಸಲ್ಯಾ ಸುಭದ್ರಾ ಕೌರವೀ ತಥಾ ।
ರೇವತೀ ಸತ್ಯಭಾಮಾ ಚ ಕಾಲಿಂದೀ ಲಕ್ಷ್ಮಣಾ ತಥಾ ॥೧೩೨॥

ಜಾಂಬವತೀ ನಾಗ್ನಜಿತಿರ್ಮಿತ್ರವಿಂದಾ ತಥಾ ಪರಾ ।
ಲಕ್ಷ್ಮಣಾ ರುಕ್ಮಿಣೀ ಸೀತಾ ಸ್ವಯಂ ಲಕ್ಷ್ಮೀಃ ಪ್ರಕೀರ್ತಿತಾ ॥೧೩೩॥

ಕಾಲೀ ಯೋಜನಗಂಧಾ ಚ ವ್ಯಾಸಮಾತಾ ಮಹಾಸತೀ ।
ಬಾಣಪುತ್ರೀ ತಥೋಷಾ ಚ ಚಿತ್ರಲೇಖಾ ಚ ತತ್ಸಖೀ ॥೧೩೪॥

ಪ್ರಭಾವತೀ ಭಾನುಮತೀ ತಥಾ ಮಾಯಾವತೀ ಸತೀ ।
ರೇಣುಕಾ ಚ ಭೃಗೋರ್ಮಾತಾ ರಾಮಮಾತಾ ಚ ರೋಹಿಣೀ ॥೧೩೫॥

ಏಕನಂದಾ ಚ ದುರ್ಗಾ ಸಾ ಶ್ರೀಕೃಷ್ಣಭಗಿನೀ ಸತೀ ।
ಬಹ್ವ್ಯಃ ಸತ್ಯಃ ಕಲಾಶ್ಚೈವ ಪ್ರಕೃತೇರೇವ ಭಾರತೇ ॥೧೩೬॥

ಯಾ ಯಾಶ್ಚ ಗ್ರಾಮದೇವ್ಯಃ ಸ್ಯುಃ ಸರ್ವಾಸ್ತಾಃ ಪ್ರಕೃತೇಃ ಕಲಾಃ ।
ಕಲಾಂಶಾಂಶ ಸಮುದ್ಭೂತಾಃ ಪ್ರತಿವಿಶ್ವೇಷು ಯೋಷಿತಃ ॥೧೩೭॥

ಯೋಷಿತಾಮವಮಾನೇನ ಪ್ರಕೃತೇಶ್ಚ ಪರಾಭವಃ ।
ಬ್ರಾಹ್ಮಣೀ ಪೂಜಿತಾ ಯೇನ ಪತಿಪುತ್ರವತೀ ಸತೀ ॥೧೩೮॥
ಪ್ರಕೃತಿಃ ಪೂಜಿತಾ ತೇನ ವಸ್ತ್ರಾಲಂಕಾರ ಚಂದನೈಃ ।

---

ಮಂಡೋದರೀ, ಕೌಸಲ್ಯಾ, ಸುಭದ್ರಾ, ಭಾನುಮತೀ, ರೇವತೀ, ಸತ್ಯಭಾಮಾ, ಕಾಲಿಂದೀ, ಲಕ್ಷ್ಮಣಾ, ನಾಗ್ನಜಿತಿ, ಜಾಂಬವತೀ, ಮಿತ್ರವಿಂದೆ, ರುಕ್ಮಿಣೀ, ಲಕ್ಷ್ಮಣಾ, ಸೀತೆ, ಕಾಲೀ, ಯೋಜನಗಂಧೀ, ಉಷಾ, ಚಿತ್ರಲೇಖಾ, ಪ್ರಭಾವತೀ, ಮಾಯಾವತೀ, ಭೃಗುವಿನ ತಾಯಿಯಾದ ರೇಣುಕೆ, ಬಲರಾಮನ ತಾಯಿಯಾದ ರೋಹಿಣೀ, ಶ್ರೀಕೃಷ್ಣನ ಸಹೋದರಿಯಾದ ದುರ್ಗಿ ಇವರೆಲ್ಲರೂ ಭರತಖಂಡದಲ್ಲಿ ಪ್ರಕೃತಿಯ ಕಲಾಂಶಸಂಭೂತರು. ॥೧೩೨-೧೩೩-೧೩೪-೧೩೫-೧೩೬॥

ಗ್ರಾಮದೇವತೆಯರೆಲ್ಲರೂ ಪ್ರಕೃತಿಯ ಕಲಾಂಶರಾದವರು. ಪ್ರಪಂಚದಲ್ಲಿ ಪ್ರತಿಯೊಬ್ಬ ಸ್ತ್ರೀಯೂ ಪ್ರಕೃತಿಯ ಸೂಕ್ಷ್ಮಾಂಶದಿಂದ ಹುಟ್ಟಿದವರು. ಸ್ತ್ರೀಯರಿಗೆ ಅಪಮಾನಮಾಡಿದರೆ ಪ್ರಕೃತಿದೇವಿಗೇ ಅಪಮಾನಮಾಡಿದಂತೆ. ಗಂಡನೂ ಮಕ್ಕಳೂ

ಕುಮಾರೀ ಚಾಷ್ಟವರ್ಷಾ ಯಾ ವಸ್ತ್ರಾಲಂಕಾರ ಚಂದನೈಃ ॥೧೩೯॥

ಪೂಜಿತಾ ಯೇನ ವಿಪ್ರಸ್ಯ ಪ್ರಕೃತಿಸ್ತೇನ ಪೂಜಿತಾ ।
ಸರ್ವಾಃ ಪ್ರಕೃತಿಸಂಭೂತಾ ಉತ್ತಮಾಧಮಮಧ್ಯಮಾಃ ॥೧೪೦॥

ಸತ್ವಾಂಶಾಶ್ಚೋತ್ತಮಾ ಜ್ಞೇಯಾಃ ಸುಶೀಲಾಶ್ಚ ಪತಿವ್ರತಾಃ ।
ಮಧ್ಯಮಾ ರಜಸಶ್ಚಾಂಶಾಸ್ತಾಶ್ಚ ಭೋಗ್ಯಾಃ ಪ್ರಕೀರ್ತಿತಾಃ ॥೧೪೧॥

ಸುಖಸಂಭೋಗವಶ್ಯಾಶ್ಚ ಸ್ವಕಾರ್ಯತತ್ಪರಾಃ ಸದಾ ।
ಅಧಮಾಸ್ತಮಸಶ್ಚಾಂಶಾ ಅಜ್ಞಾತಕುಲಸಂಭವಾಃ ॥೧೪೨॥

ದುರ್ಮುಖಾಃ ಕುಲಹಾ ಧೂರ್ತಾಃ ಸ್ವತಂತ್ರಾಃ ಕಲಹಪ್ರಿಯಾಃ ।
ಪೃಥಿವ್ಯಾಃ ಕುಲಟಾ ಯಾಶ್ಚ ಸ್ವರ್ಗೇ ಚಾಪ್ಸರಸಾಂ ಗಣಾಃ ॥೧೪೩॥

ಪ್ರಕೃತೇಃ ತಮಸಶ್ಚಾಂಶಾಃ ಪುಂಶ್ಚಲ್ಯಃ ಪರಿಕೀರ್ತಿತಾಃ ।
ಏವಂ ನಿಗದಿತಂ ಸರ್ವಂ ಪ್ರಕೃತೇ ರೂಪವರ್ಣನಂ ॥೧೪೪॥

---

ಉಳ್ಳ ಪತಿವ್ರತೆಯಾದ ಬ್ರಾಹ್ಮಣಸ್ತ್ರೀಯನ್ನು ವಸ್ತ್ರಾಲಂಕಾರಗಳಿಂದ ಪೂಜೆಮಾಡಿದರೆ ಪ್ರಕೃತಿದೇವಿಯನ್ನು ಪೂಜೆಮಾಡಿದಂತಾಗುವುದು. ॥೧೩೭-೧೩೮॥

ಎಂಟು ವರ್ಷ ವಯಸ್ಸಿನ ಬ್ರಾಹ್ಮಣಕುಮಾರಿಯನ್ನು ವಸ್ತ್ರಾಲಂಕಾರಗಳಿಂದ ಪೂಜೆಮಾಡಿದರೆ ಪ್ರಕೃತಿದೇವಿಯನ್ನೇ ಪೂಜೆಮಾಡಿದಂತಾಗುವುದು. ॥೧೩೯॥

ಪ್ರಕೃತಿಯ ಅಂಶದಿಂದ ಹುಟ್ಟಿದ ಸಮಸ್ತ ಸ್ತ್ರೀಯರೂ ಮೂರು ಬಗೆಯಾಗಿರುವರು. ಸತ್ವಗುಣವು ವಿಶೇಷವಾಗಿದ್ದು ಒಳ್ಳೆಯ ನಡತೆಯೂ ಪತಿವ್ರತಾ ಧರ್ಮವೂ ಉಳ್ಳವರು ಉತ್ತಮರು. ಇವರು ಪೂಜೆಯಿಂದ ವಶರಾಗುವರು. ರಜೋಗುಣವು ಹೆಚ್ಚಾಗಿ ಸ್ವಕಾರ್ಯಪರರಾಗಿ ವಿಷಯಾಸಕ್ತರಾದವರು ಮಧ್ಯಮರು. ಇವರು ಸುಖಸಂಭೋಗದಿಂದ ವಶರಾಗುವರು. ॥೧೪೦-೧೪೧॥

ತಮೋಗುಣವು ಹೆಚ್ಚಾಗಿದ್ದು ಕುಲಗೋತ್ರಗಳು ತಿಳಿಯದೆ ವಿಕಾರವಾದವರಾಗಿ ಜಗಳದಲ್ಲಾಸಕ್ತರಾದವರೂ ಭೂಲೋಕದ ವೇಶ್ಯೆಯರೂ, ಸ್ವರ್ಗದ ಅಪ್ಸರ ಸ್ತ್ರೀಯರೂ ಅಧಮರು. ಇವರು ಪ್ರಕೃತಿಯ ತಮೋಗುಣದ ಅಂಶವುಳ್ಳವರಾಗಿ ಪರಪುರುಷಾಸಕ್ತರಾಗಿರುವರು. ಈ ರೀತಿಯಲ್ಲಿ ಪ್ರಕೃತಿಯ ರೂಪಗಳನ್ನು ವಿಸ್ತಾರವಾಗಿ ಹೇಳಿರುವೆನು. ॥೧೪೨-೧೪೩-೧೪೪॥

ತಾಸ್ಸರ್ವಾಃ ಪೂಜಿತಾಃ ಪೃಥ್ವ್ಯಾಂ ಪುಣ್ಯಕ್ಷೇತ್ರೇ ಚ ಭಾರತೇ ।
ಪೂಜಿತಾ ಸುರಥೇನಾದೌ ದುರ್ಗಾ ದುರ್ಗಾರ್ತಿನಾಶಿನೀ ॥೧೪೫॥

ತತಃ ಶ್ರೀರಾಮಚಂದ್ರೇಣ ರಾವಣಸ್ಯ ವಧಾರ್ಥಿನಾ ।
ತತ್ಪಶ್ಚಾಜ್ಜಗತಾಂ ಮಾತಾ ತ್ರಿಷು ಲೋಕೇಷು ಪೂಜಿತಾ ॥೧೪೬॥

ಜಾತಾಽದೌ ದಕ್ಷಕನ್ಯಾ ಯಾ ನಿಹತ್ಯ ದೈತ್ಯದಾನವಾನ್ ।
ತತೋ ದೇಹಂ ಪರಿತ್ಯಜ್ಯ ಯಜ್ಞೇ ಭರ್ತುಶ್ಚ ನಿಂದಯಾ ॥೧೪೭॥

ಜಜ್ಞೇ ಹಿಮವತಃ ಪತ್ನ್ಯಾಂ ಲೇಭೇ ಪಶುಪತಿಂ ಪತಿಂ ।
ಗಣೇಶಶ್ಚ ಸ್ವಯಂ ಕೃಷ್ಣಃ ಸ್ಕಂದೋ ವಿಷ್ಣುಕಲೋದ್ಭವಃ ॥೧೪೮॥

ಬಭೂವತು ಸ್ತೌ ತನಯೌ ಪಶ್ಚಾತ್ತಸ್ಯಾಶ್ಚ ನಾರದ ।
ಲಕ್ಷ್ಮೀರ್ಮಂಗಲಭೂಪೇನ ಪ್ರಥಮಂ ಪರಿಪೂಜಿತಾ ॥೧೪೯॥

---

ಹೀಗೆ ಮೂರು ಬಗೆಯಾದರೂ ಅವರೆಲ್ಲರೂ ಭರತಖಂಡದಲ್ಲಿ ಪುಣ್ಯಕ್ಷೇತ್ರಗಳಲ್ಲಿ ಪೂಜಾಯೋಗ್ಯರಾಗಿರುವರು. ಫಲವು ಸಾತ್ವಿಕಾದಿ ಪೂಜಾತಾರತಮ್ಯದಿಂದ ಉಂಟಾಗುವುದು. ಮೊದಲು ಭೂಲೋಕದಲ್ಲಿ ದುರ್ಗತಿಯ ದುಃಖವನ್ನು ನಾಶ ಮಾಡುವ ದುರ್ಗಾದೇವಿಯನ್ನು ಸುರಥನೆಂಬ ರಾಜನು ಪೂಜಿಸಿದನು. ॥೧೪೫॥

ಆಮೇಲೆ ಶ್ರೀರಾಮಚಂದ್ರನು ರಾವಣನನ್ನು ಕೊಲ್ಲುವುದಕ್ಕಾಗಿ ದುರ್ಗಾದೇವಿಯನ್ನು ಪೂಜಿಸಿದನು. ಬಳಿಕ ಜಗತ್ತಿಗೆ ತಾಯಿಯಾದ ದುರ್ಗಾದೇವಿಯ ಪೂಜೆಯು ಮೂರು ಲೋಕದಲ್ಲಿಯೂ ವಿಸ್ತರಿಸಿತು. ॥೧೪೬॥

ದುರ್ಗಾದೇವಿಯು ದೈತ್ಯದಾನವರನ್ನು ಸಂಹರಿಸಿದ ಮೇಲೆ ದಕ್ಷನ ಪುತ್ರಿಯಾದ ಸತೀದೇವಿಯಾಗಿ ಜನಿಸಿದಳು. ದಕ್ಷನು ಮಾಡಿದ ಯಜ್ಞದಲ್ಲಿ ತನ್ನ ಪತಿಯನ್ನು ನಿಂದಿಸಿದುದರಿಂದ ಸತಿಯು ತನ್ನ ಶರೀರವನ್ನು ತ್ಯಾಗಮಾಡಿ, ಹಿಮವಂತನ ಪತ್ನಿಯಾದ ಮೇನಕೆಯಲ್ಲಿ ಜನಿಸಿ, ಶಿವನನ್ನು ವಿವಾಹಮಾಡಿಕೊಂಡು, ಗಣೇಶ, ಸ್ಕಂದ ಎಂಬ ಇಬ್ಬರು ಮಕ್ಕಳನ್ನು ಪಡೆದಳು. ಗಣೇಶನು ಗೋಲೋಕವಾಸಿಯಾದ ಕೃಷ್ಣನ ಪೂರ್ಣಾವತಾರನು. ಸ್ಕಂದನು ವಿಷ್ಣುವಿನ ಅಂಶಾವತಾರನು.॥೧೪೭-೧೪೮॥

ಲಕ್ಷ್ಮಿಯನ್ನು ಮಂಗಲನೆಂಬ ರಾಜನೂ, ಸಾವಿತ್ರಿಯನ್ನು ಅಶ್ವಪತಿರಾಜನೂ, ಸರಸ್ವತೀದೇವಿಯನ್ನು ಬ್ರಹ್ಮನೂ ಮೊದಲು ಪೂಜೆಮಾಡಿದರು. ಆಮೇಲೆ ಮೂರು

ತ್ರಿಷು ಲೋಕೇಷು ತತ್ಪಶ್ಚಾದ್ದೇವತಾ ಮುನಿಮಾನವೈಃ ।
ಸಾವಿತ್ರೀ ಚಾಽಶ್ವಪತಿನಾ ಪ್ರಥಮಂ ಪರಿಪೂಜಿತಾ ॥೧೫೦॥

ತತ್ಪಶ್ಚಾತ್ತ್ರಿಷು ಲೋಕೇಷು ದೇವತಾಮುನಿಪುಂಗವೈಃ ।
ಆದೌ ಸರಸ್ವತೀ ದೇವೀ ಬ್ರಹ್ಮಣಾ ಪರಿಪೂಜಿತಾ ॥೧೫೧॥

ತತ್ಪಶ್ಚಾತ್ತ್ರಿಷು ಲೋಕೇಷು ದೇವತಾಮುನಿಪುಂಗವೈಃ ।
ಪ್ರಥಮಂ ಪೂಜಿತಾ ರಾಧಾ ಗೋಲೋಕೇ ರಾಸಮಂಡಲೇ ॥೧೫೨॥

ಪೌರ್ಣಮಾಸ್ಯಾಂ ಕಾರ್ತಿಕಸ್ಯ ಕೃಷ್ಣೇನ ಪರಮಾತ್ಮನಾ ।
ಗೋಪಿಕಾಭಿಶ್ಚ ಗೋಪೈಶ್ಚ ಬಾಲಿಕಾಭಿಶ್ಚ ಬಾಲಕೈಃ ॥೧೫೩॥

ಗವಾಂ ಗಣೈಃ ಸುರಭ್ಯಾ ಚ ತತ್ಪಶ್ಚಾದಾಜ್ಞಯಾ ಹರೇಃ ।
ತದಾ ಬ್ರಹ್ಮಾದಿಭಿರ್ದೇವೈಃ ಮುನಿಭಿಃ ಪರಯಾ ಮುದಾ ॥೧೫೪॥

ಪುಷ್ಪಧೂಪಾದಿಭಿರ್ಭಕ್ತ್ಯಾ ಪೂಜಿತಾ ವಂದಿತಾ ಸದಾ ।
ಪೃಥಿವ್ಯಾಂ ಪ್ರಥಮಂ ದೇವೀ ಸುಯಜ್ಞೇನೈವ ಪೂಜಿತಾ ॥೧೫೫॥

ಶಂಕರೇಣೋಪದಿಷ್ಟೇನ ಪುಣ್ಯಕ್ಷೇತ್ರೇ ಚ ಭಾರತೇ ।
ತ್ರಿಷುಲೋಕೇಷು ತತ್ಪಶ್ಚಾದಾಜ್ಞಯಾ ಪರಮಾತ್ಮನಃ ॥೧೫೬॥

---

ಲೋಕದಲ್ಲಿಯೂ ದೇವತೆಗಳೂ, ಮುನಿಗಳೂ, ಮನುಷ್ಯರೂ ಈ ದೇವಿಯರನ್ನು ಪೂಜೆಮಾಡಿದರು. ॥೧೪೯-೧೫೦-೧೫೧॥

ರಾಧಾದೇವಿಯನ್ನು ಕಾರ್ತಿಕಮಾಸದಲ್ಲಿ ಪೂರ್ಣಿಮೆಯ ದಿನ ಗೋಲೋಕದ ರಾಸಮಂಡಲದಲ್ಲಿ ಪರಮಾತ್ಮನಾದ ಕೃಷ್ಣನು ಮೊದಲು ಪೂಜಿಸಿದನು. ಆಮೇಲೆ ಆ ಕೃಷ್ಣನ ಅಪ್ಪಣೆಯಿಂದ ಗೊಲ್ಲರೂ, ಗೊಲ್ಲಿತಿಯರೂ, ಕನ್ಯೆಯರೂ, ಬಾಲಕರೂ, ಗೋವುಗಳೂ, ಕಾಮಧೇನುವೂ ಬ್ರಹ್ಮಾದಿದೇವತೆಗಳೂ, ಮುನಿಗಳೂ, ಪರಮ ಸಂತೋಷದಿಂದ ಪುಷ್ಪ ದೀಪಾದಿ ಸಮಸ್ತ ಉಪಚಾರಗಳಿಂದ ಪೂಜಿಸಿದರು. ॥೧೫೨-೧೫೩-೧೫೪॥

ರಾಧಾದೇವಿಯನ್ನು ಭೂಮಿಯಲ್ಲಿ ಮೊದಲು ಸುಯಜ್ಞನೆಂಬ ರಾಜನು ಪೂಜಿಸಿದನು. ಆಮೇಲೆ ಪರಮಾತ್ಮನ ಆಜ್ಞೆಯಿಂದ ಈಶ್ವರನು ಉಪದೇಶಮಾಡಿದ ವಿಧಿಯಿಂದ ಭರತಖಂಡದ ಪುಣ್ಯಕ್ಷೇತ್ರಗಳಲ್ಲಿಯೂ ಮೂರು ಲೋಕಗಳಲ್ಲಿಯೂ

ಪುಷ್ಪಧೂಪಾದಿಭಿರ್ಭಕ್ತ್ಯಾ ಪೂಜಿತಾ ವಂದಿತಾ ಸದಾ ।
ಕಲಾ ಯಾ ಯಾಃ ಸಮುದ್ಭೂತಾಃ ಪೂಜಿತಾಸ್ತಾಶ್ಚ ಭಾರತೇ॥೧೫೭॥

ಪೂಜಿತಾ ಗ್ರಾಮದೇವ್ಯಶ್ಚ ಗ್ರಾಮೇ ಚ ನಗರೇ ಮುನೇ ।
ಏವಂ ತೇ ಕಥಿತಂ ಸರ್ವಂ ಪ್ರಕೃತೇಶ್ಚರಿತಂ ಶುಭಂ ॥೧೫೮॥
ಯಥಾಽಗಮಂ ಲಕ್ಷಣಂ ಚ ಕಿಂ ಭೂಯಃ ಶ್ರೋತುಮಿಚ್ಛಸಿ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಮಸ್ಕಂಧೇ
ಪ್ರಥಮೋಽಧ್ಯಾಯಃ

---

ಯಾವಾಗಲೂ ಭಕ್ತರು ಪುಷ್ಪಧೂಪಾದಿ ಉಪಚಾರಗಳಿಂದ ಪೂಜಿಸಿ ನಮಸ್ಕರಿಸು ತ್ತಿರುವರು. ||೧೫೫-೧೫೬||

ಪ್ರಕೃತಿಯ ಕಲಾಂಶವಾಗಿ ಯಾವ ಯಾವ ದೇವಿಯರು ಅವತಾರಮಾಡಿ ದರೋ ಅವರೆಲ್ಲರೂ ಭರತಖಂಡದಲ್ಲಿ ಗ್ರಾಮಗಳಲ್ಲಿಯೂ, ನಗರಗಳಲ್ಲಿಯೂ, ಗ್ರಾಮ ದೇವತೆಗಳಾಗಿ ಪೂಜೆಯನ್ನು ಪಡೆಯುತ್ತಿರುವರು. ಎಲೈ ನಾರದನೇ! ವೇದವನ್ನು ಅನುಸರಿಸಿ ಪ್ರಕೃತಿದೇವಿಯ ಮಂಗಳಕರವಾದ ಚರಿತ್ರೆಯನ್ನೂ ಲಕ್ಷಣಗಳನ್ನೂ ಹೇಳಿರುವೆನು. ಇನ್ನೇನನ್ನು ಕೇಳಬೇಕೆಂದು ಅಪೇಕ್ಷಿಸುವೆ? ಎಂದು ನಾರಾಯಣ ಮುನಿಯು ಕೇಳಿದನು. ||೧೫೭-೧೫೮||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ದ್ವಿತೀಯೋಽಧ್ಯಾಯಃ ||

### ಎರಡನೆಯ ಅಧ್ಯಾಯವು

|| ನಾರದ ಉವಾಚ ||

**ಸಮಾಸೇನ ಶ್ರುತಂ ಸರ್ವಂ ದೇವೀನಾಂ ಚರಿತಂ ಪ್ರಭೋ ।**
**ವಿಬೋಧನಾಯ ಬೋಧಸ್ಯ ವ್ಯಾಸೇನ ವಕ್ತುಮರ್ಹಸಿ ॥೧॥**

**ಸೃಷ್ಟೇರಾದ್ಯಾ ಸೃಷ್ಟಿವಿಧೌ ಕಥಮಾವಿರ್ಬಭೂವ ಹ ।**
**ಕಥಂ ವಾ ಪಂಚಧಾ ಭೂತಾ ವದ ವೇದವಿದಾಂ ವರ ॥೨॥**

**ಭೂತಾ ಯಯ್ಯಾಂಶಕಲಯಾ ತಯಾ ತ್ರಿಗುಣಯಾ ಭವೇ ।**
**ವ್ಯಾಸೇನ ತಾಸಾಂ ಚರಿತಂ ಶ್ರೋತುಮಿಚ್ಛಾಮಿ ಸಾಂಪ್ರತಂ ॥೩॥**

**ತಾಸಾಂ ಜನ್ಮಾನುಕಥನಂ ಪೂಜಾಧ್ಯಾನವಿಧಿಂ ಬುಧ ।**
**ಸ್ತೋತ್ರಂ ಕವಚಮೈಶ್ವರ್ಯಂ ಶೌರ್ಯಂ ವರ್ಣಯ ಮಂಗಳಂ ॥೪॥**

---

ಓ ನಾರಾಯಣಮುನಿಯೇ, ಪ್ರಕೃತಿದೇವಿಯರ ಚರಿತ್ರೆಯನ್ನು ಸಂಕ್ಷೇಪವಾಗಿ ಎಲ್ಲವನ್ನೂ ಕೇಳಿದೆನು. ಸಾಮಾನ್ಯವಾಗಿ ಹೇಳಿದ ವಿಷಯವನ್ನು ವಿಶೇಷಾಕಾರವಾಗಿ ತಿಳಿಯಬೇಕಾಗಿರುವುದರಿಂದ ವಿಸ್ತಾರವಾಗಿ ಹೇಳಬೇಕು. ||೧||

ಪ್ರಪಂಚಕ್ಕೆ ಕಾರಣವಾದ ಮೂಲಪ್ರಕೃತಿಯು ಸೃಷ್ಟಿಕಾರ್ಯದಲ್ಲಿ ಮೊದಲು ಹೇಗೆ ಅವತಾರ ಮಾಡಿದಳು. ಆಮೇಲೆ ಐದು ಪ್ರಕಾರವಾಗಿ ಹೇಗೆ ಆದಳು ? ಅದನ್ನು ಹೇಳು. ||೨||

ಸಂಸಾರದಲ್ಲಿ ಸತ್ವರಜಸ್ತಮೋಗುಣಗಳ ಅಂಶಕಲೆಯಿಂದ ಯಾವ ಯಾವ ದೇವಿಯರು ಉತ್ಪನ್ನರಾದರು. ವಿಸ್ತಾರವಾಗಿ ಅವರ ಚರಿತ್ರೆಯನ್ನು ಕೇಳಬೇಕೆಂದು

|| ಶ್ರೀನಾರಾಯಣ ಉವಾಚ ||

ನಿತ್ಯ ಆತ್ಮಾ ನಭೋ ನಿತ್ಯಂ ಕಾಲೋ ನಿತ್ಯೋ ದಿಶೋ ಯಥಾ ।
ವಿಶ್ವಾನಾಂ ಗೋಲಕಂ ನಿತ್ಯಂ ನಿತ್ಯೋ ಗೋಲೋಕ ಏವ ಚ ॥೫॥

ತದೇಕದೇಶೋ ವೈಕುಂಠೋ ನಮ್ರಭಾಗಾನುಸಾರತಃ ।
ತಥೈವ ಪ್ರಕೃತಿರ್ನಿತ್ಯಾ ಬ್ರಹ್ಮಲೀನಾ ಸನಾತನೀ ॥೬॥

ಯಥಾಽಗ್ನೌ ದಾಹಿಕಾ ಚಂದ್ರೇ ಪದ್ಮೇ ಶೋಭಾ ಪ್ರಭಾ ರವೌ ।
ಶಶ್ವದ್ಯುಕ್ತಾ ನ ಭಿನ್ನಾ ಸಾ ತಯಾ ಪ್ರಕೃತಿರಾತ್ಮನಿ ॥೭॥

---

ಅಪೇಕ್ಷಿಸುವೆನು. ತುಲಸೀದೇವಿಯೇ ಮುಂತಾದ ಅವರ ಅವತಾರದ ಕಥೆಯನ್ನು ಮಂಗಳಕರವಾದ ಅವರ ಪೂಜೆ,ಧ್ಯಾನ, ಸ್ತೋತ್ರ ಕವಚ, ಸಂಪತ್ತು, ಪರಾಕ್ರಮ ಇವುಗಳನ್ನು ವಿಶೇಷವಾಗಿ ವರ್ಣನೆಮಾಡಿ ಹೇಳಬೇಕು. ||೩-೪||

ನಾರಾಯಣನು ಹೇಳಿದನು — ಚಿದಾಭಾಸನಾದ ಜೀವನೂ ಮೋಕ್ಷಪರ್ಯಂತ ವಾಗಿ ಅಥವಾ ವಾಸ್ತವವಾಗಿ ನಿತ್ಯನು. ಆಕಾಶ, ಕಾಲ, ದಿಕ್ಕು, ಬ್ರಹ್ಮಾಂಡ, ಗೋಲೋಕ, ವೈಕುಂಠ ಇವುಗಳೂ ಪ್ರಾಕೃತಪ್ರಳಯದವರೆಗೂ ಇರುವುದರಿಂದ ಆಪೇಕ್ಷಿಕವಾಗಿ ನಿತ್ಯವಾದುವು. ಹಾಗೆಯೇ ಪರಬ್ರಹ್ಮನ ಲೀಲಾವಿಭೂತಿಯಾದ ಪ್ರಕೃತಿಯೂ ಆಪೇಕ್ಷಿಕವಾಗಿ ನಿತ್ಯಳು ಮತ್ತು ಅನಾದಿಯಾದವಳು. ಇಲ್ಲಿ ಆತ್ಮ ಶಬ್ದಕ್ಕೆ ಜೀವನೇ ಅರ್ಥವು. ಪರಮಾತ್ಮನಲ್ಲವು. ಏಕೆಂದರೆ ಪರಮಾತ್ಮನಿಗೆ ತ್ರಿಕಾಲಾ ಬಾಧ್ಯತ್ವರೂಪವಾದ ನಿತ್ಯತ್ವವಿರುವುದು. ಅನಿತ್ಯತ್ವವು ಪ್ರಕೃತಿಗೆ ಇಲ್ಲವು. ಏಕೆಂದರೆ ಮೋಕ್ಷದೆಸೆಯಲ್ಲಿ ಮಾಯೆಗೆ ನಾಶವನ್ನು ಸಕಲ ಉಪನಿಷತ್ತುಗಳೂ ಹೇಳುವುವು. ಇಲ್ಲಿ ಪ್ರಕೃತಿಗೂ ಜೀವನಿಗೂ ಹೇಳುವ ನಿತ್ಯತ್ವವು ಮೋಕ್ಷಪರ್ಯಂತವಾಗಿ ಇರುವುದು ಎಂಬ ಅರ್ಥವನ್ನು ತಿಳಿಸುತ್ತದೆ. ಆಕಾಶಾದಿಗಳ ನಿತ್ಯತ್ವವು ಪ್ರಳಯಪರ್ಯಂತ ವಾದುದು. ವೈಕುಂಠವು ಗೋಲೋಕಕ್ಕಿಂತ ಕೆಳಗಡೆ ಆ ಗೋಲೋಕದ ಒಂದು ಭಾಗವಾಗಿರುವುದು. ಪರಮಾರ್ಥನಿತ್ಯವಾದ ತತ್ವವು ಪರಮಾತ್ಮನೊಬ್ಬನೇ. " ಏಕಮೇವಾದ್ವಿತೀಯಂಬ್ರಹ್ಮ" " ನೇಹನಾನಾಸ್ತಿಕಿಂಚನ " ಎಂದು ಮುಂತಾದ ಶ್ರುತಿಗಳು ಈ ಅರ್ಥವನ್ನು ಹೇಳುತ್ತಿವೆ. ||೫-೬||

ಅಗ್ನಿಯಲ್ಲಿ ಸುಡುವ ಶಕ್ತಿಯು ಯಾವಾಗಲೂ ಸೇರಿಕೊಂಡೇ ಇರುವುದು. ಬೇರೆಯಾಗಿರುವುದಿಲ್ಲ. ಚಂದ್ರ ಮತ್ತು ಕಮಲಗಳಲ್ಲಿ ಕಾಂತಿಯೂ, ಸೂರ್ಯನಲ್ಲಿ

ವಿನಾ ಸ್ವರ್ಣಂ ಸ್ವರ್ಣಕಾರಃ ಕುಂಡಲಂ ಕರ್ತುಮಕ್ಷಮಃ ।
ವಿನಾ ಮೃದಾ ಘಟಂ ಕರ್ತುಂ ಕುಲಾಲೋ ಹಿ ನಹೀಶ್ವರಃ ॥೮॥

ನಹಿ ಕ್ಷಮಸ್ತಥಾತ್ಮಾಚ ಸೃಷ್ಟಿಂ ಸ್ರಷ್ಟುಂ ತಯಾ ವಿನಾ ।
ಸರ್ವಶಕ್ತಿಸ್ವರೂಪಾ ಸಾ ಯಯಾ ಚ ಶಕ್ತಿಮಾನ್ಸದಾ ॥೯॥

ಐಶ್ವರ್ಯವಚನಃ ಶಶ್ಚ ಕ್ತಿಃ ಪರಾಕ್ರಮ ಏವ ಚ ।
ತತ್ಸ್ವರೂಪಾ ತಯೋರ್ದಾತ್ರೀ ಸಾಶಕ್ತಿಃ ಪರಿಕೀರ್ತಿತಾ ॥೧೦॥

---

ಕಿರಣವೂ, ಹೇಗೆ ಬೇರೆಯಾಗಿರುವುದಿಲ್ಲವೋ, ಹಾಗೆಯೇ ಶಕ್ತಿಯು ಪರಮಾತ್ಮನಿಗಿಂತ ಬೇರೆಯಾದವಳಲ್ಲ. ಸಾಂಖ್ಯಶಾಸ್ತ್ರಕಾರರು ಹೇಳುವಂತೆ ಪ್ರಕೃತಿಯು ಪರಮಾತ್ಮನಿಗಿಂತ ಬೇರೆಯಾದುದೂ ಜಡವಾದುದೂ ಅಲ್ಲವು. ಚೇತನನಾದ ಪರಮಾತ್ಮನಲ್ಲಿಯೇ ಯಾವಾಗಲೂ ಅಧಿಷ್ಠಿತವಾಗಿ ಇರುವುದರಿಂದ ಶಕ್ತಿಯೂ ಚೇತನವೇ ಆಗಿರುವಂತೆ ತೋರುತ್ತಿರುತ್ತದೆ. ಇದಕ್ಕೆ ಪ್ರಮಾಣಶ್ರುತಿಯು " ಪರಾಽಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ " " ಇತಿ ಶ್ವೇತಾಶ್ವತರೇ. " ಚಿಚ್ಛಾಯಾ ವೇಶತಃ ಶಕ್ತಿಃ ಚೇತನೇವ ವಿಭಾತಿ ಸಾ " ಇತಿ ಸೂತಸಂಹಿತಾ. ತಂತ್ರಗಳಲ್ಲಿಯೂ, " ಶಕ್ತಿಶ್ಚ ಶಕ್ತಿಮದ್ರೂಪಾದ್ವ್ಯತಿರೇಕಂ ನ ವಾಂಛತಿ | ತಾದಾತ್ಮ್ಯಮನಯೋರ್ನಿತ್ಯಂ ವಹ್ನಿದಾಹಿಕಯೋರಿವ " ॥ ಎಂದು ಹೇಳಿದೆ. ॥೭॥

ಶಕ್ತಿಯು ಪರಮಾತ್ಮರೂಪವೇ ಆದರೆ, ಪರಮಾತ್ಮನೇ ಸೃಷ್ಟಿಸಲಿ. ಶಕ್ತಿಯು ಏಕೆ? ಎಂದರೆ—ಅಕ್ಕಸಾಲೆಯು ಚಿನ್ನವಿಲ್ಲದೆ ಕುಂಡಲವನ್ನು ಮಾಡಲಾರನು. ಕುಂಬಾರನು ಮಣ್ಣಿಲ್ಲದೆ ಮಡಕೆಯನ್ನು ಮಾಡಲಾರನು. ಹಾಗೆಯೇ ಆತ್ಮನೂ ಶಕ್ತಿಯಿಲ್ಲದೆ ಪ್ರಪಂಚವನ್ನು ಸೃಷ್ಟಿಮಾಡಲಾರನು. ಆತ್ಮನು ನಿರ್ಗುಣನು. ನಿರ್ವಿಕಾರನು ನಿರವಯವನು. ಆದುದರಿಂದ ಸರ್ವಶಕ್ತಿಸ್ವರೂಪಳಾದ, ಸಮಸ್ತವನ್ನೂ ಉತ್ಪತ್ತಿಮಾಡಲು ಕಾರಣಳಾದ, ಶಕ್ತಿಯನ್ನು ಪ್ರಪಂಚದ ಸೃಷ್ಟಿಗಾಗಿ ಅಪೇಕ್ಷಿಸಿ ಪಡೆದನು; ಆದುದರಿಂದ ಸರ್ವಶಕ್ತನೆನಿಸಿಕೊಂಡಿರುವನು. ಹಾಗಾದರೆ ಶಕ್ತಿಯೇ ಸಾಕು. ಪರಮಾತ್ಮನಿಂದೇನು? ಎಂದರೆ—ಶಕ್ತಿಯು ಜಡಪದಾರ್ಥ. ಆದಕ್ಕೆ ಚೇತನದ ಅಧಿಷ್ಠಾನವು ಬೇಕು. ಎಂದು ಸಮಾಧಾನವು. ॥೮-೯॥

ಶಕಾರವು ಐಶ್ವರ್ಯವಾಚಕವಾದುದು. ಕ್ತಿ ಶಬ್ದವು ಪರಾಕ್ರಮವಾಚಕವಾದುದು. ಐಶ್ವರ್ಯ ಮತ್ತು ಪರಾಕ್ರಮಗಳಿಂದ ಕೂಡಿದ್ದು ಅವುಗಳನ್ನು ಕೊಡುವುದೇ ಶಕ್ತಿ ಎಂದು ಹೇಳಲ್ಪಟ್ಟಿದೆ. ॥೧೦॥

ಜ್ಞಾನಂ ಸಮೃದ್ಧಿಃ ಸಂಪತ್ತಿಃ ಯಶಶ್ಚೈವ ಬಲಂ ಭಗಃ ।
ತೇನ ಶಕ್ತಿರ್ಭಗವತೀ ಭಗರೂಪಾ ಚ ಸಾ ಸದಾ ॥೧೧॥

ತಯಾ ಯುಕ್ತಃ ಸದಾತ್ಮಾ ಚ ಭಗವಾಂಸ್ತೇನ ಕಥ್ಯತೇ ।
ಸ ಚ ಸ್ವೇಚ್ಛಾಮಯೋ ದೇವಃ ಸಾಕಾರಶ್ಚ ನಿರಾಕೃತಿಃ ॥೧೨॥

ತೇಜೋರೂಪಂ ನಿರಾಕಾರಂ ಧ್ಯಾಯಂತೇ ಯೋಗಿನಸ್ಸದಾ ।
ವದಂತಿ ಚ ಪರಂಬ್ರಹ್ಮ ಪರಮಾನಂದಮೀಶ್ವರಂ ॥೧೩॥

---

ತಿಳಿವಳಿಕೆ, ಸಂಪೂರ್ಣತೆ, ಸಂಪತ್ತು, ಕೀರ್ತಿ, ಬಲ ಇವುಗಳಿಗೆ ಭಗವೆಂದು ಹೆಸರು. ಇವುಗಳೆಲ್ಲವೂ ಶಕ್ತಿಯ ಪರಿಣಾಮವಿಕಾರಗಳಾಗಿ ಆ ದೇವಿಯಲ್ಲಿರುವುದರಿಂದ, ಎಂದರೆ ಇವುಗಳ ಸ್ವರೂಪವಾಗಿಯೇ ಪ್ರಕೃತಿಯು ಇರುವುದರಿಂದ, ಶಕ್ತಿದೇವಿಗೆ ಭಗವತೀ ಎಂದು ಹೆಸರು. ಇವು ಶಕ್ತಿಗೆ ಹೊರಗಿನಿಂದ ಬಂದವುಗಳಲ್ಲವೆಂದೂ, ಹೀಗೆ ಪರಸ್ಪರಾಧ್ಯಾಸದಿಂದ ಬ್ರಹ್ಮತತ್ವಕ್ಕೂ ಶಕ್ತಿತತ್ವಕ್ಕೂ ಭೇದವು ವ್ಯಾವಹಾರಿಕವಾದುದೆಂದೂ, ಪಾರಮಾರ್ಥಿಕವಾಗಿ ಅಭೇದವೆಂದೂ, ಭಾವವು. ||೧೧||

ಆತ್ಮನು ಯಾವಾಗಲೂ ಭಗವತಿಯಾದ ಆ ಶಕ್ತಿದೇವಿಯಿಂದ ಕೂಡಿದವನಾದುದರಿಂದ ಭಗವಾನ್ ಎಂದು ಪ್ರಸಿದ್ಧನಾಗಿರುವನು. ಪ್ರಕೃತಿಯ ಇಚ್ಛೆಯೇ ಆತ್ಮನ ಸ್ವೇಚ್ಛೆಯು. ಬೇರೆ ಅಲ್ಲವು. ಆದುದರಿಂದ ಪರಮಾತ್ಮನು ಸ್ವೇಚ್ಛಾಸ್ವರೂಪನು. ಮತ್ತು ಅವನು ಸೃಷ್ಟಿ ಮುಂತಾದ ವ್ಯವಹಾರದಲ್ಲಿ ಸಾಕಾರನೂ ವಾಸ್ತವ ಸ್ವರೂಪದಲ್ಲಿ ನಿರಾಕಾರನೂ ಆಗಿರುವನು. ||೧೨||

ಈಗ ಬ್ರಹ್ಮತತ್ವದ ನಿರಾಕಾರಸ್ವರೂಪವನ್ನು ವಿವರಿಸುತ್ತಾರೆ. ಸ್ವಪ್ರಕಾಶ ಜ್ಞಾನರೂಪವನ್ನು ತೇಜೋರೂಪವೆನ್ನುವರು. ತೇಜಸ್ಸು ಯಾವ ಆಕಾರವೂ ಇಲ್ಲದಿರುವುದು. ಈ ನಿರಾಕಾರಸ್ವರೂಪವನ್ನೇ ಯೋಗಿಗಳು ಯಾವಾಗಲೂ ಧ್ಯಾನ ಮಾಡುವರು. ಇದನ್ನೇ ಪರಮಾನಂದಸ್ವರೂಪನಾದ ಪರಬ್ರಹ್ಮನೆಂಬುದಾಗಿ ಕರೆವರು. ಹೀಗೆ ವ್ಯವಹಾರದಲ್ಲಿ ಪರಸ್ಪರಾಧ್ಯಾಸದಿಂದ ಅಭೇದವನ್ನು ಗ್ರಹಿಸಬೇಕು, ಎಂದು ತಾತ್ಪರ್ಯವು. ||೧೩||

**ಅದೃಶ್ಯಂ ಸರ್ವದ್ರಷ್ಟಾರಂ ಸರ್ವಜ್ಞಂ ಸರ್ವಕಾರಣಂ ।**
**ಸರ್ವದಂ ಸರ್ವರೂಪಂ ತಂ ವೈಷ್ಣವಾಸ್ತನ್ನ ಮನ್ವತೇ ॥೧೪॥**

ಇಂದ್ರಿಯಗಳಿಗೆ ಗೋಚರನಾಗದ, ಸರ್ವವನ್ನೂ ಸಾಕ್ಷಿಯಾಗಿ ನೋಡತಕ್ಕ, ಸಮಸ್ತವನ್ನೂ ತಿಳಿದಿರುವ, ಸಮಸ್ತಪ್ರಪಂಚಕ್ಕೂ ಅಧಿಷ್ಠಾನವಾಗಿರುತ್ತಾ ವಿವರ್ತ ಕಾರಣವಾದ, ಸಮಸ್ತ ಶಕ್ತಿಯನ್ನೂ ಕೊಡುವ, ಸಮಸ್ತ ಪದಾರ್ಥರೂಪನೆಂದು ಆ ಪರಮಾತ್ಮನನ್ನು ವೇದಾಂತವಾಕ್ಯಗಳು ವಿವರಿಸುತ್ತಿದ್ದರೂ ವೈಷ್ಣವರು ಆ ಪರ ಮಾತ್ಮನನ್ನು ನಿರಾಕಾರನೆಂದು ಒಪ್ಪುವುದಿಲ್ಲ. ಏಕೆಂದರೆ ಅವರು ಸ್ಥೂಲವಾದ ಸಗುಣಸಾಕಾರವಾದ ವ್ಯಾವಹಾರಿಕವಾದ ಮೂರ್ತಿಯನ್ನೇ ಪರಮಾರ್ಥತತ್ವವೆಂದು ತಿಳಿಯುವ ನಂಬಿಕೆಯಲ್ಲಿಯೇ ಅಭಿಮಾನವುಳ್ಳವರಾಗಿದಾರೆ. ||೧೪||

ತತ್ವವಿಮರ್ಶಕರಾದ ದಾರ್ಶನಿಕರು (Philosophers) ಈ ಲೋಕದಲ್ಲಿ ರುವ ಮತಸಿದ್ಧಾಂತಗಳನ್ನು ಮೂರು ಬಗೆಯಾಗಿ ವಿಂಗಡಿಸುತ್ತಾರೆ. ನಾಸ್ತಿಕರು (Atheists), ಸಂಶಯವಾದಿ (Agnostics)ಗಳು, ಮತ್ತು ಆಸ್ತಿಕರು(Theists) ಎಂದು. ನಮ್ಮ ಪುರಾಣಗಳು ಆಸ್ತಿಕಮತಗಳನ್ನು ತಿಳಿಯಹೇಳುತ್ತಿವೆ. ಈ ದೇವೀಭಾಗವತಮಹಾಪುರಾಣವು ಎಲ್ಲ ಮತಗಳೂ ಜಿಜ್ಞಾಸುವಾದ ಮುಮುಕ್ಷುವಿಗೆ ಪ್ರಗತಿಯ ದಾರಿಯಲ್ಲಿ ಪಡೆಯುವ ಮಜಲುಗಳಾಗಿವೆ. ಎಂಬ ಅಂಶವನ್ನು ಬೋಧಿ ಸುತ್ತದೆ. ದೇವನು ಸರ್ವಜ್ಞನೂ, ಸರ್ವಶಕ್ತನೂ, ಈ ಪ್ರಪಂಚಗಳ ಸೃಷ್ಟಿ, ಸ್ಥಿತಿ, ನಾಶಗಳನ್ನು ನೆರವೇರಿಸಬಲ್ಲವನೂ, ಜೀವರಿಗೆ ಅವರವರ ಕರ್ಮಾನುಸಾರವಾಗಿ ಐಹಿಕವಾದ ಅಭ್ಯುದಯಗಳನ್ನೂ, ಆಮುಷ್ಮಿಕಗಳಾದ ಸದ್ಗತಿಗಳನ್ನೂ, ಕಡೆಗೆ ಮೋಕ್ಷನಿತ್ಯಾನಂದವೆಂಬ ನಿಶ್ಶ್ರೇಯಸವನ್ನೂ ಅನುಗ್ರಹಿಸುತ್ತಾನೆ. ಜೀವರು ಆ ಈಶ್ವರನ ಭಕ್ತರೂ, ಸೇವಕರೂ ಆಗಿ ನಿಷ್ಕಾಮಕರ್ಮಾಚರಣೆ, ಭಕ್ತಿ ಪೂಜೆ, ಜಪ, ಉಪಾಸನೆ, ಧ್ಯಾನಗಳಿಂದ ಚಿತ್ತವು ಶುದ್ಧವಾಗಿ ಏಕಾಗ್ರವಾಗಲು, ಜ್ಞಾನದಿಂದ ಅಜ್ಞಾನದುಃಖಬಂಧಗಳು ನಾಶವಾಗಿ, ಎಲ್ಲರೂ ಮುಕ್ತಿಯನ್ನು ಪಡೆಯಬಹುದು. ಎಂದು ಆಸ್ತಿಕಮತಗಳು ತಿಳಿಯ ಹೇಳುತ್ತವೆ.

ಇಲ್ಲಿ ಹದಿಮೂರು ಮತ್ತು ಹದಿನಾಲ್ಕನೆಯ ಶ್ಲೋಕಗಳಲ್ಲಿ ಈಶ್ವರ ತತ್ವವನ್ನು ಪರಮಾರ್ಥದೃಷ್ಟಿಯಲ್ಲಿ ನಿರಾಕಾರನಿರ್ಗುಣ ಸಚ್ಚಿದಾನಂದರೂಪವಾದುದೆಂದೂ, ವ್ಯವಹಾರಸ್ಥಿತಿಯಲ್ಲಿ ಸಾಕಾರವೂ ಸಗುಣವೂ ಆಗಿರುತ್ತದೆ, ಎಂದೂ, ವಿವರಿಸಿ, ಇದನ್ನು ವೈಷ್ಣವರು ಒಪ್ಪುವುದಿಲ್ಲವೆಂದು ಹೇಳಿದೆ. ವೈಷ್ಣವಮತದ ಸಿದ್ಧಾಂತವನ್ನು

ಶ್ಲೋಕ ೫೪–೧೨ ಮತ್ತು ೧೫–೨೬ ವರೆಗೂ ವರ್ಣಿಸಿದೆ. ಇಲ್ಲಿ ನಾವು ತಿಳಿಯ ಬೇಕಾದ ವಿಶೇಷವೇನೆಂದರೆ—ಈ ಹದಿನೈದನೆಯ ಶ್ಲೋಕದಲ್ಲಿ ಬ್ರಹ್ಮನ ತೇಜಸ್ಸು ಅಥವಾ ಶಕ್ತಿಯು, ಚಂದ್ರಸೂರ್ಯರ ತೇಜಸ್ಸಿನಂತೆ, ಇದೆ ಎಂದು ಹೇಳಿಲ್ಲ. ಹಾಗೆ ಹೇಳಿದರೆ ಆ ತೇಜಸ್ಸಿಗೆ ಚಂದ್ರಸೂರ್ಯರ ಮಂಡಲಗಳು ಆಧಾರಗಳಾಗಿರುವಂತೆ, ಬ್ರಹ್ಮ ತೇಜಸ್ಸಿಗೂ ಒಂದು ಆಧಾರವು ಬೇಕಾಗುವುದು. ಅದನ್ನೂ ಒಪ್ಪಿದರೆ ಅನವಸ್ಥಾ ದೋಷದಲ್ಲಿ ನಿಲ್ಲಬೇಕಾಗುವುದು. ಮತ್ತೇನೆಂದರೆ, ಬ್ರಹ್ಮವು ಪರಿಶುದ್ಧವಾದುದ ರಿಂದಲೂ, ಜ್ಞಾನಸ್ವರೂಪವಾದುದರಿಂದಲೂ, ತೇಜಸ್ಸಿನ ಸಾಮ್ಯವನ್ನು ಹೇಳಿದೆ. ಸರ್ವಾಧಾರವಾದ ವಸ್ತುವಿಗೆ ಇನ್ನೊಂದು ಆಧಾರವು ಬೇಕಿಲ್ಲವು. ಈ ಅಂಶವನ್ನು "ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ ಸ್ವೇ ಮಹಿಮ್ನಿ" ಎಂದು ಶ್ರುತಿಯು ವಿವರಿಸಿದೆ. ಎಂದರೆ ಆತ್ಮತತ್ವವು ತನಗೆ ತಾನೇ ಆಧಾರವಾಗಿದೆಯೇ ಹೊರತು ಇನ್ನೊಂದು ಆಧಾರದ ಅಪೇಕ್ಷೆ ಇಲ್ಲದೆ ಇದೆ. ಎಂದು ತಾತ್ಪರ್ಯವು.

ಹಾಗಲ್ಲದೆ ವೈಷ್ಣವರು, ಎಂದರೆ ಸಾಕಾರನೂ ಸಗುಣನೂ ಆದ ವಿಷ್ಣು, ಶಿವ, ಅಥವಾ ಶಕ್ತಿಮೂರ್ತಿಯೇ ಪರಬ್ರಹ್ಮತತ್ವವೆಂದು ಒಪ್ಪುವವರು, ಹೇಳುವಂತೆ ಒಪ್ಪಿ ದರೆ ಬ್ರಹ್ಮತತ್ವವು ಸಾಕಾರವೂ, ಸಾವಯವವೂ, ಪಾಂಚಭೌತಿಕವಾದುದೂ ವಿಕಾ ರಿಯೂ, ಅನಿತ್ಯವೂ ಆಗಿರಬೇಕಾಗುತ್ತದೆ. ಸಾವಯವವೂ, ಪಾಂಚಭೌತಿಕವೂ ಅಲ್ಲ ವೆಂದರೆ, ಅದು ಅದೃಶ್ಯವಾಗಿ ಪ್ರಮಾಣವಿಲ್ಲದೆ ಹೋಗಬೇಕಾಗುತ್ತದೆ. ವೇದ ವಾಕ್ಯವೇ ಪ್ರಮಾಣವೆಂದರೆ, ಆ ವಾಕ್ಯಗಳಿಗೆ ಕೃಷ್ಣರಾಧಾ, ಮುಂತಾದ ಮೂರ್ತಿ ಗಳಲ್ಲಿ ಅಂತರ್ಗತವಾಗಿರುವ ಬ್ರಹ್ಮವನ್ನು ತಿಳಿಸುವುದೇ ಆ ವಾಕ್ಯಗಳಿಗೆ ತಾತ್ಪರ್ಯವು. ಆದುದರಿಂದಲೇ "ಸರ್ವಂಖಲ್ವಿದಂ ಬ್ರಹ್ಮ" ಎಂದು ಮುಂತಾದ ಶ್ರುತಿಗಳು ಸಾಮಾನಾಧಿಕರಣ್ಯದಿಂದ ಜೀವಬ್ರಹ್ಮಾಭೇದವನ್ನೇ ತಿಳಿಸುತ್ತವೆಂದು ಹೇಳಿದರೂ ಸಮಂಜಸವಾದ ಅರ್ಥವಾಗುವುದು. ಅಲ್ಲದೆ ಸಾಕಾರಮೂರ್ತಿಯನ್ನು ಹೇಳುವ ಶ್ರುತಿಗಳು ಉಪಾಸನೆಗಾಗಿ ಹಾಗೆ ಹೇಳುತ್ತವೆಯೇ ಹೊರತು, ಪರಮಸಿದ್ಧಾಂತವೇ ಆದಲ್ಲವು. ಆದುದರಿಂದ ಭೇದವು ಅಪ್ರಾಮಾಣಿಕವು. ಎಂದು ತಿಳಿಯಬೇಕು.

ಹೀಗೆ ಈ ಪುರಾಣದಲ್ಲಿ ಬ್ರಹ್ಮಾ, ಶಿವ, ವಿಷ್ಣು, ಕೃಷ್ಣ, ರಾಧಾ, ಲಕ್ಷ್ಮೀ, ಸರಸ್ವತೀ, ಸಾವಿತ್ರೀ, ದುರ್ಗಾ, ಶಕ್ತಿಗಳಿಗೆ ಅಭೇದವನ್ನು ಅಡಿಗಡಿಗೆ ಹೇಳಿ ಸಕಲ ಆಸ್ತಿಕಮತಗಳಿಗೂ ಸಾಮರಸ್ಯವನ್ನು ಬೋಧಿಸುವುದು ಒಂದು ವಿಶೇಷವಾದ ಹೆಚ್ಚು ಗಾರಿಕೆಯ ಗುಣವಾಗಿದೆ. ಅಲ್ಲದೆ ಈ ದಾರಿಯಲ್ಲಿ ಮುಂದುವರಿಯುವುದು ಸ್ವಾಭಾ ವಿಕವಾಗಿಯೂ, ಸರ್ವರಿಗೂ ಅವರವರ ಸಂಸ್ಕೃತಿ ಮತ್ತು ರುಚಿಗಳ ಮಟ್ಟಕ್ಕೆ

ವದಂತಿ ಚೈವ ತೇ ಕಸ್ಯ ತೇಜಸ್ತೇಜಸ್ವಿನಾ ವಿನಾ ।
ತೇಜೋಮಂಡಲಮಧ್ಯಸ್ಥಂ ಬ್ರಹ್ಮ ತೇಜಸ್ವಿನಂ ಪರಂ ॥೧೫॥

ಸ್ವೇಚ್ಛಾಮಯಂ ಸರ್ವರೂಪಂ ಸರ್ವಕಾರಣಕಾರಣಂ ।
ಅತೀವ ಸುಂದರಂ ರೂಪಂ ಬಿಭ್ರತಂ ಸುಮನೋಹರಂ ॥೧೬॥

ಕಿಶೋರವಯಸಂ ಶಾಂತಂ ಸರ್ವಕಾಂತಂ ಪರಾತ್ಪರಂ ।
ನವೀನನೀರದಾಭಾಸಧಾಮೈಕಂ ಶ್ಯಾಮವಿಗ್ರಹಂ ॥೧೭॥

ಶರನ್ಮಧ್ಯಾಹ್ನಪದ್ಮೌಘಶೋಭಾಮೋಚನಲೋಚನಂ ।
ಮುಕ್ತಾಚ್ಛವಿವಿನಿಂದ್ಯೈಕದಂತಪಂಕ್ತಿಮನೋಹರಂ ॥೧೮॥

ಮಯೂರಪಿಚ್ಛಚೂಡಂ ಚ ಮಾಲತೀಮಾಲ್ಯಮಂಡಿತಂ ।
ಸುನಸಂ ಸಸ್ಮಿತಂ ಕಾಂತಂ ಭಕ್ತಾನುಗ್ರಹಕಾರಣಂ ॥೧೯॥

---

ತಕ್ಕಂತೆ ಅನುಸರಿಸಬಹುದಾದ ಮೆಟ್ಟಿಲುಗಳು ಇರುವುದರಿಂದ ಸರ್ವಸುಲಭ ವಾಗಿಯೂ, ಶ್ರೇಯಸ್ಕರವಾಗಿಯೂ ಇದೆ. ಎಂಬ ಅಂಶವನ್ನು ಗಮನಿಸಬಹುದು. ಈ ಅಂಶವನ್ನು ಆರನೆಯ ಸ್ಕಂಧದ ಮುನ್ನುಡಿಯಲ್ಲಿಯೂ ವಿವರಿಸಲಾಗಿದೆ.

ವೈಷ್ಣವಮತದ ಸಿದ್ಧಾಂತವನ್ನು ವಿವರಿಸುತ್ತಾರೆ. ಅವರು ತೇಜಸ್ಸಿಗೆ ಆಧಾರ ವಾದ ಪದಾರ್ಥವಿಲ್ಲದಿದ್ದರೆ ತೇಜಸ್ಸು ಯಾರ ಸಂಬಂಧವಾದುದಾಗಿರಬೇಕು ? ಎಂದು ಪ್ರಶ್ನಿಸಿ ಅದರ ಉತ್ತರವಾಗಿ ತೇಜೋಮಂಡಲದ ಮಧ್ಯದಲ್ಲಿ ಪರಬ್ರಹ್ಮನು ಇರುವ ನೆಂದು ಹೇಳುವರು. ॥೧೫॥

ಅವನು ತನ್ನ ಇಚ್ಛಾಸ್ವರೂಪನು. ಯಾವ ರೂಪವಾಗಿಯಾದರೂ ಇರ ಬಲ್ಲನು. ಸಮಸ್ತಕಾರಣಪದಾರ್ಥಗಳಿಗೂ ಕಾರಣನಾದವನು. ಮನೋಹರವಾದ ಸುಂದರರೂಪವನ್ನು ಧರಿಸಿರುವನು. ಚಿಕ್ಕವಯಸ್ಸಿನವನು. ಸಮಸ್ತರಿಗೂ ಪ್ರೀತಿ ಪಾತ್ರನು. ಹೊಸದಾಗಿ ಹುಟ್ಟಿದ ಮೇಘದಂತೆ ಪ್ರಕಾಶಮಾನವಾದ ಶರೀರವುಳ್ಳ ವನು. ಅತ್ಯಂತ ಶ್ರೇಷ್ಠನು. ॥೧೬-೧೭॥

ಶರದೃತುವಿನ ಮಧ್ಯಾಹ್ನದಲ್ಲಿ ಪ್ರಕಾಶಿಸುವ ಕಮಲದ ಕಾಂತಿಯನ್ನು ತಿರಸ್ಕರಿಸುವ ಕಣ್ಣುಳ್ಳವನು. ಮುತ್ತಿನ ಕಾಂತಿಯನ್ನು ತಿರಸ್ಕರಿಸುವ ಹಲ್ಲುಗಳ ಸಾಲಿನಿಂದ ಮನೋಹರನಾದವನು. ನವಿಲುಗರಿಯ ಕುಚ್ಚನ್ನು ಕೂದಲಲ್ಲಿ ಸೇರಿಸಿ

ಜ್ವಲದಗ್ನಿವಿಶುದ್ಧೈಕಪೀತಾಂಶುಕಸುಶೋಭಿತಂ ।
ದ್ವಿಭುಜಂ ಮುರಲೀಹಸ್ತಂ ರತ್ನಭೂಷಣಭೂಷಿತಂ ॥೨೦॥

ಸರ್ವಾಧಾರಂ ಚ ಸರ್ವೇಶಂ ಸರ್ವಶಕ್ತಿಯುತಂ ವಿಭುಂ ।
ಸರ್ವೈಶ್ವರ್ಯಪ್ರದಂ ಸರ್ವಂ ಸ್ವತಂತ್ರಂ ಸರ್ವಮಂಗಳಂ ॥೨೧॥

ಪರಿಪೂರ್ಣತಮಂ ಸಿದ್ಧಂ ಸಿದ್ಧೇಶಂ ಸಿದ್ಧಿಕಾರಕಂ ।
ಧ್ಯಾಯಂತಿ ವೈಷ್ಣವಾಃ ಶಶ್ವದ್ದೇವದೇವಂ ಸನಾತನಂ ॥೨೨॥

ಜನ್ಮಮೃತ್ಯುಜರಾವ್ಯಾಧಿಶೋಕಭೀತಿಹರಂ ಪರಂ ।
ಬ್ರಹ್ಮಣೋ ವಯಸಾ ಯಸ್ಯ ನಿಮೇಷ ಉಪಚರ್ಯತೇ ॥೨೩॥

ಸ ಚಾತ್ಮಾ ಸ ಪರಂ ಬ್ರಹ್ಮ ಕೃಷ್ಣ ಇತ್ಯಭಿಧೀಯತೇ ।
ಕೃಷಿಸ್ತದ್ಭಕ್ತಿವಚನೋ ನಶ್ಚ ತದ್ದಾಸ್ಯವಾಚಕಃ ॥೨೪॥
ಭಕ್ತಿದಾಸ್ಯಪ್ರದಾತಾ ಯಃ ಸ ಚ ಕೃಷ್ಣಃ ಪ್ರಕೀರ್ತಿತಃ ।

---

ಇರುವಂತಿಗೆಯ ಹೂಮಾಲೆಯಿಂದ ಅಲಂಕಾರಮಾಡಿಕೊಂಡಿರುವವನು. ಅವನ ಮೂಗು ಸುಂದರವಾಗಿರುವುದು. ನಗುಮುಖದಿಂದ ಕೂಡಿ ಭಕ್ತರಿಗೆ ಅನುಗ್ರಹ ವನ್ನು ಮಾಡುತ್ತಿರುವನು. ॥೧೮-೧೯॥

ಅನಾದಿಯಾದ ಆತನನ್ನು ವೈಷ್ಣವರು, ಅಗ್ನಿಯ ಉರಿಯಂತೆ ಪರಿಶುದ್ಧ ವಾದ ಪೀತಾಂಬರವನ್ನುಟ್ಟು, ತನ್ನೆರಡು ಕೈಗಳಲ್ಲಿ ಕೊಳಲನ್ನು ಹಿಡಿದು, ರತ್ನಾಭರಣ ಗಳನ್ನು ಧರಿಸಿ, ಸಮಸ್ತ ಪದಾರ್ಥಗಳಿಗೂ ಆಶ್ರಯನಾಗಿ, ಸಮಸ್ತ ಶಕ್ತಿಗಳಿಂದಲೂ ಕೂಡಿ, ಸಮಸ್ತ ಲೋಕಕ್ಕೂ ಅಧಿಪತಿಯಾಗಿ, ಸಮಸ್ತ ಸಂಪತ್ತನ್ನೂ ಭಕ್ತರಿಗೆ ಕೊಡುವವನಾಗಿ, ಪರಿಪೂರ್ಣನೂ, ಸಿದ್ಧನೂ, ಆಗಿ, ಭಕ್ತರಿಗೆ ಸಕಲ ಇಷ್ಟಾರ್ಥ ಗಳನ್ನೂ ಕೊಡುವ ಮಂಗಳಕರವಾದ ಸಗುಣಸಾಕಾರ ಮೂರ್ತಿರೂಪದಿಂದ ಕೂಡಿ ಇರುವವನೆಂದು ಧ್ಯಾನಮಾಡುವರು. ॥೨೦-೨೧-೨೨॥

ಆ ದೇವನು ಹುಟ್ಟು, ಮರಣ, ರೋಗ, ಮುಪ್ಪು, ದುಃಖ, ಭಯ ಇವು ಗಳನ್ನು ನಾಶಮಾಡತಕ್ಕವನು. ಬ್ರಹ್ಮನ ಒಂದುನೂರು ವರ್ಷ ಆಯುಸ್ಸಿನ ಕಾಲವು ಆ ದೇವನಿಗೆ ಒಂದು ನಿಮಿಷವಾಗುವುದು. ಅವನೇ ಪರಮಾತ್ಮನು. ಪರಬ್ರಹ್ಮನು. ಕೃಷ್ಣನೆಂದು ಅವನ ಹೆಸರು. ಕೃಷಧಾತುವು ಭಕ್ತಿಯ ನ ಶಬ್ದವು ದಾಸ್ಯದ ಅರ್ಥ ವನ್ನು ಕೊಡುವುದು. ಎಲ್ಲರಿಗೂ ಭಕ್ತಿಯನ್ನೂ, ದಾಸ್ಯವನ್ನೂ, ಕೊಡತಕ್ಕವನೇ ಕೃಷ್ಣನು. ॥೨೩-೨೪॥

ಕೃಷಿಶ್ಚ ಸರ್ವವಚನೋ ನಕಾರೋ ಬೀಜಮೇವ ಚ ॥೨೫॥

ಸ ಕೃಷ್ಣಃ ಸರ್ವಸೃಷ್ಟ್ಯಾದೌ ಸಿಸೃಕ್ಷನ್ನೇಕ ಏವ ಚ ।
ಸೃಷ್ಟ್ಯುನ್ಮುಖಸ್ತದಂಶೇನ ಕಾಲೇನ ಪ್ರೇರಿತಃ ಪ್ರಭುಃ ॥೨೬॥

ಸ್ವೇಚ್ಛಾಮಯಃ ಸ್ವೇಚ್ಛಯಾ ಚ ದ್ವಿಧಾರೂಪೋ ಬಭೂವ ಹ ।
ಸ್ತ್ರೀರೂಪೋ ವಾಮಭಾಗಾಂಶೋ ದಕ್ಷಿಣಾಂಶಃ ಪುಮಾನ್ ಸ್ಮೃತಃ ॥೨೭॥

ತಾಂ ದದರ್ಶ ಮಹಾಕಾಮೀ ಕಾಮಾಧಾರಾಂ ಸನಾತನಃ ।
ಅತೀವ ಕಮನೀಯಾಂ ಚ ಚಾರುಪಂಕಜಸನ್ನಿಭಾಂ ॥೨೮॥

---

ಕೃಷಧಾತುವು ಸರ್ವಕಾರ್ಯರೂಪಪ್ರಪಂಚವೆಂಬ ಅರ್ಥವನ್ನು ಕೊಡ ತಕ್ಕುದು. ನಕಾರವು ಕಾರಣಾರ್ಥವನ್ನು ಕೊಡತಕ್ಕುದು. ಆದುದರಿಂದ ಕೃಷ್ಣನು ಪ್ರಪಂಚಕ್ಕೆ ಕಾರಣನೆಂದು ಆಯಿತು. ಎಂದು ವೈಷ್ಣವರು ಹೇಳುವರು.

ಆದಿಯಲ್ಲಿ ಸಮಸ್ತವನ್ನೂ ಸೃಷ್ಟಿಸುವ ಆಲೋಚನೆಯನ್ನು ಮಾಡಿದ ಮಾಯಾಶಬಳನಾದ ಪರಮೇಶ್ವರನು ಅಪಂಚೀಕೃತಪಂಚಮಹಾಭೂತಸ್ವರೂಪನಾದ ಹಿರಣ್ಯಗರ್ಭನ ಮೂಲಕವಾಗಿ ಪಂಚಮಹಾಭೂತಗಳ ಪರಿಣಾಮರೂಪವಾದ ಬ್ರಹ್ಮಾಂಡವು ಉತ್ಪತ್ತಿಯಾಗುವ ಮೊದಲು ಸೃಷ್ಟಿಮಾಡಬೇಕೆಂಬ ಅಪೇಕ್ಷೆಯಿಂದ ತನ್ನಲ್ಲೇ ಅಂಶದಿಂದ ಇರುವ, ಸೃಜ್ಯಮಾನರಾದ ಜೀವರ ಕರ್ಮಾನುಸಾರವಾಗಿ ಫಲೋನ್ಮುಖವಾಗಿರುವ, ಕಾಲದ ದೆಸೆಯಿಂದ ಪ್ರೇರಿತನಾಗಿ ಸೃಷ್ಟಿಕಾರ್ಯದಲ್ಲಿ ಪ್ರವೃತ್ತನಾದನು. ॥೨೫-೨೬॥

ಪರಮಾತ್ಮನು ಇಚ್ಛಾಸ್ವರೂಪನಾದುದರಿಂದ ತನ್ನ ಇಚ್ಛಾಸ್ವರೂಪಶಕ್ತಿ ಯಿಂದ ಎಡಭಾಗವು ಸ್ತ್ರೀರೂಪವಾಗಿಯೂ ಬಲಭಾಗವು ಪುರುಷರೂಪವಾಗಿಯೂ ಎರಡು ರೂಪದಿಂದ ಅರ್ಧನಾರೀಶ್ವರನಾದನು. ಇಲ್ಲಿ ಅರ್ಧನಾರೀಶ್ವರ ರೂಪದಿಂದ ಮೂಲಪ್ರಕೃತಿಯೇ ಪರಿಣಾಮವನ್ನು ಹೊಂದಿತೆಂದು ಅರ್ಥವು. ಆ ಪ್ರಕೃತಿಯು ಚೈತನ್ಯರಹಿತವಾಗಿ ಬೇರೆಯಾಗಿ ಇರುವುದಿಲ್ಲ. ಪರಮಾತ್ಮನು ಪ್ರಕೃತಿಗೆ ಅಧಿಷ್ಠಾನ ವಾಗಿ ವಿವರ್ತಕಾರಣನಾಗಿರುವನು. ॥೨೭॥

ಮಹಾಕಾಮಿಯಾದ ಅರ್ಧನಾರೀಶ್ವರನು ತನ್ನ ಎಡಭಾಗದಲ್ಲಿ ಮೃದುವಾದ ಕಮಲಕ್ಕೆ ಸಮಾನಳಾದ, ಚಂದ್ರಮಂಡಲವನ್ನು ನಿಂದಿಸುತ್ತಿರುವ ನಿತಂಬಗಳಿಂದ

ಚಂದ್ರಬಿಂಬವಿನಿಂದ್ಯೈಕ ನಿತಂಬಯುಗಲಾಂ ಪರಾಂ ।
ಸುಚಾರುಕದಲೀಸ್ತಂಭ ನಿಂದಿತಶ್ರೋಣಿಸುಂದರೀಂ ॥೨೯॥

ಶ್ರೀಯುಕ್ತ ಶ್ರೀಫಲಾಕಾರಸ್ತನಯುಗ್ಮಮನೋರಮಾಂ ।
ಪುಷ್ಪಜುಷ್ಟಾಂ ಸುವಲಿತಾಂ ಮಧ್ಯಕ್ಷೀಣಾಂ ಮನೋಹರಾಂ ॥೩೦॥

ಅತೀವಸುಂದರೀಂ ಶಾಂತಾಂ ಸಸ್ಮಿತಾಂ ವಕ್ರಲೋಚನಾಂ ।
ವಹ್ನಿಶುದ್ಧಾಂಶುಕಾಧಾರಾಂ ರತ್ನಭೂಷಣಭೂಷಿತಾಂ ॥೩೧॥

ಶಶ್ವಚ್ಚಕ್ಷುಶ್ಚಕೋರಾಭ್ಯಾಂ ಪಿಬಂತಂ ಸತತಂ ಮುದಾ ।
ಕೃಷ್ಣಸ್ಯ ಮುಖಚಂದ್ರಂಚ ಚಂದ್ರಕೋಟಿ ವಿನಿಂದಿತಂ ॥೩೨॥

ಕಸ್ತೂರೀಬಿಂದುನಾ ಸಾರ್ಧಂ ಅಧಶ್ಚಂದನಬಿಂಧುನಾ ।
ಸಮಸಿಂಧೂರಬಿಂದುಂ ಚ ಭಾಲಮಧ್ಯೇ ಚ ಬಿಭ್ರತೀಂ ॥೩೩॥

ವಕ್ರಿಮಂ ಕಬರೀಭಾರಂ ಮಾಲತೀಮಾಲ್ಯಭೂಷಿತಂ ।
ರತ್ನೇಂದ್ರಸಾರಹಾರಂ ಚ ದಧತೀಂ ಕಾಂತಕಾಮುಕೀಂ ॥೩೪॥

ಕೋಟಿಚಂದ್ರ ಪ್ರಭಾಮೃಷ್ಟ ಪುಷ್ಪಶೋಭಾಸಮನ್ವಿತಾಂ ।
ಗಮನೇನ ರಾಜಹಂಸ ಗಜಗರ್ವ ವಿನಾಶಿನೀಂ ॥೩೫॥

---

ಕೂಡಿದ, ಬಾಳೆಯ ಕಂಬದಂತೆ ನಯವಾದ ತೊಡೆಗಳೂ, ಸುಂದರವಾದ ಬಿಲ್ವಫಲದಂತಿರುವ ಸ್ತನಗಳೂ, ಸೂಕ್ಷ್ಮವಾದ ಸಣ್ಣಗಿರುವ ನಡುವೂ ಉಳ್ಳ, ತಲೆಯಲ್ಲಿ ಹೂವನ್ನು ಮುಡಿದಿರುವ ಮನೋಹರಳಾದ, ॥೨೮-೨೯-೩೦॥

ಮಹಾಸುಂದರಿಯೂ, ಶಾಂತಳೂ, ನಗುಮುಖವೂ, ಕಡೆಗಣ್ಣಿನ ನೋಟವೂ ಉಳ್ಳವಳೂ, ಆದ ಆ ರಾಧೆಯು ಪರಿಶುದ್ಧವಾದ ವಸ್ತ್ರವನ್ನು ಉಟ್ಟು ರತ್ನಾಭರಣಗಳನ್ನು ಧರಿಸಿ ಪ್ರಕಾಶಮಾನವಾದ ಕೃಷ್ಣನ ಮುಖವನ್ನು ಪುನಃ ಪುನಃ ನೋಡುತ್ತಿರುವಳು. ॥೩೧-೩೨॥

ಹಣೆಯಲ್ಲಿ ಬೈತಲೆಯ ಸಮೀಪದಲ್ಲಿ ಸಿಂಧೂರಬಿಂದುವೂ ಅದರ ಕೆಳಗೆ ಕೇಸರೀ ಗಂಧದ ಬಿಂದುವೂ ಅದರ ಕೆಳಗೆ ಕಸ್ತೂರೀಬಿಂದುವೂ ಇವುಗಳನ್ನಿಟ್ಟು ಸುರುಳಿಗಟ್ಟಿದ ಕೂದಲಿನಲ್ಲಿ ಇರುವಂತಿಗೆಯ ಹೂವನ್ನು ಮುಡಿದು, ರತ್ನ ಮತ್ತು ಇಂದ್ರನೀಲಮಣಿಯ ಹಾರವನ್ನು ಹಾಕಿಕೊಂಡು, ಕೋಟಿಚಂದ್ರರ ಕಾಂತಿಯಂತೆ

ದೃಷ್ಟ್ವಾ ತಾಂ ತು ತಯಾ ಸಾರ್ಧಂ ರಾಸೇಶೋ ರಾಸಮಂಡಲೇ ।
ರಾಸೋಲ್ಲಾಸೇ ಸುರಸಿಕೋ ರಾಸಕ್ರೀಡಾಂ ಚಕಾರ ಹ ॥೩೬॥

ನಾನಾಪ್ರಕಾರಶೃಂಗಾರಂ ಶೃಂಗಾರೋ ಮೂರ್ತಿಮಾನಿವ ।
ಚಕಾರ ಸುಖಸಂಭೋಗಂ ಯಾವದ್ವೈ ಬ್ರಹ್ಮಣೋ ದಿನಂ ॥೩೭॥

ತತಃ ಸ ಚ ಪರಿಶ್ರಾಂತಸ್ತಸ್ಯಾ ಯೋನೌ ಜಗತ್ಪಿತಾ ।
ಚಕಾರ ವೀರ್ಯಾಧಾನಂ ಚ ನಿತ್ಯಾನಂದೇ ಶುಭಕ್ಷಣೇ ॥೩೮॥

ಗಾತ್ರತೋ ಯೋಷಿತಸ್ತಸ್ಯಾಃ ಸುರತಾಂತೇ ಚ ಸುವ್ರತ ।
ನಿಸ್ಸಸಾರ ಶ್ರಮಜಲಂ ಶ್ರಾಂತಾಯಾಸ್ತೇಜಸಾ ಹರೇಃ ॥೩೯॥

ಮಹಾಕ್ರಮಣಕ್ಲಿಷ್ಟಾಯಾ ನಿಶ್ವಾಸಶ್ಚ ಬಭೂವ ಹ ।
ತದಾ ವವ್ರೇ ಶ್ರಮಜಲಂ ತತ್ಸರ್ವಂ ವಿಶ್ವಗೋಲಕಂ ॥೪೦॥

ಸ ಚ ನಿಶ್ವಾಸವಾಯುಶ್ಚ ಸರ್ವಾಧಾರೋ ಬಭೂವ ಹ ।
ನಿಶ್ವಾಸವಾಯುಸ್ಸರ್ವೇಷಾಂ ಜೀವಿನಾಂ ಚ ಭವೇಷು ಚ ॥೪೧॥

---

ಪ್ರಕಾಶಮಾನಳಾದ, ರಾಜಹಂಸದಂತೆ ನಡೆಯುವ, ತನ್ನ ಎಡಭಾಗದ ಶಕ್ತಿದೇವಿಯನ್ನು ನೋಡಿದನು. ||೩೩-೩೪-೩೫||

ಕೃಷ್ಣನು ತನ್ನ ಎಡಭಾಗದ ಶರೀರದ ಅರ್ಧದಲ್ಲಿರುವ ರಾಧೆಯನ್ನು ನೋಡಿ ರಾಸಕ್ರೀಡೆಯಲ್ಲಾಸಕ್ತನಾಗಿ ಆ ದೇವಿಯೊಡನೆ ರಾಸಮಂಡದಲ್ಲಿ ರಾಸಕ್ರೀಡೆಯಾಡಿದನು. ಶೃಂಗಾರರಸವೇ ಶರೀರವನ್ನು ಧರಿಸಿ ಬಂದಂತೆ ಬಗೆಬಗೆಯ ಶೃಂಗಾರಚೇಷ್ಟೆಗಳಿಂದ ಕೂಡಿ ಬ್ರಹ್ಮನ ಒಂದು ದಿನ ಅಂದರೆ ಎರಡುಸಾವಿರ ಚತುರ್ಯುಗಗಳ ಕಾಲದ ವರೆಗೆ ಸುಖಾನುಭವಮಾಡಿದನು. ||೩೬-೩೭||

ಆ ಮೇಲೆ ಜಗತ್ತಿಗೆ ತಂದೆಯಾದ ಆ ಕೃಷ್ಣನು ಆ ರಾಧೆಯ ಯೋನಿಯಲ್ಲಿ ಮಂಗಳಕರವಾದ ಕಾಲದಲ್ಲಿ ವೀರ್ಯವನ್ನಿಟ್ಟನು. ನಾರದನೇ, ಕೇಳು. ಸುರತದ ಕೊನೆಯಲ್ಲಿ ಆ ಕೃಷ್ಣನ ತೇಜಸ್ಸಿನಿಂದ ಬಳಲಿದ ಆ ರಾಧೆಯ ಶರೀರದಿಂದ ಬೆವರು ಸುರಿಯಿತು. ||೩೮-೩೯||

ಮತ್ತು ಆ ಮಹಾ ಆಲಿಂಗನದಿಂದ ರಾಧೆಯು ಆಯಾಸಗೊಂಡುದರಿಂದ ನಿಶ್ವಾಸವೂ ಉಂಟಾಯಿತು. ಆ ಬೆವರಿನ ನೀರು ಮೊದಲೇ ಹುಟ್ಟಿದ್ದ ಪ್ರಪಂಚ

ಬಭೂವ ಮೂರ್ತಿಮದ್ವಾಯೋರ್ವಾಮಾಂಗಾತ್ಪ್ರಾಣವಲ್ಲಭಾ ।
ತತ್ಪತ್ನೀ ಸಾ ಚ ತತ್ಪುತ್ರಾಃ ಪ್ರಾಣಾಃ ಪಂಚ ಚ ಜೀವಿನಾಂ ॥೪೨॥

ಪ್ರಾಣೋಽಪಾನಃ ಸಮಾನಶ್ಚೋದಾನವ್ಯಾನೌ ಚ ವಾಯವಃ ।
ಬಭೂವುರೇವ ತತ್ಪುತ್ರಾ ಅಧಃ ಪ್ರಾಣಾಶ್ಚ ಪಂಚ ಚ ॥೪೩॥

ಘರ್ಮತೋಯಾಧಿದೇವಶ್ಚ ಬಭೂವ ವರುಣೋ ಮಹಾನ್ ।
ತದ್ವಾಮಾಂಗಾಚ್ಚ ತತ್ಪತ್ನೀ ವರುಣಾನೀ ಬಭೂವ ಸಾ ॥೪೪॥

ಅಥ ಸಾ ಕೃಷ್ಣಚಿಚ್ಛಕ್ತಿಃ ಕೃಷ್ಣಗರ್ಭಂ ದಧಾರ ಹ ।
ಶತಮನ್ವಂತರಂ ಯಾವಜ್ಜ್ವಲಂತೀ ಬ್ರಹ್ಮತೇಜಸಾ ॥೪೫॥

ಕೃಷ್ಣಪ್ರಾಣಾ ಹಿ ದೇವೀ ಸಾ ಕೃಷ್ಣಪ್ರಾಣಾಧಿಕಪ್ರಿಯಾ ।
ಕೃಷ್ಣಸ್ಯ ಸಂಗಿನೀ ಶಶ್ವತ್ಕೃಷ್ಣವಕ್ಷಸ್ಸ್ಥಲಸ್ಥಿತಾ ॥೪೬॥

---

ಗೋಲವನ್ನು ಆಕ್ರಮಿಸಿತು. ಆ ನಿಶ್ವಾಸವಾಯುವು ಸಕಲ ಪ್ರಾಣಿಗಳಿಗೂ ಬದುಕಲು ಆಧಾರವಾದ ನಿಶ್ವಾಸವಾಗಿಯೂ ಆಯಿತು. ||೪೦-೪೧||

ಆ ಸಮಯದಲ್ಲಿಯೇ ಮೂರ್ತಿರೂಪನಾದ ವಾಯುವಿನ ಎಡಭಾಗದ ಅವಯವದಲ್ಲಿ ವಾಯುಪತ್ನಿಯೂ ಆ ವಾಯುವಿನ ಪುತ್ರರಾದ ಪ್ರಾಣಾಪಾನ ವ್ಯಾನೋದಾನಸಮಾನಗಳೆಂಬ ಪಂಚವಾಯುಗಳೂ; ನಾಗಾದಿ ಉಪವಾಯುಗಳೂ ಪ್ರಾಣಿಗಳಿಗಾಗಿ ಉತ್ಪನ್ನರಾದರು. ||೪೨-೪೩||

ಬೆವರಿನ ನೀರಿಗೆ ವರುಣನು ದೇವನಾದನು. ಆ ವರುಣದೇವನ ಎಡಭಾಗದ ಅವಯವದಿಂದ ವರುಣನ ಪತ್ನಿಯಾದ ವರುಣಾನಿಯು ಉತ್ಪನ್ನಳಾದಳು. ||೪೪||

ಕೃಷ್ಣನ ಜ್ಞಾನಶಕ್ತಿಸ್ವರೂಪಳಾದ ರಾಧೆಯು ಸ್ವಪ್ರಕಾಶರೂಪವಾದ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಾ ಕೃಷ್ಣನ ಸಂಬಂಧವಾದ ಗರ್ಭವನ್ನು ನೂರುಮನ್ವಂತರಗಳ ವರೆಗೆ ಧರಿಸಿ ಕೃಷ್ಣನಿಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಪಾತ್ರಳಾಗಿ ಅವನ ಹೃದಯದಲ್ಲಿಯೇ ವಾಸವಾಗಿದ್ದಳು. ||೪೫-೪೬||

**ಶತಮನ್ವಂತರಾಂತೇ ಚ ಕಾಲೇಽತೀತೇಽಪಿ ಸುಂದರೀ ।**
**ಸುಷಾವ ಡಿಂಭಂ ಸ್ವರ್ಣಾಭಂ ವಿಶ್ವಾಧಾರಾಲಯಂ ಪರಂ ॥೪೭॥**

**ದೃಷ್ಟ್ವಾ ಡಿಂಭಂ ಚ ಸಾ ದೇವೀ ಹೃದಯೇನ ವ್ಯದೂಯತ ।**
**ಉತ್ಸಸರ್ಜ ಚ ಕೋಪೇನ ಬ್ರಹ್ಮಾಂಡಗೋಲಕೇ ಜಲೇ ॥೪೮॥**

**ದೃಷ್ಟ್ವಾ ಕೃಷ್ಣಶ್ಚ ತತ್ತ್ಯಾಗಂ ಹಾಹಾಕಾರಂ ಚಕಾರ ಹ ।**
**ಶಶಾಪ ದೇವೀಂ ದೇವೇಶಸ್ತತ್ಕ್ಷಣಂ ಚ ಯಥೋಚಿತಂ ॥೪೯॥**

**ಯತೋಽಪತ್ಯಂ ತ್ವಯಾ ತ್ಯಕ್ತಂ ಕೋಪಶೀಲೇ ಚ ನಿಷ್ಠುರೇ ।**
**ಭವ ತ್ವಮನಪತ್ಯಾಪಿ ಚಾದ್ಯಪ್ರಭೃತಿ ನಿಶ್ಚಿತಂ ॥೫೦॥**

**ಯಾ ಯಾಸ್ತ್ವದಂಶರೂಪಾಶ್ಚ ಭವಿಷ್ಯಂತಿ ಸುರಸ್ತ್ರಿಯಃ ।**
**ಅನಪತ್ಯಾಶ್ಚ ತಾಃ ಸರ್ವಾಸ್ತ್ವತ್ಸಮಾ ನಿತ್ಯಯೌವನಾಃ ॥೫೧॥**

**ಏತಸ್ಮಿನ್ನಂತರೇ ದೇವೀ ಜಿಹ್ವಾಗ್ರಾತ್ಸಹಸಾ ತತಃ ।**
**ಆವಿರ್ಬಭೂವ ಕನ್ಯೈಕಾ ಶುಕ್ಲವರ್ಣಾ ಮನೋಹರಾ ॥೫೨॥**

---

ರಾಧಾದೇವಿಯು ನೂರು ಮನ್ವಂತರಗಳು ಕಳೆದಮೇಲೆ ಪ್ರಪಂಚಕ್ಕೆ ಆಶ್ರಯನಾದ ಶ್ರೇಷ್ಠನಾದ ಸುವರ್ಣಸಮಾನಕಾಂತಿಯಿಂದ ಕೂಡಿದ ಬಾಲಕನನ್ನು ಹೆತ್ತಳು. ದೇವಿಯು ಭಯಂಕರವಾದ ಆ ದೊಡ್ಡ ಬಾಲಕನನ್ನು ನೋಡಿ ಮನದಲ್ಲಿ ನಡುಗಿದಳು. ಆಮೇಲೆ ಸುಕುಮಾರನಾದ ಬಾಲಕನಾಗಲಿಲ್ಲವಲ್ಲ ಎಂಬ ಕೋಪದಿಂದ ಬ್ರಹ್ಮಾಂಡಗೋಲದಲ್ಲಿರುವ ನೀರಿನಲ್ಲಿ ಆ ಬಾಲಕನನ್ನು ಹಾಕಿಬಿಟ್ಟಳು. ||೪೭-೪೮||

ಕೃಷ್ಣನು ಆ ಬಾಲಕನನ್ನು ನೀರಿಗೆ ಹಾಕಿದುದನ್ನು ನೋಡಿ ಹಾಹಾಕಾರ ಮಾಡುತ್ತಾ ಆ ಕ್ಷಣವೇ ರಾಧೆಗೆ ಶಾಪವನ್ನು ಕೊಟ್ಟನು. ||೪೯||

ಎಲೈ ಕ್ರೂರವಾದ ಕೋಪವುಳ್ಳವಳೇ, ನೀನು ಮಗನನ್ನು ಬಿಸಾಡಿದುದರಿಂದ ಇಲ್ಲಿಂದ ಮುಂದೆ ನಿನಗೆ ಮಕ್ಕಳಾಗದಿರಲಿ. ನಿನ್ನಂಶದಿಂದ ಯಾವ ಯಾವ ದೇವಸ್ತ್ರೀಯರು ಹುಟ್ಟುವರೋ ಅವರೆಲ್ಲರೂ ನಿನ್ನ ಸಮಾನರಾಗಿ ಯೌವನವತಿಯರಾದರೂ ಅವರಿಗೂ ಮಕ್ಕಳಾಗದೇ ಹೋಗಲಿ. ಎಂದು ಶಪಿಸಿದನು. ||೫೦-೫೧||

ಈ ಸಂದರ್ಭದಲ್ಲಿ ಕೃಷ್ಣಪತ್ನಿಯಾದ ರಾಧಾದೇವಿಯ ನಾಲಿಗೆಯ ತುದಿಯಿಂದ ಬೆಳ್ಳಗಿರುವ, ಮನೋಹರಳಾದ, ಬಿಳಿಯ ವಸ್ತ್ರವನ್ನೂ ವೀಣೆಯನ್ನೂ

ಶ್ವೇತವಸ್ತ್ರಪರೀಧಾನಾ ವೀಣಾಪುಸ್ತಕಧಾರಿಣೀ ।
ರತ್ನಭೂಷಣಭೂಷಾಢ್ಯಾ ಸರ್ವಶಾಸ್ತ್ರಾಧಿದೇವತಾ ॥೫೩॥

ಅಥ ಕಾಲಾಂತರೇ ಸಾ ಚ ದ್ವಿಧಾರೂಪಾ ಬಭೂವ ಹ ।
ವಾಮಾರ್ಧಾಂಗಾಚ್ಚ ಕಮಲಾ ದಕ್ಷಿಣಾರ್ಧಾಚ್ಚ ರಾಧಿಕಾ ॥೫೪॥

ಏತಸ್ಮಿನ್ನಂತರೇ ಕೃಷ್ಣೋ ದ್ವಿಧಾ ರೂಪೋ ಬಭೂವ ಸಃ ।
ದಕ್ಷಿಣಾರ್ಧಶ್ಚ ದ್ವಿಭುಜೋ ವಾಮಾರ್ಧಶ್ಚ ಚತುರ್ಭುಜಃ ॥೫೫॥

ಉವಾಚ ವಾಣೀಂ ಕೃಷ್ಣಸ್ತಾಂ ತ್ವಮಸ್ಯ ಕಾಮಿನೀ ಭವ ।
ಅತ್ರೈವ ಮಾನಿನೀ ರಾಧಾ ತವ ಭದ್ರಂ ಭವಿಷ್ಯತಿ ॥೫೬॥

ಏವಂ ಲಕ್ಷ್ಮೀಂ ಚ ಪ್ರದದೌ ತುಷ್ಟೋ ನಾರಾಯಣಾಯ ಚ ।
ಸ ಜಗಾಮ ಚ ವೈಕುಂಠೇ ತಾಭ್ಯಾಂ ಸಾರ್ಧಂ ಜಗತ್ಪತಿಃ ॥೫೭॥

---

ಪುಸ್ತಕವನ್ನೂ ಧರಿಸಿ ರತ್ನಾಭರಣಗಳಿಂದ ಅಲಂಕರಿಸಿಕೊಂಡಿರುವ, ಸಮಸ್ತ ಶಾಸ್ತ್ರಗಳಿಗೂ ಅಧಿದೇವತೆಯೂ ಆದ ಕನ್ಯೆಯೊಬ್ಬಳು ಅವತರಿಸಿದಳು. ||೫೨-೫೩||

ಆಮೇಲೆ ಕೆಲವು ಕಾಲದಮೇಲೆ ಕೃಷ್ಣಪತ್ನಿಯು ತನ್ನ ಎಡಭಾಗದ ಅರ್ಧ ಶರೀರದಿಂದ ಲಕ್ಷ್ಮಿಯಾಗಿಯೂ ಬಲಭಾಗದ ಅರ್ಧಶರೀರದಿಂದ ರಾಧೆಯಾಗಿಯೂ ಎರಡು ರೂಪಾದಳು. ||೫೪||

ಈ ಸಮಯದಲ್ಲಿ ಕೃಷ್ಣನೂ ತನ್ನ ಎಡಭಾಗದ ಅರ್ಧದಿಂದ ನಾಲ್ಕು ಭುಜವುಳ್ಳವನೂ ಬಲಭಾಗದ ಅರ್ಧದಿಂದ ಎರಡು ತೋಳುಳ್ಳವನೂ ಆಗಿ ಎರಡು ರೂಪಾದನು. ||೫೫||

ರಾಧಾದೇವಿಯ ನಾಲಿಗೆಯ ತುದಿಯಲ್ಲಿ ಹುಟ್ಟಿದ ಸರಸ್ವತಿಯನ್ನು ಕುರಿತು, ದ್ವಿಭುಜ ಕೃಷ್ಣನು ನೀನು ಈ ಚತುರ್ಭುಜನಾದ ನಾರಾಯಣನಿಗೆ ಪತ್ನಿಯಾಗು ರಾಧೆಯು ಕೋಪಸ್ವಭಾವವುಳ್ಳವಳಾದುದರಿಂದ ನನ್ನಲ್ಲಿಯೇ ಇರಲಿ. ಇದರಿಂದ ನಿನಗೆ ಮಂಗಳವಾಗುವುದು ಎಂದನು. ||೫೬||

ಹೀಗೆ ಹೇಳಿ ಸಂತೋಷದಿಂದ ಲಕ್ಷ್ಮಿಯನ್ನೂ ಕೂಡ ನಾರಾಯಣನಿಗೆ ಕೊಟ್ಟನು. ಆ ನಾರಾಯಣನು ಅವರಿಬ್ಬರೊಡನೆ ವೈಕುಂಠಕ್ಕೆ ಹೊರಟನು. ||೫೭||

ಅನಪತ್ಯೇ ಚ ತೇ ದ್ವೇ ಚ ಜಾತೇ ರಾಧಾಂಶ ಸಂಭವೇ ।
ಭೂತಾ ನಾರಾಯಣಾಂಗಾಚ್ಚ ಪಾರ್ಷದಾಶ್ಚ ಚತುರ್ಭುಜಾಃ ॥೫೮॥

ತೇಜಸಾ ವಯಸಾ ರೂಪಗುಣಾಭ್ಯಾಂ ಚ ಸಮಾ ಹರೇಃ ।
ಬಭೂವುಃ ಕಮಲಾಂಗಾಚ್ಚ ದಾಸಕೋಟ್ಯಶ್ಚ ತತ್ಸಮಾಃ ॥೫೯॥

ಅಥ ಗೋಲೋಕನಾಥಸ್ಯ ಲೋಮ್ನಾಂ ವಿವರತೋ ಮುನೇ ।
ಭೂತಾಶ್ಚಾಸಂಖ್ಯಗೋಪಾಶ್ಚ ವಯಸಾ ತೇಜಸಾ ಸಮಾಃ ॥೬೦॥

ರೂಪೇಣ ಚ ಗುಣೇನೈವ ಬಲೇನ ವಿಕ್ರಮೇಣ ಚ ।
ಪ್ರಾಣತುಲ್ಯಪ್ರಿಯಾಃ ಸರ್ವೇ ಬಭೂವುಃ ಪಾರ್ಷದಾ ವಿಭೋಃ॥೬೧॥

ರಾಧಾಂಗಲೋಮಕೂಪೇಭ್ಯೋ ಬಭೂವುರ್ಗೋಪಕನ್ಯಕಾಃ ।
ರಾಧಾತುಲ್ಯಾಶ್ಚ ತಾಸ್ಸರ್ವಾ ರಾಧಾದಾಸ್ಯಃ ಪ್ರಿಯಂವದಾಃ ॥೬೨॥

ರತ್ನಭೂಷಣಭೂಷಾಢ್ಯಾಃ ಶಶ್ವತ್ಸುಸ್ಥಿರಯೌವನಾಃ ।
ಅನಪತ್ಯಾಶ್ಚ ತಾಃ ಸರ್ವಾಃ ಪುಂಸಃ ಶಾಪೇನ ಸಂತತಂ ॥೬೩॥

---

ಆ ಸರಸ್ವತೀ ಲಕ್ಷ್ಮಿಯರಿಬ್ಬರೂ ರಾಧಾಂಶದಿಂದ ಹುಟ್ಟಿದವರಾದುದರಿಂದ ಕೃಷ್ಣನ ಶಾಪದಿಂದ ಮಕ್ಕಳಿಲ್ಲದವರಾದರು. ಆ ಮೇಲೆ ನಾರಾಯಣನ ಅವಯವದಿಂದ ಅವನಿಗೆ ಸಮಾನವಾದ ವಯಸ್ಸು, ರೂಪ, ಗುಣಗಳಿಂದ ಕೂಡಿದ ನಾಲ್ಕು ತೋಳುಗಳುಳ್ಳ ಸೇವಕರು ಹುಟ್ಟಿದರು. ಲಕ್ಷ್ಮಿಯ ಅವಯವಗಳಿಂದ ಅವಳಿಗೆ ಸಮಾನರಾದ ಅನೇಕ ಜನ ದಾಸಿಯರು ಹುಟ್ಟಿದರು. ॥೫೮-೫೯॥

ನಾರದನೇ, ಆಮೇಲೆ ಗೋಲೋಕಕ್ಕೆ ಒಡೆಯನಾದ ಕೃಷ್ಣನ ರೋಮಕೂಪಗಳಿಂದ ಆ ಕೃಷ್ಣನ ವಯಸ್ಸಿಗೂ ತೇಜಸ್ಸಿಗೂ ಸಮಾನರಾದ ರೂಪ, ಗುಣ, ಬಲ, ಪರಾಕ್ರಮಗಳಿಂದ ಕೂಡಿದ ಪ್ರಾಣಪ್ರಿಯರಾದ ಲೆಕ್ಕವಿಲ್ಲದಷ್ಟು ಜನ ಗೋಪರು ಹುಟ್ಟಿ ಆ ಕೃಷ್ಣನಿಗೆ ಸೇವಕರಾದರು. ॥೬೦-೬೧॥

ರಾಧೆಯ ಅವಯವಗಳ ರೋಮಕೂಪಗಳಿಂದ ಅವಳಿಗೆ ಸಮಾನರಾದ ರತ್ನಾಭರಣಗಳನ್ನು ಧರಿಸಿರುವ ಯೌವನವತಿಯರಾದ ಗೋಪಕನ್ಯೆಯರು ಹುಟ್ಟಿದರು. ಅವರೆಲ್ಲರೂ ರಾಧೆಯ ದಾಸಿಯರಾಗಿ ಕೃಷ್ಣನ ಶಾಪದಿಂದ ಮಕ್ಕಳಿಲ್ಲದವರಾಗಿದ್ದರು. ॥೬೨-೬೩॥

ಏತಸ್ಮಿನ್ನಂತರೇ ವಿಪ್ರ ಸಹಸಾ ಕೃಷ್ಣದೇವತಾ ।
ಆವಿರ್ಬಭೂವ ದುರ್ಗಾ ಸಾ ವಿಷ್ಣುಮಾಯಾ ಸನಾತನೀ ॥೬೪॥

ದೇವೀ ನಾರಾಯಣೀ ಶಾಂತಾ ಸರ್ವಶಕ್ತಿಸ್ವರೂಪಿಣೀ ।
ಬುದ್ಧ್ಯಧಿಷ್ಠಾತ್ರೀ ದೇವೀ ಸಾ ಕೃಷ್ಣಸ್ಯ ಪರಮಾತ್ಮನಃ ॥೬೫॥

ದೇವೀನಾಂ ಬೀಜರೂಪಾ ಚ ಮೂಲಪ್ರಕೃತಿರೀಶ್ವರೀ ।
ಪರಿಪೂರ್ಣತಮಾ ತೇಜಃ ಸ್ವರೂಪಾ ತ್ರಿಗುಣಾತ್ಮಿಕಾ ॥೬೬॥

ತಪ್ತಕಾಂಚನವರ್ಣಾಭಾ ಕೋಟಿಸೂರ್ಯಸಮಪ್ರಭಾ ।
ಈಷದ್ಧಾಸ್ಯಪ್ರಸನ್ನಾಸ್ಯಾ ಸಹಸ್ರಭುಜ ಸಂಯುತಾ ॥೬೭॥

ನಾನಾಶಸ್ತ್ರಾಸ್ತ್ರನಿಕರಂ ಬಿಭ್ರತೀ ಸಾ ತ್ರಿಲೋಚನಾ ।
ವಹ್ನಿಶುದ್ಧಾಂಶುಕಾಧಾನ ರತ್ನಭೂಷಣಭೂಷಿತಾ ॥೬೮॥

---

ಹೀಗೆ ರಾಧಾಕೃಷ್ಣರ ಶರೀರವಿಭಾಗಸಮಯದಲ್ಲಿ ಪರಮಾತ್ಮನ ಮಾಯಾ ಶಕ್ತಿಯು ದುರ್ಗಾದೇವಿಯಾಗಿ ಅವತಾರಮಾಡಿದಳು. ಈ ದುರ್ಗಾದೇವಿಯು ಲಕ್ಷ್ಮೀಸರಸ್ವತಿಯರಂತೆ ರಾಧಾವತಾರವಾದರೂ ಮೂಲಪ್ರಕೃತಿಯ ಪೂರ್ಣಾವ ತಾರವೇ. ॥೬೪॥

ದುರ್ಗಾದೇವಿಯು ಲಕ್ಷ್ಮೀಸ್ವರೂಪಳು. ಪರಮಾತ್ಮನ ಅಂತಃಕರಣಕ್ಕೆ ಆಶ್ರಯಸ್ವರೂಪಳು. ಆದುದರಿಂದ ಸಮಷ್ಟಿವ್ಯಷ್ಟಿ ಅಂತಃಕರಣಗಳಿಗೆ ದುರ್ಗಾ ದೇವಿಯೇ ಆಧಾರವಾದವಳೆಂದು ತಿಳಿಯಬೇಕು. ॥೬೫॥

ಮೂಲಪ್ರಕೃತಿಯು ಅವತಾರವಾದ ದುರ್ಗಾದೇವಿಯು ಸಮಸ್ತ ಶಕ್ತಿದೇವಿ ಯರಿಗೂ ಕಾರಣಳಾದವಳು. ಸಂಪೂರ್ಣ ತೇಜೋರೂಪಳು. ಸತ್ವರಜಸ್ತಮೋ ಗುಣಸ್ವರೂಪಳು. ॥೬೬॥

ಆ ದೇವಿಯು ಪುಟವಿಟ್ಟ ಚಿನ್ನದಂತೆ ಬೈಬಣ್ಣವುಳ್ಳವಳು. ಅನೇಕ ಸೂರ್ಯ ರಿಗೆ ಸಮಾನವಾದ ಕಾಂತಿಯುಳ್ಳವಳು. ನಗುಮುಖದಿಂದಲೂ ಸಾವಿರ ತೋಳು ಗಳಲ್ಲಿ ಬಗೆಬಗೆಯ ಆಯುಧಗಳಿಂದಲೂ ಕೂಡಿ ಮೂರು ಕಣ್ಣುಳ್ಳವಳಾಗಿ ಶುದ್ಧ ವಾದ ವಸ್ತ್ರವನ್ನುಟ್ಟು ರತ್ನಾಭರಣಗಳನ್ನು ಧರಿಸಿರುವಳು. ॥೬೭-೬೮॥

ಯಸ್ಯಾಶ್ಚಾಂಶಾಂಶಕಲಯಾ ಬಭೂವುಸ್ಸರ್ವಯೋಷಿತಃ ।
ಸರ್ವೇ ವಿಶ್ವಸ್ಥಿತಾ ಲೋಕಾ ಮೋಹಿತಾಃ ಸ್ಯುಶ್ಚ ಮಾಯಯಾ ॥೬೯॥

ಸರ್ವೈಶ್ವರ್ಯಪ್ರದಾತ್ರೀ ಚ ಕಾಮಿನಾಂ ಗೃಹವಾಸಿನಾಂ ।
ಕೃಷ್ಣಭಕ್ತಿಪ್ರದಾ ಯಾ ಚ ವೈಷ್ಣವಾನಾಂ ಚ ವೈಷ್ಣವೀ ॥೭೦॥

ಮುಮುಕ್ಷೂಣಾಂ ಮೋಕ್ಷದಾತ್ರೀ ಸುಖಿನಾಂ ಸುಖದಾಯಿನೀ ।
ಸ್ವರ್ಗೇಷು ಸ್ವರ್ಗಲಕ್ಷ್ಮೀಶ್ಚ ಗೃಹಲಕ್ಷ್ಮೀರ್ಗೃಹೇಷು ಚ ॥೭೧॥

ತಪಸ್ವಿಷು ತಪಸ್ಯಾ ಚ ಶ್ರೀರೂಪಾ ತು ನೃಪೇಷು ಚ ।
ಯಾ ವಹ್ನೌ ದಾಹಿಕಾರೂಪಾ ಪ್ರಭಾರೂಪಾ ಚ ಭಾಸ್ಕರೇ ॥೭೨॥

ಶೋಭಾರೂಪಾ ಚ ಚಂದ್ರೇ ಚ ಸಾ ಪದ್ಮೇಷು ಚ ಶೋಭನಾ ।
ಸರ್ವಶಕ್ತಿಸ್ವರೂಪಾ ಯಾ ಶ್ರೀಕೃಷ್ಣೇ ಪರಮಾತ್ಮನಿ ॥೭೩॥

ಯಯಾ ಚ ಶಕ್ತಿಮಾನಾತ್ಮಾ ಯಯಾ ಚ ಶಕ್ತಿಮಜ್ಜಗತ್ ।
ಯಯಾ ವಿನಾ ಜಗತ್ಸರ್ವಂ ಜೀವನ್ಮೃತಮಿವ ಸ್ಥಿತಂ ॥೭೪॥

---

ಯಾವ ದುರ್ಗಾದೇವಿಯ ಕಲಾಂಶದಿಂದ ಸಮಸ್ತ ಸ್ತ್ರೀಯರು ಉತ್ಪನ್ನರಾಗಿ ಲೋಕವನ್ನೇ ಮಾಯೆಯಿಂದ ಮೋಹಗೊಳಿಸುತ್ತಿರುವರೋ, ಆ ದೇವಿಯು ಕಾಮಿಗಳಿಗೂ ಗೃಹಸ್ಥರಿಗೂ ಸಮಸ್ತ ಸಂಪತ್ತನ್ನೂ ಕೊಡುವಳು. ವೈಷ್ಣವರಿಗೆ ಕೃಷ್ಣನಲ್ಲಿ ಭಕ್ತಿಯನ್ನುಂಟುಮಾಡುವಳು. ತಾನೂ ಲಕ್ಷ್ಮೀಸ್ವರೂಪಳಾಗಿರುವಳು.||೬೯-೭೦||

ಆ ದೇವಿಯೇ ಮೋಕ್ಷಾಪೇಕ್ಷೆಯುಳ್ಳವರಿಗೆ ಮೋಕ್ಷವನ್ನೂ ಸುಖಾಪೇಕ್ಷೆಯುಳ್ಳವರಿಗೆ ಸುಖವನ್ನೂ ಕೊಡುವಳು. ಸ್ವರ್ಗದಲ್ಲಿ ಸ್ವರ್ಗಲಕ್ಷ್ಮಿಯಾಗಿ, ಸ್ವರ್ಗಸುಖರೂಪಳಾಗಿಯೂ ಮನೆಯಲ್ಲಿ ಗೃಹಲಕ್ಷ್ಮಿಯಾಗಿಯೂ, ಇರುವಳು. ತಪಸ್ಸುಮಾಡುವವರಲ್ಲಿ ತಪಸ್ಸಿನ ಸ್ವರೂಪಳು. ಮತ್ತು ರಾಜರಲ್ಲಿ ಸಂಪತ್ತಿನ ಸ್ವರೂಪಳು. ||೭೧||

ಅಗ್ನಿಯಲ್ಲಿ ಸುಡುವ ಶಕ್ತಿಯು, ಸೂರ್ಯನಲ್ಲಿ ತೇಜಸ್ಸಿನ ಶಕ್ತಿಯು, ಚಂದ್ರನಲ್ಲಿ ಕಾಂತಿಶಕ್ತಿಯು, ಕಮಲದಲ್ಲಿ ಸೌಂದರ್ಯಶಕ್ತಿಯು, ಇವೆಲ್ಲವೂ ಆ ದೇವಿಯೇ. ಪರಮಾತ್ಮನಾದ ಶ್ರೀಕೃಷ್ಣನಲ್ಲಿ ಸಮಸ್ತ ಶಕ್ತಿಸ್ವರೂಪಳು. ||೭೨-೭೩||

ಆ ದೇವಿಯಿಂದಲೇ ಜೀವಾತ್ಮನಿಗೂ ಪ್ರಪಂಚಕ್ಕೂ ಶಕ್ತಿಯುಂಟಾಗಿರುವುದು. ಆ ಶಕ್ತಿ ಇಲ್ಲದಿದ್ದರೆ ಸಮಸ್ತ ಜಗತ್ತು ಬದುಕಿದ್ದರೂ ಸತ್ತಂತೆಯೇ ಆಗುವುದು. ||೭೪||

**ಯಾ ಚ ಸಂಸಾರವೃಕ್ಷಸ್ಯ ಬೀಜರೂಪಾ ಸನಾತನೀ ।**
**ಸ್ಥಿತಿರೂಪಾ ಬುದ್ಧಿರೂಪಾ ಫಲರೂಪಾ ಚ ನಾರದ ॥೭೫॥**

**ಕ್ಷುತ್ಪಿಪಾಸಾ ದಯಾರೂಪಾ ನಿದ್ರಾತಂದ್ರಾಕ್ಷಮಾಧೃತಿಃ ।**
**ಶಾಂತಿಲಜ್ಜಾತುಷ್ಟಿಪುಷ್ಟಿಭ್ರಾಂತಿಕಾಂತ್ಯಾದಿರೂಪಿಣೀ ॥೭೬॥**

**ಸಾ ಚ ಸಂಸ್ತೂಯ ಸರ್ವೇಶಂ ತತ್ಪುರಃ ಸಮುವಾಸ ಹ ।**
**ರತ್ನಸಿಂಹಾಸನಂ ತಸ್ಯೈ ಪ್ರದದೌ ರಾಧಿಕೇಶ್ವರಃ ॥೭೭॥**

**ಏತಸ್ಮಿನ್ನಂತರೇ ತತ್ರ ಸಸ್ತ್ರೀಕಶ್ಚ ಚತುರ್ಮುಖಃ ।**
**ಪದ್ಮನಾಭೇರ್ನಾಭಿಪದ್ಮಾನ್ನಿಸ್ಸಸಾರ ಮಹಾಮುನೇ ॥೭೮॥**

**ಕಮಂಡಲುಧರಃ ಶ್ರೀಮಾಂಸ್ತಪಸ್ವೀ ಜ್ಞಾನಿನಾಂ ವರಃ ।**
**ಚತುರ್ಮುಖೈಸ್ತಂ ತುಷ್ಟಾವ ಪ್ರಜ್ವಲನ್ಬ್ರಹ್ಮತೇಜಸಾ ॥೭೯॥**

---

ಅನಾದಿಯಾದ ಆ ದೇವಿಯೇ ಹುಟ್ಟುಸಾವುಗಳೆಂಬ ಸಂಸಾರವೃಕ್ಷಕ್ಕೆ ಕಾರಣಳಾದವಳು. ನಾರದನೇ! ಜೀವನ, ಬುದ್ಧಿ, ಕರ್ಮಫಲ, ಹಸಿವು, ಬಾಯಾರಿಕೆ, ದಯೆ, ನಿದ್ದೆ, ತೂಕಡಿಕೆ, ಕ್ಷಮೆ, ಧೈರ್ಯ, ಶಾಂತಿ, ನಾಚಿಕೆ, ತೃಪ್ತಿ, ಪುಷ್ಟಿ, ಭ್ರಮೆ, ಕಾಂತಿ ಈ ರೂಪಗಳಿಂದಲೂ ಆ ದೇವಿಯೇ ಕಾಣುವಳು. ||೭೫-೭೬||

ಆ ದುರ್ಗಾದೇವಿಯು ಮೂಲಪ್ರಕೃತಿಯ ಪೂರ್ಣಾವತಾರನೂ ತನಗಿಂತಲೂ ಮುಂಚಿತವಾಗಿ ಅವತಾರಮಾಡಿದವನೂ ವಯಸ್ಸಿನಿಂದ ದೊಡ್ಡವನೂ ಆದ ಶ್ರೀಕೃಷ್ಣನನ್ನು ಸ್ತೋತ್ರಮಾಡಿ ಅವನೆದುರಿಗೆ ನಿಂತಳು. ರಾಧಾಪತಿಯಾದ ಶ್ರೀಕೃಷ್ಣನು ಆ ದುರ್ಗಾದೇವಿಗೆ ರತ್ನಸಿಂಹಾಸನವನ್ನು ಕೊಟ್ಟನು. ||೭೭||

ಈ ಸಮಯದಲ್ಲಿಯೇ ಅಲ್ಲಿ ಚತುರ್ಮುಖಬ್ರಹ್ಮನು ನಾರಾಯಣನ ನಾಭಿಕಮಲದಿಂದ ಸಾವಿತ್ರೀ ಎಂಬ ಸ್ತ್ರೀಯೊಡನೆ ಹುಟ್ಟಿದನು. ||೭೮||

ಆ ಚತುರ್ಮುಖನು ಕಮಂಡಲುವನ್ನು ಹಿಡಿದು ಜ್ಞಾನಿಗಳಲ್ಲಿ ಶ್ರೇಷ್ಠನಾಗಿ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಾ ತನ್ನ ನಾಲ್ಕು ಮುಖಗಳಿಂದಲೂ ತನಗಿಂತಲೂ ದೊಡ್ಡವನಾದ ಶ್ರೀಕೃಷ್ಣನನ್ನು ಸ್ತೋತ್ರಮಾಡಿದನು. ||೭೯||

ಸಾ ತದಾ ಸುಂದರೀ ಸೃಷ್ಟಾ ಶತಚಂದ್ರಸಮಪ್ರಭಾ ।
ವಹ್ನಿಶುದ್ಧಾಂಶುಕಾಧಾನಾ ರತ್ನಭೂಷಣಭೂಷಣಾ ॥೮೦॥

ರತ್ನಸಿಂಹಾಸನೇ ರಮ್ಯೇ ಸಂಸ್ತೂಯ ಸರ್ವಕಾರಣಂ ।
ಉವಾಸ ಸ್ವಾಮಿನಾ ಸಾರ್ಧಂ ಕೃಷ್ಣಸ್ಯ ಪುರತೋ ಮುದಾ ॥೮೧॥

ಏತಸ್ಮಿನ್ನಂತರೇ ಕೃಷ್ಣೋ ದ್ವಿಧಾ ರೂಪೋ ಬಭೂವ ಸಃ ।
ವಾಮಾರ್ಧಾಂಗೋ ಮಹಾದೇವೋ ದಕ್ಷಿಣೇ ಗೋಪಿಕಾಪತಿಃ॥೮೨॥

ಶುದ್ಧಸ್ಫಟಿಕಸಂಕಾಶಃ ಶತಕೋಟಿರವಿಪ್ರಭಃ ।
ತ್ರಿಶೂಲಪಟ್ಟಿಶಧರೋ ವ್ಯಾಘ್ರಚರ್ಮಾಂಬರೋ ಹರಃ ॥೮೩॥

ತಪ್ತಕಾಂಚನವರ್ಣಾಭೋ ಜಟಾಭಾರಧರಃ ಪರಃ ।
ಭಸ್ಮಭೂಷಿತಗಾತ್ರಶ್ಚ ಸಸ್ಮಿತಶ್ಚಂದ್ರಶೇಖರಃ ॥೮೪॥

ದಿಗಂಬರೋ ನೀಲಕಂಠಃ ಸರ್ಪಭೂಷಣಭೂಷಿತಃ ।
ಬಿಭ್ರದ್ದಕ್ಷಿಣಹಸ್ತೇನ ರತ್ನಮಾಲಾಂ ಸುಸಂಸ್ಕೃತಾಂ ॥೮೫॥

---

ಅದೇ ಕಾಲದಲ್ಲಿ ಹುಟ್ಟಿದ ಸಾವಿತ್ರೀದೇವಿಯು ಅನೇಕಚಂದ್ರರ ಸಮಾನ ಕಾಂತಿಯಿಂದ ಕೂಡಿ ಶುದ್ಧವಾದ ವಸ್ತ್ರವನ್ನೂ ರತ್ನಾಭರಣಗಳನ್ನೂ ಧರಿಸಿ ಸಮಸ್ತಕ್ಕೂ ಕಾರಣನಾದ ಪರಮಾತ್ಮನನ್ನು ಸ್ತೋತ್ರಮಾಡಿ ತನ್ನ ಪತಿಯಾದ ಬ್ರಹ್ಮನೊಡನೆ ಕೃಷ್ಣನ ಮುಂಭಾಗದಲ್ಲಿರುವ ರತ್ನಸಿಂಹಾಸನದಲ್ಲಿ ಕುಳಿತುಕೊಂಡಳು. ॥೮೦-೮೧॥

ಈ ಸಮಯದಲ್ಲಿ ಕೃಷ್ಣನು ತನ್ನ ಎಡಭಾಗದ ಅರ್ಧ ಶರೀರದಿಂದ ಈಶ್ವರನಾಗಿಯೂ ಬಲಭಾಗದಿಂದ ಗೋಪಿಕಾಪತಿಯಾದ ಕೃಷ್ಣನಾಗಿಯೂ ಎರಡು ರೂಪವಾಗಿ ಕಾಣಿಸಿಕೊಂಡನು. ॥೮೨॥

ಈಶ್ವರನು ಶುದ್ಧವಾದ ಸ್ಫಟಿಕಮಣಿಯಂತೆಯೂ ಅನೇಕ ಸೂರ್ಯರ ಕಾಂತಿಯಂತೆಯೂ ಪ್ರಕಾಶಿಸುತ್ತಾ, ತ್ರಿಶೂಲ, ಪಟ್ಟಿಶ, ಎಂಬ ಆಯುಧಗಳನ್ನೂ, ಚರ್ಮದ ಹೊದಿಕೆಯನ್ನೂ ಧರಿಸಿ, ಚಂದ್ರನಿಂದ ಅಲಂಕರಿಸಿಕೊಂಡು, ಮೈಬಣ್ಣವು ಪುಟವಿಟ್ಟ ಚಿನ್ನದಂತಿರಲು, ತಲೆಯಲ್ಲಿ ಜಟೆಯನ್ನು ಧರಿಸಿ, ಮೈಗೆಲ್ಲಕ್ಕೂ ಬೂದಿಯನ್ನು ಬಳಿದುಕೊಂಡು ಸರ್ಪಗಳ ಆಭರಣಗಳನ್ನಿಟ್ಟುಕೊಂಡು, ದಿಗಂಬರನೂ ನೀಲಕಂಠನೂ

ಪ್ರಜಪನ್ಪಂಚವಕ್ತ್ರೇಣ ಬ್ರಹ್ಮಜ್ಯೋತಿಃ ಸನಾತನಂ ।
ಸತ್ಯಸ್ಯ ರೂಪಂ ಶ್ರೀಕೃಷ್ಣಂ ಪರಮಾತ್ಮಾನಮೀಶ್ವರಂ ॥೮೬॥

ಕಾರಣಂ ಕಾರಣಾನಾಂ ಚ ಸರ್ವಮಂಗಲಮಂಗಲಂ ।
ಜನ್ಮಮೃತ್ಯುಜರಾವ್ಯಾಧಿಶೋಕಭೀತಿಹರಂ ಪರಂ ॥೮೭॥

ಸಂಸ್ತೂಯ ಮೃತ್ಯೋರ್ಮೃತ್ಯುಂ ತಂ ಯತೋ ಮೃತ್ಯುಂಜಯಾಭಿಧಃ ।
ರತ್ನಸಿಂಹಾಸನೇ ರಮ್ಯೇ ಸಮುವಾಸ ಹರಃ ಪುರಃ ॥೮೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ದ್ವಿತೀಯೋऽಧ್ಯಾಯಃ.

---

ಆಗಿ, ಬಲಗೈಯಲ್ಲಿ ಸಂಸ್ಕಾರವಿಧಿಯಿಂದ ಪರಿಶುದ್ಧಿಮಾಡಿದ ರತ್ನದ ಜಪಮಾಲೆಯನ್ನು ಹಿಡಿದುಕೊಂಡು, ನಗುಮುಖದಿಂದ ಪ್ರಕಾಶಿಸಿದನು. ||೮೩-೮೪-೮೫||

ಈಶ್ವರನು ತನ್ನ ಐದು ಮುಖಗಳಿಂದ ಅನಾದಿಯಾದ ಮಾಯೆಯಿಂದ ಕೂಡಿದ ಸಮಸ್ತಕ್ಕೂ ಕಾರಣವಾದ ಮೂಲಪ್ರಕೃತಿರೂಪವಾದ ಹುಟ್ಟು, ಸಾವು, ಮುಪ್ಪು, ರೋಗ, ದುಃಖ, ಭಯ ಇವುಗಳನ್ನು ನಾಶಮಾಡುವ ಮಂಗಳಕರವಾದ ಪ್ರಣವಮಾಯಾಬೀಜರೂಪವಾದ ಮಂತ್ರಗಳನ್ನು ಜಪಮಾಡುತ್ತಾ ಸತ್ಯರೂಪನಾದ ಶ್ರೀಕೃಷ್ಣನನ್ನು ಸ್ತೋತ್ರಮಾಡಿ, ||೮೬-೮೭||

ಯಮನಿಗೂ ಯಮನಂತಿರುವ ಪರಮಾತ್ಮನಾದ ಶ್ರೀಕೃಷ್ಣನನ್ನು ಧ್ಯಾನಮಾಡಿ, ತಾನೂ ಆ ಕೃಷ್ಣನೂ ಅಭಿನ್ನರಾದುದರಿಂದ ಮೃತ್ಯುಂಜಯನೆಂಬ ಹೆಸರನ್ನು ಹೊಂದಿ, ಮನೋಹರವಾದ ರತ್ನದ ಸಿಂಹಾಸನದಲ್ಲಿ ಆ ಕೃಷ್ಣನೆದುರಿಗೇ ಸುಖವಾಗಿ ಕುಳಿತಿದ್ದನು. ಆಗ ಶ್ರೀಕೃಷ್ಣನು ದುರ್ಗಾದೇವಿಯನ್ನು ಆ ಮೃತ್ಯುಂಜಯನಾದ ಮಹಾದೇವನಿಗೆ ಪತ್ನಿಯಾಗಿರಲು ಕೊಟ್ಟನೆಂಬ ಅಂಶವನ್ನು ಇಲ್ಲಿ ಹೇಳದಿದ್ದರೂ " ನಾರದಪುರಾಣದಲ್ಲಿ " ಹೇಳಿರುವುದನ್ನು ಅಂಗೀಕರಿಸಬೇಕು. ||೮೮||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ತೃತೀಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಅಥ ಡಿಂಭೋ ಜಲೇ ತಿಷ್ಠನ್ಯಾವದ್ವೈ ಬ್ರಹ್ಮಣೋ ವಯಃ ।**
**ತತಃ ಸಕಾಲೇ ಸಹಸಾ ದ್ವಿಧಾ ಭೂತೋ ಬಭೂವ ಹ ॥೧॥**

**ತನ್ಮಧ್ಯೇ ಶಿಶುರೇಕಶ್ಚ ಶತಕೋಟಿರವಿಪ್ರಭಃ ।**
**ಕ್ಷಣಂ ರೋರೂಯಮಾಣಶ್ಚ ಸ್ತನಾಂಧಃ ಪೀಡಿತಃ ಕ್ಷುಧಾ ॥೨॥**

**ಪಿತ್ರಾ ಮಾತ್ರಾ ಪರಿತ್ಯಕ್ತೋ ಜಲಮಧ್ಯೇ ನಿರಾಶ್ರಯಃ ।**
**ಬ್ರಹ್ಮಾಂಡಾಸಂಖ್ಯನಾಥೋ ಯೋ ದದರ್ಶೋರ್ಧ್ವಮನಾಥವತ್ ॥೩॥**

---

ನಾರಾಯಣನು ಹೇಳಿದನು — ಹಿಂದೆ ರಾಧೆಯು ಬ್ರಹ್ಮಾಂಡದಲ್ಲಿ ಹಾಕಿದ ಬಾಲಕನು ಬ್ರಹ್ಮಮಾನದ ನೂರು ವರ್ಷದ ವರೆಗೆ ನೀರಿನಲ್ಲೇ ಇದ್ದು ಕಾಲವು ಪೂರ್ಣವಾಗಲು ಆ ಮೊಟ್ಟೆಯರೂಪವಾದ ಗರ್ಭಪಿಂಡವು ಎರಡು ಭಾಗವಾಗಲು ಅದರ ಮಧ್ಯದಲ್ಲಿ ಪುರುಷರೂಪನಾದ ಬಾಲಕನಿದ್ದನೆಂದು ಮುಂದೆ ಹೇಳುವುದು. ||೧||

ಆ ಎರಡು ಭಾಗವಾದ ಗರ್ಭಪಿಂಡದ ಮಧ್ಯದಲ್ಲಿ ಕೋಟಿಸೂರ್ಯರ ಕಾಂತಿಯಂತೆ ಪ್ರಕಾಶಮಾನವಾದ ಒಬ್ಬ ಬಾಲಕನು ಹಸಿವಿನಿಂದ ಬಾಧೆಪಡುತ್ತಾ ತಾಯಿಯು ಬಿಟ್ಟುದುದರಿಂದ ಸ್ತನ್ಯಪಾನವಿಲ್ಲದೇ ಪುನಃ ಪುನಃ ಅಳುತ್ತಿದ್ದನು. ||೨||

ತಾಯಿತಂದೆಗಳಿಂದ ಬಿಡಲ್ಪಟ್ಟವನಾಗಿ ನೀರಿನ ನಡುವೆ ಯಾವ ಆಶ್ರಯವೂ ಇಲ್ಲದೆ ತಾನು ಅನೇಕ ಬ್ರಹ್ಮಾಂಡಗಳಿಗೆ ಒಡೆಯನಾದರೂ ದಿಕ್ಕಿಲ್ಲದವನಂತೆ "ನನ್ನನ್ನು ಕಾಪಾಡುವವರಾರು ?" ಎಂದು ಮೇಲೆ ನೋಡುತ್ತಿದ್ದನು. ||೩||

ಸ್ಥೂಲಾತ್ಸ್ಥೂಲತರಃ ಸೋಽಪಿ ನಾಮ್ನಾ ದೇವೋ ಮಹಾವಿರಾಟ್ ।
ಪರಮಾಣುರ್ಯಥಾ ಸೂಕ್ಷ್ಮಾತ್ಪರಃ ಸ್ಥೂಲಾತ್ತಥಾಽಪ್ಯಸೌ ॥೪॥

ತೇಜಸಾ ಷೋಡಶಾಂಶೋಽಯಂ ಕೃಷ್ಣಸ್ಯ ಪರಮಾತ್ಮನಃ ।
ಆಧಾರಃ ಸರ್ವವಿಶ್ವಾನಾಂ ಮಹಾವಿಷ್ಣುಶ್ಚ ಪ್ರಾಕೃತಃ ॥೫॥

ಪ್ರತ್ಯೇಕಂ ಲೋಮಕೂಪೇಷು ವಿಶ್ವಾನಿ ನಿಖಿಲಾನಿ ಚ ।
ಅಸ್ಯಾಽಪಿ ತೇಷಾಂ ಸಂಖ್ಯಾಂ ಚ ಕೃಷ್ಣೋ ವಕ್ತುಂ ನ ಹಿ ಕ್ಷಮಃ॥೬॥

ಸಂಖ್ಯಾ ಚೇದ್ರಜಸಾಮಸ್ತಿ ವಿಶ್ವಾನಾಂ ನ ಕದಾಚನ ।
ಬ್ರಹ್ಮವಿಷ್ಣುಶಿವಾದೀನಾಂ ತಥಾ ಸಂಖ್ಯಾ ನ ವಿದ್ಯತೇ ॥೭॥

ಪ್ರತಿವಿಶ್ವೇಷು ಸಂತ್ಯೇವಂ ಬ್ರಹ್ಮವಿಷ್ಣುಶಿವಾದಯಃ ।
ಪಾತಾಲಾದ್ಬ್ರಹ್ಮಲೋಕಾಂತಂ ಬ್ರಹ್ಮಾಂಡಂ ಪರಿಕೀರ್ತಿತಂ ॥೮॥

---

ಸೂಕ್ಷ್ಮವಾದ ಪದಾರ್ಥಗಳಲ್ಲಿ ಪರಮಾಣುವು ಹೇಗೆ ಅತ್ಯಂತ ಸೂಕ್ಷ್ಮವಾದುದೋ ಹಾಗೇ ಈ ಬಾಲಕನು ಸ್ಥೂಲವಾದ ಸಮಸ್ತ ವಸ್ತುಗಳಿಗಿಂತಲೂ ಅತ್ಯಂತ ಸ್ಥೂಲನಾದುದರಿಂದ ಈತನನ್ನು ಮಹಾವಿರಾಟ್ ದೇವನೆಂದು ಕರೆಯುವರು. ॥೪॥

ಈ ವಿರಾಟ್‌ಪುರುಷನು ಕೃಷ್ಣನ ತೇಜಸ್ಸಿನ ಹದಿನಾರನೆಯ ಒಂದುಪಾಲುಳ್ಳವನು. ಸಮಸ್ತ ಪ್ರಪಂಚಕ್ಕೂ ಆಶ್ರಯನಾದವನು ರಾಧಾಪ್ರಕೃತಿಯಿಂದ ಹುಟ್ಟಿದವನು. ॥೫॥

ಈ ವಿರಾಟ್‌ಪುರುಷನ ಒಂದೊಂದು ರೋಮಕೂಪಗಳಲ್ಲಿಯೂ ಸಮಸ್ತ ಲೋಕಗಳಿಂದ ಕೂಡಿದ ಒಂದೊಂದು ಬ್ರಹ್ಮಾಂಡವಿರುವುದು. ಆ ಬ್ರಹ್ಮಾಂಡಗಳ ಸಂಖ್ಯೆಯನ್ನು ಕೃಷ್ಣನೂ ಕೂಡ ಹೇಳಲಾರನು. ॥೬॥

ಧೂಳಿನ ಒಂದೊಂದು ಕಣವನ್ನು ಎಣಿಸಿ ಲೆಕ್ಕವನ್ನು ಹೇಳಿದರೂ ಈ ಪ್ರಪಂಚಗಳ ಲೆಕ್ಕವನ್ನು ಹೇಳಲಾಗುವುದಿಲ್ಲ. ಹಾಗೆಯೇ ತ್ರಿಮೂರ್ತಿಗಳ ಸಂಖ್ಯೆಯನ್ನೂ ಹೇಳಲಾಗುವುದಿಲ್ಲ. ॥೭॥

ಪ್ರತಿಯೊಂದು ಬ್ರಹ್ಮಾಂಡದಲ್ಲಿಯೂ ಬ್ರಹ್ಮವಿಷ್ಣುಶಿವಾದಿ ದೇವತೆಗಳು ಇದ್ದೇ ಇರುವರು. ಪಾತಾಳದಿಂದ ಬ್ರಹ್ಮಲೋಕದ ಕೊನೆಯವರೆಗೂ ಇರುವ ಲೋಕಗಳನ್ನೆಲ್ಲವನ್ನೂ ಒಂದು ಬ್ರಹ್ಮಾಂಡವೆಂದು ಕರೆಯುವರು. ॥೮॥

ತತ ಊರ್ಧ್ವಂ ಚ ವೈಕುಂಠೋ ಬ್ರಹ್ಮಾಂಡಾದ್ಬಹಿರೇವ ಸಃ ।
ತತ ಊರ್ಧ್ವಂ ಚ ಗೋಲೋಕಃ ಪಂಚಾಶತ್ಕೋಟಿಯೋಜನಃ ॥೯॥

ನಿತ್ಯಃ ಸತ್ಯಸ್ವರೂಪಶ್ಚ ಯಥಾ ಕೃಷ್ಣಸ್ತಥಾಪ್ಯಯಂ ।
ಸಪ್ತದ್ವೀಪಮಿತಾ ಪೃಥ್ವೀ ಸಪ್ತಸಾಗರಸಂಯುತಾ ॥೧೦॥

ಊನಪಂಚಾಶದುಪದ್ವೀಪಾಸಂಖ್ಯಶೈಲವನಾನ್ವಿತಾ ।
ಊರ್ಧ್ವಂ ಸಪ್ತಸ್ವರ್ಗಲೋಕಾ ಬ್ರಹ್ಮಲೋಕಸಮನ್ವಿತಾಃ ॥೧೧॥

ಪಾತಾಲಾನಿ ಚ ಸಪ್ತಾಧಶ್ಚೈವಂ ಬ್ರಹ್ಮಾಂಡಮೇವ ಚ ।
ಊರ್ಧ್ವಂ ಧರಾಯಾ ಭೂಲೋಕೋ ಭುವರ್ಲೋಕಸ್ತತಃ ಪರಃ ॥೧೨॥

ತತಃ ಪರಶ್ಚ ಸ್ವರ್ಲೋಕೋ ಜನಲೋಕಸ್ತಥಾಪರಃ ।
ತತಃ ಪರಸ್ತಪೋಲೋಕಃ ಸತ್ಯಲೋಕಸ್ತತಃ ಪರಃ ॥೧೩॥

ತತಃ ಪರಂ ಬ್ರಹ್ಮಲೋಕಃ ತಪ್ತಕಾಂಚನಸನ್ನಿಭಃ ।
ಏವಂ ಸರ್ವಂ ಕೃತ್ರಿಮಂ ಚ ಬಾಹ್ಯಾಭ್ಯಾಂತರಮೇವ ಚ ॥೧೪॥

---

ಬ್ರಹ್ಮಾಂಡದಿಂದ ಹೊರಗೆ ಮೇಲುಭಾಗಕ್ಕೆ ವೈಕುಂಠಲೋಕವಿರುವುದು. ಅದಕ್ಕಿಂತ ಮೇಲುಭಾಗಕ್ಕೆ ಐವತ್ತುಕೋಟಿ ಯೋಜನ ವಿಸ್ತಾರವಾದ ಗೋಲೋಕ ವಿರುವುದು. ॥೯॥

ಆ ಗೋಲೋಕವು ಕೃಷ್ಣನಂತೆ ನಿತ್ಯವೂ ಸತ್ಯಸ್ವರೂಪವೂ ಆದುದು. ಆದರೆ ಪರಮಾರ್ಥ ನಿತ್ಯವಲ್ಲ. ಪ್ರಾಕೃತಪ್ರಲಯಪರ್ಯಂತವಾಗಿರುವುದರಿಂದ ನಿತ್ಯವೆಂದು ಹೇಳಿರುವುದು. ಭೂಮಿಯು ಸಪ್ತಸಮುದ್ರಗಳಿಂದಲೂ ಕೂಡಿರುವುದು. ನಲವತ್ತೊಂಭತ್ತು ಉಪದ್ವೀಪಗಳು ಅನೇಕ ಬೆಟ್ಟಗಳಿಂದ ಕೂಡಿರುವುವು. ಬ್ರಹ್ಮಲೋಕವೂ ಸೇರಿ ಭೂಮಿಯಿಂದ ಮೇಲಕ್ಕೆ ಏಳು ಸ್ವರ್ಗಲೋಕಗಳಿರುವುವು. ॥೧೦-೧೧॥

ಭೂಮಿಯಿಂದ ಕೆಳಭಾಗಕ್ಕೆ ಏಳು ಪಾತಾಳಲೋಕಗಳಿರುವುವು. ಹೀಗೆ ಹದಿನಾಲ್ಕು ಲೋಕಗಳನ್ನೂ ಬ್ರಹ್ಮಾಂಡವೆನ್ನುವರು. ಭೂಮಿಯಿಂದ ಮೇಲುಭಾಗಕ್ಕೆ ಕ್ರಮವಾಗಿ ಭೂಲೋಕ, ಭುವರ್ಲೋಕ, ಸ್ವರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ, ಬ್ರಹ್ಮಲೋಕವೆಂಬ ಲೋಕಗಳಿರುವುವು. ಇವೆಲ್ಲ ಲೋಕಗಳೂ ಒಳಗೂ ಹೊರಗೂ ಕೃತ್ರಿಮವಾದವುಗಳು ಮತ್ತು ಒಂದರೊಳಗೆ ಒಂದರಂತೆ ಇವೆ. ॥೧೨-೧೩-೧೪॥

ತದ್ವಿನಾಶೇ ವಿನಾಶಶ್ಚ ಸರ್ವೇಷಾಮೇವ ನಾರದ ।
ಜಲಬುದ್ಬುದವತ್ಸರ್ವಂ ವಿಶ್ವಸಂಘಮನಿತ್ಯಕಂ ॥೧೫॥

ನಿತ್ಯೌ ಗೋಲೋಕ ವೈಕುಂಠೌ ಪ್ರೋಕ್ತೌ ಶಶ್ವದಕೃತ್ರಿಮೌ ।
ಪ್ರತ್ಯೇಕಂ ಲೋಮಕೂಪೇಷು ಬ್ರಹ್ಮಾಂಡಂ ಪರಿನಿಶ್ಚಿತಂ ॥೧೬॥

ಏಷಾಂ ಸಂಖ್ಯಾಂ ನ ಜಾನಾತಿ ಕೃಷ್ಣೋಽನ್ಯಸ್ಯಾಪಿ ಕಾ ಕಥಾ ।
ಪ್ರತ್ಯೇಕಂ ಪ್ರತಿಬ್ರಹ್ಮಾಂಡಂ ಬ್ರಹ್ಮವಿಷ್ಣುಶಿವಾದಯಃ ॥೧೭॥

ತಿಸ್ರಃ ಕೋಟ್ಯಃ ಸುರಾಣಾಂ ಚ ಸಂಖ್ಯಾ ಸರ್ವತ್ರ ಪುತ್ರಕ ।
ದಿಗೀಶಾಶ್ಚೈವ ದಿಕ್ಪಾಲಾ ನಕ್ಷತ್ರಾಣಿ ಗ್ರಹಾದಯಃ ॥೧೮॥

ಭುವಿ ವರ್ಣಾಶ್ಚ ಚತ್ವಾರೋಽಪ್ಯಧೋ ನಾಗಾಶ್ಚರಾಚರಾಃ ।
ಅಥ ಕಾಲೇಽತ್ರ ಸ ವಿರಾಡೂರ್ಧ್ವಂ ದೃಷ್ಟ್ವಾ ಪುನಃ ಪುನಃ ॥೧೯॥

ಡಿಂಭಾಂತರೇ ಚ ಶೂನ್ಯಂ ಚ ನ ದ್ವಿತೀಯಂ ಚ ಕಿಂಚನ ।
ಚಿಂತಾಮವಾಪ ಕ್ಷುದ್ಯುಕ್ತೋ ರುರೋದ ಚ ಪುನಃ ಪುನಃ ॥೨೦॥

---

ಎಲೈ ನಾರದನೇ ! ಬ್ರಹ್ಮಾಂಡವು ನಾಶವಾದರೆ ಈ ಸಪ್ತಲೋಕಗಳೂ ನಾಶವಾಗುವುವು. ಈ ಸಮಸ್ತ ಪ್ರಪಂಚವೂ ನೀರಿನ ಗುಳ್ಳೆಯಂತೆ ಅನಿತ್ಯವಾದುದು.॥೧೫॥

ಗೋಲೋಕ ವೈಕುಂಠಗಳು ಪ್ರಕೃತಿಯ ಪ್ರಳಯಪರ್ಯಂತವಾಗಿರುವುದರಿಂದ ನಿತ್ಯವಾದವುಗಳು. ಕೃತ್ರಿಮವಾದವುಗಳಲ್ಲ. ವಿರಾಟ್ ಪುರುಷನ ಪ್ರತಿಯೊಂದು ರೋಮಕೂಪಗಳಲ್ಲಿರುವ ಬ್ರಹ್ಮಾಂಡಗಳ ಸಂಖ್ಯೆಯನ್ನು ಕೃಷ್ಣನೂ ಹೇಳಲಾರನು. ಹೀಗಿರುವಲ್ಲಿ ಮತ್ತಾರಿಗೆ ಹೇಳಲು ಸಾಧ್ಯವಾಗುವುದು. ॥೧೬॥

ಪ್ರತಿಯೊಂದು ಬ್ರಹ್ಮಾಂಡಕ್ಕೂ ಬೇರೆ ಬೇರೆಯಾಗಿ ಬ್ರಹ್ಮ ವಿಷ್ಣು ಶಿವಾದಿಗಳೂ, ಮೂರುಕೋಟಿ ದೇವತೆಗಳೂ ದಿಕ್ಕುಗಳಿಗೆ ಒಡೆಯರಾದ ದಿಕ್ಪಾಲಕರೂ, ನಕ್ಷತ್ರಗಳೂ ಗ್ರಹಗಳೂ ಭೂಮಿಯಲ್ಲಿ ಬ್ರಾಹ್ಮಣಾದಿ ನಾಲ್ಕುವರ್ಣಗಳೂ ಅಧೋಲೋಕಗಳಲ್ಲಿ ನಾಗಗಳೂ ಸಮಸ್ತ ಚರಾಚರಪ್ರಾಣಿಗಳೂ ಇರುವುವು. ॥೧೭-೧೮॥

ಕೆಲವು ಕಾಲದ ಮೇಲೆ ವಿರಾಟ್ಪುರುಷನು ಮೇಲುಭಾಗಕ್ಕೆ ಮತ್ತೆ ಮತ್ತೆ ನೋಡಿ ಎರಡು ಭಾಗವಾದ ಅಂಡದ ಮಧ್ಯದಲ್ಲಿ ಯಾವ ಪದಾರ್ಥವನ್ನೂ ಕಾಣದೆ ಹಸಿವಿನಿಂದ ಆಲೋಚಿಸುತ್ತಾ ಜ್ಞಾನಕ್ಕಾಗಿ ಮತ್ತೆ ಮತ್ತೆ ಅತ್ತನು. ॥೧೯-೨೦॥

ಜ್ಞಾನಂ ಪ್ರಾಪ್ಯ ತದಾ ದಧ್ಯೌ ಕೃಷ್ಣಂ ಪರಮಪೂರುಷಂ ।
ತತೋ ದದರ್ಶ ತತ್ರೈವ ಬ್ರಹ್ಮಜ್ಯೋತಿಃ ಸನಾತನಂ ॥೨೦॥

ನವೀನಜಲದಶ್ಯಾಮಂ ದ್ವಿಭುಜಂ ಪೀತವಾಸಸಂ ।
ಸಸ್ಮಿತಂ ಮುರಲೀಹಸ್ತಂ ಭಕ್ತಾನುಗ್ರಹಕಾತರಂ ॥೨೨॥

ಜಹಾಸ ಬಾಲಕಸ್ತುಷ್ಟೋದೃಷ್ಟ್ವಾ ಜನಕಮೀಶ್ವರಂ ।
ವರಂ ತದಾ ದದೌ ತಸ್ಮೈ ವರೇಶಃ ಸಮಯೋಚಿತಂ ॥೨೩॥

ಮತ್ಸಮೋ ಜ್ಞಾನಯುಕ್ತಶ್ಚ ಕ್ಷುತ್ಪಿಪಾಸಾದಿ ವರ್ಜಿತಃ ।
ಬ್ರಹ್ಮಾಂಡಸಂಖ್ಯನಿಲಯೋ ಭವ ವತ್ಸ ಲಯಾವಧಿ ॥೨೪॥

ನಿಷ್ಕಾಮೋ ನಿರ್ಭಯಶ್ಚೈವ ಸರ್ವೇಷಾಂ ವರದೋ ಭವ ।
ಜರಾಮೃತ್ಯುರೋಗಶೋಕಪೀಡಾದಿವರ್ಜಿತೋ ಭವ ॥೨೫॥

ಇತ್ಯುಕ್ತ್ವಾ ತಸ್ಯ ಕರ್ಣೇ ಸ ಮಹಾಮಂತ್ರಂ ಷಡಕ್ಷರಂ ।
ತ್ರಿಃ ಕೃತ್ವಶ್ಚ ಪ್ರಜಜಾಪ ವೇದಾಂಗಪ್ರವರಂ ಪರಂ ॥೨೬॥

---

ತರುವಾಯ ಪೂರ್ವಪುಣ್ಯದಿಂದ ಜ್ಞಾನವನ್ನು ಪಡೆದು ಪರಮಪುರುಷನಾದ ಅನಾದಿಯಾದವನೂ ಸ್ವಪ್ರಕಾಶಸ್ವರೂಪನೂ ಆದ ಶ್ರೀಕೃಷ್ಣನನ್ನು ಧ್ಯಾನಮಾಡಿದನು. ಆಮೇಲೆ ಹೊಸದಾಗಿ ಹುಟ್ಟಿದ ಮೇಘದಂತೆ ನೀಲೀಬಣ್ಣದಿಂದ ಕೂಡಿದ, ಎರಡು ತೋಳುಗಳೂ ಪೀತಾಂಬರವೂ ಉಳ್ಳ, ಕೊಳಲನ್ನು ಕೈಯಲ್ಲಿ ಹಿಡಿದುಕೊಂಡು ನಗುತ್ತಾ ಭಕ್ತರಿಗೆ ಅನುಗ್ರಹವನ್ನು ಮಾಡುವ ಕೃಷ್ಣನನ್ನು ಕಂಡನು. ॥೨೦-೨೨॥

ತನ್ನ ತಂದೆಯಾದ ಕೃಷ್ಣನನ್ನು ನೋಡಿ ಬಾಲಕನಾದ ವಿರಾಟ್ಪುರುಷನು ಸಂತೋಷದಿಂದ ನಕ್ಕನು. ಆ ಕೃಷ್ಣನು ಆ ಬಾಲಕನಿಗೆ ಸಮಯೋಚಿತವಾದ ವರವನ್ನು ಕೊಡುತ್ತಾ, ಎಲೈ ಪುತ್ರನೇ ! ಜ್ಞಾನದಲ್ಲಿ ನನ್ನ ಸಮನಾಗಿ ಹಸಿವು ಬಾಯಾರಿಕೆಗಳಿಲ್ಲದೆ ಅನೇಕ ಬ್ರಹ್ಮಾಂಡಗಳಿಗೆ ಆಶ್ರಯನಾಗಿ ಪ್ರಕೃತಿ ಲಯವಾಗುವವರೆಗೂ ಇರುವವನಾಗು. ಯಾವ ಅಪೇಕ್ಷೆಯೂ ಇಲ್ಲದವನಾಗಿ ಭಯವಿಲ್ಲದೆ ಮುಪ್ಪು, ಮರಣ, ರೋಗ, ದುಃಖ, ಬಾಧೆ ಇವುಗಳಿಲ್ಲದವನಾಗು. ಸಮಸ್ತರಿಗೂ ವರವನ್ನು ಕೊಡತಕ್ಕವನಾಗು. ॥೨೩-೨೪-೨೫॥

ಹೀಗೆ ಹೇಳಿ ಆ ಬಾಲಕನ ಕಿವಿಯಲ್ಲಿ " ಓಂ ಕೃಷ್ಣಾಯ ಸ್ವಾಹಾ " ಎಂಬ

ಪ್ರಣವಾದಿ ಚತುರ್ಥ್ಯಂತಂ ಕೃಷ್ಣ ಇತ್ಯಕ್ಷರದ್ವಯಂ ।
ವಹ್ನಿಜಾಯಾಂತ ಮಿಷ್ಟಂ ಚ ಸರ್ವವಿಘ್ನಹರಂ ಪರಂ ॥೨೭॥

ಮಂತ್ರಂ ದತ್ವಾ ತದಾಹಾರಂ ಕಲ್ಪಯಾಮಾಸ ವೈ ವಿಭುಃ ।
ಶ್ರೂಯತಾಂ ತದ್ಬ್ರಹ್ಮಪುತ್ರ ನಿಬೋಧ ಕಥಯಾಮಿ ತೇ ॥೨೮॥

ಪ್ರತಿವಿಶ್ವಂ ಯನ್ನೈವೇದ್ಯಂ ದದಾತಿ ವೈಷ್ಣವೋ ಜನಃ ।
ತತ್ಷೋಡಶಾಂಶೋ ವಿಷಯಿಣೋ ವಿಷ್ಣೋಃ ಪಂಚದಶಾಸ್ಯ ವೈ॥೨೯॥

ನಿರ್ಗುಣಶ್ಚಾತ್ಮನಶ್ಚೈವ ಪರಿಪೂರ್ಣತಮಸ್ಯ ಚ ।
ನೈವೇದ್ಯೇ ಚೈವ ಕೃಷ್ಣಸ್ಯ ನ ಹಿ ಕಿಂಚಿತ್ಪ್ರಯೋಜನಂ ॥೩೦॥

ಯದ್ಯದ್ದದಾತಿ ನೈವೇದ್ಯಂ ತಸ್ಮೈ ದೇವಾಯ ಯೋ ಜನಃ ।
ಸ ಚ ಸ್ವಾದತಿ ತತ್ಸರ್ವಂ ಲಕ್ಷ್ಮೀನಾಥೌ ವಿರಾಟ್ ತಥಾ ॥೩೧॥

---

ಆರು ಅಕ್ಷರದ ಮಂತ್ರವನ್ನು ಮೂರಾವೃತ್ತಿ ಉಪದೇಶಮಾಡಿದನು. ॥೨೬-೨೭॥

ಕೃಷ್ಣನು ಆ ವಿರಾಟ್ಪುರುಷನಿಗೆ ಮಂತ್ರವನ್ನು ಉಪದೇಶಮಾಡಿ ಅವನಿಗೆ ಆಹಾರವನ್ನೂ ಗೊತ್ತುಮಾಡಿದನು. ಬ್ರಹ್ಮಪುತ್ರನಾದ ನಾರದನೇ! ಅದನ್ನು ಹೇಳುತ್ತೇನೆ ಕೇಳು. ಪ್ರತಿಯೊಂದು ಪ್ರಪಂಚದಲ್ಲಿಯೂ ವಿಷ್ಣುಭಕ್ತರಾದ ಜನರು ದೇವರಿಗೆ ಮಾಡುವ ನೈವೇದ್ಯದಲ್ಲಿ ಹದಿನಾರನೆಯ ಒಂದುಭಾಗವು ವೈಕುಂಠದೇಶಾಧಿಪತಿಯಾದ ವಿಷ್ಣುವಿಗೆ. ಮಿಕ್ಕ ಹದಿನೈದು ಭಾಗವು ಈ ವಿರಾಟ್ಪುರುಷನಿಗೆ. ॥೨೮-೨೯॥

ನಿರ್ಗುಣನೂ ಎಂದರೆ ಹಸಿವು ಬಾಯಾರಿಕೆಯಿಲ್ಲದವನೂ, ಪರಿಪೂರ್ಣನೂ ಎಂದರೆ ನಿತ್ಯತೃಪ್ತನೂ ಆದ ಪರಮಾತ್ಮನಾದ ಕೃಷ್ಣನಿಗೆ ನೈವೇದ್ಯದಿಂದ ಏನೂ ಪ್ರಯೋಜನವಿಲ್ಲವು. ॥೩೦॥

ಯಾವ ಜನರು ಯಾವ ಯಾವ ನೈವೇದ್ಯವನ್ನು ಆ ದೇವನಿಗೆ ಸಮರ್ಪಿಸುವರೋ ಅದೆಲ್ಲವನ್ನೂ ವೈಕುಂಠಪತಿಯಾದ ವಿಷ್ಣುವೂ ವಿರಾಟ್ಪುರುಷನೂ ಸವಿಯುವರು. ॥೩೧॥

ತಂ ಚ ಮಂತ್ರವರಂ ದತ್ವಾ ತಮುವಾಚ ಪುನರ್ವಿಭುಃ ।
ವರಮನ್ಯಂ ಕಿಮಿಷ್ಟಂ ತೇ ತನ್ಮೇ ಬ್ರೂಹಿ ದದಾಮಿ ಚ ॥೩೨॥

ಕೃಷ್ಣಸ್ಯ ವಚನಂ ಶ್ರುತ್ವಾ ತಮುವಾಚ ವಿರಾಡ್ವಿಭುಃ ।
ಕೃಷ್ಣಂ ತಂ ಬಾಲಕಸ್ತಾವದ್ವಚನಂ ಸಮಯೋಚಿತಂ ॥೩೩॥

॥ ಬಾಲಕ ಉವಾಚ ॥

ವರೋ ಮೇ ತ್ವತ್ಪದಾಂಭೋಜೇ ಭಕ್ತಿರ್ಭವತು ನಿಶ್ಚಲಾ ।
ಸತತಂ ಯಾವದಾಯುರ್ಮೇ ಕ್ಷಣಂ ವಾ ಸುಚಿರಂ ಚ ವಾ ॥೩೪॥

ತ್ವದ್ಭಕ್ತಿಯುಕ್ತೋ ಲೋಕೇಽಸ್ಮಿನ್ ಜೀವನ್ಮುಕ್ತಶ್ಚ ಸಂತತಂ ।
ತ್ವದ್ಭಕ್ತಿಹೀನೋ ಮೂರ್ಖಶ್ಚ ಜೀವನ್ನಪಿ ಮೃತೋ ಹಿ ಸಃ ॥೩೫॥

ಕಿಂ ತಜ್ಜಪೇನ ತಪಸಾ ಯಜ್ಞೇನ ಪೂಜನೇನ ಚ ।
ವ್ರತೇನ ಚೋಪವಾಸೇನ ಪುಣ್ಯೇನ ತೀರ್ಥಸೇವಯಾ ॥೩೬॥

ಕೃಷ್ಣಭಕ್ತಿವಿಹೀನಸ್ಯ ಮೂರ್ಖಸ್ಯ ಜೀವನಂ ವೃಥಾ ।
ಯೇನಾತ್ಮನಾ ಜೀವಿತಶ್ಚ ತಮೇವ ನಹಿ ಮನ್ಯತೇ ॥೩೭॥

---

ಕೃಷ್ಣನು ಆ ಶ್ರೇಷ್ಠವಾದ ಮಂತ್ರವನ್ನು ಉಪದೇಶಮಾಡಿ ಆ ವಿರಾಟ್ಪುರುಷನನ್ನು ಕುರಿತು ನಿನಗೆ ಇಷ್ಟವಾದ ವರವನ್ನು ಕೇಳು. ಅದನ್ನು ಕೊಡುವೆನು ಎಂದನು. ॥೩೨॥

ಕೃಷ್ಣನ ಮಾತನ್ನು ಕೇಳಿ ಬಾಲಕನು ಅವನನ್ನು ಕುರಿತು •ಸಮಯೋಚಿತವಾದ ಮಾತುಗಳನ್ನಾಡಿದನು. ॥೩೩॥

ಬಾಲಕನು ಹೇಳಿದನು—ನನ್ನ ಆಯುಸ್ಸಿರುವವರೆಗೂ, ಒಂದು ಕ್ಷಣವಾಗಲೀ ಬಹಳ ಕಾಲವಾಗಲೀ ನಿನ್ನ ಪಾದದಲ್ಲಿ ಶಾಶ್ವತವಾದ ಭಕ್ತಿಯುಂಟಾಗಲಿ, ನಿನ್ನ ಭಕ್ತಿಯುಳ್ಳವನು ಲೋಕದಲ್ಲಿ ಜೀವನ್ಮುಕ್ತನಾಗಿರುವನು. ಭಕ್ತಿಯಿಲ್ಲದವನು ಬುದ್ಧಿಹೀನನಾಗಿ ಬದುಕಿದ್ದರೂ ಸತ್ತವನಂತಿರುವನು. ಎಂದರೆ ಜನರು ಯಾರೂ ಅವನನ್ನು ಗೌರವಿಸುವುದಿಲ್ಲ. ॥೩೪-೩೫॥

ಕೃಷ್ಣನ ಭಕ್ತಿಯಿಲ್ಲದ ಮೂಢನು ಯಾವ ಜಪ, ಯಜ್ಞ, ತಪಸ್ಸು, ಪೂಜೆ, ವ್ರತ, ಉಪವಾಸ, ಪುಣ್ಯತೀರ್ಥಸೇವೆಗಳನ್ನು ಮಾಡಿದರೂ ಪ್ರಯೋಜನವಿಲ್ಲವು.

**ಯಾವದಾತ್ಮಾ ಶರೀರೇಽಸ್ತಿ ತಾವತ್ಸಶಕ್ತಿಸಂಯುತಃ ।**
**ಪಶ್ಚಾದ್ಯಾಂತಿ ಗತೇ ತಸ್ಮಿನ್ಸ್ವತಂತ್ರಾಃ ಸರ್ವಶಕ್ತಯಃ ॥೩೮॥**

**ಸ ಚ ತ್ವಂ ಚ ಮಹಾಭಾಗ ಸರ್ವಾತ್ಮಾ ಪ್ರಕೃತೇಃ ಪರಃ ।**
**ಸ್ವೇಚ್ಛಾಮಯಶ್ಚ ಸರ್ವಾದ್ಯೋ ಬ್ರಹ್ಮಜ್ಯೋತಿಃ ಸನಾತನಃ ॥೩೯॥**

**ಇತ್ಯುಕ್ತ್ವಾ ಬಾಲಕಸ್ತತ್ರ ವಿರರಾಮ ಚ ನಾರದ ।**
**ಉವಾಚ ಕೃಷ್ಣಃ ಪ್ರತ್ಯುಕ್ತಿಂ ಮಧುರಾಂ ಶ್ರುತಿಸುಂದರೀಂ ॥೪೦॥**

॥ ಶ್ರೀಕೃಷ್ಣ ಉವಾಚ ॥

**ಸುಚಿರಂ ಸುಸ್ಥಿರಂ ತಿಷ್ಠ ಯಥಾಽಹಂ ತ್ವಂ ತಥಾ ಭವ ।**
**ಬ್ರಹ್ಮಣೋಽಸಂಖ್ಯಪಾತೇ ಚ ಪಾತಸ್ತೇನ ಭವಿಷ್ಯತಿ ॥೪೧॥**

---

ಯಾವ ಆತ್ಮನಿಂದ ತನ್ನ ಜೀವವಿರುವುದೋ ಆ ಆತ್ಮನನ್ನು ತಿಳಿಯದಿದ್ದರೆ ಅವನ ಜೀವನವೇ ವ್ಯರ್ಥವಾದುದು. ॥೩೬-೩೭॥

ಎಲ್ಲಿಯವರೆಗೂ ಆತ್ಮನು ಶರೀರದಲ್ಲಿರುವನೋ ಆದುವರೆಗೂ ಜೀವನು ಶಕ್ತಿಯಿಂದ ಕೂಡಿರುವನು. ಆ ಆತ್ಮನು ಹೊರಟುಹೋದರೆ ಶಕ್ತಿಗಳೂ ತಮಗೆ ತಾವೇ ಸ್ವತಂತ್ರವಾಗಿ ಹೊರಟುಹೋಗುವುವು. ॥೩೮॥

ಮಹಾನುಭಾವನಾದ ಕೃಷ್ಣನೇ! ಆ ಆತ್ಮನೇ ನೀನಾಗಿರುವೆ. ಪ್ರಕೃತಿಗಿಂತ ಶ್ರೇಷ್ಠನಾಗಿಯೂ ಸಮಸ್ತ ಪ್ರಾಣಿಗಳಿಗೂ ಜೀವಸ್ವರೂಪನಾಗಿಯೂ ಇಚ್ಛಾಶಕ್ತಿ ಸ್ವರೂಪನಾಗಿಯೂ ಅನಾದಿಯಾದವನಾಗಿಯೂ ಸ್ವಪ್ರಕಾಶನಾದ ಪರಬ್ರಹ್ಮನಾಗಿಯೂ ಇರುವೆ. ॥೩೯॥

ಹೀಗೆ ಹೇಳಿ ಬಾಲಕನು ಸುಮ್ಮನಾದ ಮೇಲೆ ಕೃಷ್ಣನು ಪ್ರತಿಯಾಗಿ ಕಿವಿ ಗಿಂಪಾದ ಮತ್ತು ಹಿತಕರವಾದ ಈ ಮಾತನ್ನು ಆಡಿದನು. ॥೪೦॥

ಶ್ರೀಕೃಷ್ಣನು ಹೇಳಿದನು—ಎಲೈ ಬಾಲಕನೇ! ನಾನು ಹೇಗೋ ನೀನೂ ಹಾಗೆಯೇ ಬಹಳಕಾಲ ಸ್ಥಿರವಾಗಿರು. ಅನೇಕ ಬ್ರಹ್ಮರು ನಾಶವಾದರೂ ನಿನಗೆ ನಾಶವಿಲ್ಲವು. ನಿನ್ನ ಅಂಶದಿಂದ ಪ್ರತಿಯೊಂದು ಬ್ರಹ್ಮಾಂಡದಲ್ಲಿಯೂ ಸಣ್ಣ ಸಣ್ಣ ವಿರಾಟ್ಪುರುಷನಾಗು. (ಈ ಮಾತಿನಿಂದ ಈ ವಿರಾಟ್ಪುರುಷನು ಅನೇಕಕೋಟಿ

**ಅಂಶೇನ ಪ್ರತಿಬ್ರಹ್ಮಾಂಡೇ ತ್ವಂ ಚ ಕ್ಷುದ್ರವಿರಾಡ್ಭವ ।**
**ತ್ವನ್ನಾಭಿಪದ್ಮಾದ್ಬ್ರಹ್ಮಾ ಚ ವಿಶ್ವಸ್ರಷ್ಟಾ ಭವಿಷ್ಯತಿ ॥೪೨॥**

**ಲಲಾಟೇ ಬ್ರಹ್ಮಣಶ್ಚೈವ ರುದ್ರಾಶ್ಚೈಕಾದಶೈವ ತೇ ।**
**ಶಿವಾಂಶೇನ ಭವಿಷ್ಯಂತಿ ಸೃಷ್ಟಿಸಂಹರಣಾಯ ವೈ ॥೪೩॥**

**ಕಾಲಾಗ್ನಿರುದ್ರಸ್ತೇಷ್ವೇಕೋ ವಿಶ್ವಸಂಹಾರಕಾರಕಃ ।**
**ಪಾತಾ ವಿಷ್ಣುಶ್ಚ ವಿಷಯೀ ಕ್ಷುದ್ರಾಂಶೇನ ಭವಿಷ್ಯತಿ ॥೪೪॥**

**ಮದ್ಭಕ್ತಿಯುಕ್ತಃ ಸತತಂ ಭವಿಷ್ಯಸಿ ವರೇಣ ಮೆ ।**
**ಧ್ಯಾನೇನ ಕಮನೀಯಂ ಮಾಂ ನಿತ್ಯಂ ದ್ರಕ್ಷ್ಯಸಿ ನಿಶ್ಚಿತಂ ॥೪೫॥**

**ಮಾತರಂ ಕಮನೀಯಾಂ ಚ ಮಮ ವಕ್ಷಸ್ಸ್ಥಲಸ್ಥಿತಾಂ ।**
**ಯಾಮಿ ಲೋಕಂ ತಿಷ್ಠ ವತ್ಸೇತ್ಯುಕ್ತ್ವಾ ಸೋಽಂತರಧೀಯತ ॥೪೬॥**

---

ಬ್ರಹ್ಮಾಂಡದೊಳಗಿರುವ ವಿರಾಟ್ಪುರುಷರ ಸಮಷ್ಟಿ ಅಧಿಪತಿಯಾದವನೆಂದು ತಿಳಿಯ ಬೇಕು.) ನಿನ್ನ ನಾಭಿಪದ್ಮದಲ್ಲಿ ಪ್ರಪಂಚವನ್ನು ಸೃಷ್ಟಿಸುವ ಬ್ರಹ್ಮನು ಹುಟ್ಟುವನು. ||೪೧-೪೨||

ಸೃಷ್ಟಿಸಿದ ಪ್ರಪಂಚವನ್ನು ಅದರ ಕಾರ್ಯವಾದ ಮೇಲೆ ಸಂಹರಿಸುವುದಕ್ಕಾಗಿ ಶಿವನ ಅಂಶದಿಂದ ಬ್ರಹ್ಮನ ಹಣೆಯಲ್ಲಿ ಏಕಾದಶರುದ್ರರು ಹುಟ್ಟುವರು. ||೪೩||

ಆ ಏಕಾದಶರುದ್ರರಲ್ಲಿ ಕಾಲಾಗ್ನಿರುದ್ರನೆಂಬೊಬ್ಬನು ಪ್ರಪಂಚವನ್ನು ಸಂಹರಿಸುವನು. ಪ್ರಪಂಚವನ್ನು ರಕ್ಷಿಸುವುದಕ್ಕಾಗಿ ವಿಷಯಭೋಗವುಳ್ಳ ವಿಷ್ಣುವು ನಾರಾಯಣನ ಅಲ್ಪಾಂಶದಿಂದ ಅವತರಿಸುವನು. ||೪೪||

ನೀನು ನನ್ನ ವರದಿಂದ ಯಾವಾಗಲೂ ನನ್ನಲ್ಲಿ ಭಕ್ತಿಯುಳ್ಳವನಾಗಿರುತ್ತೀಯೆ. ಪ್ರತಿದಿನವೂ ಧ್ಯಾನಮಾಡುವ ಕಾಲದಲ್ಲಿ ಮನೋಹರನಾದ ನನ್ನನ್ನೂ ನನ್ನ ವಕ್ಷಸ್ಥಲ(ಎದೆ)ದಲ್ಲಿರುವ ಮನೋಹರಳಾದ ನಿನ್ನ ತಾಯಿಯನ್ನೂ ನೋಡುತ್ತೀಯೆ. ಎಲೈ ಮಗನೇ! ನಾನು ನನ್ನ ಲೋಕವಾದ ಗೋಲೋಕಕ್ಕೆ ಹೋಗುತ್ತೇನೆ. ನೀನು ಇಲ್ಲಿಯೇ ಇರು. ಎಂದು ಕೃಷ್ಣನು ಮರೆಯಾದನು. ||೪೫-೪೬||

ಗತ್ವಾ ಸ್ವಲೋಕಂ ಬ್ರಹ್ಮಾಣಂ ಶಂಕರಂ ಸಮುವಾಚ ಹ ।
ಸ್ರಷ್ಟಾರಂ ಸ್ರಷ್ಟುಮೀಶಂ ಚ ಸಂಹರ್ತುಂ ಚೈವ ತತ್ಕ್ಷಣಂ ॥೪೭॥

॥ ಶ್ರೀಭಗವಾನುವಾಚ ॥

ಸೃಷ್ಟಿಂ ಸ್ರಷ್ಟುಂ ಗಚ್ಛ ವತ್ಸ ನಾಭಿಪದ್ಮೋದ್ಭವೋ ಭವ ।
ಮಹಾವಿರಾಡ್ಲೋಮಕೂಪೇ ಕ್ಷುದ್ರಸ್ಯ ಚ ವಿಧೇ ಶೃಣು ॥೪೮॥

ಗಚ್ಛ ವತ್ಸ ಮಹಾದೇವ ಬ್ರಹ್ಮಭಾಲೋದ್ಭವೋ ಭವ ।
ಅಂಶೇನ ಚ ಮಹಾಭಾಗ ಸ್ವಯಂ ಚ ಸುಚಿರಂ ತಪ ॥೪೯॥

ಇತ್ಯುಕ್ತ್ವಾ ಜಗತಾಂ ನಾಥೋ ವಿರರಾಮ ವಿಧೇಃ ಸುತಃ ।
ಜಗಾಮ ಬ್ರಹ್ಮಾ ತಂ ನತ್ವಾ ಶಿವಶ್ಚ ಶಿವದಾಯಕಃ ॥೫೦॥

---

ಕೃಷ್ಣನು ತನ್ನ ಲೋಕಕ್ಕೆ ಹೋಗಿ ತನ್ನ ಶರೀರದಿಂದ ಹೊರಟು ವ್ಯಕ್ತರಾದ ಬ್ರಹ್ಮ ಮತ್ತು ಶಂಕರರನ್ನು ಕುರಿತು ಬ್ರಹ್ಮನನ್ನು ಸೃಷ್ಟಿಮಾಡುವುದಕ್ಕೂ ಶಂಕರನನ್ನು ಪ್ರಪಂಚದ ಉಪಸಂಹಾರಕ್ಕೂ ನಿಯಮಿಸಿದನು. ||೪೭||

ಭಗವಂತನಾದ ಕೃಷ್ಣನು ಬ್ರಹ್ಮನನ್ನು ಕುರಿತು ಎಲೈ ಬ್ರಹ್ಮನೇ! ಪ್ರಪಂಚವನ್ನು ಸೃಷ್ಟಿಮಾಡುವುದಕ್ಕಾಗಿ ಹೊರಡು. ಮಹಾವಿರಾಟ್ಪುರುಷನ ಲೋಮಕೂಪಗಳಲ್ಲಿರುವ ಅನೇಕ ಬ್ರಹ್ಮಾಂಡಗಳಲ್ಲಿರುವ ಆ ಮಹಾವಿರಾಟ್ಪುರುಷನ ಅಲ್ಪಾಂಶರಾದ ವಿರಾಟ್ಪುರುಷರ ನಾಭಿಕಮಲದಲ್ಲಿ ನಿನ್ನಂಶದಿಂದ ಅವತರಿಸು. ಈ ನನ್ನ ಮಾತನ್ನು ಕೇಳು. ಎಂದನು. ||೪೮||

ಎಲೈ ಮಹಾದೇವನೇ! ನೀನೂ ಕೂಡ ವಿರಾಟ್ಪುರುಷನ ಲೋಮಕೂಪಗಳಲ್ಲಿರುವ ಬ್ರಹ್ಮಾಂಡಗಳಲ್ಲಿ ನಿನ್ನ ಅಂಶದಿಂದ ಬ್ರಹ್ಮನ ಹಣೆಯಲ್ಲಿ ಅವತಾರಮಾಡು. ಸಂಹಾರಕಾಲದಲ್ಲಿ ಜಗತ್ತನ್ನು ಸಂಹರಿಸು ಮತ್ತು ಬಹಳಕಾಲ ತಪಸ್ಸನ್ನು ಮಾಡು. ||೪೯||

ಎಲೈ ಬ್ರಹ್ಮಪುತ್ರನಾದ ನಾರದನೇ! ಆ ಜಗತ್ಪತಿಯಾದ ಕೃಷ್ಣನು ಹೀಗೆ ಹೇಳಿ ಸುಮ್ಮನಾಗುತ್ತಲು ಬ್ರಹ್ಮನೂ ಶಿವನೂ ಅವನಿಗೆ ನಮಸ್ಕಾರಮಾಡಿ ಹೊರಟು ಹೋದರು. ||೫೦||

ಮಹಾವಿರಾಡ್ಲೋಮಕೂಪೇ ಬ್ರಹ್ಮಾಂಡಗೋಲಕೇ ಜಲೇ ।
ಬಭೂವ ಚ ವಿರಾಟ್ ಕ್ಷುದ್ರೋ ವಿರಾಡಂಶೇನ ಸಾಂಪ್ರತಂ ॥೫೦॥

ಶ್ಯಾಮೋ ಯುವಾ ಪೀತವಾಸಾಃ ಶಯಾನೋ ಜಲತಲ್ಪಕೇ ।
ಈಷದ್ಧಾಸ್ಯ ಪ್ರಸನ್ನಾಸ್ಯೋ ವಿಶ್ವವ್ಯಾಪೀ ಜನಾರ್ದನಃ ॥೫೨॥

ತನ್ನಾಭಿಕಮಲೇ ಬ್ರಹ್ಮಾ ಬಭೂವಕಮಲೋದ್ಭವಃ ।
ಸಂಭೂಯ ಪದ್ಮದಂಡೇ ಚ ಬಭ್ರಾಮ ಯುಗಲಕ್ಷಕಂ ॥೫೩॥

ನಾಂತಂ ಜಗಾಮ ದಂಡಸ್ಯ ಪದ್ಮನಾಲಸ್ಯ ಪದ್ಮಜಃ ।
ನಾಭಿಜಸ್ಯ ಚ ಪದ್ಮಸ್ಯ ಚಿಂತಾಮಾಪ ಪಿತಾ ತವ ॥೫೪॥

ಸ್ವಸ್ಥಾನಂ ಪುನರಾಗಮ್ಯ ದಧ್ಯೌ ಕೃಷ್ಣಪದಾಂಬುಜಂ ।
ತತೋ ದದರ್ಶ ಕ್ಷುದ್ರಂ ತಂ ಧ್ಯಾನೇನ ದಿವ್ಯಚಕ್ಷುಷಾ ॥೫೫॥

---

ಮಹಾವಿರಾಟ್ಪುರುಷನ ಲೋಮಕೂಪಗಳಲ್ಲಿರುವ ಬ್ರಹ್ಮಾಂಡಗೋಲದ ನೀರಿನಲ್ಲಿ ಮಹಾವಿರಾಡಂಶದಿಂದ (ಸಮಷ್ಟಿಪುರುಷನ ಅಂಶದಿಂದ) (ವ್ಯಷ್ಟಿ) ಕ್ಷುದ್ರ ವಿರಾಟ್ಪುರುಷನು ಉತ್ಪನ್ನನಾದನು. ॥೫೦॥

ಆ ಕ್ಷುದ್ರವಿರಾಟ್ಪುರುಷನು ನೀಲಮೇಘಶ್ಯಾಮನಾಗಿ ಪೀತಾಂಬರವನ್ನುಟ್ಟು ನೀರಿನ ಹಾಸಿಗೆಯಲ್ಲಿ ಮಲಗಿಕೊಂಡು ಮುಗುಳುನಗೆಯನ್ನು ನಗುತ್ತಾ ಯಾವ ವಿಕಾರವೂ ಇಲ್ಲದ ಮುಖದಿಂದ ಪ್ರಕಾಶಿಸಿದನು. ॥೫೨॥

ಆ ವಿರಾಟ್ಪುರುಷನ ನಾಭಿಯಲ್ಲಿ ಹುಟ್ಟಿದ ಕಮಲದಲ್ಲಿ ಬ್ರಹ್ಮನು ಜನಿಸಿ ಆ ಕಮಲದ ನಾಳದಲ್ಲಿ ಒಂದುಲಕ್ಷಯುಗ ಪರ್ಯಂತವಾಗಿ ಮೂಲಕಾರಣ ಶೋಧನಾರ್ಥವಾಗಿ ತಿರುಗಿದನು. ॥೫೩॥

ನಾರದನೇ, ನಿನ್ನ ತಂದೆಯಾದ ಬ್ರಹ್ಮನು ತಾನು ಹುಟ್ಟಿದ ಕಮಲನಾಳದಲ್ಲಿ ಸಂಚರಿಸುತ್ತಾ ಅದರ ಕೊನೆಯನ್ನು ಮುಟ್ಟಲಿಲ್ಲ. ಆದುದರಿಂದ ಆಲೋಚಿಸುತ್ತಿದ್ದನು. ॥೫೪॥

ಬಳಿಕ ಬ್ರಹ್ಮನು ತನ್ನ ಸ್ಥಳಕ್ಕೆ ಮತ್ತೆ ಬಂದು ಕೃಷ್ಣನ ಪಾದವನ್ನು ಧ್ಯಾನಿಸಿದನು. ಇದರಿಂದ ದಿವ್ಯದೃಷ್ಟಿಯುಂಟಾಗಲು ಕ್ಷುದ್ರ ಎಂದರೆ ವ್ಯಷ್ಟಿ ಅಥವಾ ಚಿಕ್ಕ ವಿರಾಟ್ಪುರುಷನನ್ನು ನೋಡಿದನು. ॥೫೫॥

ಶಯನಂ ಜಲತಲ್ಪೇ ಚ ಬ್ರಹ್ಮಾಂಡಗೋಲಕಾಪ್ಲುತೇ ।
ಯಲ್ಲೋಮಕೂಪೇ ಬ್ರಹ್ಮಾಂಡಂ ತಂ ಚ ತತ್ಪರಮಿಾಶ್ವರಂ ॥೫೬॥

ಶ್ರೀಕೃಷ್ಣಂ ಚಾಪಿ ಗೋಲೋಕಂ ಗೋಪಗೋಪೀಸಮನ್ವಿತಂ ।
ತಂ ಸಂಸ್ತೂಯ ವರಂ ಪ್ರಾಪ ತತಃ ಸೃಷ್ಟಿಂ ಚಕಾರ ಸಃ ॥೫೭॥

ಬಭೂವುಃ ಬ್ರಹ್ಮಣಃ ಪುತ್ರಾ ಮಾನಸಾಃ ಸನಕಾದಯಃ ।
ತತೋ ರುದ್ರಕಲಾಶ್ಚಾಪಿ ಶಿವಸ್ಯೈಕಾದಶ ಸ್ಮೃತಾಃ ॥೫೮॥

ಬಭೂವ ಪಾತಾ ವಿಷ್ಣುಶ್ಚ ಕ್ಷುದ್ರಸ್ಯ ವಾಮಪಾರ್ಶ್ವತಃ ।
ಚತುರ್ಭುಜಶ್ಚ ಭಗವಾನ್ ಶ್ವೇತದ್ವೀಪೇ ಸ ಚಾವಸತ್ ॥೫೯॥

ಕ್ಷುದ್ರಸ್ಯ ನಾಭಿಪದ್ಮೇ ಚ ಬ್ರಹ್ಮಾ ವಿಶ್ವಂ ಸಸರ್ಜ ಹ ।
ಸ್ವರ್ಗಂ ಮೃತ್ಯುಂ ಚ ಪಾತಾಲಂ ತ್ರಿಲೋಕಂ ಸ ಚರಾಚರಂ ॥೬೦॥

---

ಆ ವಿರಾಟ್ಪುರುಷನು ಬ್ರಹ್ಮಾಂಡಗೋಲಕದಲ್ಲಿರುವ ನೀರಿನಲ್ಲಿ ಮಲಗಿದ್ದನು. ಈ ಬ್ರಹ್ಮಾಂಡವು ಯಾರ ಲೋಮಕೂಪದಲ್ಲಿದ್ದಿತೋ ಆ ಮಹಾವಿರಾಟ್ಪುರುಷನನ್ನೂ ನೋಡಿದನು. ॥೫೬॥

ಬಳಿಕ ಶ್ರೀಕೃಷ್ಣನನ್ನೂ ಗೋಲೋಕವನ್ನೂ ಗೋಪಿಯರನ್ನೂ ನೋಡಿ ಆ ಕೃಷ್ಣನನ್ನು ಸ್ತೋತ್ರಮಾಡಿ ವರವನ್ನು ಪಡೆದು ಸೃಷ್ಟಿಕಾರ್ಯವನ್ನು ಮಾಡಿದನು. ॥೫೭॥

ಆಮೇಲೆ ಸನಕಾದಿಗಳು ಬ್ರಹ್ಮನ ಮಾನಸಪುತ್ರರಾಗಿ ಹುಟ್ಟಿದರು. ಬಳಿಕ ಶಿವನ ಅಂಶದಿಂದ ಏಕಾದಶರುದ್ರರೂ ಹುಟ್ಟಿದರು. ॥೫೮॥

ಕ್ಷುದ್ರವಿರಾಟ್ಪುರುಷನ ಎಡಭಾಗದಿಂದ ಬ್ರಹ್ಮನು ಸೃಷ್ಟಿಸಿದ ಜಗತ್ತನ್ನು ಕಾಪಾಡುವ ವಿಷ್ಣುವು ಹುಟ್ಟಿದನು. ಆ ಚತುರ್ಭುಜನಾದ ವಿಷ್ಣುವು ಶ್ವೇತದ್ವೀಪದಲ್ಲಿ ವಾಸವಾಗಿದ್ದನು. ॥೫೯॥

ಕ್ಷುದ್ರ ವಿರಾಟ್ಪುರುಷನ ನಾಭಿಕಮಲದಲ್ಲಿ ಹುಟ್ಟಿದ ಬ್ರಹ್ಮನು ಸ್ವರ್ಗ, ಮರ್ತ್ಯ, ಪಾತಾಳವೆಂಬ ಮೂರು ಲೋಕವನ್ನು ಚರಾಚರಪ್ರಾಣಿಸಹಿತವಾಗಿ ಸೃಷ್ಟಿಸಿದನು. ॥೬೦॥

**ಏವಂ ಸರ್ವಲೋಮಕೂಪೇ ವಿಶ್ವಂ ಪ್ರತ್ಯೇಕಮೇವ ಚ ।**
**ಪ್ರತಿವಿಶ್ವೇ ಕ್ಷುದ್ರವಿರಾಡ್ಬ್ರಹ್ಮವಿಷ್ಣುಶಿವಾದಯಃ ॥೬೦॥**

**ಇತ್ಯೇವಂ ಕಥಿತಂ ಬ್ರಹ್ಮನ್ ಕೃಷ್ಣಸಂಕೀರ್ತನಂ ಶುಭಂ ।**
**ಸುಖದಂ ಮೋಕ್ಷದಂ ಬ್ರಹ್ಮನ್ಕಿಂ ಭೂಯಃ ಶ್ರೋತುಮಿಚ್ಛಸಿ ॥೬೧॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ**
**ತೃತೀಯೋಽಧ್ಯಾಯಃ**

---

ಈ ರೀತಿಯಾಗಿ ಸಮಸ್ತ ಲೋಮಕೂಪಗಳಲ್ಲಿ ಬೇರೆ ಬೇರೆ ಬ್ರಹ್ಮಾಂಡವೂ, ಆ ಬ್ರಹ್ಮಾಂಡದಲ್ಲಿ ಕ್ಷುದ್ರವಿರಾಟ್ಪುರುಷನೂ ಬ್ರಹ್ಮವಿಷ್ಣುಶಿವಾದಿಗಳೂ ಇರುವರು. ॥೬೦॥

ಎಲೈ ನಾರದನೇ, ಸುಖವನ್ನೂ, ಮೋಕ್ಷವನ್ನೂ ಕೊಡತಕ್ಕ ಶ್ರೀಕೃಷ್ಣನ ಮಂಗಳಕರವಾದ ಕಥೆಯು ಹೇಳಲ್ಪಟ್ಟಿತು. ಮತ್ತೇನನ್ನು ಕೇಳಬೇಕೆಂದಿರುವೆ? ಹೇಳು. ॥೬೧॥

ಈ ದೇವೀಭಾಗವತದ ಮೊದಲನೆಯ, ಮೂರನೆಯ, ಐದನೆಯ ಮತ್ತು ಈ ಒಂಬತ್ತನೆಯ ಸ್ಕಂಧಗಳಲ್ಲಿ ಸೃಷ್ಟಿಕ್ರಮಗಳನ್ನು ಹೇಳಿದೆ. ಅವು ಭಿನ್ನವಾಗಿರುವುದರಿಂದ ವಿರುದ್ಧವೆಂದೂ ಅಪ್ರಮಾಣವೆಂದೂ ತಿಳಿಯಬಾರದು. ಕಲ್ಪಭೇದದಿಂದ ಈ ಸೃಷ್ಟಿಪ್ರಕಾರ ಭೇದವನ್ನು ವರ್ಣಿಸಿದೆ. ಅಲ್ಲದೆ ವಕ್ತೃಭೇದ, ಉಪಾಸನಾಭೇದ, ಬೋದ್ಧವ್ಯ ಭೇದಗಳಿಂದಲೂ ಸೃಷ್ಟಿಕ್ರಮ ವಿವರಣೆಯು ಭಿನ್ನಪ್ರಕಾರಗಳಲ್ಲಿ ಆಗಿರುತ್ತದೆ. ಈ ಸೃಷ್ಟಿಯೂ ಪ್ರಪಂಚಗಳೂ ಅನಾದಿಯಾಗಿ ಅನಂತವಾಗಿವೆ. ಈ ಅನೇಕ ಕೋಟಿ ಬ್ರಹ್ಮಾಂಡ ಅಥವಾ ಸೂರ್ಯಸಂಸ್ಥಾನಗಳಲ್ಲಿ ಒಂದೊಂದು ಬ್ರಹ್ಮಾಂಡಕ್ಕೂ ಒಬ್ಬ ವಿರಾಟ್ಪುರುಷನೂ ಬ್ರಹ್ಮ ವಿಷ್ಣು ರುದ್ರರೂ ಅವರ ಪತ್ನಿಯರೂ ಇರುತ್ತಾರೆ. ಈ ವಿರಾಟ್ಪುರುಷನೇ ಕ್ಷುದ್ರ ವೃಷ್ಟಿ ಅಥವಾ ಅಲ್ಪ (ಚಿಕ್ಕ) ವಿರಾಟ್ಪುರುಷನು. ಈ ಎಲ್ಲ ಬ್ರಹ್ಮಾಂಡಗಳ ಎಲ್ಲ ವಿರಾಟ್ಪುರುಷರಿಗೂ ಅಧಿಪತಿಯಾದ ಸಮಷ್ಟಿ ಅಥವಾ ಮಹಾವಿರಾಟ್ಪುರುಷನು ಇರುತ್ತಾನೆ. ಇವನು ಮಾಯಾ ಅಥವಾ ಮೂಲಪ್ರಕೃತಿರೂಪವಾದ ಉಪಾಧಿವಿಶಿಷ್ಟವಾದ ಪರಬ್ರಹ್ಮರೂಪಿಣಿಯಾದ ತತ್ತ್ವವು ಎಂದು ತಿಳಿಯಬೇಕು.

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಚತುರ್ಥೋಽಧ್ಯಾಯಃ ||

### ನಾಲ್ಕನೆಯ ಅಧ್ಯಾಯವು

|| ನಾರದ ಉವಾಚ ||

**ಶ್ರುತಂ ಸರ್ವಂ ಮಯಾ ಪೂರ್ವಂ ತ್ವತ್ಪ್ರಸಾದಾತ್ಸುಧೋಪಮಂ ।**
**ಅಧುನಾ ಪ್ರಕೃತೀನಾಂ ಚ ವ್ಯಸ್ತಂ ವರ್ಣಯ ಪೂಜನಂ ॥೧॥**

**ಕಸ್ಯಾಃ ಪೂಜಾ ಕೃತಾ ಕೇನ ಕಥಂಮರ್ತ್ಯೇ ಪ್ರಚಾರಿತಾ ।**
**ಕೇನ ವಾ ಪೂಜಿತಾ ಕಾ ವಾ ಕೇನ ಕಾ ವಾ ಸ್ತುತಾ ಪ್ರಭೋ ॥೨॥**

**ಕಾಸಾಂ ಸ್ತೋತ್ರಂ ಚ ಧ್ಯಾನಂ ಚ ಪ್ರಭಾವಂ ಚರಿತಂ ಶುಭಂ ।**
**ಕಾಭಿಃ ಕೇಭ್ಯೋ ವರೋ ದತ್ತಃ ತನ್ಮೇ ವ್ಯಾಖ್ಯಾತುಮರ್ಹಸಿ ॥೩॥**

---

ನಾರದನು ಹೇಳಿದನು—ಓ ನಾರಾಯಣಮುನಿಯೇ, ನಿನ್ನ ದಯದಿಂದ ಅಮೃತಕ್ಕೆ ಸಮಾನವಾದ ಮಾತನ್ನು ಕೇಳಿದೆನು. ಈಗ ಪ್ರಕೃತಿದೇವಿಯರ ಬೇರೆ ಬೇರೆಯಾದ ಪೂಜಾಕ್ರಮವನ್ನು ಹೇಳು. ಯಾವ ದೇವಿಯ ಪೂಜೆಯನ್ನು ಯಾವನು ಮಾಡಿದನು. ಭೂಲೋಕದಲ್ಲಿ ಈ ಪೂಜೆಯು ಹೇಗೆ ಪ್ರಚಾರಕ್ಕೆ ಬಂದಿತು? ಯಾವ ಮಂತ್ರದಿಂದ ಯಾವ ದೇವಿಯನ್ನು ಪೂಜೆಮಾಡಿ ಯಾವ ಸ್ತೋತ್ರದಿಂದ ಸ್ತೋತ್ರ ಮಾಡಿದರು. ಆ ದೇವಿಯರ ಸ್ತೋತ್ರವನ್ನೂ ಧ್ಯಾನವನ್ನೂ ಮಹಿಮೆಯನ್ನೂ ಮಂಗಳಕರವಾದ ಚರಿತ್ರೆಯನ್ನೂ ಯಾವ ದೇವಿಯರು ಯಾರಿಗೆ ವರವನ್ನು ಕೊಟ್ಟರೆಂಬುದನ್ನೂ ವಿಸ್ತಾರವಾಗಿ ನನಗೆ ಹೇಳು. ಎಂದನು. ||೧-೨-೩||

|| ಶ್ರೀನಾರಾಯಣ ಉವಾಚ ||

**ಗಣೇಶಜನನೀ ದುರ್ಗಾ ರಾಧಾ ಲಕ್ಷ್ಮೀಃ ಸರಸ್ವತೀ ।**
**ಸಾವಿತ್ರೀ ಚ ಸೃಷ್ಟಿವಿಧೌ ಪ್ರಕೃತಿಃ ಪಂಚಧಾ ಸ್ಮೃತಾ ॥೪॥**

**ಆಸಾಂ ಪೂಜಾ ಪ್ರಸಿದ್ಧಾ ಚ ಪ್ರಭಾವಃ ಪರಮಾದ್ಭುತಃ ।**
**ಸುಧೋಪಮಂ ಚ ಚರಿತಂ ಸರ್ವಮಂಗಳಕಾರಣಂ ॥೫॥**

**ಪ್ರಕೃತ್ಯಂಶಾಃ ಕಲಾಯಾಶ್ಚ ತಾಸಾಂ ಚ ಚರಿತಂ ಶುಭಂ ।**
**ಸರ್ವಂ ವಕ್ಷ್ಯಾಮಿ ತೇ ಬ್ರಹ್ಮನ್ಸಾವಧಾನೋ ನಿಶಾಮಯ ॥೬॥**

**ಕಾಲೀ ವಸುಂಧರಾ ಗಂಗಾ ಷಷ್ಠೀ ಮಂಗಳಚಂಡಿಕಾ ।**
**ತುಲಸೀ ಮನಸಾ ನಿದ್ರಾ ಸ್ವಧಾ ಸ್ವಾಹಾ ಚ ದಕ್ಷಿಣಾ ॥೭॥**

**ಸಂಕ್ಷಿಪ್ತಮಾಸಾಂ ಚರಿತಂ ಪುಣ್ಯದಂ ಶ್ರುತಿಸುಂದರಂ ।**
**ಜೀವಕರ್ಮವಿಪಾಕಂ ಚ ತಚ್ಚ ವಕ್ಷ್ಯಾಮಿ ಸುಂದರಂ ॥೮॥**

---

ಓ ನಾರದನೇ, ಗಣೇಶನ ತಾಯಿಯಾದ ದುರ್ಗಾದೇವೀ, ರಾಧಾದೇವೀ, ಲಕ್ಷ್ಮೀದೇವೀ, ಸರಸ್ವತೀದೇವೀ, ಸಾವಿತ್ರೀದೇವೀ ಈ ಐವರು ಪ್ರಪಂಚಸೃಷ್ಟಿಯಲ್ಲಿ ಪ್ರಸಿದ್ಧರಾದ ಪಂಚಪ್ರಕೃತಿದೇವಿಯರು. ಇವರ ಪೂಜಾಕ್ರಮವು ಲೋಕಪ್ರಸಿದ್ಧವಾದುದು. ಇವರ ಮಹಿಮೆಯು ಆಶ್ಚರ್ಯಕರವಾದುದು. ಇವರ ಚರಿತ್ರೆಯು ಅಮೃತಸಮಾನವಾಗಿ ಸಮಸ್ತಮಂಗಳವನ್ನೂ ಕೊಡತಕ್ಕುದು. ಪ್ರಕೃತಿಯ ಅಂಶ ಮತ್ತು ಕಲಾಭಾಗಗಳಿಂದ ಅವತರಿಸಿದ ದೇವಿಯರ ಚರಿತ್ರೆಯೂ ಮಂಗಳಕರವಾದುದು. ಅವುಗಳೆಲ್ಲವನ್ನೂ ನಿನಗೆ ಹೇಳುವೆನು. ಗಮನವಿಟ್ಟು ಕೇಳು. ||೪-೫-೬||

ಕಾಲೀ, ಭೂಮಿ, ಗಂಗೆ, ಷಷ್ಠೀ, ಮಂಗಳಚಂಡೀ, ತುಲಸೀ, ಮನಸಾದೇವೀ, ನಿದ್ರಾದೇವೀ, ಸ್ವಧಾ, ಸ್ವಾಹಾ, ದಕ್ಷಿಣಾ, ಈ ದೇವಿಯರ ಸಂಕ್ಷೇಪವಾದ ಚರಿತ್ರೆಯನ್ನು ಹೇಳುವೆನು. ಈ ಚರಿತ್ರೆಯು ಕೇಳುವುದಕ್ಕೆ ಇಂಪಾಗಿಯೂ ಪುಣ್ಯವನ್ನು ಕೊಡತಕ್ಕುದಾಗಿಯೂ ಇರುವುದು. ಜೀವರುಗಳ ಕರ್ಮಗಳು, ಆ ಕರ್ಮಗಳ ಫಲಗಳು ಇವುಗಳನ್ನೂ ಹೇಳುವೆನು. ಇದು ಕೇಳುವುದಕ್ಕೆ ಇಂಪಾಗಿರುವುದು. ||೭-೮||

ದುರ್ಗಾಯಾಶ್ಚೈವ ರಾಧಾಯಾ ವಿಸ್ತೀರ್ಣಂ ಚರಿತಂ ಮಹತ್ ।
ತದ್ವತ್ಪಶ್ಚಾತ್ಪ್ರವಕ್ಷ್ಯಾಮಿ ಸಂಕ್ಷೇಪಕ್ರಮತಃ ಶೃಣು ॥೯॥

ಆದೌ ಸರಸ್ವತೀಪೂಜಾ ಶ್ರೀಕೃಷ್ಣೇನ ವಿನಿರ್ಮಿತಾ ।
ಯತ್ಪ್ರಸಾದಾನ್ಮುನಿಶ್ರೇಷ್ಠ ಮೂರ್ಖೋ ಭವತಿ ಪಂಡಿತಃ ॥೧೦॥

ಆವಿರ್ಭೂತಾ ಯಥಾ ದೇವೀ ವಕ್ತ್ರತಃ ಕೃಷ್ಣಯೋಷಿತಃ ।
ಇಯೇಷ ಕೃಷ್ಣಂ ಕಾಮೇನ ಕಾಮುಕೀ ಕಾಮರೂಪಿಣೀ ॥೧೧॥

ಸ ಚ ವಿಜ್ಞಾಯ ತದ್ಭಾವಂ ಸರ್ವಜ್ಞಃ ಸರ್ವಮಾತರಂ ।
ತಾಮುವಾಚ ಹಿತಂ ಸತ್ಯಂ ಪರಿಣಾಮೇ ಸುಖಾವಹಂ ॥೧೨॥

॥ ಶ್ರೀಕೃಷ್ಣ ಉವಾಚ ॥

ಭಜ ನಾರಾಯಣಂ ಸಾಧ್ವಿ ಮದಂಶಂ ಚ ಚತುರ್ಭುಜಂ ।
ಯುವಾನಂ ಸುಂದರಂ ಸರ್ವಗುಣಯುಕ್ತಂ ಚ ಮತ್ಸಮಂ ॥೧೩॥

---

ದುರ್ಗಾ ಮತ್ತು ರಾಧಾದೇವಿಯರ ಚರಿತ್ರೆಯು ಬಹುವಿಸ್ತಾರವಾದುದು. ಆ ದೇವಿಯ ಪೂಜಾವಿಧಿಯನ್ನು ಸಂಕ್ಷೇಪವಾಗಿ ಕೊನೆಯಲ್ಲಿ ಹೇಳುವೆನು. ॥೯॥

ಯಾವ ದೇವಿಯ ಅನುಗ್ರಹದಿಂದ ಮೂಢನು ಪಂಡಿತನಾಗುವನೋ ಆ ಸರಸ್ವತೀದೇವಿಯ ಪೂಜೆಯನ್ನು ಕೃಷ್ಣನೇ ಮೊದಲು ಮಾಡಿದನು. ಆ ಸರಸ್ವತೀ ದೇವಿಯು ಕೃಷ್ಣನ ಪತ್ನಿಯಾದ ರಾಧೆಯ ನಾಲಿಗೆಯಲ್ಲಿ ಹುಟ್ಟಿದಳು. ಬೇಕಾದ ರೂಪವನ್ನು ಧರಿಸಬಲ್ಲ ಆ ದೇವಿಯು ಕಾಮಬಾಧೆಯಿಂದ ಕೃಷ್ಣನನ್ನೇ ಪತಿಯಾಗ ಬೇಕೆಂದು ಅಪೇಕ್ಷಿಸಿದಳು. ಆ ಕೃಷ್ಣನು ಸರ್ವಜ್ಞನಾದುದರಿಂದ ಆಕೆಯ ಅಭಿಪ್ರಾಯವನ್ನು ತಿಳಿದು ಸಮಸ್ತರಿಗೂ ತಾಯಿಯಂತಿರುವ ಆಕೆಯನ್ನು ಕುರಿತು ನಿಜವೂ ಹಿತವೂ ಕೊನೆಗೆ ಸುಖವನ್ನು ಕೊಡುವುದೂ ಆದ ಈ ಮಾತನ್ನು ಹೇಳಿದನು. ॥೧೦-೧೧-೧೨॥

ಶ್ರೀಕೃಷ್ಣನು ಹೇಳಿದನು—ಎಲೈ ಸಜ್ಜನೆಯಾದ ಸರಸ್ವತಿಯೇ, ನನ್ನ ಅಂಶದಿಂದ ಅವತಾರಮಾಡಿದ, ನಾಲ್ಕು ತೋಳುಗಳುಳ್ಳ, ನಾರಾಯಣನ ಸಮೀಪಕ್ಕೆ ನೀನು ಹೋಗು. ಅವನು ಯೌವನವಂತನಾಗಿಯೂ ಸುಂದರನಾಗಿಯೂ ಸಮಸ್ತ

ಕಾಮಜ್ಞಂ ಕಾಮಿನೀನಾಂ ಚ ತಾಸಾಂ ಚ ಕಾಮಪೂರಕಂ ।
ಕೋಟಿಕಂದರ್ಪಲಾವಣ್ಯಂ ಲೀಲಾಲಂಕೃತಮೀಶ್ವರಂ ॥೧೪॥

ಕಾಂತೇ ಕಾಂತಂ ಚ ಮಾಂ ಕೃತ್ವಾ ಯದಿಸ್ಥಾತುಮಿಹೇಚ್ಛಸಿ ।
ತ್ವತ್ತೋ ಬಲವತೀ ರಾಧಾ ನ ಭದ್ರಂ ತೇ ಭವಿಷ್ಯತಿ ॥೧೫॥

ಯೋ ಯಸ್ಮಾದ್ಬಲವಾನ್ಪ್ರಾಣಿ ತತೋಽನ್ಯಂ ರಕ್ಷಿತುಂ ಕ್ಷಮಃ ।
ಕಥಂ ಪರಾನ್ಸಾಧಯತಿ ಯದಿ ಸ್ವಯಮನೀಶ್ವರಃ ॥೧೬॥

ಸರ್ವೇಶಃ ಸರ್ವಶಾಸ್ತಾಽಹಂ ರಾಧಾಂ ಬಾಧಿತುಮಕ್ಷಮಃ ।
ತೇಜಸಾ ಮತ್ಸಮಾ ಸಾ ಚ ರೂಪೇಣ ಚ ಗುಣೇನ ಚ ॥೧೭॥

ಪ್ರಾಣಾಧಿಷ್ಠಾತೃದೇವೀ ಸಾ ಪ್ರಾಣಾಂಸ್ತ್ಯಕ್ತುಂ ಚ ಕಃ ಕ್ಷಮಃ ।
ಪ್ರಾಣತೋಽಪಿ ಪ್ರಿಯಃ ಪುತ್ರಃ ಕೇಷಾಂ ವಾಸ್ತಿ ಚ ಕಶ್ಚನ ॥೧೮॥

---

ಸದ್ಗುಣಗಳಿಂದ ಕೂಡಿ ನನ್ನ ಸಮಾನನಾಗಿರುವನು. ಅವನು ಸ್ತ್ರೀಯರ ಇಷ್ಟವನ್ನು ಬಲ್ಲವನು. ಮತ್ತು ಅವರ ಇಷ್ಟಾರ್ಥವನ್ನು ಕೊಡುವನು. ಅನೇಕ ಅಲಂಕಾರ ಗಳನ್ನು ಮಾಡಿಕೊಂಡ ಕೋಟಿಜನ ಮನ್ಮಥರಷ್ಟು ಸುಂದರನಾಗಿರುವನು. ಮತ್ತು ಲೋಕಗಳಿಗೆಲ್ಲಕ್ಕೂ ಒಡೆಯನಾಗಿರುವನು. ॥೧೩-೧೪॥

ಎಲೈ ಸರಸ್ವತಿಯೇ, ನನ್ನನ್ನೇ ಪತಿಯಾಗಿ ಮಾಡಿಕೊಂಡು ಇಲ್ಲಿಯೇ ಇರ ಬೇಕೆಂದು ನೀನು ಬಯಸಿದರೆ ನನ್ನ ಪತ್ನಿಯಾದ ರಾಧೆಯು ಪ್ರಣಯಕೋಪದಲ್ಲಿ ನಿನಗಿಂತಲೂ ಬಲವಾದವಳಾದುದರಿಂದ ಸವತಿಯ ದುಃಖದಿಂದ ನಿನಗೆ ಒಳ್ಳೆಯ ದಾಗುವುದಿಲ್ಲ. ಯಾವನಾದರೂ ತನಗಿಂತ ದುರ್ಬಲನಾಗಿದ್ದರೆ ಅವನ ಶಿಕ್ಷೆರಕ್ಷಣೆ ಗಳನ್ನು ಮಾಡಬಹುದು. ಅಶಕ್ತನಾದವನು ಮತ್ತೊಬ್ಬನನ್ನು ಶಿಕ್ಷಿಸುವುದು ಸಾಧ್ಯ ವಲ್ಲ. ಎಂದರೆ ರಾಧೆಗಿಂತ ನಾನು ಬಲಶಾಲಿಯಲ್ಲ. ಆದುದರಿಂದ ನಿನ್ನನ್ನು ನಾನು ರಕ್ಷಿಸಲಾರನೆಂದು ಅಭಿಪ್ರಾಯವು. ॥೧೫-೧೬॥

ನಾನು ಸಮಸ್ತ ಪ್ರಪಂಚಕ್ಕೂ ಒಡೆಯನಾಗಿ ಎಲ್ಲರಿಗೂ ಆಜ್ಞೆಮಾಡುವಷ್ಟು ಶಕ್ತನಾದರೂ ರಾಧೆಯನ್ನು ಮಾತ್ರ ಬಾಧೆಪಡಿಸಲು ನಾನು ಶಕ್ತನಲ್ಲವು. ಆ ರಾಧೆಯು ರೂಪ, ಗುಣ, ತೇಜಸ್ಸುಗಳಲ್ಲಿ ನನಗೆ ಸಮಾನವಾಗಿರುವಳು. ॥೧೭॥

ತ್ವಂ ಭದ್ರೇ ಗಚ್ಛ ವೈಕುಂಠಂ ತವ ಭದ್ರಂ ಭವಿಷ್ಯತಿ ।
ಪತಿಂ ತಮೀಶ್ವರಂ ಕೃತ್ವಾ ಮೋದಸ್ವ ಸುಚಿರಂ ಸುಖಂ ॥೧೯॥

ಲೋಭಮೋಹಕಾಮಕ್ರೋಧಮಾನಹಿಂಸಾ ವಿವರ್ಜಿತಾ ।
ತೇಜಸಾ ತ್ವತ್ಸಮೋ ಲಕ್ಷ್ಮೀರೂಪೇಣ ಚ ಗುಣೇನ ಚ ॥೨೦॥

ತಯಾ ಸಾರ್ಧಂ ತವ ಪ್ರೀತ್ಯಾ ಶಶ್ವತ್ಕಾಲಃ ಪ್ರಯಾಸ್ಯತಿ ।
ಗೌರವಂ ಚ ಹರಿಸ್ತುಲ್ಯಂ ಕರಿಷ್ಯತಿ ದ್ವಯೋರಪಿ ॥೨೧॥

ಪ್ರತಿವಿಶ್ವೇಷು ತಾಂ ಪೂಜಾಂ ಮಹತೀಂ ಗೌರವಾನ್ವಿತಾಂ ।
ಮಾಘಸ್ಯ ಶುಕ್ಲಪಂಚಮ್ಯಾಂ ವಿದ್ಯಾರಂಭೇ ಚ ಸುಂದರೀ ॥೨೨॥

ಮಾನವಾ ಮನವೋ ದೇವಾ ಮುನೀಂದ್ರಾಶ್ಚ ಮುಮುಕ್ಷವಃ ।
ವಸವೋ ಯೋಗಿನಃ ಸಿದ್ಧಾ ನಾಗಾ ಗಂಧರ್ವ ರಾಕ್ಷಸಾಃ ॥೨೩॥

---

ನನ್ನ ಪ್ರಾಣಕ್ಕೆ ಆಶ್ರಯಳಾದ ದೇವತೆಯೇ ರಾಧೆಯು. ಪ್ರಾಣವನ್ನು ಬಿಡಲು ಯಾರಾದರೂ ಅಪೇಕ್ಷಿಸುವರೇ? ಲೋಕದಲ್ಲಿ ಪ್ರಾಣಕ್ಕಿಂತಲೂ ಪ್ರೀತಿ ಪಾತ್ರನಾದ ಮಗನಿರುವನೇ? ಆದುದರಿಂದ ಮಗನಿಗಿಂತಲೂ ಪ್ರಾಣವು ಪ್ರಿಯ ವಾದುದು. ಪ್ರಾಣಸ್ವರೂಪಳಾದ ರಾಧೆಯನ್ನು ನಾನು ನಿಗ್ರಹಿಸಲಾರೆನು ಮತ್ತು ಬಿಡಲಾರೆನು. ||೧೮||

ಎಲೈ ಮಂಗಳಕರಳಾದ ಸರಸ್ವತಿಯೇ, ಆದುದರಿಂದ ನೀನು ವೈಕುಂಠ ಲೋಕಕ್ಕೆ ಹೋಗು. ನಿನಗೆ ಮಂಗಳವಾಗುವುದು. ಆ ನಾರಾಯಣನನ್ನು ಪತಿಯಾಗಿ ವರಿಸಿ ಬಹಳಕಾಲ ಸುಖವನ್ನನುಭವಿಸು. ಅಲ್ಲಿ ನಾರಾಯಣನ ಪತ್ನಿಯಾದ ಲಕ್ಷ್ಮಿಯು ರಾಧೆಯಂತೆ ಕೋಪವುಳ್ಳವಳಲ್ಲ. ಕಾಮ, ಕ್ರೋಧ, ಲೋಭ, ಮೋಹ, ಮಾನ, ಹಿಂಸೆ ಎಂಬ ದುರ್ಗುಣಗಳು ಅವಳಲ್ಲಿಲ್ಲ. ತೇಜಸ್ಸು, ರೂಪಗುಣಗಳಿಂದ ನಿನಗೆ ಸಮಾನಗಳಾಗಿರುವಳು. ಅವಳೊಡನೆ ನೀನು ಪ್ರೀತಿಯಿಂದ ಕಾಲವನ್ನು ಕಳೆಯಬಹುದು. ಆ ನಾರಾಯಣನು ನಿಮ್ಮಿಬ್ಬರಿಗೂ ಸಮಾನವಾದ ಪ್ರೀತಿಯ ಮರ್ಯಾದೆಯನ್ನು ಮಾಡುವನು. ||೧೯-೨೦-೨೧||

ಎಲೈ ಸುಂದರಿಯಾದ ಸರಸ್ವತಿಯೇ, ಪ್ರತಿಯೊಂದು ಪ್ರಪಂಚದಲ್ಲಿಯೂ ಮಾಘ ಶುಕ್ಲ ಪಂಚಮಿಯ ದಿನ ವಿದ್ಯಾರಂಭದ ದಿನವಾದುದರಿಂದ ಸಮಸ್ತ ಮಾನ

ಮುದ್ವರೇಣ ಕರಿಷ್ಯಂತಿ ಕಲ್ಪೇ ಕಲ್ಪೇ ಲಯಾವಧಿ ।
ಭಕ್ತಿಯುಕ್ತಾಶ್ಚ ದತ್ವಾ ವೈ ಚೋಪಚಾರಾಣಿ ಷೋಡಶ ॥೨೪॥

ಕಣ್ವಶಾಖೋಕ್ತವಿಧಿನಾ ಧ್ಯಾನೇನ ಸ್ತವನೇನ ಚ ।
ಜಿತೇಂದ್ರಿಯಾಃ ಸಂಯುತಾಶ್ಚ ಘಟೇ ಚ ಪುಸ್ತಕೇಽಪಿ ಚ ॥೨೫॥

ಕೃತ್ವಾ ಸುವರ್ಣಗುಟಿಕಾಂ ಗಂಧಚಂದನಚರ್ಚಿತಾಂ ।
ಕವಚಂ ತೇ ಗ್ರಹೀಷ್ಯಂತಿ ಕಂಠೇ ವಾ ದಕ್ಷಿಣೇ ಭುಜೇ ॥೨೬॥

ಪಠಿಷ್ಯಂತಿ ಚ ವಿದ್ವಾಂಸಃ ಪೂಜಾಕಾಲೇ ಚ ಪೂಜಿತೇ ।
ಇತ್ಯುಕ್ತ್ವಾ ಪೂಜಯಾಮಾಸ ತಾಂ ದೇವೀಂ ಸರ್ವಪೂಜಿತಾಂ॥೨೭॥

ತತಸ್ತತ್ಪೂಜನಂ ಚಕ್ರುರ್ಬ್ರಹ್ಮವಿಷ್ಣುಶಿವಾದಯಃ ।
ಅನಂತಶ್ಚಾಪಿ ಧರ್ಮಶ್ಚ ಮುನೀಂದ್ರಾಃ ಸನಕಾದಯಃ ॥೨೮॥

---

ವರೂ, ಮನುಗಳೂ, ಮುನಿಗಳೂ, ದೇವತೆಗಳೂ, ರಾಕ್ಷಸರೂ, ಸಿದ್ಧರೂ, ವಸುಗಳೂ, ಯೋಗಿಗಳೂ, ಗಂಧರ್ವರೂ, ಮುಮುಕ್ಷುಗಳೂ, ನಾಗರೂ ನನ್ನ ವರದಿಂದ ನಿನ್ನ ಪೂಜೆಯನ್ನು ಭಕ್ತಿಯಿಂದ ಮಾಡುವರು. ಪ್ರತಿಯೊಂದು ಕಲ್ಪದಲ್ಲಿಯೂ ಪ್ರಪಂಚವು ಲಯವಾಗುವ ಪರ್ಯಂತ ಕಣ್ವಶಾಖೋಕ್ತವಾದ ವಿಧಿಯಂತೆ ಪುಸ್ತಕಗಳಲ್ಲಿಯೂ, ಕಲಶಗಳಲ್ಲಿಯೂ ನಿನ್ನನ್ನು ಆವಾಹಿಸಿ ಷೋಡಶೋಪಚಾರ ಪೂಜೆಗಳನ್ನು ಮಾಡಿ, ಜಿತೇಂದ್ರಿಯರಾಗಿ ನಿನ್ನ ಧ್ಯಾನವನ್ನೂ ಸ್ತೋತ್ರಗಳನ್ನೂ ಮಾಡುವರು. ಈಗ ದೊರೆಯುವ ಆ ಶಾಖೆಯಲ್ಲಿ ಈ ಪೂಜಾವಿಧಿಯು ಕಾಣಬರುವುದಿಲ್ಲವಾದುದರಿಂದ ಆ ಭಾಗವೂ ಲುಪ್ತವಾಗಿ ಹೋಗಿರಬೇಕೆಂದು ತಿಳಿಯಬೇಕು. ॥೨೨-೨೩-೨೪-೨೫॥

ಪೂಜ್ಯಳಾದ ಸರಸ್ವತಿಯೇ, ವಿದ್ವಾಂಸರು ನಿನ್ನ ಪೂಜಾಕಾಲದಲ್ಲಿ ನಿನ್ನ ಕವಚವನ್ನು ಹೇಳುವರು. ಮತ್ತು ಆ ಕವಚವನ್ನು ಭುಜಪತ್ರೆಯಲ್ಲಿ ಅಷ್ಟಗಂಧಗಳಿಂದ ಬರೆದು ಅದನ್ನು ಚಿನ್ನದ ತಾಯಿತದಲ್ಲಿ ಹಾಕಿ ಕುತ್ತಿಗೆಯಲ್ಲಾಗಲೀ ಬಲದ ತೋಳಿನಲ್ಲಾಗಲೀ ಧರಿಸುವರು. ಹೀಗೆಂದು ಹೇಳಿ ಕೃಷ್ಣನು ಆ ಸರಸ್ವತಿಯನ್ನು ಪೂಜಿಸಿದನು. ॥೨೬-೨೭॥

ಆ ಮೇಲೆ ಬ್ರಹ್ಮ, ವಿಷ್ಣು, ಶಿವನೇ ಮೊದಲಾದ ದೇವತೆಗಳೂ ಸನಕಾದಿ ಮುನಿಗಳೂ ಆದಿಶೇಷನೂ, ಧರ್ಮನೂ, ರಾಜರೂ, ಸಮಸ್ತಜನರೂ, ಆ ಸರಸ್ವತಿಯ

ಸರ್ವೇ ದೇವಾಶ್ಚ ಮುನಯೋ ನೃಪಾಶ್ಚ ಮಾನವಾದಯಃ ।
ಬಭೂವ ಪೂಜಿತಾ ನಿತ್ಯಾ ಸರ್ವಲೋಕೈಃ ಸರಸ್ವತೀ ॥೨೯॥

॥ ನಾರದ ಉವಾಚ ॥

ಪೂಜಾವಿಧಾನಂ ಕವಚಂ ಧ್ಯಾನಂ ಚಾಪಿ ನಿರಂತರಂ ।
ಪೂಜೋಪಯುಕ್ತಂ ನೈವೇದ್ಯಂ ಪುಷ್ಪಂ ಚ ಚಂದನಾದಿಕಂ ॥೩೦॥

ವದ ವೇದವಿದಾಂ ಶ್ರೇಷ್ಠ ಶ್ರೋತುಂ ಕೌತೂಹಲಂ ಮಮ ।
ವರ್ತತೇ ಹೃದಯೇ ಶಶ್ವತ್ಕಿಮಿದಂ ಶ್ರುತಿಸುಂದರಂ ॥೩೧॥

॥ ಶ್ರೀನಾರಾಯಣ ಉವಾಚ ॥

ಶೃಣು ನಾರದ ವಕ್ಷ್ಯಾಮಿ ಕಣ್ವಶಾಖೋಕ್ತಪದ್ಧತಿಂ ।
ಜಗನ್ಮಾತುಃ ಸರಸ್ವತ್ಯಾಃ ಪೂಜಾವಿಧಿಸಮನ್ವಿತಾಂ ॥೩೨॥

ಮಾಘಸ್ಯ ಶುಕ್ಲಪಂಚಮ್ಯಾಂ ವಿದ್ಯಾರಂಭೇ ದಿನೇಽಪಿ ಚ ।
ಪೂರ್ವೇಽಹ್ನಿ ಸಮಯಂ ಕೃತ್ವಾ ತತ್ರಾಹ್ನಿ ಸಂಯತಃ ಶುಚಿಃ ॥೩೩॥

---

ಪೂಜೆಯನ್ನು ಮಾಡಿದರು. ಬಳಿಕ ಸರಸ್ವತಿಯು ಸಮಸ್ತ ಜನರಿಂದಲೂ ಯಾವಾಗಲೂ ಪೂಜಿಸಲ್ಪಡುವಳಾದಳು. ॥೨೮-೨೯॥

ನಾರದನು ಹೇಳಿದನು — ವೇದವನ್ನು ಬಲ್ಲವರಲ್ಲಿ ಶ್ರೇಷ್ಠನಾದ ನಾರಾಯಣ ಮುನಿಯೇ, ಆ ಸರಸ್ವತೀದೇವಿಯ ಪೂಜೆಯ ವಿಧಿಯನ್ನೂ ಕವಚವನ್ನೂ ಧ್ಯಾನ ಪ್ರಕಾರವನ್ನೂ ಪೂಜೆಗೆ ಉಪಯೋಗಿಸುವ ನೈವೇದ್ಯ, ಹೂವು, ಗಂಧ ಮುಂತಾದುವನ್ನೂ ಕೇಳಬೇಕೆಂದು ನನ್ನ ಮನಸ್ಸಿನಲ್ಲಿ ಕುತೂಹಲವಿರುವುದು. ಕಿವಿಗಿಂಪಾದ ಈ ವಿಷಯವನ್ನು ಹೇಳಬೇಕು. ॥೩೦-೩೧॥

ಶ್ರೀ ನಾರಾಯಣನು ಹೇಳಿದನು — ಎಲೈ ನಾರದನೇ, ಕಣ್ವಶಾಖೆಯ ಪದ್ಧತಿಯನ್ನು ಅನುಸರಿಸಿ ಲೋಕಕ್ಕೆ ತಾಯಿಯಾದ ಸರಸ್ವತೀದೇವಿಯ ಪೂಜಾವಿಧಿಯನ್ನು ಹೇಳುವೆನು, ಕೇಳು. ॥೩೨॥

ಮಾಘ ಶುದ್ಧ ಪಂಚಮಿಯು ವಿದ್ಯಾರಂಭದಿನವಾದುದರಿಂದ ಅದರ ಹಿಂದಿನ ದಿನದಲ್ಲಿ ಸರಸ್ವತೀಪೂಜೆಯನ್ನು ಮಾಡುವೆನೆಂದು ಸಂಕಲ್ಪಮಾಡಿ, ಆ ದಿವಸದಲ್ಲಿ ಇಂದ್ರಿಯನಿಗ್ರಹಪೂರ್ವಕವಾಗಿ ಸ್ನಾನಮಾಡಿ ಸಂಧ್ಯಾದಿ ನಿತ್ಯಕರ್ಮಗಳನ್ನು

ಸ್ನಾತ್ವಾ ನಿತ್ಯಕ್ರಿಯಾಃ ಕೃತ್ವಾ ಘಟಂ ಸಂಸ್ಥಾಪ್ಯ ಭಕ್ತಿತಃ ।
ಸ್ವಶಾಖೋಕ್ತವಿಧಾನೇನ ತಾಂತ್ರಿಕೇಣಾಥವಾ ಪುನಃ ॥೩೪॥

ಗಣೇಶಂ ಪೂರ್ವಮಭ್ಯರ್ಚ್ಯ ತತೋಽಭೀಷ್ಟಾಂ ಪ್ರಪೂಜಯೇತ್ ।
ಧ್ಯಾನೇನ ವಕ್ಷ್ಯಮಾಣೇನ ಧ್ಯಾತ್ವಾ ಬಾಹ್ಯಘಟೇ ಧ್ರುವಂ ॥೩೫॥

ಧ್ಯಾತ್ವಾ ಪುನಃ ಷೋಡಶೋಪಚಾರೇಣ ಪೂಜಯೇದ್ವ್ರತೀ ।
ಪಂಚೋಪಯುಕ್ತನೈವೇದ್ಯಂ ಯಚ್ಚ ವೇದನಿರೂಪಿತಂ ॥೩೬॥

ವಕ್ಷ್ಯಾಮಿ ಸೌಮ್ಯ ತತ್ಕಿಂಚಿದ್ಯಥಾಽಧೀತಂ ಯಥಾಽಽಗಮಂ ।
ನವನೀತಂ ದಧಿ ಕ್ಷೀರಂ ಲಾಜಾಂ ಶ್ಚ ತಿಲಲಡ್ಡುಕಂ ॥೩೭॥

ಇಕ್ಷುಮಿಕ್ಷುರಸಂ ಶುಕ್ಲವರ್ಣಂ ಪಕ್ವಗುಡಂ ಮಧು ।
ಸ್ವಸ್ತಿಕಂ ಶರ್ಕರಾಶುಕ್ಲಧಾನ್ಯಸ್ಯಾಕ್ಷತಮಕ್ಷತಂ ॥೩೮॥

ಅಸ್ವಿನ್ನಶುಕ್ಲಧಾನ್ಯಸ್ಯ ಪೃಥುಕಂ ಶುಕ್ಲಮೋದಕಂ ।
ಘೃತಸೈಂಧವಸಂಯುಕ್ತಂ ಹವಿಷ್ಯಾನ್ನಂ ಯಥೋದಿತಂ ॥೩೯॥

---

ಮಾಡಿದ ಮೇಲೆ, ಸ್ವಶಾಖೆಯ ವಿಧಿಯಿಂದಲಾದರೂ ತಂತ್ರೋಕ್ತರೀತಿಯಿಂದಲಾದರೂ ಭಕ್ತಿಯಿಂದ ಕಲಶಸ್ಥಾಪನೆಯನ್ನು ಮಾಡಬೇಕು. ॥೩೩-೩೪॥

ಮೊದಲು ಗಣೇಶನನ್ನು ಪೂಜಿಸಿ ಆಮೇಲೆ ಸರಸ್ವತೀದೇವಿಯನ್ನು ಪೂಜಿಸಬೇಕು. ಮುಂದೆ ಹೇಳುವ ಧ್ಯಾನಕ್ರಮದಂತೆ ಹೊರಗಿನ ಕಲಶದಲ್ಲಿ ಧ್ಯಾನಮಾಡಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಪೂಜೆಗೆ ಉಪಯೋಗಿಸುವ ಐದು ಬಗೆಯ ನೈವೇದ್ಯ ಮುಂತಾದುವನ್ನು ವೇದ ಆಗಮಶಾಸ್ತ್ರಗಳಲ್ಲಿ ಹೇಳಿರುವುದನ್ನು ಅನುಸರಿಸಿ ಹೇಳುವೆನು. ॥೩೫-೩೬॥

ಬೆಣ್ಣೆ, ಮೊಸರು, ಹಾಲು, ಅರಳು, ಎಳ್ಳುಂಡೆ, ಕಬ್ಬು, ಕಬ್ಬಿನಹಾಲು, ಬಿಳಿಯ ಬೆಲ್ಲ, ಜೇನು, ಮಂಗಳಕರವಾದ ದ್ರವ್ಯಗಳು, ಸಕ್ಕರೆ, ಬಿಳಿಯಧಾನ್ಯಗಳು, ನೆನಸದೇ ಇರುವ ಅವಲಕ್ಕಿ, ಕಡುಬು, ತುಪ್ಪ, ಸೈಂಧವಲವಣದೊಡನೆ ಕೂಡಿದ ಹವಿಸ್ಸು, ಯವೆಗೋಧಿ ಇವುಗಳ ಹಿಟ್ಟುಗಳಿಂದ ಮಾಡಿದ ತುಪ್ಪಬೆರೆಸಿದ ತಂಬಿಟ್ಟು, ಮಂಗಳದ್ರವ್ಯಗಳ ಹಿಟ್ಟುಗಳು, ಪಾಯಸ, ಅಮೃತಕ್ಕೆ ಸಮಾನವಾದ ಹಾಲನ್ನ, ತುಪ್ಪದನ್ನ, ಶಾಲ್ಯನ್ನ, ಪೊಂಗಲು, ತೆಂಗಿನಕಾಯಿ, ಎಳನೀರು, ಗೆಣಸು, ಹಸಿಶುಂಠಿ,

ಯವಗೋಧೂಮಚೂರ್ಣಾನಾಂ ಪಿಷ್ಟಕಂ ಘೃತಸಂಯುತಂ ।
ಪಿಷ್ಟಕಂ ಸ್ವಸ್ತಿಕಸ್ಯಾಪಿ ಪಕ್ವರಂಭಾಫಲಸ್ಯ ಚ ॥೪೦॥

ಪರಮಾನ್ನಂ ಚ ಸಘೃತಂ ಮಿಷ್ಟಾನ್ನಂ ಚ ಸುಧೋಪಮಂ ।
ನಾರಿಕೇಳಂ ತದುದಕಂ ಕಸೇರುಂ ಮೂಲಮಾರ್ದ್ರಕಂ ॥೪೧॥

ಪಕ್ವರಂಭಾಫಲಂ ಚಾರು ಶ್ರೀಫಲಂ ಬದರೀಫಲಂ ।
ಕಾಲದೇಶೋದ್ಭವಂ ಚಾರು ಫಲಂ ಶುಕ್ಲಂ ಚ ಸಂಸ್ಕೃತಂ ॥೪೨॥

ಸುಗಂಧಂ ಶುಕ್ಲಪುಷ್ಪಂ ಚ ಸುಗಂಧಂ ಶುಕ್ಲಚಂದನಂ ।
ನವೀನಂ ಶುಕ್ಲವಸ್ತ್ರಂ ಚ ಶಂಖಂ ಚ ಸುಂದರಂ ಮುನೇ ॥೪೩॥

ಮಾಲ್ಯಂ ಚ ಶುಕ್ಲಪುಷ್ಪಾಣಾಂ ಶುಕ್ಲಹಾರಂ ಚ ಭೂಷಣಂ ।
ಯಾದೃಶಂ ಚ ಶ್ರುತೌ ಧ್ಯಾನಂ ಪ್ರಶಸ್ಯಂ ಶ್ರುತಿಸುಂದರಂ ॥೪೪॥

ತನ್ನಿಬೋಧ ಮಹಾಭಾಗ ಭ್ರಮಭಂಜನಕಾರಣಂ ।
ಸರಸ್ವತೀಂ ಶುಕ್ಲವರ್ಣಾಂ ಸಸ್ಮಿತಾಂ ಸುಮನೋಹರಾಂ ॥೪೫॥

---

ಕಳಿತ ಬಾಳೆಯಹಣ್ಣು, ಸೊಗಸಾದ ಬಿಲ್ವಪತ್ರೆಯ ಹಣ್ಣು, ಎಲಚಿಯ ಹಣ್ಣು, ಆ ಆ ಕಾಲದಲ್ಲಿ ಮತ್ತು ಪ್ರದೇಶದಲ್ಲಿ ಸಿಕ್ಕತಕ್ಕ ಉತ್ತಮವೂ ಪರಿಶುದ್ಧವೂ ಆದ ರಸವಿಶೇಷಗಳಲ್ಲಿ ಭಾವನೆಮಾಡಿದ ಹಣ್ಣುಗಳು, ಇವುಗಳೆಲ್ಲವೂ ಆ ದೇವಿಯ ನೈವೇದ್ಯಕ್ಕೆ ಉಪಯುಕ್ತವಾದ ವಸ್ತುಗಳು. ॥೩೭-೩೮-೩೯-೪೦-೪೧-೪೨॥

ಸುವಾಸನೆಯಾದ ಬಿಳಿಯ ಹೂವುಗಳೂ, ಬಿಳಿಯ ಗಂಧಗಳೂ, ಹೊಸದಾದ ಬಿಳಿಯ ವಸ್ತ್ರ, ಸುಂದರವಾದ ಶಂಖ, ಬಿಳಿಯ ಹೂವುಗಳ ಹಾರವೂ, ಬಿಳಿಯ ರತ್ನಗಳ ಸರಗಳೂ, ಆ ದೇವಿಯ ಪೂಜಾದ್ರವ್ಯಗಳು. ॥೪೩॥

ಎಲೈ ಪುಣ್ಯಶಾಲಿಯೇ, ಕಿವಿಗಿಂಪಾದ, ಪ್ರಸಿದ್ಧವಾದ ವೇದದಲ್ಲಿ ಹೇಳಿರುವ, ಸರಸ್ವತಿಯ ಧ್ಯಾನಕ್ರಮವನ್ನು ತಿಳಿಯಹೇಳುವೆನು. ಆ ಧ್ಯಾನವು ಮನುಜರಿಗುಂಟಾಗಿರಬಹುದಾದ ಭ್ರಾಂತಿಯನ್ನು ನಿವಾರಣಮಾಡುವುದು. ಅದನ್ನು ವಿವರಿಸಿ ಹೇಳುವೆನು, ಕೇಳು. ॥೪೪॥

ಬಿಳಿಯ ಬಣ್ಣವುಳ್ಳ, ನಗುಮುಖದಿಂದ ಮನೋಹರಳಾದ, ಲೆಕ್ಕವಿಲ್ಲದಷ್ಟು ಚಂದ್ರರ ಕಾಂತಿಯನ್ನೂ ಮೀರಿಸುವ ಸಂಪೂರ್ಣವಾದ ಕಾಂತಿಯಿಂದ ಕೂಡಿದ,

ಕೋಟಿಚಂದ್ರಪ್ರಭಾಮುಷ್ಟಪುಷ್ಟಶ್ರೀಯುಕ್ತವಿಗ್ರಹಾಂ ।
ವಹ್ನಿಶುದ್ಧಾಂಶುಕಾಧಾನಾಂ ವೀಣಾಪುಸ್ತಕಧಾರಿಣೀಂ ॥೪೬॥

ರತ್ನಸಾರೇಂದ್ರನಿರ್ಮಾಣ ನವಭೂಷಣಭೂಷಿತಾಂ ।
ಸುಪೂಜಿತಾಂ ಸುರಗಣೈಃ ಬ್ರಹ್ಮವಿಷ್ಣುಶಿವಾದಿಭಿಃ ॥೪೭॥

ವಂದೇ ಭಕ್ತ್ಯಾ ವಂದಿತಾಂ ಚ ಮುನೀಂದ್ರಮನುಮಾನವೈಃ ।
ಏವಂ ಧ್ಯಾತ್ವಾ ಚ ಮೂಲೇನ ಸರ್ವಂ ದತ್ವಾ ವಿಚಕ್ಷಣಃ ॥೪೮॥

ಸಂಸ್ತೂಯ ಕವಚಂ ಧೃತ್ವಾ ಪ್ರಣಮೇದ್ದಂಡವದ್ಭುವಿ ।
ಯೇಷಾಂ ಚೇಯಂ ಇಷ್ಟದೇವೀ ತೇಷಾಂ ನಿತ್ಯಾ ಕ್ರಿಯಾ ಮುನೇ ॥೪೯॥

ವಿದ್ಯಾರಂಭೇ ಚ ವರ್ಷಾಂತೇ ಸರ್ವೇಷಾಂ ಪಂಚಮೀದಿನೇ ।
ಸರ್ವೋಪಯುಕ್ತೋ ಮೂಲಂ ಚ ವೈದಿಕಾಷ್ಟಾಕ್ಷರಃ ಪರಃ ॥೫೦॥

---

ಪರಿಶುದ್ಧವಾದ ವಸ್ತ್ರವನ್ನುಟ್ಟು, ಕೈಯಲ್ಲಿ ವೀಣೆಯನ್ನೂ ಪುಸ್ತಕವನ್ನೂ ಹಿಡಿದು, ಸಾರವಾದ ಶ್ರೇಷ್ಠವಾದ ರತ್ನಗಳಿಂದ ಮಾಡಿದ ಹೊಸದಾದ ಒಡವೆಗಳನ್ನು ಧರಿಸಿರುವ, ಬ್ರಹ್ಮ ವಿಷ್ಣು ಮಹೇಶ್ವರರೇ ಮೊದಲಾದ ದೇವತೆಗಳಿಂದಲೂ, ಪೂಜೆಯನ್ನು ಹೊಂದಿ ನಮಸ್ಕರಿಸಲ್ಪಟ್ಟ ಸರಸ್ವತೀದೇವಿಯನ್ನು ಉಪಾಸಕನು ಭಕ್ತಿಯಿಂದ ನಮಸ್ಕರಿಸುವನು. ॥೪೫-೪೬-೪೭॥

ಬುದ್ಧಿವಂತನಾದವನು ಮೇಲೆ ಹೇಳಿರುವ ಶ್ಲೋಕಗಳಿಂದ ಧ್ಯಾನಸ್ತೋತ್ರಗಳನ್ನು ಮಾಡಿ ಸಮಸ್ತ ಪೂಜಾಸಮರ್ಪಣೆಯನ್ನು ಮಾಡಿ ಸರಸ್ವತಿಯ ಮಂತ್ರರೂಪವಾದ ಕವಚವನ್ನು ಧರಿಸಿಕೊಂಡು, ಭೂಮಿಯಲ್ಲಿ ಸಾಷ್ಟಾಂಗನಮಸ್ಕಾರಗಳನ್ನು ಮಾಡಬೇಕು. ॥೪೮॥

ಸಮಸ್ತರೂ ವಿದ್ಯಾರಂಭಕಾಲದಲ್ಲಿ ಸರಸ್ವತಿಯನ್ನು ಪೂಜಿಸಬೇಕು. ಯಾರಿಗೆ ಸರಸ್ವತಿಯು ಇಷ್ಟದೇವತೆಯಾಗಿರುವಳೋ, ಅವರು ಮಾಘ ಶುದ್ಧ ಪಂಚಮಿಯ ದಿನ ಅವಶ್ಯಕವಾಗಿ ಸರಸ್ವತಿಯನ್ನು ತಪ್ಪದೆ ಪೂಜಿಸಬೇಕು. ॥೪೯॥

ಸಮಸ್ತರಿಗೂ ಉಪಯುಕ್ತವಾದ ವೈದಿಕವಾದ ಸರಸ್ವತಿಯ ಅಷ್ಟಾಕ್ಷರ ಮಂತ್ರವು ಯಾರಿಗೆ ಯಾವ ಮೂಲಕಾರಣದಿಂದ ಉಪದೇಶಕ್ರಮಕ್ಕೆ ಅನುಸಾರವಾಗಿ ಬಂದಿರುವುದೋ, ಆ ಕಾರಣದಿಂದ ಈ ಮೂಲಮಂತ್ರವು ಸಮಸ್ತ ಫಲಗಳಿಗೂ ಕಾರಣವಾಗಿರುವುದು. ಶ್ರೀಬೀಜ ಮಾಯಾಬೀಜಗಳು ಆದಿಯಲ್ಲಿಯೂ ಚತುರ್ಥೀ

**ಯೇಷಾಂ ಯೇನೋಪದೇಶೋ ವಾ ತೇಷಾಂ ಸ ಮೂಲ ಏವ ಚ ।**
**ಸರಸ್ವತೀಚತುರ್ಥ್ಯಂತಂ ವಹ್ನಿಜಾಯಾಂ ತಮೇವ ಚ ॥೫೧॥**

**ಲಕ್ಷ್ಮೀ ಮಾಯಾದಿಕಂ ಚೈವ ಮಂತ್ರೋಽಯಂ ಕಲ್ಪಪಾದಪಃ ।**
**ಪುರಾ ನಾರಾಯಣಶ್ಚೇಮಂ ವಾಲ್ಮೀಕಾಯ ಕೃಪಾನಿಧಿಃ ॥೫೨॥**

**ಪ್ರದದೌ ಜಾಹ್ನವೀತೀರೇ ಪುಣ್ಯಕ್ಷೇತ್ರೇ ಚ ಭಾರತೇ ।**
**ಭೃಗುರ್ದದೌ ಚ ಶುಕ್ರಾಯ ಪುಷ್ಕರೇ ಸೂರ್ಯಪರ್ವಣಿ ॥೫೩॥**

**ಚಂದ್ರಪರ್ವಣಿ ಮಾರೀಚೋ ದದೌ ವಾಕ್ಪತಯೇ ಮುದಾ ।**
**ಭೃಗೋಶ್ಚೈವ ದದೌ ತುಷ್ಟೋ ಬ್ರಹ್ಮಾ ಬದರಿಕಾಶ್ರಮೇ ॥೫೪॥**

**ಆಸ್ತಿಕಸ್ಯ ಜರತ್ಕಾರುಃ ದದೌ ಕ್ಷೀರೋದಸನ್ನಿಧೌ ।**
**ವಿಭಾಂಡಕೋ ದದೌ ಮೇರೌ ಋಷ್ಯಶೃಂಗಾಯ ಧೀಮತೇ ॥೫೫॥**

**ಶಿವಃ ಕಣಾದಮುನಯೇ ಗೌತಮಾಯ ದದೌ ಮುದಾ ।**
**ಸೂರ್ಯಶ್ಚ ಯಾಜ್ಞವಲ್ಕ್ಯಾಯ ತಥಾ ಕಾತ್ಯಾಯನಾಯ ಚ॥೫೬॥**

**ಶೇಷಃ ಪಾಣಿನಯೇ ಚೈವ ಭಾರದ್ವಾಜಾಯ ಧೀಮತೇ ।**
**ದದೌ ಶಾಕಟಾಯನಾಯ ಸುತಲೇ ಬಲಿಸಂಸದಿ ॥೫೭॥**

---

ವಿಭಕ್ತ್ಯಂತ ಸರಸ್ವತೀ ಶಬ್ದವು ಮಧ್ಯದಲ್ಲಿಯೂ ಸ್ವಾಹಾಶಬ್ದವು ಕೊನೆಯಲ್ಲಿಯೂ ಇರುವ " ಶ್ರೀಂ ಹ್ರೀಂ ಸರಸ್ವತ್ಯೈಸ್ವಾಹಾ " ಎಂಬುದೇ ಸರಸ್ವತಿಯ ಅಷ್ಟಾಕ್ಷರ ಮಂತ್ರವು. ಇದು ಕಲ್ಪವೃಕ್ಷದಂತೆ ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕುದಾಗಿರುವುದು. ॥೫೦-೫೧॥

ಪೂರ್ವದಲ್ಲಿ ಈ ಮಂತ್ರವನ್ನು ನಾರಾಯಣನು ಗಂಗಾತೀರದಲ್ಲಿ ವಾಲ್ಮೀಕಿಗೂ, ಸೂರ್ಯಗ್ರಹಣ ಕಾಲದಲ್ಲಿ ಭೃಗುವು ಪುಷ್ಕರಕ್ಷೇತ್ರದಲ್ಲಿ ಶುಕ್ರನಿಗೂ, ಚಂದ್ರಗ್ರಹಣಕಾಲದಲ್ಲಿ ಮರೀಚಿಪುತ್ರನಾದ ಕಶ್ಯಪನು ಬೃಹಸ್ಪತಿಗೂ, ಬ್ರಹ್ಮನು ಬದರಿಕಾಶ್ರಮದಲ್ಲಿ ಭೃಗುಋಷಿಗೂ, ಜರತ್ಕಾರುಮುನಿಯು ಕ್ಷೀರಸಮುದ್ರದ ಸಮೀಪದಲ್ಲಿ ಆಸ್ತೀಕಮುನಿಗೂ, ವಿಭಾಂಡಕಮುನಿಯು ಮೇರುಪರ್ವತದಲ್ಲಿ ಋಷ್ಯಶೃಂಗನಿಗೂ, ಶಿವನು ಕಣಾದಮುನಿಗೂ, ಗೌತಮನಿಗೂ, ಸೂರ್ಯನು ಯಾಜ್ಞಾವಲ್ಕ್ಯ ಮತ್ತು ಕಾತ್ಯಾಯನ ಋಷಿಗಳಿಗೂ, ಆದಿಶೇಷನು ಸುತಲಲೋಕದಲ್ಲಿ ಬಲಿಚಕ್ರ

ಚತುರ್ಲಕ್ಷಜಪೇನೈವ ಮಂತ್ರಃ ಸಿದ್ಧೋ ಭವೇನ್ನೃಣಾಂ ।
ಯದಿ ಸ್ಯಾನ್ಮಂತ್ರಸಿದ್ಧೋ ಹಿ ಬೃಹಸ್ಪತಿಸಮೋ ಭವೇತ್ ॥೫೮॥

ಕವಚಂ ಶೃಣು ವಿಪ್ರೇಂದ್ರ ಯದ್ದತ್ತಂ ಬ್ರಹ್ಮಣಾ ಪುರಾ ।
ವಿಶ್ವಸ್ರಷ್ಟ್ರಾ ವಿಶ್ವಜಯಂ ಭೃಗವೇ ಗಂಧಮಾದನೇ ॥೫೯॥

॥ ಭೃಗುರುವಾಚ ॥

ಬ್ರಹ್ಮನ್ ಬ್ರಹ್ಮವಿದಾಂ ಶ್ರೇಷ್ಠ ಬ್ರಹ್ಮಜ್ಞಾನವಿಶಾರದ ।
ಸರ್ವಜ್ಞ ಸರ್ವಜನಕ ಸರ್ವೇಶ ಸರ್ವಪೂಜಿತ ॥೬೦॥

ಸರಸ್ವತ್ಯಾಶ್ಚ ಕವಚಂ ಬ್ರೂಹಿ ವಿಶ್ವಜಯಂ ಪ್ರಭೋ ।
ಅಯಾತಯಾಮಂ ಮಂತ್ರಾಣಾಂ ಸಮೂಹಸಂಯುತಂ ಪರಂ॥೬೧॥

॥ ಬ್ರಹ್ಮೋವಾಚ ॥

ಶೃಣು ವತ್ಸ ಪ್ರವಕ್ಷ್ಯಾಮಿ ಕವಚಂ ಸರ್ವಕಾಮದಂ ।
ಶ್ರುತಿಸಾರಂ ಶ್ರುತಿಸುಖಂ ಶ್ರುತ್ಯುಕ್ತಂ ಶ್ರುತಿಪೂಜಿತಂ ॥೬೨॥

---

ವರ್ತಿಯ ಸಭೆಯಲ್ಲಿ ಪಾಣಿನಿಗೂ, ಭಾರದ್ವಾಜಮುನಿಗೂ ಮತ್ತು ಶಾಕಟಾಯನನಿಗೂ ಉಪದೇಶಮಾಡಿದರು. ॥೫೨-೫೩-೫೪-೫೫-೫೬-೫೭॥

ಮನುಜರಿಗೆ ಈ ಮಂತ್ರವು ನಾಲ್ಕುಲಕ್ಷ ಜಪದಿಂದ ಸಿದ್ಧಿಸುವುದು. ಅಂತಹ ಮಂತ್ರಸಿದ್ಧನು ಬೃಹಸ್ಪತಿಗೆ ಸಮನಾಗುವನು. ಎಲೈ ನಾರದಮುನಿಯೇ, ಸರಸ್ವತಿಯ ಕವಚವನ್ನು ಪ್ರಪಂಚವನ್ನು ಸೃಷ್ಟಿಮಾಡಿದ ಬ್ರಹ್ಮನು ಪೂರ್ವದಲ್ಲಿ ಗಂಧಮಾದನ ಪರ್ವತದಲ್ಲಿ ಭೃಗುಮುನಿಗೆ ಉಪದೇಶಮಾಡಿದನು. ಈ ಕವಚಕ್ಕೆ ವಿಶ್ವಜಯವೆಂದು ಹೆಸರು ಇರುವುದು. ॥೫೮-೫೯॥

ಭೃಗುವು ಬ್ರಹ್ಮನನ್ನು ಕುರಿತು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ, ಮಹಾಬ್ರಹ್ಮಜ್ಞಾನಿಯೂ, ಸರ್ವವನ್ನೂ ತಿಳಿದವನೂ, ಸಮಸ್ತಪ್ರಪಂಚವನ್ನೂ ಸೃಷ್ಟಿಸಿ ಅವುಗಳಿಗೆ ಒಡೆಯನಾಗಿ ಆ ಪ್ರಪಂಚದ ಜನರಿಂದ ಪೂಜಿಸಲ್ಪಡುತ್ತಿರುವವನೂ, ಆದ ಬ್ರಹ್ಮನೇ, ನಿರ್ದೋಷವಾದ ಮಂತ್ರಗಳ ಸಮೂಹದಿಂದ ಕೂಡಿದ ವಿಶ್ವಜಯವೆಂಬ ಸರಸ್ವತಿಯ ಕವಚವನ್ನು ಹೇಳು. ಎಂದು ಕೇಳಿದನು. ॥೬೦-೬೧॥

ಬ್ರಹ್ಮನು ಹೇಳಿದನು—ಭೃಗುವೇ, ಕೇಳು. ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ, ವೇದದಲ್ಲಿ ಹೇಳಿರುವ ಮುಖ್ಯವಾದ ಎಲ್ಲ ಮಂತ್ರಗಳಲ್ಲೂ ಶ್ರೇಷ್ಠವಾದ,

ಉಕ್ತಂ ಕೃಷ್ಣೇನ ಗೋಲೋಕೇ ಮಹ್ಯಂ ವೃಂದಾವನೇ ವನೇ ।
ರಾಸೇಶ್ವರೇಣ ವಿಭುನಾ ರಾಸೇ ವೈ ರಾಸಮಂಡಲೇ ॥೬೩॥

ಅತೀವಗೋಪನೀಯಂ ಚ ಕಲ್ಪವೃಕ್ಷಸಮಂ ಪರಂ ।
ಅಶ್ರುತಾದ್ಭುತಮಂತ್ರಾಣಾಂ ಸಮೂಹೈಶ್ಚ ಸಮನ್ವಿತಂ ॥೬೪॥

ಯದ್ಧೃತ್ವಾ ಭಗವಾನ್ ಶುಕ್ರಃ ಸರ್ವದೈತ್ಯೇಷು ಪೂಜಿತಃ ।
ಯದ್ಧೃತ್ವಾ ಪಠನಾದ್ಬ್ರಹ್ಮನ್ ಬುದ್ಧಿಮಾಂಶ್ಚ ಬೃಹಸ್ಪತಿಃ ॥೬೫॥

ಪಠನಾದ್ಧಾರಣಾದ್ವಾಗ್ಮೀ ಕವೀಂದ್ರೋ ವಾಲ್ಮಿಕೋ ಮುನಿಃ ।
ಸ್ವಯಂಭುವೋ ಮನುಶ್ಚೈವ ಯದ್ಧೃತ್ವಾ ಸರ್ವಪೂಜಿತಃ ॥೬೬॥

ಕಣಾದೋ ಗೌತಮಃ ಕಣ್ವಃ ಪಾಣಿನಿಃ ಶಾಕಟಾಯನಃ ।
ಗ್ರಂಥಂ ಚಕಾರ ಯದ್ಧೃತ್ವಾ ದಕ್ಷಃ ಕಾತ್ಯಾಯನಃ ಸ್ವಯಂ ॥೬೭॥

---

ಕಿವಿಗಿಂಪಾಗಿಯೂ ಹಿತವಾಗಿಯೂ ಇರುವ, ಸರಸ್ವತಿಯ ಕವಚವನ್ನು ಹೇಳು ವೆನು. ॥೬೨॥

ಈ ಮಂತ್ರವನ್ನು ಗೋಲೋಕದಲ್ಲಿ ರಾಸಕ್ರೀಡೆಗೆ ಒಡೆಯನಾದ ಕೃಷ್ಣನು ರಾಸಮಂಡಲದಲ್ಲಿ ರಾಸಕ್ರೀಡೆಯ ಕಾಲದಲ್ಲಿ ನನಗೆ ವೃಂದಾವನದಲ್ಲಿ ಉಪದೇಶಿಸಿ ದನು. ಈ ಮಂತ್ರವು ಯಾರೂ ಕೇಳದಿರುವ ಆಶ್ಚರ್ಯಕರವಾದ ಅನೇಕ ಮಂತ್ರ ಗಳಿಂದ ಕೂಡಿ ಕಲ್ಪವೃಕ್ಷ ಸಮಾನವಾಗಿ ಸಕಲ ಇಷ್ಟಾರ್ಥಗಳನ್ನೂ ಕೊಡು ವುದಾಗಿರುವುದು. ॥೬೩-೬೪॥

ಈ ಸರಸ್ವತಿಯ ಕವಚವನ್ನು ಧಾರಣೆಮಾಡಿಕೊಂಡುದರಿಂದ ಶುಕ್ರನು ದೈತ್ಯಗುರುವಾದನು. ಬೃಹಸ್ಪತಿಯು ಬುದ್ಧಿವಂತನಾದನು. ವಾಲ್ಮೀಕಿಯು ಕವಿ ಶ್ರೇಷ್ಠನಾದನು. ಸ್ವಯಂಭುವ ಮನುವು ಸರ್ವರಿಗೂ ಪೂಜಾಯೋಗ್ಯನಾದನು. ಕಣಾದ, ಗೌತಮ, ಕಣ್ವ, ಪಾಣಿನಿ, ಶಾಕಟಾಯನ, ದಕ್ಷ, ಕಾತ್ಯಾಯನ ಈ ಮುನಿ ಗಳು ಪ್ರಸಿದ್ಧರಾದ ಗ್ರಂಥಕರ್ತರಾದರು. ॥೬೫-೬೬-೬೭॥

ಧೃತ್ವಾ ವೇದವಿಭಾಗಂ ಚ ಪುರಾಣಾನ್ಯಖಿಲಾನಿ ಚ ।
ಚಕಾರ ಲೀಲಾಮಾತ್ರೇಣ ಕೃಷ್ಣದ್ವೈಪಾಯನಃ ಸ್ವಯಂ ॥೬೮॥

ಶಾತಾತಪಶ್ಚ ಸಂವರ್ತೋ ವಸಿಷ್ಠಶ್ಚ ಪರಾಶರಃ ।
ಯದ್ಧೃತ್ವಾ ಪಠನಾದ್ಗ್ರಂಥಂ ಯಾಜ್ಞವಲ್ಕ್ಯಶ್ಚಕಾರ ಸಃ ॥೬೯॥

ಋಷ್ಯಶೃಂಗೋ ಭರದ್ವಾಜಶ್ಚಾಸ್ತಿಕೋ ದೇವಲಸ್ತಥಾ ।
ಜೈಗೀಷವ್ಯೋ ಯಯಾತಿಶ್ಚ ಧೃತ್ವಾ ಸರ್ವತ್ರಪೂಜಿತಾಃ ॥೭೦॥

ಕವಚಸ್ಯಾಸ್ಯ ವಿಪ್ರೇಂದ್ರ ಋಷಿರೇವ ಪ್ರಜಾಪತಿಃ ।
ಸ್ವಯಂ ಛಂದಶ್ಚ ಬೃಹತೀ ದೇವತಾ ಶಾರದಾಂಬಿಕಾ ॥೭೧॥

ಸರ್ವತತ್ತ್ವಪರಿಜ್ಞಾನ ಸರ್ವಾರ್ಥಸಾಧನೇಷು ಚ ।
ಕವಿತಾಸು ಚ ಸರ್ವಾಸು ವಿನಿಯೋಗಃ ಪ್ರಕೀರ್ತಿತಃ ॥೭೨॥

ಶ್ರೀಂ ಹ್ರೀಂ ಸರಸ್ವತ್ಯೈ ಸ್ವಾಹಾ ಶಿರೋ ಮೇ ಪಾತು ಸರ್ವತಃ ।
ಶ್ರೀಂ ವಾಗ್ದೇವತಾಯೈ ಸ್ವಾಹಾ ಭಾಲಂ ಮೇ ಸರ್ವದಾಽವತು ॥೭೩॥

ಓಂ ಹ್ರೀಂ ಸರಸ್ವತ್ಯೈ ಸ್ವಾಹೇತಿ ಶ್ರೋತ್ರೇ ಪಾತು ನಿರಂತರಂ ।
ಓಂ ಶ್ರೀಂ ಹ್ರೀಂ ಭಗವತ್ಯೈ ಸರಸ್ವತ್ಯೈ ಸ್ವಾಹಾ ನೇತ್ರಯುಗ್ಮಂ ಸದಾಽವತು॥

ಐಂ ಹ್ರೀಂ ವಾಗ್ವಾದಿನ್ಯೈ ಸ್ವಾಹಾ ನಾಸಾಂ ಮೇ ಸರ್ವದಾಽವತು ।
ಓಂ ಹ್ರೀಂ ವಿದ್ಯಾಧಿಷ್ಠಾತೃದೇವ್ಯೈ ಸ್ವಾಹಾ ಚೋಷ್ಠಂ ಸದಾಽವತು ॥೭೫॥

---

ಈ ಕವಚಧಾರಣಪಠನೆಗಳಿಂದ ಕೃಷ್ಣದ್ವೈಪಾಯನ ಋಷಿಯು ವೇದವಿಭಾಗ ಗಳನ್ನು ಮಾಡಿ ಸಮಸ್ತಪುರಾಣಗಳನ್ನೂ ಬರೆದನು. ಶಾತಾತಪ, ಸಂವರ್ತ, ವಸಿಷ್ಠ, ಪರಾಶರ ಯಾಜ್ಞವಲ್ಕ್ಯ ಇವರು ಗ್ರಂಥಕರ್ತರಾದರು. ಋಷ್ಯಶೃಂಗ, ಭರದ್ವಾಜ, ಆಸ್ತಿಕ, ದೇವಲ, ಜೈಗೀಷವ್ಯ, ಮತ್ತು ಯಯಾತಿ ಇವರು ಎಲ್ಲರಿಗೂ ಪೂಜಾಯೋಗ್ಯರಾದರು. ॥೬೮-೬೯-೭೦॥

ಈ ಕವಚಕ್ಕೆ ಪ್ರಜಾಪತಿಯೇ ಋಷಿಯು. ಬೃಹತೀ ಛಂದಸ್ಸು. ಶಾರ ದಾಂಬಿಯೇ ದೇವತೆಯು. ಸರ್ವಾರ್ಥಸಾಧನ, ಸರ್ವತತ್ವಪರಿಜ್ಞಾನ, ಕವಿತಾ ಚಮತ್ಕಾರ ಇವುಗಳೇ ಫಲಗಳು. ॥೭೧-೭೨॥

ಓಂ ಶ್ರೀಂ ಹ್ರೀಂ ಬ್ರಾಹ್ಮ್ಯೈ ಸ್ವಾಹೇತಿ ದಂತಪಙ್ತಿಂ ಸದಾಽವತು ।
ಐಮಿತ್ಯೇಕಾಕ್ಷರೋ ಮಂತ್ರೋ ಮಮ ಕಂಠಂ ಸದಾಽವತು ॥೭೬॥

ಓಂ ಶ್ರೀಂ ಹ್ರೀಂ ಪಾತು ಮೇಗ್ರೀವಾಂ ಸ್ಕಂಧೌ ಮೇ ಶ್ರೀಂ ಸದಾಽವತು ।
ಓಂ ಹ್ರೀಂ ವಿದ್ಯಾಧಿಷ್ಠಾತೃದೇವ್ಯೈ ಸ್ವಾಹಾ ವಕ್ಷಃ ಸದಾಽವತು ॥೭೭॥

ಓಂ ಹ್ರೀಂ ವಿದ್ಯಾಧಿಸ್ವರೂಪಾಯೈ ಸ್ವಾಹಾ ಮೇ ಪಾತು ನಾಭಿಕಾಂ ।
ಓಂ ಹ್ರೀಂ ಕ್ಲೀಂ ವಾಣ್ಯೈ, ಸ್ವಾಹೇತಿ ಮಮ ಹಸ್ತೌ ಸದಾಽವತು ॥೭೮॥

ಓಂ (ಹ್ರೀಂ) ಸರ್ವವರ್ಣಾತ್ಮಿಕಾಯೈ ಪಾದಯುಗ್ಮಂ ಸದಾಽವತು ।
ಓಂ (ಹ್ರೀಂ) ವಾಗಧಿಷ್ಠಾತೃದೇವ್ಯೈ ಸ್ವಾಹಾ ಸರ್ವಂ ಸದಾಽವತು ॥೭೯॥

ಓಂ ಸರ್ವಕಂಠವಾಸಿನ್ಯೈ ಸ್ವಾಹಾ ಪ್ರಾಚ್ಯಾಂ ಸದಾಽವತು ।
ಓಂ ಸರ್ವ ಜಿಹ್ವಾಗ್ರವಾಸಿನ್ಯೈ ಸ್ವಾಹಾಽಗ್ನಿದಿಶಿ ರಕ್ಷತು ॥೮೦॥

ಓಂ ಐಂ ಹ್ರೀಂ ಶ್ರೀಂ ಕ್ಲೀಂ ಸರಸ್ವತ್ಯೈ ಬುಧಜನನ್ಯೈ ಸ್ವಾಹಾ ।
ಸತತಂ ಮಂತ್ರರಾಜೋಽಯಂ ದಕ್ಷಿಣೇ ಮಾಂ ಸದಾಽವತು ॥೮೧॥

ಐಂ ಹ್ರೀಂ ಶ್ರೀಂ ತ್ರ್ಯಕ್ಷರೋ ಮಂತ್ರೋ ನೈಋತ್ಯಾಂ ಸರ್ವದಾಽವತು ।
ಓಂ ಐಂ ಜಿಹ್ವಾಗ್ರವಾಸಿನ್ಯೈ ಸ್ವಾಹಾ ಮಾಂ ವಾರುಣೇಽವತು ॥೮೨॥

ಓಂ ಸರ್ವಾಂಬಿಕಾಯೈ ಸ್ವಾಹಾ ವಾಯವ್ಯೇ ಮಾಂ ಸದಾಽವತು ।
ಓಂ ಐಂ ಶ್ರೀಂ ಕ್ಲೀಂ ಗದ್ಯವಾಸಿನ್ಯೈ ಸ್ವಾಹಾ ಮಾಮುತ್ತರೇಽವತು ॥೮೩॥

ಐಂ ಸರ್ವಶಾಸ್ತ್ರವಾಸಿನ್ಯೈ ಸ್ವಾಹೇಶಾನ್ಯಾಂ ಸದಾಽವತು ।
ಓಂ ಹ್ರೀಂ ಸರ್ವಪೂಜಿತಾಯೈ ಸ್ವಾಹಾ ಚೋರ್ಧ್ವಂ ಸದಾಽವತು ॥೮೪॥

ಹ್ರೀಂ ಪುಸ್ತಕವಾಸಿನ್ಯೈ ಸ್ವಾಹಾಽಧೋ ಮಾಂ ಸದಾಽವತು ।
ಓಂ ಗ್ರಂಥ-ಬೀಜಸ್ವರೂಪಾಯೈ ಸ್ವಾಹಾ ಮಾಂ ಸರ್ವತೋಽವತು ॥೮೫॥

---

ಇದೇ ಸರಸ್ವತಿಯ ಕವಚವು ಇದನ್ನು ಅಕ್ಷರಕ್ರಮದಲ್ಲಿ ದೇವತಾಧ್ಯಾನ ದೊಡನೆ ಉಚ್ಚಾರಮಾಡುವುದೇ ಫಲದಾಯಕವಾದುದು. ||೭೩—೮೫||

ಇತಿ ತೇ ಕಥಿತಂ ವಿಪ್ರ ಬ್ರಹ್ಮಮಂತ್ರೌಘ ವಿಗ್ರಹಂ ।
ಇದಂ ವಿಶ್ವಜಯಂ ನಾಮ ಕವಚಂ ಬ್ರಹ್ಮರೂಪಕಂ ॥೮೬॥

ಪುರಾ ಶ್ರುತಂ ಧರ್ಮವಕ್ತ್ರಾತ್ಪರ್ವತೇ ಗಂಧಮಾದನೇ ।
ತವ ಸ್ನೇಹಾನ್ಮಯಾಽಖ್ಯಾತಂ ಪ್ರವಕ್ತವ್ಯಂ ನ ಕಸ್ಯಚಿತ್ ॥೮೭॥

ಗುರುಮಭ್ಯರ್ಚ್ಯ ವಿಧಿವದ್ವಸ್ತ್ರಾಲಂಕಾರಚಂದನೈಃ ।
ಪ್ರಣಮ್ಯ ದಂಡವದ್ಭೂಮೌ ಕವಚಂ ಧಾರಯೇತ್ಸುಧೀಃ ॥೮೮॥

ಪಂಚಲಕ್ಷಜಪೇನೈವ ಸಿದ್ಧಂ ತು ಕವಚಂ ಭವೇತ್ ।
ಯದಿ ಸ್ಯಾತ್ಸಿದ್ಧಕವಚೋ ಬೃಹಸ್ಪತಿಸಮೋ ಭವೇತ್ ॥೮೯॥

ಮಹಾವಾಗ್ಮೀ ಕವೀಂದ್ರಶ್ಚ ತ್ರೈಲೋಕ್ಯವಿಜಯೀ ಭವೇತ್ ।
ಶಕ್ನೋತಿ ಸರ್ವಂ ಜೇತುಂ ಚ ಕವಚಸ್ಯ ಪ್ರಸಾದತಃ ॥೯೦॥

---

ಎಲೈ ನಾರದನೇ, ಬ್ರಹ್ಮಮಂತ್ರಗಳ ಸಮೂಹವೇ ಆಕಾರವಾಗಿರುವ ಈ ಕವಚದ ಸ್ವರೂಪವನ್ನು ನಿನಗೆ ಹೇಳುತ್ತಿರುವೆನು. ಈ ಕವಚಕ್ಕೆ ವಿಶ್ವಜಯವೆಂದು ಹೆಸರು. ಇದು ಪರಬ್ರಹ್ಮಸ್ವರೂಪವಾದುದು. ಪೂರ್ವದಲ್ಲಿ ನಮ್ಮ ತಂದೆಯಾದ ಧರ್ಮದೇವನು ಗಂಧಮಾದನ ಪರ್ವತದಲ್ಲಿ ನನಗೆ ಉಪದೇಶಿಸಿದನು. ನಿನ್ನಲ್ಲಿರುವ ಪ್ರೀತಿಯಿಂದ ನಾನೂ ನಿನಗೆ ಇದನ್ನು ಹೇಳಿರುವೆನು. ಮತ್ತಾರಿಗೂ ಇದನ್ನು ನೀನು ಹೇಳಬಾರದು. ॥೮೬-೮೭॥

ವಸ್ತ್ರಾಭರಣಸುಗಂಧಗಳಿಂದ ಗುರುವನ್ನು ಪೂಜಿಸಿ ವಿಧಿಗನುಸಾರವಾಗಿ ಭೂಮಿಯಲ್ಲಿ ಸಾಷ್ಟಾಂಗನಮಸ್ಕಾರವನ್ನು ಮಾಡಿ ಈ ಕವಚವನ್ನು ಗ್ರಹಣಮಾಡಬೇಕು. ಐದುಲಕ್ಷ ಜಪಮಾಡಿದರೆ ಈ ಕವಚವು ಸಿದ್ಧಿಸುವುದು. ಕವಚವು ಸಿದ್ಧಿಯಾದರೆ ಜಪಿಸಿದ ಮನುಷ್ಯನು ಬೃಹಸ್ಪತಿಗೆ ಸಮನಾಗುವನು. ॥೮೮-೮೯॥

ಮಂತ್ರಸಿದ್ಧನು ವಾಚಾಳಿಯಾಗಿಯೂ ಕವಿಶ್ರೇಷ್ಠನಾಗಿಯೂ ಮೂರು ಲೋಕದಲ್ಲಿಯೂ ಜಯವನ್ನು ಪಡೆಯುವನು. ಈ ಕವಚದ ಮಹಿಮೆಯಿಂದ ಎಲ್ಲರನ್ನು ಜಯಿಸಲು ಸಮರ್ಥನಾಗುವನು. ॥೯೦॥

ಇದಂ ಚ ಕಣ್ವಶಾಖೋಕ್ತಂ ಕವಚಂ ಕಥಿತಂ ಮುನೇ ।
ಸ್ತೋತ್ರಪೂಜಾವಿಧಾನಂ ಚ ಧ್ಯಾನಂ ಚ ವಂದನಂ ಶೃಣು ॥೯೧॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಚತುರ್ಥೋಽಧ್ಯಾಯಃ.

---

ನಾರದಮುನಿಯೇ, ಕಣ್ವಶಾಖೆಯಲ್ಲಿ ಹೇಳಿದ ಈ ಕವಚವನ್ನು ಹೇಳಿರುವೆನು. ಇನ್ನು ಮುಂದೆ ಸರಸ್ವತಿಯ ಸ್ತೋತ್ರವನ್ನೂ ಪೂಜೆಯಕ್ರಮವನ್ನೂ ಧ್ಯಾನವನ್ನೂ ನಮಸ್ಕಾರಕ್ರಮವನ್ನೂ ಹೇಳುವೆನು. ॥೯೧॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ಶ್ರೀ ನಾರಾಯಣ ಉವಾಚ ||

**ವಾಗ್ದೇವತಾಯಾಃ ಸ್ತವನಂ ಶ್ರೂಯತಾಂ ಸರ್ವಕಾಮದಂ ।**
**ಮಹಾಮುನಿರ್ಯಾಜ್ಞವಲ್ಕ್ಯೋ ಯೇನ ತುಷ್ಟಾವ ತಾಂ ಪುರಾ ॥೧॥**

**ಗುರುಶಾಪಾಚ್ಚ ಸ ಮುನಿರ್ಹತವಿದ್ಯೋ ಬಭೂವ ಹ ।**
**ತದಾ ಜಗಾಮ ದುಃಖಾರ್ತೋ ರವಿಸ್ಥಾನಂ ಸುಪುಣ್ಯದಂ ॥೨॥**

**ಸಂಪ್ರಾಪ್ಯ ತಪಸಾ ಸೂರ್ಯಂ ಲೋಲಾರ್ಕೇ ದೃಷ್ಟಿಗೋಚರೇ ।**
**ತುಷ್ಟಾವ ಸೂರ್ಯಂ ಶೋಕೇನ ರುರೋದ ಚ ಮುಹುರ್ಮುಹುಃ ॥೩॥**

---

ನಾರಾಯಣನು ಹೇಳಿದನು—ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ಸರಸ್ವತಿಯ ಸ್ತೋತ್ರವನ್ನು ಕೇಳು. ಪೂರ್ವದಲ್ಲಿ ಯಾಜ್ಞವಲ್ಕ್ಯನೆಂಬ ಮುನಿಯು ಈ ಸ್ತೋತ್ರದಿಂದ ಆ ದೇವಿಯನ್ನು ಸ್ತೋತ್ರಮಾಡಿದನು. ||೧||

ಆ ಯಾಜ್ಞವಲ್ಕ್ಯಮುನಿಯು ಗುರುಶಾಪದಿಂದ ವಿದ್ಯೆಯನ್ನೆಲ್ಲವನ್ನೂ ಕಳೆದು ಕೊಂಡು ದುಃಖದಿಂದ ಸೂರ್ಯಕ್ಷೇತ್ರವಾದ ಪುಣ್ಯಕರವಾದ ಲೋಲಾರ್ಕವೆಂಬ ಕ್ಷೇತ್ರಕ್ಕೆ ಬಂದನು. ||೨||

ಆ ಲೋಲಾರ್ಕಕ್ಷೇತ್ರದಲ್ಲಿ ತಪಸ್ಸನ್ನು ಮಾಡಿ ಸೂರ್ಯನನ್ನು ಪ್ರತ್ಯಕ್ಷಮಾಡಿ ಕೊಂಡು ಅನೇಕಬಗೆಯ ಸ್ತೋತ್ರಮಾಡಿ ದುಃಖದಿಂದ ಬಾರಿಬಾರಿಗೂ ಅತ್ತನು.||೩||

ಸೂರ್ಯಸ್ತಂ ಪಾಠಯಾಮಾಸ ವೇದವೇದಾಂಗಮೀಶ್ವರಃ ।
ಉವಾಚ ಸ್ತುಹಿ ವಾಗ್ದೇವೀಂ ಭಕ್ತ್ಯಾ ಚ ಸ್ಮೃತಿಹೇತವೇ ॥೪॥

ತಮಿತ್ಯುಕ್ತ್ವಾ ದೀನನಾಥೋಽಪ್ಯಂತರ್ಧಾನಂ ಚಕಾರ ಸಃ ।
ಮುನಿಃ ಸ್ನಾತ್ವಾ ಚ ತುಷ್ಟಾವ ಭಕ್ತಿನಮ್ರಾತ್ಮಕಂಧರಃ ॥೫॥

॥ ಯಾಜ್ಞವಲ್ಕ್ಯ ಉವಾಚ ॥

ಕೃಪಾಂ ಕುರುಜಗನ್ಮಾತರ್ಮಾಮೇವಂ ಹತತೇಜಸಂ ।
ಗುರುಶಾಪಾತ್ಸ್ಮೃತಿಭ್ರಷ್ಟಂ ವಿದ್ಯಾಹೀನಂ ಚ ದುಃಖಿತಂ ॥೬॥

ಜ್ಞಾನಂ ದೇಹಿಸ್ಮೃತಿಂ ವಿದ್ಯಾಂ ಶಕ್ತಿಂ ಶಿಷ್ಯಪ್ರಬೋಧಿನೀಂ ।
ಗ್ರಂಥಕರ್ತೃತ್ವಶಕ್ತಿಂ ಚ ಸುಶಿಷ್ಯಂ ಸುಪ್ರತಿಷ್ಠಿತಂ ॥೭॥

ಪ್ರತಿಭಾಂ ಸತ್ಸಭಾಯಾಂ ಚ ವಿಚಾರಕ್ಷಮತಾಂ ಶುಭಾಂ ।
ಲುಪ್ತಂ ಸರ್ವಂ ದೈವಯೋಗಾನ್ನವೀಭೂತಂ ಪುನಃ ಕುರು ॥೮॥

---

ಸೂರ್ಯನು ಆ ಮುನಿಗೆ ವೇದಗಳನ್ನೂ ವೇದಾಂಗಗಳನ್ನೂ ಹೇಳಿಕೊಟ್ಟನು. ಇವುಗಳೆಲ್ಲವೂ ಜ್ಞಾಪಕದಲ್ಲಿರುವುದಕ್ಕಾಗಿ ಸರಸ್ವತಿಯನ್ನು ಸ್ತೋತ್ರಮಾಡು ಎಂದು ಹೇಳಿ ಮರೆಯಾದನು. ಯಾಜ್ಞವಲ್ಕ್ಯಮುನಿಯು ಸ್ನಾನಮಾಡಿ ಭಕ್ತಿಯಿಂದ ತನ್ನ ಕುತ್ತಿಗೆಯನ್ನು ಬಗ್ಗಿಸಿಕೊಂಡು ದೇವಿಯನ್ನು ಸ್ತೋತ್ರಮಾಡಿದನು. ॥೪-೫॥

ಯಾಜ್ಞವಲ್ಕ್ಯನು ಹೇಳಿದನು—ಜಗತ್ತಿಗೆ ತಾಯಿಯಾದ ಸರಸ್ವತಿ ದೇವಿಯೆ, ನನಗೆ ದಯೆಯನ್ನು ತೋರಿಸು. ಗುರುವಿನ ಶಾಪದಿಂದ ತೇಜೋಹೀನನಾಗಿ ಜ್ಞಾಪಕಶಕ್ತಿಯಿಲ್ಲದೆ ವಿದ್ಯೆಯನ್ನು ಕಳೆದುಕೊಂಡು ದುಃಖಿಸುತ್ತಿರುವ ನನ್ನನ್ನು ರಕ್ಷಿಸು. ॥೬॥

ಬ್ರಹ್ಮಜ್ಞಾನವನ್ನೂ ಜ್ಞಾಪಕಶಕ್ತಿಯನ್ನೂ ತಿಳಿವಳಿಕೆಯನ್ನೂ ಶಿಷ್ಯರಿಗೆ ಉಪದೇಶಮಾಡುವ ಶಕ್ತಿಯನ್ನೂ ಗ್ರಂಥರಚನಾಶಕ್ತಿಯನ್ನೂ ಕೊಡು. ಒಳ್ಳೆಯ ಶಿಷ್ಯರೂ ಒಳ್ಳೆಯ ಗೌರವವೂ ನನಗೆ ಉಂಟಾಗಲಿ. ಹೊಸವಿಷಯ ಸ್ಫುರಣಶಕ್ತಿಯನ್ನೂ ಸಜ್ಜನರ ಸಭೆಯಲ್ಲಿ ಶಾಸ್ತ್ರವಿಚಾರಮಾಡುವ ಶಕ್ತಿಯನ್ನೂ ಕೊಡು. ದೈವಯೋಗದಿಂದ ನನಗೆ ಇಲ್ಲದೇಹೋದ ಸಮಸ್ತವಿದ್ಯೆಯನ್ನೂ ಹೊಸದಾಗಿ ಕೊಡು. ॥೭-೮॥

**ಯಥಾಂಕುರಂ ಭಸ್ಮನಿ ಚ ಕರೋತಿ ದೇವತಾ ಪುನಃ ।**
**ಬ್ರಹ್ಮಸ್ವರೂಪಾ ಪರಮಾ ಜ್ಯೋತೀರೂಪಾ ಸನಾತನೀ ॥೯॥**

**ಸರ್ವವಿದ್ಯಾಧಿದೇವೀ ಯಾ ತಸ್ಯೈ ವಾಣ್ಯೈ ನಮೋ ನಮಃ ।**
**ವಿಸರ್ಗಬಿಂದುಮಾತ್ರಾಸು ಯದಧಿಷ್ಠಾನಮೇವ ಚ ॥೧೦॥**

**ತದಧಿಷ್ಠಾತ್ರೀ ಯಾ ದೇವೀ ತಸ್ಯೈ ನಿತ್ಯಂ ನಮೋ ನಮಃ ।**
**ವ್ಯಾಖ್ಯಾಸ್ವರೂಪಾ ಯಾ ದೇವೀ ವ್ಯಾಖ್ಯಾಧಿಷ್ಠಾತೃರೂಪಿಣೀ ॥೧೧॥**

**ಯಯಾ ವಿನಾ ಪ್ರಸಂಖ್ಯಾವಾನ್ಸಂಖ್ಯಾಂ ಕರ್ತುಂ ನ ಶಕ್ಯತೇ ।**
**ಕಾಲಸಂಖ್ಯಾ ಸ್ವರೂಪಾ ಯಾ ತಸ್ಯೈ ದೇವ್ಯೈ ನಮೋ ನಮಃ ॥೧೨॥**

**ಭ್ರಮಸಿದ್ಧಾಂತರೂಪಾ ಯಾ ತಸ್ಯೈ ದೇವ್ಯೈ ನಮೋ ನಮಃ ।**
**ಸ್ಮೃತಿಶಕ್ತಿ ಜ್ಞಾನಶಕ್ತಿ ಬುದ್ಧಿಶಕ್ತಿ ಸ್ವರೂಪಿಣೀ ॥೧೩॥**

**ಪ್ರತಿಭಾ ಕಲ್ಪನಾಶಕ್ತಿರ್ಯಾ ಚ ತಸ್ಯೈ ನಮೋ ನಮಃ ।**
**ಸನತ್ಕುಮಾರೋ ಬ್ರಹ್ಮಾಣಂ ಜ್ಞಾನಂ ಪಪ್ರಚ್ಛ ಯತ್ರ ವೈ ॥೧೪॥**

---

ಈಶ್ವರನು ಬೂದಿಯಲ್ಲಿಯೂ ಪುನಃ ಬೀಜವು ಮೊಳೆಯುವಂತೆ ಒಂದೊಂದುವೇಳೆ ಹೇಗೆ ಮಾಡುವನೋ ಹಾಗೆ ನನ್ನಲ್ಲಿ ಸಮಸ್ತ ವಿದ್ಯೆಯನ್ನೂ ನೆಲೆಗೊಳಿಸು. ನೀನು ಶ್ರೇಷ್ಠವಾದ ಬ್ರಹ್ಮಸ್ವರೂಪಳು. ಸಮಸ್ತ ವಿದ್ಯೆಗಳಿಗೂ ಆಶ್ರಯಳಾದವಳು. ||೯||

ಬಿಂದು ವಿಸರ್ಗ ಮಾತ್ರೆ ಇವುಗಳು ಯಾವ ಅಕ್ಷರಗಳಿಗೆ ಆಧಾರವೋ ಆ ವರ್ಣಮಾಲೆಗೆ ಆಶ್ರಯಸ್ವರೂಪಳಾದ ಶಾಶ್ವತಳಾದ ವಾಣೀದೇವಿಗೆ ನಮಸ್ಕಾರವು. ಆ ದೇವಿಯು ವಿವರಣ ಸ್ವರೂಪಳು. ವ್ಯಾಖ್ಯಾನ ಎಂದರೆ ವಿವರಣಶಕ್ತಿಗೆ ಆಶ್ರಯಳಾದವಳು. ಲೆಕ್ಕಮಾಡುವವನು ಈ ದೇವತಾಶಕ್ತಿಯಿಲ್ಲದೆ ಲೆಕ್ಕಮಾಡಲು ಸಮರ್ಥನಾಗುವುದಿಲ್ಲ. ಕಾಲ ಮತ್ತು ಸಂಖ್ಯಾಸ್ವರೂಪಳಾದ ಆ ದೇವಿಗೆ ನಮಸ್ಕಾರವು. ||೧೦-೧೧-೧೨||

ಭ್ರಮಜ್ಞಾನಸ್ವರೂಪಳೂ ಸಿದ್ಧಾಂತಜ್ಞಾನಸ್ವರೂಪಳೂ ಆದ ದೇವಿಗೆ ನಮಸ್ಕಾರವು. ಜ್ಞಾಪಕಶಕ್ತಿ ಜ್ಞಾನಶಕ್ತಿ ನಿಶ್ಚಯ, ಪ್ರತಿಭಾ, ಕಲ್ಪನಾಶಕ್ತಿಸ್ವರೂಪಳೂ ಆದ ಆ ದೇವಿಗೆ ನಮಸ್ಕಾರವು. ||೧೩||

ಹಿಂದೆ ಸನತ್ಕುಮಾರನು ಬ್ರಹ್ಮನನ್ನು ಕುರಿತು ಜ್ಞಾನಸ್ವರೂಪವನ್ನು ಪ್ರಶ್ನೆ ಮಾಡಿದನು. ಆಗ ಬ್ರಹ್ಮನೂ ಕೂಡ ಜ್ಞಾನಸ್ವರೂಪವನ್ನು ನಿಷ್ಕರ್ಷಿಸಿ ಹೇಳಲು

ಬಭೂವ ಮೂಕವತ್ಸೋಽಪಿ ಸಿದ್ಧಾಂತಂ ಕರ್ತುಮಕ್ಷಮಃ ।
ತದಾ ಜಗಾಮ ಭಗವಾನಾತ್ಮಾ ಶ್ರೀಕೃಷ್ಣ ಈಶ್ವರಃ ॥೧೫॥

ಉವಾಚ ಸ ಚ ತಾಂ ಸ್ತೌಹಿ ವಾಣೀಮಿಷ್ಟಾಂ ಪ್ರಜಾಪತೇ ।
ಸ ಚ ತುಷ್ಟಾವ ತಾಂ ಬ್ರಹ್ಮಾ ಚಾಽಽಜ್ಞಯಾ ಪರಮಾತ್ಮನಃ ॥೧೬॥

ಚಕಾರ ತತ್ಪ್ರಸಾದೇನ ತದಾ ಸಿದ್ಧಾಂತಮುತ್ತಮಂ ।
ಯದಾಪ್ಯನಂತಂ ಪಪ್ರಚ್ಛ ಜ್ಞಾನಮೇಕಂ ವಸುಂಧರಾ ॥೧೭॥

ಬಭೂವ ಮೂಕವತ್ಸೋಽಪಿ ಸಿದ್ಧಾಂತಂ ಕರ್ತುಮಕ್ಷಮಃ ।
ತದಾ ತಾಂ ಸ ಚ ತುಷ್ಟಾವ ಸಂತ್ರಸ್ತಃ ಕಶ್ಯಪಾಜ್ಞಯಾ ॥೧೮॥

ತತಶ್ಚಕಾರ ಸಿದ್ಧಾಂತಂ ನಿರ್ಮಲಂ ಭ್ರಮಭಂಜನಂ ।
ವ್ಯಾಸಃ ಪುರಾಣಸೂತ್ರಂ ಚ ಪಪ್ರಚ್ಛ ವಾಲ್ಮೀಕಿಂ ಯದಾ ॥೧೯॥

ಮೌನಿಭೂತಶ್ಚ ಸಸ್ಮಾರ ತಾಮೇವ ಜಗದಂಬಿಕಾಂ ।
ತದಾ ಚಕಾರ ಸಿದ್ಧಾಂತಂ ತದ್ವರೇಣ ಮುನೀಶ್ವರಃ ॥೨೦॥

---

ಶಕ್ತನಾಗದೆ ಮೂಗನಂತೆ ಆದನು. ಆ ಸಮಯದಲ್ಲಿ ಮಹಾತ್ಮನಾದ ಶ್ರೀಕೃಷ್ಣನು ಅಲ್ಲಿಗೆ ಬಂದು ಬ್ರಹ್ಮನನ್ನು ಕುರಿತು ಇಷ್ಟದೇವತೆಯಾದ ಸರಸ್ವತಿಯನ್ನು ಸ್ತೋತ್ರಮಾಡು ಎಂದು ಹೇಳಿದನು. ಆ ಪರಮಾತ್ಮನ ಅಪ್ಪಣೆಯಿಂದ ಬ್ರಹ್ಮನು ಸರಸ್ವತಿಯನ್ನು ಸ್ತೋತ್ರಮಾಡಿದನು. ಆಮೇಲೆ ಸರಸ್ವತೀದೇವಿಯ ಅನುಗ್ರಹದಿಂದ ಶ್ರೇಷ್ಠವಾದ ಸಿದ್ಧಾಂತವನ್ನು ಬ್ರಹ್ಮನು ಸನತ್ಕುಮಾರನಿಗೆ ಉಪದೇಶಿಸಿದನು. ||೧೪-೧೫-೧೬||

ಭೂಮಿದೇವಿಯು ಆದಿಶೇಷನನ್ನು ಕುರಿತು ಜ್ಞಾನಸ್ವರೂಪವನ್ನು ಪ್ರಶ್ನೆ ಮಾಡಲು ಆದಿಶೇಷನು ಉತ್ತರ ಹೇಳಲು ಶಕ್ತನಾಗದೆ ಮೂಗನಂತಾದನು. ಕಶ್ಯಪನ ಅಪ್ಪಣೆಯಂತೆ ಅವನು ಸರಸ್ವತಿಯನ್ನು ಸ್ತೋತ್ರಮಾಡಿದನು. ಆಮೇಲೆ ಭ್ರಾಂತಿಯನ್ನು ನಾಶಮಾಡುವ ಪರಿಶುದ್ಧವಾದ ಸಿದ್ಧಾಂತವನ್ನು ಮಾಡಿದನು. ||೧೭-೧೮||

ವ್ಯಾಸಮಹರ್ಷಿಯು ಪುರಾಣಗಳನ್ನೂ ಬ್ರಹ್ಮಸೂತ್ರಗಳನ್ನೂ ಹೇಳಬೇಕೆಂದು ವಾಲ್ಮೀಕಿಮುನಿಯನ್ನು ಕೇಳಿದನು. ವಾಲ್ಮೀಕಿಯು ಮಾತನಾಡದೆ ಸರಸ್ವತೀ ದೇವಿಯನ್ನು ಸ್ಮರಿಸಿ ಆ ದೇವಿಯ ವರದಿಂದ ಪುರಾಣಸೂತ್ರಗಳ ಉಪದೇಶ ಸಿದ್ಧಾಂತವನ್ನು ಮಾಡಿದನು. ||೧೯-೨೦||

ಸಂಪ್ರಾಪ್ಯ ನಿರ್ಮಲಂ ಜ್ಞಾನಂ ಭ್ರಮಾಂಧ್ಯಧ್ವಂಸದೀಪಕಂ ।
ಪುರಾಣಸೂತ್ರಂ ಶ್ರುತ್ವಾ ಚ ವ್ಯಾಸಃ ಕೃಷ್ಣಕಲೋದ್ಭವಃ ॥೨೦॥

ತಾಂ ಶಿವಾಂ ವೇದ ದಧ್ಯೌ ಚ ಶತವರ್ಷಂ ಚ ಪುಷ್ಕರೇ ।
ತದಾ ತ್ವತ್ತೋ ವರಂ ಪ್ರಾಪ್ಯ ಸತ್ಕವೀಂದ್ರೋ ಬಭೂವ ಹ ॥೨೨॥

ತದಾ ವೇದವಿಭಾಗಂ ಚ ಪುರಾಣಂ ಚ ಚಕಾರ ಸಃ ।
ಯದಾ ಮಹೇಂದ್ರಃ ಪಪ್ರಚ್ಛ ತತ್ವಜ್ಞಾನಂ ಸದಾಶಿವಂ ॥೨೩॥

ಕ್ಷಣಂ ತಾಮೇವ ಸಂಚಿಂತ್ಯ ತಸ್ಮೈ ಜ್ಞಾನಂ ದದೌ ವಿಭುಃ ।
ಪಪ್ರಚ್ಛ ಶಬ್ದಶಾಸ್ತ್ರಂ ಚ ಮಹೇಂದ್ರಶ್ಚ ಬೃಹಸ್ಪತಿಂ ॥೨೪॥

ದಿವ್ಯವರ್ಷ ಸಹಸ್ರಂ ಚ ಸ ತ್ವಾಂ ದಧ್ಯೌ ಚ ಪುಷ್ಕರೇ ।
ತದಾ ತ್ವತ್ತೋ ವರಂ ಪ್ರಾಪ್ಯ ದಿವ್ಯವರ್ಷಸಹಸ್ರಕಂ ॥೨೫॥

---

ಕೃಷ್ಣನ ಕಲಾಂಶದಿಂದ ಹುಟ್ಟಿದ ವ್ಯಾಸಮುನಿಯು ವಾಲ್ಮೀಕಿಯು ಹೇಳಿದ ಪುರಾಣಸೂತ್ರಗಳನ್ನು ಕೇಳಿ ಭ್ರಾಂತಿಯೆಂಬ ಕತ್ತಲೆಯನ್ನು ನಾಶಮಾಡುವ ದೀಪದಂತಿರುವ ನಿರ್ಮಲಜ್ಞಾನವನ್ನು ಹೊಂದಿ ಪುಷ್ಕರಕ್ಷೇತ್ರದಲ್ಲಿ ನೂರುವರ್ಷ ಪರಿಯಂತ ಮಂಗಳಕರಳಾದ ಆ ಸರಸ್ವತೀದೇವಿಯನ್ನು ಧ್ಯಾನಮಾಡಿ ವರವನ್ನು ಪಡೆದು ಒಳ್ಳೆಯ ಕವಿಶ್ರೇಷ್ಠನಾದನು. ಆಮೇಲೆ ವೇದವಿಭಾಗವನ್ನು ಮಾಡಿ ಪುರಾಣಗಳನ್ನು ರಚಿಸಿದನು. ॥೨೦-೨೨॥

ದೇವೇಂದ್ರನು ಶಿವನನ್ನು ಕುರಿತು ತತ್ವಜ್ಞಾನವನ್ನು ಪ್ರಶ್ನೆಮಾಡಿದನು. ಆ ಶಿವನು ಒಂದುಕ್ಷಣ ಸರಸ್ವತಿಯನ್ನು ಧ್ಯಾನಿಸಿ ದೇವೇಂದ್ರನಿಗೆ ತಿಳಿವಳಿಕೆಯನ್ನುಂಟುಮಾಡಿದನು. ॥೨೩॥

ದೇವೇಂದ್ರನು ವ್ಯಾಕರಣಶಾಸ್ತ್ರವನ್ನೇ ಹೇಳಿಕೊಡಬೇಕೆಂದು ಬೃಹಸ್ಪತಿಯನ್ನು ಕೇಳಿದನು. ಬೃಹಸ್ಪತಿಯು ದೇವಮಾನದ ಒಂದುಸಾವಿರ ವರ್ಷದವರೆಗೆ ಪುಷ್ಕರಕ್ಷೇತ್ರದಲ್ಲಿ ನಿನ್ನನ್ನು ಧ್ಯಾನಮಾಡಿ ನಿನ್ನಿಂದ ವರವನ್ನು ಪಡೆದು ದೇವಮಾನದ ಒಂದುಸಾವಿರ ವರ್ಷಗಳ ವರೆಗೆ ಬೃಹಸ್ಪತಿಯು ದೇವೇಂದ್ರನಿಗೆ ವ್ಯಾಕರಣಶಾಸ್ತ್ರವನ್ನು ಹೇಳಿಕೊಟ್ಟನು. ॥೨೪-೨೫॥

ಉವಾಚ ಶಬ್ದಶಾಸ್ತ್ರಂ ಚ ತದರ್ಥಂ ಚ ಸುರೇಶ್ವರಂ ।
ಅಧ್ಯಾಪಿತಾಶ್ಚ ಯೇ ಶಿಷ್ಯಾ ಯೈರಧೀತಂ ಮುನೀಶ್ವರೈಃ ॥೨೬॥

ತೇ ಚ ತಾಂ ಪರಿಸಂಚಿಂತ್ಯ ಪ್ರವರ್ತಂತೇ ಸುರೇಶ್ವರೀಂ ।
ತ್ವಂ ಸಂಸ್ತುತಾ ಪೂಜಿತಾ ಚ ಮುನೀಂದ್ರೈಃ ಮನುಮಾನವೈಃ ॥೨೭॥

ದೈತ್ಯೇಂದ್ರೈಶ್ಚ ಸುರೈಶ್ಚಾಪಿ ಬ್ರಹ್ಮವಿಷ್ಣುಶಿವಾದಿಭಿಃ ।
ಜಡೀಭೂತಃ ಸಹಸ್ರಾಸ್ಯಃ ಪಂಚವಕ್ತ್ರಶ್ಚತುರ್ಮುಖಃ ॥೨೮॥

ಯಾಂ ಸ್ತೋತುಂ ಕಿಮಹಂ ಸ್ತೌಮಿ ತಾಮೇಕಾಸ್ಯೇನ ಮಾನವಃ ।
ಇತ್ಯುಕ್ತ್ವಾ ಯಾಜ್ಞವಲ್ಕ್ಯಶ್ಚ ಭಕ್ತಿನಮ್ರಾತ್ಮಕಂಧರಃ ॥೨೯॥

ಪ್ರಣನಾಮ ನಿರಾಹಾರೋ ರುರೋದ ಚ ಮುಹುರ್ಮುಹುಃ ।
ಜ್ಯೋತೀರೂಪಾ ಮಹಾಮಾಯಾ ತೇನ ಪೃಷ್ಟಾಽಪ್ಯುವಾಚ ತಂ ॥೩೦॥

---

ಯಾವ ಶಿಷ್ಯರು ವಿದ್ಯೆಯನ್ನು ಕಲಿತರೋ ಯಾವ ಮುನಿಗಳು ಅಧ್ಯಯನ ಮಾಡಿದರೋ ಅವರೆಲ್ಲರೂ ದೇವದೇವಿಯಾದ ಆ ಸರಸ್ವತಿಯನ್ನು ಧ್ಯಾನಿಸಿ ತಮ್ಮ ಕೆಲಸವನ್ನು ಎಂದರೆ ಅಧ್ಯಯನ ಅಧ್ಯಾಪನಗಳನ್ನು ಮಾಡುವರು. ||೨೬||

ಸರಸ್ವತೀದೇವಿಯೇ, ನೀನು ಮುನಿಗಳಿಂದಲೂ ಮಾನವರಿಂದಲೂ ದೈತ್ಯರು ದೇವತೆಗಳು ಬ್ರಹ್ಮ ವಿಷ್ಣು ಶಿವರು ಇವರುಗಳಿಂದಲೂ ಪೂಜೆಯನ್ನೂ ಸ್ತೋತ್ರವನ್ನೂ ಸ್ವೀಕರಿಸಿರುವೆ. ಸಾವಿರ ಬಾಯುಳ್ಳ ಆದಿಶೇಷನೂ ಐದು ಮುಖವುಳ್ಳ ಈಶ್ವರನೂ ನಾಲ್ಕುಮುಖದ ಬ್ರಹ್ಮನೂ ನಿನ್ನನ್ನು ಸ್ತೋತ್ರಮಾಡಿ ಮುಗಿಸಲಾರದೆ ಹೋದರು. ಒಂದೇ ಬಾಯುಳ್ಳ ಮನುಷ್ಯನಾದ ನಾನು ನಿನ್ನನ್ನು ಏನೆಂದು ಸ್ತೋತ್ರ ಮಾಡಲಿ. ||೨೭-೨೮||

ಹೀಗೆಂದು ಹೇಳಿ ಯಾಜ್ಞವಲ್ಕ್ಯನು ಭಕ್ತಿಯಿಂದ ತನ್ನ ಕುತ್ತಿಗೆಯನ್ನು ಬಗ್ಗಿಸಿಕೊಂಡು ಆಹಾರವಿಲ್ಲದೆ ನಮಸ್ಕಾರಮಾಡಿ ಮತ್ತೆ ಮತ್ತೆ ಅತ್ತನು. ತರುವಾಯ ಸ್ವಪ್ರಕಾಶರೂಪಳೂ ಮಹಾಮಾಯಾವತಾರಸ್ವರೂಪಳೂ ಆದ ಸರಸ್ವತೀದೇವಿಯು ಪ್ರತ್ಯಕ್ಷಳಾಗಿ ಅವನನ್ನು ಕುರಿತು ಹೀಗೆ ಹೇಳಿದಳು. ||೨೯-೩೦||

ಸುಕವೀಂದ್ರೋ ಭವೇತ್ಯುಕ್ತ್ವಾ ವೈಕುಂಠಂ ಚ ಜಗಾಮ ಹ ।
ಯಾಜ್ಞವಲ್ಕ್ಯ ಕೃತಂ ವಾಣೀ ಸ್ತೋತ್ರಮೇತತ್ತು ಯಃ ಪಠೇತ್ ॥೩೧॥

ಸುಕವೀಂದ್ರೋ ಮಹಾವಾಗ್ಮೀ ಬೃಹಸ್ಪತಿಸಮೋ ಭವೇತ್ ।
ಮಹಾಮೂರ್ಖಶ್ಚ ದುರ್ಬುದ್ಧಿರ್ವರ್ಷಮೇಕಂ ಯದಾಪಠೇತ್ ॥೩೨॥
ಸ ಪಂಡಿತಶ್ಚ ಮೇಧಾವೀ ಸುಕವೀಂದ್ರೋ ಭವೇದ್ಧ್ರುವಂ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಪಂಚಮೋಽಧ್ಯಾಯಃ

---

ಸರಸ್ವತಿಯು, ನೀನು ಕವಿಶ್ರೇಷ್ಠನಾಗು ಎಂದು ಯಾಜ್ಞವಲ್ಕ್ಯನಿಗೆ ಹೇಳಿ ವೈಕುಂಠಲೋಕಕ್ಕೆ ಹೋದಳು. ಯಾಜ್ಞವಲ್ಕ್ಯನು ಮಾಡಿದ ಈ ಸರಸ್ವತೀ ದೇವಿಯ ಸ್ತೋತ್ರವನ್ನು ಯಾರು ಹೇಳುವರೋ ಅವರು ಕವಿಗಳಲ್ಲಿ ಶ್ರೇಷ್ಠರೂ ಮಹಾವಾಚಾಳಿಗಳೂ, ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನರೂ, ಆಗುವರು. ಮಹಾ ಮೂಢನೂ ದುರ್ಬುದ್ಧಿಯೂ ಆದವನು ಈ ಸ್ತೋತ್ರವನ್ನು ಒಂದು ವರ್ಷದ ವರೆಗೆ ಪ್ರತಿದಿನವೂ ಹೇಳುತ್ತಿದ್ದರೆ ಅವನು ಪಂಡಿತನೂ ಬುದ್ಧಿವಂತನೂ ಕವಿಶ್ರೇಷ್ಠನೂ ಆಗುವುನು. ಇದು ನಿಶ್ಚಯವಾದುದು. ||೩೧-೩೨||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಐದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಷಷ್ಠೋಽಧ್ಯಾಯಃ ||

### ಆರನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಸರಸ್ವತೀ ತು ವೈಕುಂಠೇ ಸ್ವಯಂ ನಾರಾಯಣಾಂತಿಕೇ ।**
**ಗಂಗಾಶಾಪೇನ ಕಲಹಾತ್ಕಲಯಾ ಭಾರತೇ ಸರಿತ್ ||೧||**

**ಪುಣ್ಯದಾ ಪುಣ್ಯರೂಪಾ ಚ ಪುಣ್ಯತೀರ್ಥಸ್ವರೂಪಿಣೀ ।**
**ಪುಣ್ಯವದ್ಭಿರ್ನಿಷೇವ್ಯಾ ಚ ಸ್ಥಿತಿಃ ಪುಣ್ಯವತಾಂ ಮುನೇ ||೨||**

**ತಪಸ್ವಿನಾಂ ತಪೋರೂಪಾ ತಪಃ ಫಲಸ್ವರೂಪಿಣೀ ।**
**ಕೃತಪಾಪೇಧ್ಮದಾಹಾಯ ಜ್ವಲದಗ್ನಿಸ್ವರೂಪಿಣೀ ||೩||**

---

ನಾರಾಯಣನು ಹೇಳಿದನು---ಸರಸ್ವತೀದೇವಿಯು ತನ್ನ ಪೂರ್ಣರೂಪದಿಂದ ವೈಕುಂಠದಲ್ಲಿ ನಾರಾಯಣನ ಸಮೀಪದಲ್ಲಿರುತ್ತಾ ಜಗಳದಿಂದುಂಟಾದ ಗಂಗೆಯ ಶಾಪದಿಂದ ತನ್ನ ಒಂದು ಅಂಶದಿಂದ ಭರತಖಂಡದಲ್ಲಿ ನದಿಯರೂಪವಾದಳು. ||೧||

ಆ ಸರಸ್ವತೀನದಿಯು ಪುಣ್ಯತೀರ್ಥಸ್ವರೂಪವಾಗಿ ಸಕಲರಿಗೂ ಪುಣ್ಯವನ್ನು ಕೊಡತಕ್ಕವಳು. ಪುಣ್ಯವಂತರಾದ ಜನರಿಗೆ ವಾಸಸ್ಥಾನವಾದ ತೀರ ಉಳ್ಳದ್ದಾಗಿ ಅದು ಪುಣ್ಯವಂತರ ಸ್ನಾನಪಾನಕ್ಕೆ ಯೋಗ್ಯವಾಗಿರುವುದು. ||೨||

ತಪಸ್ಸುಮಾಡತಕ್ಕವರಿಗೆ ತಪಸ್ಸಿನರೂಪವಾಗಿಯೂ ಫಲಸ್ವರೂಪವಾಗಿಯೂ ಎಂದರೆ ಬೇಗನೆ ತಪಸ್ಸಿಗೆ ಫಲವನ್ನು ಕೊಡತಕ್ಕುದಾಗಿಯೂ ಪಾಪವೆಂಬ ಸೌದೆಯನ್ನು ಸುಡುವ ಅಗ್ನಿಯಂತೆಯೂ ಆ ನದಿಯು ಇರುವುದು. ||೩||

ಜ್ಞಾನಾತ್ಸರಸ್ವತೀ ತೋಯೇ ಮೃತಾ ಯೇ ಮಾನವಾ ಭುವಿ ।
ತೇಷಾಂ ಸ್ಥಿತಿಶ್ಚ ವೈಕುಂಠೇ ಸುಚಿರಂ ಹರಿಸಂಸದಿ ॥೪॥

ಭಾರತೇ ಕೃತಪಾಪಶ್ಚ ಸ್ನಾತ್ವಾ ತತ್ರ ಚ ಲೀಲಯಾ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕೇ ವಸೇಚ್ಚಿರಂ ॥೫॥

ಚಾತುರ್ಮಾಸ್ಯಾಂ ಪೌರ್ಣಮಾಸ್ಯಾಂ ಅಕ್ಷಯಾಯಾಂ ದಿನಕ್ಷಯೇ ।
ವ್ಯತೀಪಾತೇ ಚ ಗ್ರಹಣೇಽನ್ಯಸ್ಮಿನ್ಪುಣ್ಯೇ ದಿನೇಽಪಿ ಚ ॥೬॥

ಅನುಷಂಗೇಣ ಯಃ ಸ್ನಾತೋ ಹೇತುನಾ ಶ್ರದ್ಧಯಾಽಪಿ ವಾ ।
ಸಾರೂಪ್ಯಂ ಲಭತೇ ನೂನಂ ವೈಕುಂಠೇ ಸ ಹರೇರಪಿ ॥೭॥

ಸರಸ್ವತೀಮನುಂ ತತ್ರ ಮಾಸಮೇಕಂ ಚ ಯೋ ಜಪೇತ್ ।
ಮಹಾಮೂರ್ಖಃ ಕವೀಂದ್ರಶ್ಚ ಸ ಭವೇನ್ನಾತ್ರ ಸಂಶಯಃ ॥೮॥

---

ಸರಸ್ವತಿಯ ಮಹಿಮೆಯನ್ನು ತಿಳಿದು ಆ ನೀರಿನಲ್ಲಿ ಯಾವ ಮನುಜರು ಮರಣಹೊಂದುವರೋ ಅವರು ವೈಕುಂಠದಲ್ಲಿ ನಾರಾಯಣನ ಸಭೆಯಲ್ಲಿ ಬಹಳಕಾಲ ಇರುವರು. ॥೪॥

ಭರತಖಂಡದಲ್ಲಿ ಪಾಪಮಾಡಿದವನು ಸರಸ್ವತೀ ನದಿಯಲ್ಲಿ ಸ್ನಾನಮಾಡಿ ಸುಲಭವಾಗಿ ಸಮಸ್ತಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕದಲ್ಲಿ ಬಹಳಕಾಲ ವಾಸಮಾಡುವನು. ॥೫॥

ಆಷಾಢ ಶುದ್ಧ ಏಕಾದಶೀ ಮೊದಲು ಕಾರ್ತಿಕ ಶುದ್ಧ ದ್ವಾದಶಿಯ ವರೆಗೆ ನಾಲ್ಕು ತಿಂಗಳುಗಳಲ್ಲಿಯೂ ಪೂರ್ಣಿಮೆಯ ದಿನವೂ ಅಕ್ಷಯ ನವಮಿಯ ದಿನವೂ ಸಂಧ್ಯಾಕಾಲದಲ್ಲಿಯೂ ವ್ಯತೀಪಾತ ಗ್ರಹಣ ಮುಂತಾದ ಪುಣ್ಯದಿನಗಳಲ್ಲಿಯೂ ಯಾವುದೋ ಕಾರ್ಯಕ್ಕೆ ಹೋಗುತ್ತಿರುವಾಗ ನಡುವೆ ಈ ನದಿಯು ಸಿಕ್ಕಿದ ಸಂದರ್ಭದಲ್ಲಾಗಲೀ ಯಾವುದಾದರೂ ಕಾರಣದಿಂದಾಗಲೀ ಭಕ್ತಿಯಿಂದಾಗಲೀ ಸ್ನಾನಮಾಡಿದರೆ ವೈಕುಂಠದಲ್ಲಿ ಹರಿಯ ಸಾರೂಪ್ಯವುಂಟಾಗುವುದು. ॥೬-೭॥

ಸರಸ್ವತೀ ನದಿಯ ದಡದಲ್ಲಿ ಒಂದು ತಿಂಗಳ ವರೆಗೆ ಸರಸ್ವತಿಯ ಮಂತ್ರವನ್ನು ಜಪಿಸಿದ ಮನುಜನು ಮಹಾಮೂಢನಾದರೂ ಕವಿಶ್ರೇಷ್ಠನಾಗುವನು. ಸಂದೇಹವಿಲ್ಲವು. ॥೮॥

ನಿತ್ಯಂ ಸರಸ್ವತೀ ತೋಯೇ ಯಃ ಸ್ನಾಯಾನ್ಮುಂಡಯನ್ನರಃ ।
ನ ಗರ್ಭವಾಸಂ ಕುರುತೇ ಪುನರೇವ ಸ ಮಾನವಃ ॥೯॥

ಇತ್ಯೇವಂ ಕಥಿತಂ ಕಿಂಚಿದ್ಭಾರತೇ ಗುಣಕೀರ್ತನಂ ।
ಸುಖದಂ ಕಾಮದಂ ಸಾರಂ ಭೂಯಃ ಕಿಂ ಶ್ರೋತುಮಿಚ್ಛಸಿ ॥೧೦॥

॥ ಸೂತ ಉವಾಚ ॥

ನಾರಾಯಣವಚಃ ಶ್ರುತ್ವಾ ನಾರದೋ ಮುನಿಸತ್ತಮಃ ।
ಪುನಃ ಪಪ್ರಚ್ಛ ಸಂದೇಹಮಿಮಂ ಶೌನಕ ಸತ್ವರಂ ॥೧೧॥

॥ ನಾರದ ಉವಾಚ ॥

ಕಥಂ ಸರಸ್ವತೀ ದೇವೀ ಗಂಗಾಶಾಪೇನ ಭಾರತೇ ।
ಕಲಯಾ ಕಲಹೇನೈವ ಬಭೂವ ಪುಣ್ಯದಾ ಸರಿತ್ ॥೧೨॥

ಶ್ರವಣೇ ಶ್ರುತಿಸಾರಾಣಾಂ ವರ್ಧತೇ ಕೌತುಕಂ ಮಮ ।
ಕಥಾಮೃತೇನ ಮೇ ತೃಪ್ತಿಃ ಕೇನ ಶ್ರೇಯಸಿ ತೃಷ್ಯತೇ ॥೧೩॥

---

ಮೊದಲು ಒಂದಾವರ್ತಿ ಕ್ಷೌರವನ್ನು ಮಾಡಿಸಿಕೊಂಡು ಪ್ರತಿದಿನವೂ ಸರಸ್ವತಿಯ ನದಿಯಲ್ಲಿ ಸ್ನಾನಮಾಡುವ ಮನುಜನು ಪುನರ್ಜನ್ಮವನ್ನು ಹೊಂದುವುದಿಲ್ಲ. ॥೯॥

ಭರತಖಂಡದಲ್ಲಿ ಸುಖವನ್ನೂ ಇಷ್ಟಾರ್ಥವನ್ನೂ ಕೂಡ ಕೊಡತಕ್ಕ ಸರಸ್ವತೀ ನದಿಯ ಸಾರವಾದ ಗುಣಗಳನ್ನು ಹೇಳಿರುವೆನು. ಇನ್ನೇನನ್ನು ಕೇಳಬೇಕೆಂದಿರುವೆ? ಎಂದು ನಾರಾಯಣಮುನಿಯು ನಾರದನಿಗೆ ಹೇಳಿದನು. ॥೧೦॥

ಸೂತನು ಹೇಳಿದನು—ನಾರಾಯಣನ ಮಾತನ್ನು ಕೇಳಿ ನಾರದನು ಪುನಃ ತನ್ನ ಸಂದೇಹವನ್ನು ನಿವಾರಿಸಿಕೊಳ್ಳಲು ಬೇಗನೆ ಪ್ರಶ್ನೆ ಮಾಡಿದನು. ॥೧೧॥

ನಾರದನು ಹೇಳಿದನು—ಸರಸ್ವತೀದೇವಿಯು ಜಗಳದಿಂದುಂಟಾದ ಗಂಗಾ ಶಾಪದಿಂದ ಹೇಗೆ ತನ್ನಂಶದಿಂದ ಪುಣ್ಯಕರವಾದ ನದಿಯಾದಳು. ವೇದಸಾರವಾದ ಕಥೆಯನ್ನು ಕೇಳುವುದರಲ್ಲಿ ನನ್ನ ಆಸಕ್ತಿಯು ಹೆಚ್ಚುತ್ತಿರುವುದು. ಶ್ರೇಯಸ್ಸನ್ನು ಸಂಪಾದಿಸುವ ವಿಷಯದಲ್ಲಿ ಯಾರಿಗೂ ತೃಪ್ತಿಯುಂಟಾಗುವುದಿಲ್ಲ. ॥೧೨-೧೩॥

ಕಥಂ ಶಶಾಪ ಸಾ ಗಂಗಾ ಪೂಜಿತಾಂ ತಾಂ ಸರಸ್ವತೀಂ ।
ಸಾ ತು ಸತ್ತ್ವಸ್ವರೂಪಾ ಯಾ ಪುಣ್ಯದಾ ಶುಭದಾ ಸದಾ ॥೧೪॥

ತೇಜಸ್ವಿನೋರ್ದ್ವಯೋರ್ವಾದಕಾರಣಂ ಶ್ರುತಿಸುಂದರಂ ।
ಸುದುರ್ಲಭಂ ಪುರಾಣೇಷು ತನ್ಮೇ ವ್ಯಾಖ್ಯಾತುಮರ್ಹಸಿ ॥೧೫॥

॥ ಶ್ರೀ ನಾರಾಯಣ ಉವಾಚ ॥

ಶ್ರುಣು ನಾರದ ವಕ್ಷ್ಯಾಮಿ ಕಥಾಮೇತಾಂ ಪುರಾತನೀಂ ।
ಯಸ್ಯಾಃ ಶ್ರವಣಮಾತ್ರೇಣ ಸರ್ವಪಾಪಾತ್ಪ್ರಮುಚ್ಯತೇ ॥೧೬॥

ಲಕ್ಷ್ಮೀಃ ಸರಸ್ವತೀ ಗಂಗಾ ತಿಸ್ರೋ ಭಾರ್ಯಾ ಹರೇರಪಿ ।
ಪ್ರೇಮ್ಣಾ ಸಮಸ್ತಾಸ್ತಿಷ್ಠಂತಿ ಸತತಂ ಹರಿಸನ್ನಿಧೌ ॥೧೭॥

ಚಕಾರ ಸೈಕದಾ ಗಂಗಾ ವಿಷ್ಣೋರ್ಮುಖನಿರೀಕ್ಷಣಂ ।
ಸಸ್ಮಿತಾ ಚ ಸಕಾಮಾ ಚ ಸಕಟಾಕ್ಷಂ ಪುನಃಪುನಃ ॥೧೮॥

ವಿಭುರ್ಜಹಾಸ ತದ್ವಕ್ತ್ರಂ ನಿರೀಕ್ಷ್ಯ ಚ ಕ್ಷಣಂ ತದಾ ।
ಕ್ಷಮಾಂ ಚಕಾರ ತದ್ದೃಷ್ಟ್ವಾ ಲಕ್ಷ್ಮೀಃನೈವ ಸರಸ್ವತೀ ॥೧೯॥

---

ಗಂಗೆಯೂ ಸತ್ವಗುಣವುಳ್ಳವಳು. ಯಾವಾಗಲೂ ಪುಣ್ಯವನ್ನೂ ಶುಭವನ್ನೂ ಕೊಡತಕ್ಕವಳು. ಸರಸ್ವತಿಯೂ ಪೂಜ್ಯಳು. ಹೀಗಿರುವಲ್ಲಿ ಇಬ್ಬರಿಗೂ ವಾದವುಂಟಾಗುವುದಕ್ಕೆ ಕಾರಣವೇನು? ಯಾವ ಪುರಾಣದಲ್ಲಿಯೂ ಇಲ್ಲದ ಈ ವಿಷಯವು ಕಿವಿಗಿಂಪಾಗಿರುವುದು. ಅದನ್ನು ನನಗೆ ವಿಸ್ತಾರವಾಗಿ ಹೇಳಬೇಕು. ॥೧೪-೧೫॥

ನಾರಾಯಣನು ಹೇಳಿದನು—ನಾರದನೇ, ಪುರಾತನವಾದ ಈ ಕಥೆಯನ್ನು ಹೇಳುವೆನು ಕೇಳು. ಇದನ್ನು ಕೇಳಿದ ಮಾತ್ರದಿಂದಲೇ ಸಮಸ್ತ ಪಾಪಗಳೂ ನಾಶವಾಗುವುವು. ॥೧೬॥

ನಾರಾಯಣನಿಗೆ ಲಕ್ಷ್ಮೀ, ಗಂಗೆ, ಸರಸ್ವತಿ ಈ ಮೂವರು ಪತ್ನಿಯರು. ಇವರು ಪರಸ್ಪರ ಸಮಾನವಾದ ಪ್ರೀತಿಯಿಂದ ನಾರಾಯಣನ ಸಮೀಪದಲ್ಲಿದ್ದರು. ಒಂದಾನೊಂದು ದಿನ ಗಂಗೆಯು ನಗುತ್ತಾ ಕಾಮಬಾಧೆಯಿಂದ ಕೂಡಿ ಹರಿಯ ಮುಖವನ್ನು ಮತ್ತೆ ಮತ್ತೆ ಓರೆಗಣ್ಣಿನಿಂದ ನೋಡುತ್ತಿದ್ದಳು. ॥೧೭-೧೮॥

ನಾರಾಯಣನು ಆ ಗಂಗೆಯ ಮುಖವನ್ನು ನೋಡಿ ಒಂದುಕ್ಷಣ ನಕ್ಕನು. ಇದನ್ನು ನೋಡಿ ಲಕ್ಷ್ಮಿಯು ಸುಮ್ಮನಿದ್ದಳು. ಆದರೆ ಸರಸ್ವತಿಯು ಸಹಿಸಲಿಲ್ಲ.

ಬೋಧಯಾಮಾಸ ಪದ್ಮಾ ತಾಂ ಸತ್ವರೂಪಾ ಚ ಸಸ್ಮಿತಾ ।
ಕ್ರೋಧಾವಿಷ್ಟಾ ಚ ಸಾ ವಾಣೀ ನ ಚ ಶಾಂತಾ ಬಭೂವ ಹ ॥೨೦॥

ಉವಾಚ ವಾಣೀ ಭರ್ತಾರಂ ರಕ್ತಾಸ್ಯಾ ರಕ್ತಲೋಚನಾ ।
ಕಂಪಿತಾ ಕಾಮವೇಗೇನ ಶಶ್ವತ್ಪ್ರಸ್ಫುರಿತಾಧರಾ ॥೨೧॥

॥ ಸರಸ್ವತ್ಯುವಾಚ ॥

ಸರ್ವತ್ರ ಸಮತಾ ಬುದ್ಧಿಃ ಸದ್ಭರ್ತುಃ ಕಾಮಿನೀಂ ಪ್ರತಿ ।
ಧರ್ಮಿಷ್ಠಸ್ಯ ವರಿಷ್ಠಸ್ಯ ವಿಪರೀತಾ ಖಲಸ್ಯ ಚ ॥೨೨॥

ಜ್ಞಾತಂ ಸೌಭಾಗ್ಯಮಧಿಕಂ ಗಂಗಾಯಾಂ ತೇ ಗದಾಧರ ।
ಕಮಲಾಯಾಂ ಚ ತತ್ತುಲ್ಯಂ ನ ಚ ಕಿಂಚಿನ್ಮಯಿ ಪ್ರಭೋ ॥೨೩॥

ಗಂಗಾಯಾಃ ಪದ್ಮಯಾ ಸಾರ್ಧಂ ಪ್ರೀತಿಶ್ಚಾಸ್ತಿ ಸುಸಮ್ಮತಾ ।
ಕ್ಷಮಾಂ ಚಕಾರ ತೇನೇದಂ ವಿಪರೀತಂ ಹರಿಪ್ರಿಯಾ ॥೨೪॥

---

ಸಾತ್ವಿಕಳಾದ ಲಕ್ಷ್ಮಿಯು ನಗುತ್ತಾ ಸರಸ್ವತಿಗೆ ವಿವೇಕವನ್ನು ಹೇಳಿದಳು. ಆದರೆ ಕೋಪದಿಂದ ಕೂಡಿದ ಸರಸ್ವತಿಯು ಶಾಂತಳಾಗಲಿಲ್ಲ. ॥೧೯-೨೦॥

ಸರಸ್ವತಿಯು ಮುಖವನ್ನೂ ಕಣ್ಣನ್ನೂ ಕೆಂಪಗೆ ಮಾಡಿಕೊಂಡು ಕಾಮ ಕ್ರೋಧದ ವೇಗದಿಂದ ತುಟಿಯು ನಡುಗುತ್ತಿರಲು ಪತಿಯನ್ನು ಕುರಿತು ಮುಂದೆ ಹೇಳುವಂತೆ ಹೇಳಿದಳು. ॥೨೧॥

ಸರಸ್ವತಿಯು ಹೇಳಿದಳು—ಎಲೈ ನಾರಾಯಣನೇ, ಒಳ್ಳೆಯ ಗಂಡನಾದವನು ಧರ್ಮಿಷ್ಠನಾಗಿಯೂ ದೊಡ್ಡ ಗೌರವಶಾಲಿಯಾಗಿಯೂ ಇದ್ದರೆ ಆತನ ಪ್ರೀತಿಯು ತನ್ನ ಹೆಂಡಿರಲ್ಲಿ ಎಲ್ಲರಲ್ಲಿಯೂ ಒಂದೇ ಸಮನಾಗಿರುವುದು. ದುಷ್ಟನಿಗೆ ಇದಕ್ಕೆ ವಿರುದ್ಧವಾಗಿರುವುದು. ನಿನ್ನ ಪ್ರೀತಿಯು ಗಂಗೆಯಲ್ಲಿ ಹೆಚ್ಚಾಗಿರುವುದೆಂದು ನಾನು ತಿಳಿದೆನು. ಲಕ್ಷ್ಮಿಯಲ್ಲಿಯೂ ಅವಳಿಗೆ ಸಮಾನವಾದ ಪ್ರೀತಿಯನ್ನು ಇಟ್ಟಿರುವೆ. ಆದರೆ ನನ್ನಲ್ಲಿ ಆ ಪ್ರೀತಿಯಿಲ್ಲ. ಗಂಗೆಗೂ ಲಕ್ಷ್ಮಿಗೂ ಪರಸ್ಪರ ಪ್ರೀತಿ ಇರುವುದು. ಗಂಗೆಯು ಮಾಡಿದ ಕೆಲಸವನ್ನು ಲಕ್ಷ್ಮಿಯು ನೋಡಿ ಸುಮ್ಮನಿದ್ದುದರಿಂದಲೇ ಅದು ವ್ಯಕ್ತವಾಯಿತು. ॥೨೨-೨೩-೨೪॥

ಕಿಂ ಜೀವನೇನ ಮೇऽತ್ರೈವ ದುರ್ಭಗಾಯಾಶ್ಚ ಸಾಂಪ್ರತಂ ।
ನಿಷ್ಫಲಂ ಜೀವನಂ ತಸ್ಯಾಃ ಯಾ ಪತ್ಯುಃ ಪ್ರೇಮವಂಚಿತಾ ॥೨೫॥

ತ್ವಾಂ ಸರ್ವೇ ಸತ್ವರೂಪಂ ಚ ಯೇ ವದಂತಿ ಮನೀಷಿಣಃ ।
ತೇ ಚ ಮೂರ್ಖಾ ನ ವೇದಜ್ಞಾ ನ ಜಾನಂತಿ ಮತಿಂ ತವ ॥೨೬॥

ಸರಸ್ವತೀವಚಃ ಶ್ರುತ್ವಾ ದೃಷ್ಟ್ವಾ ತಾಂ ಕೋಪಸಂಯುತಾಂ ।
ಮನಸಾ ಚ ಸಮಾಲೋಚ್ಯ ಸ ಜಗಾಮ ಬಹಿಸ್ಸಭಾಂ ॥೨೭॥

ಗತೇ ನಾರಾಯಣೇ ಗಂಗಾಮುವಾಚ ನಿರ್ಭಯಂ ರುಷಾ ।
ವಾಗಧಿಷ್ಠಾತೃದೇವೀ ಸಾ ವಾಕ್ಯಂ ಶ್ರವಣದುಷ್ಕರಂ ॥೨೮॥

ಹೇ ನಿರ್ಲಜ್ಜೇ ಹೇ ಸಕಾಮೇ ಸ್ವಾಮಿಗರ್ವಂ ಕರೋಷಿ ಕಿಂ ।
ಅಧಿಕಂ ಸ್ವಾಮಿಸೌಭಾಗ್ಯಂ ವಿಜ್ಞಾಪಯಿತುಮಿಚ್ಛಸಿ ॥೨೯॥

ಮಾನಚೂರ್ಣಂ ಕರಿಷ್ಯಾಮಿ ತವಾದ್ಯ ಹರಿಸನ್ನಿಧೌ ।
ಕಿಂ ಕರಿಷ್ಯತಿ ತೇ ಕಾಂತೋ ಮನ್ಯೈವಂ ಕಾಂತವಲ್ಲಭೇ ॥೩೦॥

---

ಭಾಗ್ಯಹೀನಳಾದ ನಾನು ಇಲ್ಲಿ ಜೀವಿಸಿರುವುದರಿಂದ ಪ್ರಯೋಜನವೇನು? ಪತಿಯ ಪ್ರೇಮವಿಲ್ಲದವಳ ಜೀವನವು ವ್ಯರ್ಥವಾದುದು. ಯಾವ ಬುದ್ಧಿವಂತನು ನೀನು ಸತ್ವಗುಣಸ್ವರೂಪನೆಂದು ಹೇಳುವರೋ ಅವರು ಮೂಢರು. ವೇದವನ್ನು ತಿಳಿದವರಲ್ಲ. ನಿನ್ನ ಬುದ್ಧಿಯನ್ನು ಅವರು ತಿಳಿಯರು. ॥೨೫-೨೬॥

ನಾರಾಯಣನು ಸರಸ್ವತಿಯ ಮಾತನ್ನು ಕೇಳಿ, ಅವಳು ಕೋಪಗೊಂಡಿರುವುದನ್ನು ಕಂಡು ಮನಸ್ಸಿನಲ್ಲಿ ಆಲೋಚಿಸಿ, ಸಭೆಯನ್ನು ಬಿಟ್ಟು ಹೊರಗಡೆಗೆ ಹೋದನು. ॥೨೭॥

ನಾರಾಯಣನು ಹೊರಟುಹೋಗುತ್ತಲು ಸರಸ್ವತೀದೇವಿಯು ಸ್ವಲ್ಪವೂ ಭಯವಿಲ್ಲದೆ ಗಂಗೆಯನ್ನು ಕುರಿತು ಕಿವಿಗೆ ಕರ್ಕಶವಾದ ಮಾತನಾಡಿದಳು. ॥೨೮॥

ನಾಚಿಕೆಯಿಲ್ಲದ ಕಾಮಾತುರಳೇ, ಪತಿಯ ಪ್ರೀತಿಯು ನನ್ನಲ್ಲಿ ಹೆಚ್ಚೆಂದು ತೋರಿಸುವುದಕ್ಕಾಗಿ ಗರ್ವಪಡುತ್ತಿರುವೆಯೋ? ಈ ದಿವಸ ಹರಿಯ ಎದುರಿಗೆ ನಿನ್ನ ಮಾನವನ್ನು ಹೋಗಲಾಡಿಸುವೆನು. ಈ ಬಗೆಯ ಪತ್ನೀಪ್ರೇಮವುಳ್ಳ ನಿನ್ನ ಪತಿಯು ನನ್ನನ್ನೇನು ಮಾಡುವನು? ॥೨೯-೩೦॥

**ಇತ್ಯೇವಮುಕ್ತ್ವಾ ಗಂಗಾಯಾಃ ಕೇಶಂ ಗ್ರಹೀತುಮುದ್ಯತಾ ।**
**ವಾರಯಾಮಾಸ ತಾಂ ಪದ್ಮಾ ಮಧ್ಯದೇಶಂ ಸಮಾಶ್ರಿತಾ ॥೩೧॥**

**ಶಶಾಪ ವಾಣೀ ತಾಂ ಪದ್ಮಾಂ ಮಹಾಬಲವತೀ ಸತೀ ।**
**ವೃಕ್ಷರೂಪಾ ಸರಿದ್ರೂಪಾ ಭವಿಷ್ಯಸಿ ನ ಸಂಶಯಃ ॥೩೨॥**

**ವಿಪರೀತಂ ತತೋ ದೃಷ್ಟ್ವಾ ಕಿಂಚಿನ್ನೋ ವಕ್ತುಮರ್ಹಸಿ ।**
**ಸಂತಿಷ್ಠಂತಿ ಸಭಾಮಧ್ಯೇ ಯಥಾ ವೃಕ್ಷೋ ಯಥಾ ಸರಿತ್ ॥೩೩॥**

**ಶಾಪಂ ಶ್ರುತ್ವಾ ತು ಸಾ ದೇವೀ ನ ಶಶಾಪ ಚುಕೋಪ ಹ ।**
**ತತ್ರೈವ ದುಃಖಿತಾ ತಸ್ಥೌ ವಾಣೀಂ ಧೃತ್ವಾ ಕರೇಣ ಚ ॥೩೪॥**

**ಅತ್ಯುನ್ನತಾಂ ತು ತಾಂ ದೃಷ್ಟ್ವಾ ಕೋಪಪ್ರಸ್ಫುರಿತಾಧರಾಂ ।**
**ಉವಾಚ ಗಂಗಾ ತಾಂ ದೇವೀಂ ಪದ್ಮಾಂ ಚಾರಕ್ತಲೋಚನಾಂ॥೩೫॥**

---

ಹೀಗೆಂದು ಹೇಳಿ ಗಂಗೆಯ ಕೂದಲುಗಳನ್ನು ಹಿಡಿದುಕೊಳ್ಳಲು ಹೋದಳು. ಲಕ್ಷ್ಮಿಯು ಇಬ್ಬರ ನಡುವೆ ಬಂದು ಸರಸ್ವತಿಯನ್ನು ತಡೆದಳು. ಸರಸ್ವತಿಯು ಲಕ್ಷ್ಮಿಯನ್ನು ಕುರಿತು ನೀನು ಮರವಾಗಿಯೂ, ನದಿಯಾಗಿಯೂ ಆಗುವೆ. ಸಂದೇಹ ವಿಲ್ಲವು. ಎಂದು ಕೋಪದಿಂದ ತುಂಬ ಬಲಶಾಲಿನಿಯಾಗಿದ್ದ ಸರಸ್ವತಿಯು ಲಕ್ಷ್ಮಿ ಯನ್ನು ಕುರಿತು ಶಪಿಸಿದಳು.

ಲಕ್ಷ್ಮಿಯು ಗಂಗೆಯ ದುರ್ವರ್ತನೆಯನ್ನು ನೋಡಿ ಯಾವ ಮಾತನ್ನೂ ಆಡದೆ ಸಭಾಮಧ್ಯದಲ್ಲಿ ಮರವೂ ನದಿಯೂ ಇರುವಂತೆ ಇದ್ದುದರಿಂದ ಜಡಸ್ವರೂಪ ವಾದ ಮರವೂ ನದಿಯೂ ಆಗಲೆಂದು ಭಾವವು. ||೩೧-೩೨-೩೩||

ಆ ಲಕ್ಷ್ಮೀದೇವಿಯು ಸರಸ್ವತಿಯು ಕೊಟ್ಟಶಾಪವನ್ನು ಕೇಳಿ ಪ್ರತಿಯಾಗಿ ಶಾಪವನ್ನು ಕೊಡಲಿಲ್ಲ. ಕೋಪವನ್ನೂ ಹೊಂದಲಿಲ್ಲ. ಶಾಂತವಾಗಿ ಅಲ್ಲಿಯೇ ದುಃಖಪಡುತ್ತಾ ಜಗಳವಾಗದಿರಲೆಂದು ಸರಸ್ವತಿಯನ್ನು ಕೈಯಲ್ಲಿ ಹಿಡಿದುಕೊಂಡು ನಿಂತಳು. ||೩೪||

ಕೋಪದಿಂದ ನಡುಗುತ್ತಿರುವ ತುಟಿಯುಳ್ಳ ಹುಚ್ಚಳಂತಿರುವ ಆ ಸರಸ್ವತಿ ಯನ್ನು ನೋಡಿ ಗಂಗೆಯು ಕೆಂಪಾದ ಕಣ್ಣುಗಳುಳ್ಳ ಆ ಲಕ್ಷ್ಮೀದೇವಿಯನ್ನು ಕುರಿತು ಹೇಳಿದಳು. ||೩೫||

॥ ಶ್ರೀಗಂಗೋವಾಚ ॥

ತ್ವಮುತ್ಸೃಜ ಮಹೋಗ್ರಾಂ ಚ ಪದ್ಮೇ ಕಿಂ ಮೇ ಕರಿಷ್ಯತಿ ।
ದುಃಶೀಲಾ ಮುಖರಾ ನಷ್ಟಾ ನಿತ್ಯಂ ವಾಚಾಲರೂಪಿಣೀ ॥೩೬॥

ವಾಗಧಿಷ್ಠಾತ್ರೀ ದೇವೀಯಂ ಸತತಂ ಕಲಹಪ್ರಿಯಾ ।
ಯಾವತೀ ಯೋಗ್ಯತಾ ಚಾಸ್ಯಾ ಯಾವತೀ ಶಕ್ತಿರೇವ ಚ ॥೩೭॥

ತಥಾ ಕರೋತು ವಾದಂ ಚ ಮಯಾ ಸಾರ್ಧಂ ಚ ದುರ್ಮುಖೀ ।
ಸ್ವಬಲಂ ಯನ್ಮಮ ಬಲಂ ವಿಜ್ಞಾಪಯಿತುಮಿಚ್ಛತಿ ॥೩೮॥

ಜಾನಂತು ಸರ್ವೇ ಹ್ಯುಭಯೋಃ ಪ್ರಭಾವಂ ವಿಕ್ರಮಂ ಸತೀ ।
ಇತ್ಯೇವಮುಕ್ತ್ವಾ ಸಾ ದೇವೀ ವಾಣ್ಯೈ ಶಾಪಂ ದದಾವಿತಿ ॥೩೯॥

ಸರಿತ್ಸ್ವರೂಪಾ ಭವತು ಸಾ ಯಾ ತ್ವಾಂ ಚ ಶಶಾಪ ಹ ।
ಅಧೋ ಮರ್ತ್ಯಂ ಸಾ ಪ್ರಯಾತು ಸಂತಿ ಯತ್ರೈವ ಪಾಪಿನಃ ॥೪೦॥
ಕಲೌ ತೇಷಾಂ ಚ ಪಾಪಾನಿ ಗ್ರಹೀಷ್ಯತಿ ನ ಸಂಶಯಃ ।

---

ಗಂಗೆಯು ಹೇಳಿದಳು—ಓ ಲಕ್ಷ್ಮಿಯೇ, ಬಹಳ ಕ್ರೂರಳಾದ ಯಾವಾಗಲೂ ಅತಿಯಾಗಿ ಮಾತನಾಡುವ ಜಗಳಗಂಟಿಗಳೂ ಕೆಟ್ಟ ನಡತೆಯುಳ್ಳವಳೂ ಆದ ಮಾತಿಗೆ ಆಶ್ರಯದೇವತೆಯಾದ ಸರಸ್ವತಿಯನ್ನು ಬಿಡು. ಅವಳು ನನ್ನನ್ನೇನು ಮಾಡುವಳು? ಅವಳ ಯೋಗ್ಯತೆಯೂ ಶಕ್ತಿಯೂ ಎಷ್ಟಿರುವುದೋ ನೋಡುವೆನು. ||೩೬-೩೭||

ಕೆಟ್ಟಬಾಯುಳ್ಳ ಸರಸ್ವತಿಯು ನನ್ನೊಡನೆ ವಾದಮಾಡಲಿ. ತನ್ನ ಬಲವನ್ನೂ ನನ್ನ ಬಲವನ್ನೂ ತಿಳಿಯಬೇಕೆಂದು ಅಪೇಕ್ಷಿಸುತ್ತಾಳೆ. ಇಬ್ಬರ ಮಹಿಮೆಯನ್ನೂ ಎಲ್ಲರೂ ತಿಳಿಯಲಿ! ಹೀಗೆಂದು ಹೇಳಿ ಗಂಗೆಯು ಮುಂದೆ ಹೇಳುವಂತೆ ಸರಸ್ವತಿಗೆ ಶಾಪವನ್ನು ಕೊಟ್ಟಳು. ||೩೮-೩೯||

ನಿನಗೆ ಶಾಪವನ್ನು ಕೊಟ್ಟ ಆ ಸರಸ್ವತಿಯು ನದೀರೂಪವಾಗಿ ಪಾಪಿಗಳು ವಾಸಮಾಡುವ ಭೂಲೋಕದ ಕೆಳಗಿನ ಲೋಕಕ್ಕೆ ಹೋಗಲಿ. ಕಲಿಯುಗದಲ್ಲಿ ಅವರ ಪಾಪವನ್ನೆಲ್ಲವನ್ನೂ ಈಕೆಯು ತೆಗೆದುಕೊಳ್ಳುವಳು. ಸಂದೇಹವಿಲ್ಲ. ||೪೦||

ಇತ್ಯೇವಂ ವಚನಂ ಶ್ರುತ್ವಾ ತಾಂ ಶಶಾಪ ಸರಸ್ವತೀ ॥೪೧॥

ತ್ವಮೇವ ಯಾಸ್ಯಸಿ ಮಹೀಂ ಪಾಪಿ-ಪಾಪಂ ಲಭಿಷ್ಯಸಿ ।
ಏತಸ್ಮಿನ್ನಂತರೇ ತತ್ರ ಭಗವಾನಾಜಗಾಮ ಹ ॥೪೨॥

ಚತುರ್ಭುಜಶ್ಚತುರ್ಭಿಶ್ಚ ಪಾರ್ಷದೈಶ್ಚ ಚತುರ್ಭುಜೈಃ ।
ಸರಸ್ವತೀಂ ಕರೇ ಧೃತ್ವಾ ವಾಸಯಾಮಾಸ ವಕ್ಷಸಿ ॥೪೩॥

ಬೋಧಯಾಮಾಸ ಸರ್ವಜ್ಞಃ ಸರ್ವಜ್ಞಾನಂ ಪುರಾತನಂ ।
ಶ್ರುತ್ವಾ ರಹಸ್ಯಂ ತಾಸಾಂ ಚ ಶಾಪಸ್ಯ ಕಲಹಸ್ಯ ಚ ॥೪೪॥

ಉವಾಚ ದುಃಖಿತಾಸ್ತಾಶ್ಚ ವಾಚಂ ಸಾಮಯಿಕೀಂ ವಿಭುಃ ।

॥ ಶ್ರೀಭಗವಾನುವಾಚ ॥

ಲಕ್ಷ್ಮಿ ತ್ವಂ ಕಲಯಾ ಗಚ್ಛ ಧರ್ಮಧ್ವಜಗೃಹಂ ಶುಭೇ ॥೪೫॥

ಅಯೋನಿಸಂಭವಾ ಭೂಮೌ ತಸ್ಯ ಕನ್ಯಾ ಭವಿಷ್ಯಸಿ ।
ತತ್ರೈವ ದೈವದೋಷೇಣ ವೃಕ್ಷತ್ವಂ ಚ ಲಭಿಷ್ಯಸಿ ॥೪೬॥

---

ಈ ಮಾತನ್ನು ಕೇಳಿ ಸರಸ್ವತಿಯು ಗಂಗೆಯನ್ನು ಕುರಿತು ನೀನೇ ಭೂಮಿಗೆ ಹೋಗುವೆ. ಪಾಪಿಗಳ ಪಾಪವನ್ನೂ ಹೊಂದುವೆ. ಎಂದು ಶಪಿಸಿದಳು. ॥೪೧॥

ಈ ಸಮಯಕ್ಕೆ ಸರಿಯಾಗಿ ನಾಲ್ಕು ತೋಳುಗಳುಳ್ಳ ನಾರಾಯಣನು ನಾಲ್ಕು ತೋಳುಗಳುಳ್ಳ ನಾಲ್ವರು ಸೇವಕರೊಡನೆ ಅಲ್ಲಿಗೆ ಬಂದು ಸರಸ್ವತಿಯನ್ನು ಕೈಯಲ್ಲಿ ಹಿಡಿದು ತನ್ನೆದೆಯಲ್ಲಿಟ್ಟುಕೊಂಡನು. ॥೪೨-೪೩॥

ಸಮಸ್ತವನ್ನೂ ತಿಳಿದ ನಾರಾಯಣನು ಪುರಾತನ ಸಂಸ್ಕಾರರೂಪವಾದ ಜ್ಞಾನವನ್ನು ಅವರಿಗೆ ತಿಳಿಸಿದನು. ಆ ಸ್ತ್ರೀಯರ ಪರಸ್ಪರ ಶಾಪಕ್ಕೂ ಜಗಳಕ್ಕೂ ಇದ್ದ ಕಾರಣದ ಗುಟ್ಟನ್ನು ಕೇಳಿ ದುಃಖಿತರಾದ ಅವರನ್ನು ಕುರಿತು ಸಮಯೋಚಿತವಾದ ಮಾತುಗಳನ್ನು ಹೇಳಿದನು. ॥೪೪॥

ಭಗವಂತನು ಹೇಳಿದನು—ಲಕ್ಷ್ಮೀದೇವಿಯೇ, ನೀನು ಒಂದು ಅಂಶದಿಂದ ಧರ್ಮಧ್ವಜನೆಂಬ ರಾಜನ ಮನೆಗೆ ಹೋಗು, ಮನುಜರ ಗರ್ಭದಲ್ಲಿ ಜನಿಸದೆ ಭೂಮಿಯಲ್ಲಿ ಹುಟ್ಟಿ ಆ ದೊರೆಗೆ ಮಗಳಾಗಿರು. ಅದೃಷ್ಟದ ದೋಷದಿಂದ ಅಲ್ಲಿಯೇ ನೀನು ವೃಕ್ಷರೂಪವಾಗಿರುತ್ತೀಯೆ! ॥೪೫-೪೬॥

ಮದಂಶಸ್ಯಾಸುರಸ್ಯೈವ ಶಂಖಚೂಡಸ್ಯ ಕಾಮಿನೀ ।
ಭೂತ್ವಾ ಪಶ್ಚಾಚ್ಚ ಮತ್ಪತ್ನೀ ಭವಿಷ್ಯಸಿ ನ ಸಂಶಯಃ ॥೪೭॥

ತ್ರೈಲೋಕ್ಯಪಾವನೀ ನಾಮ್ನಾ ತುಲಸೀತಿ ಚ ಭಾರತೇ ।
ಕಲಯಾ ಚ ಸರಿದ್ಭಾವಂ ಶೀಘ್ರಂ ಗಚ್ಛ ವರಾನನೇ ॥೪೮॥

ಭಾರತಂ ಭಾರತೀ ಶಾಪಾನ್ನಾಮ್ನಾ ಪದ್ಮಾವತೀ ಭವ ।
ಗಂಗೇ ಯಾಸ್ಯಸಿ ಪಶ್ಚಾತ್ತ್ವಮಂಶೇನ ವಿಶ್ವಪಾವನೀ ॥೪೯॥

ಭಾರತಂ ಭರತೀ ಶಾಪಾತ್ಪಾಪದಾಹಾಯ ಪಾಪಿನಾಂ ।
ಭಗೀರಥಸ್ಯ ತಪಸಾ ತೇನ ನೀತಾ ಸುಕಲ್ಪಿತೇ ॥೫೦॥

ನಾಮ್ನಾ ಭಾಗೀರಥೀ ಪೂತಾ ಭವಿಷ್ಯಸಿ ಮಹೀತಲೇ ।
ಮದಂಶಸ್ಯ ಸಮುದ್ರಸ್ಯ ಜಾಯಾ ಜಾಯೇ ಮಮಾಜ್ಞಯಾ ॥೫೧॥

---

ನನ್ನ ಅಂಶದಿಂದ ಹುಟ್ಟಿದ ಶಂಖಚೂಡನೆಂಬ ಅಸುರನ ಹೆಂಡಿತಿಯಾಗಿದ್ದು, ಆ ಮೇಲೆ ನನ್ನ ಪತ್ನಿಯಾಗುವೆ. ಸಂದೇಹವಿಲ್ಲ. ಭರತಖಂಡದಲ್ಲಿ ಮೂರು ಲೋಕವನ್ನೂ ಪರಿಶುದ್ಧಿಮಾಡುವ ತುಲಸೀ ಎಂಬ ಹೆಸರಿನಿಂದ ಒಂದು ಕಲೆಯಿಂದ ನದೀ ರೂಪವಾಗಿಯೂ ಆಗುವೆ. ಸುಂದರವಾದ ಮುಖವುಳ್ಳ ನೀನು ಬೇಗನೆ ಪ್ರಯಾಣ ಮಾಡು. ||೪೭-೪೮||

ಸರಸ್ವತಿಯ ಶಾಪದಿಂದ ಭರತಖಂಡದಲ್ಲಿ ಪದ್ಮಾವತೀ ಎಂಬ ಹೆಸರನ್ನು ಹೊಂದು. ಈ ಸಂದರ್ಭದಲ್ಲಿ ಶಂಖಚೂಡನೂ, ಸಮುದ್ರರಾಜನೂ, ಶಂತನು ರಾಜನೂ, ವಿಷ್ಣುವಿನ ಅಂಶರೂಪರಾದುದರಿಂದ ಪರಪುರುಷ ಸಂಗದ ಪ್ರಸಕ್ತಿ ಇಲ್ಲವೆಂದು ತಿಳಿಯಬಹುದು.

ಎಲೈ ಗಂಗೆಯೇ, ಅಂಶದಿಂದ ನೀನು ಸರಸ್ವತಿಯ ಶಾಪದಿಂದ ಭರತ ಖಂಡಕ್ಕೆ ಹೋಗುತ್ತೀಯೆ. ಪಾಪಿಗಳ ಪಾಪವನ್ನು ನಾಶಮಾಡುತ್ತೀಯೆ. ಭಗೀರಥನು ತಪಸ್ಸುಮಾಡಿ ನಿನ್ನನ್ನು ಭೂಮಿಗೆ ಕ್ಲೃಪ್ತರೀತಿಯಲ್ಲಿ ಕರೆದುಕೊಂಡು ಹೋಗುವನು. ನಿನಗೆ ಭಾಗೀರಥೀ ಎಂಬ ಹೆಸರು ಬರುವುದು. ನನ್ನ ಅಂಶದ ಸಮುದ್ರರಾಜನ ಪತ್ನಿಯಾಗು ಮತ್ತು ನನ್ನ ಕಲಾಂಶದಿಂದ ಹುಟ್ಟಿದ ಶಂತನುವಿಗೆ ಪತ್ನಿಯಾಗು. ||೪೯-೫೦-೫೧||

ಮತ್ಕಲಾಂಶಸ್ಯ ಭೂಪಸ್ಯ ಶಂತನೋಶ್ಚ ಸುರೇಶ್ವರಿ ।
ಗಂಗಾಶಾಪೇನ ಕಲಯಾ ಭಾರತಂ ಗಚ್ಛ ಭಾರತೀ ॥೫೨॥

ಕಲಹಸ್ಯ ಫಲಂ ಭುಂಕ್ಷ್ವ ಸಪತ್ನೀಭ್ಯಾಂ ಸಹಾಽಚ್ಯುತೇ ।
ಸ್ವಯಂ ಚ ಬ್ರಹ್ಮಸದನೇ ಬ್ರಹ್ಮಣಃ ಕಾಮಿನೀ ಭವ ॥೫೩॥

ಗಂಗಾ ಯಾತು ಶಿವಸ್ಥಾನಮತ್ರ ಪದ್ಮೈವ ತಿಷ್ಠತು ।
ಶಾಂತಾ ಚ ಕ್ರೋಧರಹಿತಾ ಮದ್ಭಕ್ತಾ ಸತ್ವರೂಪಿಣೀ ॥೫೪॥

ಮಹಾಸಾಧ್ವೀ ಮಹಾಭಾಗಾ ಸುಶೀಲಾ ಧರ್ಮಚಾರಿಣೀ ।
ಯದಂಶಕಲಯಾ ಸರ್ವಾ ಧರ್ಮಿಷ್ಠಾಶ್ಚ ಪತಿವ್ರತಾಃ ॥೫೫॥

ಶಾಂತರೂಪಾಃ ಸುಶೀಲಾಶ್ಚ ಪ್ರತಿವಿಶ್ವೇಷು ಪೂಜಿತಾಃ ।
ತಿಸ್ರೋ ಭಾರ್ಯಾಸ್ತ್ರಿಶೀಲಾಶ್ಚ ತ್ರಯೋ ಭೃತ್ಯಾಶ್ಚ ಬಾಂಧವಾಃ ॥೫೬॥
ಧ್ರುವಂ ವೇದವಿರುದ್ಧಾಶ್ಚ ನ ಹ್ಯೇತೇ ಮಂಗಳಪ್ರದಾಃ ।

---

ಸರಸ್ವತಿಯೇ, ಗಂಗೆಯ ಶಾಪದಿಂದ ನೀನು ಒಂದಂಶದಿಂದ ಭರತಖಂಡಕ್ಕೆ ಹೋಗು. ಸವತಿಯರಲ್ಲಿ ಜಗಳವಾಡಿದುದಕ್ಕಾಗಿ ನದೀರೂಪವಾಗಿದ್ದು ಫಲವನ್ನನುಭವಿಸು. ಪೂರ್ಣಾಂಶದಿಂದ ನೀನು ಬ್ರಹ್ಮನ ಮನೆಯಲ್ಲಿ ಬ್ರಹ್ಮನ ಪತ್ನಿಯಾಗಿರು. ॥೫೨-೫೩॥

ಗಂಗೆಯು ಪೂರ್ಣಾಂಶದಿಂದ ಶಿವನ ಸಮೀಪಕ್ಕೆ ಹೋಗಲಿ. ಶಿವನ ಪತ್ನಿಯಾಗಲಿ. ಶಾಂತಳೂ ಕೋಪವಿಲ್ಲದವಳೂ ನನ್ನ ಭಕ್ತಳೂ ಸಾತ್ವಿಕಗುಣಸ್ವರೂಪಳೂ ಮಹಾಪತಿವ್ರತೆಯೂ ಭಾಗ್ಯವತಿಯೂ ಒಳ್ಳೆಯ ನಡತೆಯುಳ್ಳವಳೂ ಧರ್ಮಮಾರ್ಗದಲ್ಲಿರುವವಳೂ ಆದ ಲಕ್ಷ್ಮೀಯು ಪೂರ್ಣಾಂಶದಿಂದ ಇಲ್ಲಿಯೇ ಇರಲಿ. ಲಕ್ಷ್ಮೀದೇವಿಯ ಕಲಾಂಶದಿಂದ ಸಮಸ್ತ ಸ್ತ್ರೀಯರೂ ಧರ್ಮಾಸಕ್ತರೂ ಪತಿವ್ರತೆಯರೂ ಆಗುವರು. ॥೫೪-೫೫॥

ಶಾಂತರೂ ಒಳ್ಳೆಯ ನಡತೆಯುಳ್ಳವರೂ ಆದ ಸ್ತ್ರೀಯರು ಪ್ರತಿಯೊಂದು ಪ್ರಪಂಚದಲ್ಲೂ ಪೂಜಾಯೋಗ್ಯರಾಗುವರು.

ಬೇರೆ ಬೇರೆ ಮೂರು ಬಗೆಯ ನಡತೆಯುಳ್ಳ ಮೂವರು ಹೆಂಡಿರು, ಮೂವರು ಆಳುಗಳು, ಮೂರು ಜನ ನಂಟರು, ಇರುವುದು ವೇದವಿರುದ್ಧವಾದುದು. ಇವರು ಶುಭವನ್ನು ಕೊಡತಕ್ಕವರಲ್ಲವು. ॥೫೬॥

ಸ್ತ್ರೀ ಪುಂವಚ್ಚ ಗೃಹೇ ಯೇಷಾಂ ಗೃಹಿಣಾಂ ಸ್ತ್ರೀವಶಃ ಪುಮಾನ್॥೫೭॥

ನಿಷ್ಫಲಂ ಜನ್ಮ ತೇಷಾಂ ಖಲ್ವಶುಭಂ ಚ ಪದೇ ಪದೇ ।
ಮುಖೇ ದುಷ್ಟಾ ಯೋನಿದುಷ್ಟಾ ಯಸ್ಯ ಸ್ತ್ರೀ ಕಲಹಪ್ರಿಯಾ ॥೫೮॥

ಅರಣ್ಯಂ ತೇನ ಗಂತವ್ಯಂ ಮಹಾರಣ್ಯಂ ಗೃಹಾದ್ವರಂ ।
ಜಲಾನಾಂ ಚ ಸ್ಥಲಾನಾಂ ಚ ಫಲಾನಾಂ ಪ್ರಾಪ್ತಿರೇವ ಚ ॥೫೯॥

ಸತತಂ ಸುಲಭಾ ತತ್ರ ನ ತೇಷಾಂ ಗೃಹ ಏವ ಚ ।
ವರಮಗ್ನೌ ಸ್ಥಿತಿರ್ಹಿಂಸ್ರಜಂತೂನಾಂ ಸನ್ನಿಧೌ ಧ್ರುವಂ ॥೬೦॥

ತತೋಽಪಿ ದುಃಖಂ ಪುಂಸಾಂ ಚ ದುಷ್ಟಸ್ತ್ರೀ ಸನ್ನಿಧೌ ಧ್ರುವಂ।
ವ್ಯಾಧಿಜ್ವಾಲಾ ವಿಷಜ್ವಾಲಾ ವರಂ ಪುಂಸಾಂ ವರಾನನೇ ॥೬೧॥
ದುಷ್ಟಸ್ತ್ರೀಣಾಂ ಮುಖಜ್ವಾಲಾ ಮರಣಾದತಿರಿಚ್ಯತೇ ।

---

ಯಾರ ಮನೆಯಲ್ಲಿ ದುಷ್ಟರಾದ ಹೆಂಗಸರು ಗಂಡಸಿನಂತೆ ಮುಖರರಾಗಿ, ಗಂಡುಬೀರಿಯರಾಗಿಯೂ, ಪುರುಷರು ಸ್ತ್ರೀವಶರಾಗಿಯೂ ಇರುವರೋ, ಅವರ ಹುಟ್ಟು ವ್ಯರ್ಥವಾಗುವುದು. ಅವರಿಗೆ ಪುನಃ ಪುನಃ ಅಮಂಗಳವಾಗುವುದು. ॥೫೭॥

ಯಾವ ಮನುಷ್ಯನ ಹೆಂಡಿತಿಯು ಮಾತಿನಲ್ಲಿ ಕೆಟ್ಟವಳಾಗಿ, ಜಗಳದಲ್ಲಾಸಕ್ತಳಾಗಿ, ಅವಯವದಲ್ಲಿಯೂ ದುಷ್ಟಳಾಗಿರುವಳೋ, ಅಂತಹನು ಅರಣ್ಯಕ್ಕೆ ಹೋಗಬೇಕು. ಅವನಿಗೆ ದೊಡ್ಡ ಕಾಡು ಮನೆಗಿಂತಲೂ ಮೇಲು. ಅಲ್ಲಿ ನೀರು, ಭೂಮಿ, ಹಣ್ಣುಗಳು ಯಾವಾಗಲೂ ಸುಲಭವಾಗಿ ದೊರೆಯುವುವು. ಮನೆಯಲ್ಲಾದರೋ ಇವುಗಳೂ ದೊರೆಯುವುದಿಲ್ಲ. ಶಾಂತಿಸುಖಗಳೂ ಇಲ್ಲವು! ॥೫೮-೫೯॥

ಬೆಂಕಿಯಲ್ಲಿ ನಿಂತಿರುವುದೂ, ದುಷ್ಟಪ್ರಾಣಿಗಳ ಸಮೀಪದಲ್ಲಿರುವುದೂ, ಸುಖವಾದೀತು. ಆದರೆ ಕೆಟ್ಟ ಹೆಂಗಸಿನ ಸಮೀಪದಲ್ಲಿರುವುದು ಖಂಡಿತವಾಗಿಯೂ ಪುರುಷನಿಗೆ ಅದಕ್ಕಿಂತಲೂ ಕಷ್ಟವಾಗುವುದು. ಎಲೈ ಸುಂದರ ಮುಖಿಯಾದ ಲಕ್ಷ್ಮಿಯೇ, ಪುರುಷರಿಗೆ ರೋಗದ ಉರಿಯೂ, ವಿಷದ ಉರಿಯೂ, ಕೆಟ್ಟ ಹೆಂಗಸಿನ ಮಾತಿನ ಉರಿಗಿಂತಲೂ ಒಳ್ಳೆಯದು. ಕೆಟ್ಟ ಹೆಂಗಸಿನ ಮಾತು ಸಾವಿಗಿಂತಲೂ ಹೆಚ್ಚು ದುಃಖವನ್ನುಂಟುಮಾಡುವುದು. ॥೬೦-೬೧॥

ಪುಂಸಾಂ ಚ ಸ್ತ್ರೀಜಿತಾಂ ಚೈವ ಭಸ್ಮಾಂತಂ ಶೌಚಮಧ್ರುವಂ ॥೬೨॥

ಯದಹ್ನಿ ಕುರುತೇ ಕರ್ಮ ನ ತಸ್ಯ ಫಲಭಾಗ್ಭವೇತ್ ।
ನಿಂದಿತೋಽತ್ರ ಪರತ್ರೈವ ಸರ್ವತ್ರ ನರಕಂ ವ್ರಜೇತ್ ॥೬೩॥

ಯಶಃ ಕೀರ್ತಿವಿಹೀನೋ ಯೋ ಜೀವನ್ನಪಿ ಮೃತೋ ಹಿ ಸಃ ।
ಬಹ್ವೀನಾಂ ಚ ಸಪತ್ನೀನಾಂ ನೈಕತ್ರ ಶ್ರೇಯಸೇ ಸ್ಥಿತಿಃ ॥೬೪॥

ಏಕಭಾರ್ಯಃ ಸುಖೀ ನೈವ ಬಹುಭಾರ್ಯಃ ಕದಾಚನ ।
ಗಚ್ಛ ಗಂಗೇ ಶಿವಸ್ಥಾನಂ ಬ್ರಹ್ಮಸ್ಥಾನಂ ಸರಸ್ವತೀ ॥೬೫॥

ಅತ್ರ ತಿಷ್ಠತು ಮದ್ಗೇಹೇ ಸುಶೀಲಾ ಕಮಲಾಲಯಾ ।
ಸುಸಾಧ್ವೀ ಯಸ್ಯ ಪತ್ನೀ ಚ ಸುಶೀಲಾ ಚ ಪತಿವ್ರತಾ ॥೬೬॥
ಇಹ ಸ್ವರ್ಗೇ ಸುಖಂ ತಸ್ಯ ಧರ್ಮೋ ಮೋಕ್ಷಃ ಪರತ್ರ ಚ ।

---

ದುಷ್ಟ ಹೆಂಗುಸಿಗೆ ಸೋತ ಗಂಡಸನ್ನು ಸಾಯುವ ವರೆಗೆ ಶುದ್ಧಿಮಾಡಿದರೂ ಶುದ್ಧನಾಗಲಾರನು. ॥೬೨॥

ಸ್ತ್ರೀಜಿತನಾದ ಪುರುಷನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ನಿಂದೆಗೆ ಗುರಿಯಾಗಿ ಅವನು ಯಾವದಿನ ಮಾಡಿದ ಕರ್ಮವೂ ಫಲವನ್ನು ಕೊಡದೆ ಹೆಸರುವಾಸಿಯಿಲ್ಲದವನಾಗಿ ಬದುಕಿದ್ದರೂ ಸತ್ತಂತಾಗುವನು. ॥೬೩॥

ಅನೇಕ ಸವತಿಯರು ಒಂದೆಡೆಯಲ್ಲಿರುವುದು ಮಂಗಳಕರವಾದುದಲ್ಲ. ಒಬ್ಬಳು ಹೆಂಡಿತಿಯುಳ್ಳ ಪುರುಷನು ಸುಖವಾಗಿರುವನು. ಅನೇಕ ಹೆಂಡಿತಿಯರುಳ್ಳವ ನೆಂದಿಗೂ ಸುಖಿಯಲ್ಲ. ॥೬೪॥

ಎಲೈ ಗಂಗೆಯೇ, ನೀನು ಶಿವನ ಸಮೀಪಕ್ಕೆ ಹೋಗು. ಸರಸ್ವತಿಯೇ, ನೀನು ಬ್ರಹ್ಮನ ಸಮೀಪಕ್ಕೆ ಹೋಗು. ಒಳ್ಳೆಯ ನಡತೆಯುಳ್ಳ ಲಕ್ಷ್ಮಿಯು ಇಲ್ಲಿಯೇ ನನ್ನ ಮನೆಯಲ್ಲಿ ಇರಲಿ. ॥೬೫॥

ಯಾವನ ಹೆಂಡಿತಿಯು ಪತಿಭಕ್ತಿಯುಳ್ಳ ಒಳ್ಳೆಯ ನಡತೆಯುಳ್ಳವಳೂ ಆಗಿ ಹೇಳಿದಂತೆ ಕೇಳುವಳೋ ಅವನಿಗೆ ಧರ್ಮಾಚರಣೆಯಿಂದ ಈ ಲೋಕದಲ್ಲಿಯೂ ಸ್ವರ್ಗಲೋಕದಲ್ಲಿಯೂ ಸುಖವುಂಟಾಗುವುದು. ಪರಲೋಕದಲ್ಲಿ ಧರ್ಮದ ಫಲವಾದ ಮುಕ್ತಿಯೂ ಉಂಟಾಗುವುದು. ॥೬೬॥

ಪತಿವ್ರತಾ ಯಸ್ಯ ಪತ್ನೀ ಸ ಚ ಮುಕ್ತಃ ಶುಚಿಃ ಸುಖೀ ॥೬೭॥
ಜೀವನ್ಮೃತೋಽಶುಚಿರ್ದುಃಖೀ ದುಃಶೀಲಾ ಪತಿರೇವ ಚ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಷಷ್ಠೋಽಧ್ಯಾಯಃ

---

ಯಾವನ ಹೆಂಡತಿಯು ಪತಿವ್ರತೆಯಾಗಿರುವಳೋ ಅವನು ಪರಿಶುದ್ಧನೂ ಸುಖವುಳ್ಳವನೂ ಮುಕ್ತನೂ ಆಗುವನು. ಕೆಟ್ಟನಡತೆಯುಳ್ಳವಳ ಗಂಡನು ಬದುಕಿರುವ ಶವದಂತೆ ಅಪರಿಶುದ್ಧನಾಗುವನು. ||೬೭||

ಈ ಸ್ಕಂಧದ ಮೊದಲಿನಲ್ಲಿ ದುರ್ಗಾ, ರಾಧಾ, ಲಕ್ಷ್ಮೀ, ಸರಸ್ವತೀ, ಸಾವಿತ್ರೀ ಎಂಬ ಈ ಐವರು ದೇವಿಯರೂ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣರೆಂದೂ, ಇವರು ಮೂಲಪ್ರಕೃತಿಯ ಅವತಾರವೇ ಎಂದೂ ಹೇಳಿದೆ. ಆ ಮೇಲೆ ರಾಧಾ ಕೃಷ್ಣರ ಪರಮೋತ್ಕರ್ಷವನ್ನೂ ವರ್ಣಿಸಿ, ಅನಂತರದಲ್ಲಿ ಗೋಲೋಕ, ವೈಕುಂಠಗಳ ಸ್ಥಾನಗಳನ್ನೂ ವಿವರಿಸಿದೆ. ಈ ಪ್ರಕ್ರಿಯೆಯು ತ್ರಿಮೂರ್ತಿಗಳಿಂದ, ಎಂದರೆ ಬ್ರಹ್ಮಾ, ವಿಷ್ಣು, ರುದ್ರ, ವಾಣೀ, ಲಕ್ಷ್ಮೀ, ಉಮಾ. ಎಂಬ ಶಕ್ತ್ಯಂಶರಿಂದ ಸತ್ವ, ರಜಸ್, ತಮಸ್ ಎಂಬ ಗುಣತ್ರಯದ ಉಪಾಧಿಗಳ ಮೂಲಕವಾಗಿ ನೆರವೇರುತ್ತಿದೆ ಎಂದು ಹಿಂದಿನ ಸ್ಕಂಧಗಳಲ್ಲಿ ವರ್ಣಿಸಿದ ಪ್ರಕ್ರಿಯೆಗಿಂತ ಭಿನ್ನವಾಗಿರುವುದರಿಂದ, ಇವು ಪರಸ್ಪರ ವಿರುದ್ಧವಾಗಿ ಅಪ್ರಮಾಣಗಳೆಂದು ತಿಳಿಯಬಾರದು. ಮತ್ತೇನೆಂದರೆ ಈ ವ್ಯಕ್ತಿಗಳಲ್ಲಿ ಹಿನ್ನೆಲೆಯಾಗಿ ಒಳಗೂ ಹೊರಗೂ ವ್ಯಾಪಿಸಿರುವುದು ಒಂದೇ ಮೂಲ ತತ್ವವೆಂಬ ವಿಶಾಲಭಾವಕ್ಕೆ ಓದುಗರ ಮನಸ್ಸನ್ನು ಒಲೆಯುವಂತೆ ಮಾಡುವುದೇ ಉದ್ದೇಶವೆಂದೂ, ಅದೇ ಏಕತತ್ವವೇ ಪರಮ ಸಿದ್ಧಾಂತವಾದ ತತ್ವವೆಂದೂ, ತಿಳಿಯಬೇಕು.

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಸಪ್ತಮೋಽಧ್ಯಾಯಃ ॥

### ಏಳನೆಯ ಅಧ್ಯಾಯವು

॥ ಶ್ರೀನಾರಾಯಣ ಉವಾಚ ॥

**ಇತ್ಯುಕ್ತ್ವಾ ಜಗತಾಂ ನಾಥೋ ವಿರರಾಮ ಚ ನಾರದ ।**
**ಅತೀವ ರುರುದುರ್ದೇವ್ಯಃ ಸಮಾಲಿಂಗ್ಯ ಪರಸ್ಪರಂ ॥೧॥**

**ತಾಶ್ಚ ಸರ್ವಾಃ ಸಮಾಲೋಕ್ಯ ಕ್ರಮೇಣೋಚುಸ್ತದೇಶ್ವರಂ ।**
**ಕಂಪಿತಾಃ ಸಾಶ್ರುನೇತ್ರಾಶ್ಚ ಶೋಕೇನ ಚ ಭಯೇನ ಚ ॥೨॥**

॥ ಸರಸ್ವತ್ಯುವಾಚ ॥

**ವಿಶಾಪಂ ದೇಹಿ ಹೇ ನಾಥ ದುಷ್ಟಮಾಜನ್ಮಶೋಚನಂ ।**
**ಸತ್ಸ್ವಾಮಿನಾ ಪರಿತ್ಯಕ್ತಾಃ ಕುತೋ ಜೀವಂತಿ ತಾಃ ಸ್ತ್ರಿಯಃ ॥೩॥**

---

ನಾರಾಯಣನು ಹೇಳಿದನು—ಎಲೈ ನಾರದನೇ, ಜಗತ್ಪತಿಯಾದ ನಾರಾಯಣನು ಹೀಗೆ ಹೇಳಿ ಸುಮ್ಮನಾದನು. ದೇವಿಯರು ಒಬ್ಬರನ್ನೊಬ್ಬರು ತಬ್ಬಿಕೊಂಡು ತಮ್ಮ ಕೋಪಾವೇಶದ ದುಷ್ಫಲವನ್ನು ಮನಗಂಡು ಬಹಳವಾಗಿ ಅತ್ತರು. ॥೧॥

ಅವರೆಲ್ಲರೂ ದುಃಖದಿಂದಲೂ ಭಯದಿಂದಲೂ ನಡುಗುತ್ತಾ ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ಸ್ವಾಮಿಯಾದ ನಾರಾಯಣನನ್ನು ನೋಡಿ ಕ್ರಮವಾಗಿ ತಮ್ಮ ಕೋಪವು ಶಾಂತವಾದ ಮೇಲೆ ಹೀಗೆ ಒಬ್ಬೊಬ್ಬರಾಗಿ ಮಾತನಾಡಿದರು. ॥೨॥

ಸರಸ್ವತಿಯು ಹೇಳಿದಳು—ಓ ಸ್ವಾಮಿಯೇ, ಬದುಕಿರುವವರೆಗೂ ದುಃಖಪಡುತ್ತಿರುವುದು ಬಹಳ ಕೆಟ್ಟದು. ಸಜ್ಜನನೂ ಗುಣವಂತನೂ ಆದ ಪತಿಯನ್ನು

ದೇಹತ್ಯಾಗಂ ಕರಿಷ್ಯಾಮಿ ಯೋಗೇನ ಭಾರತೇ ಧ್ರುವಂ ।
ಅತ್ಯುನ್ನತೋ ಹಿ ನಿಯತಂ ಪಾ(ತ)ತುಮರ್ಹತಿ ನಿಶ್ಚಿತಂ ॥೪॥

॥ ಗಂಗೋವಾಚ ॥

ಅಹಂ ಕೇನಾಪರಾಧೇನ ತ್ವಯಾ ತ್ಯಕ್ತಾ ಜಗತ್ಪತೇ ।
ದೇಹತ್ಯಾಗಂ ಕರಿಷ್ಯಾಮಿ ನಿರ್ದೋಷಾಯಾ ವಧಂ ಲಭ ॥೫॥

ನಿರ್ದೋಷಕಾಮಿನೀತ್ಯಾಗಂ ಕರೋತಿ ಯೋ ನರೋ ಭುವಿ ।
ಸ ಯಾತಿ ನರಕಂ ಘೋರಂ ಕಿಂತು ಸರ್ವೇಶ್ವರೋಽಪಿ ವಾ ॥೬॥

॥ ಪದ್ಮೋವಾಚ ॥

ನಾಥ ಸತ್ವಸ್ವರೂಪಸ್ತ್ವಂ ಕೋಪಃ ಕಥಮಹೋ ತವ ।
ಪ್ರಸಾದಂ ಕುರು ಭಾರ್ಯೇ ದ್ವೇ ಸದೀಶಸ್ಯ ಕ್ಷಮಾ ವರಾ ॥೭॥

ಭಾರತೇ ಭಾರತೀ ಶಾಪಾದ್ಯಾಸ್ಯಾಮಿ ಕಲಯಾ ಹ್ಯಹಂ ।
ಕಿಯತ್ಕಾಲಂ ಸ್ಥಿತಿಸ್ತತ್ರ ಕದಾ ದ್ರಕ್ಷ್ಯಾಮಿ ತೇ ಪದಂ ॥೮॥

---

ಬಿಟ್ಟರೆ ಸ್ತ್ರೀಯರು ಹೇಗೆ ಬದುಕುವರು. ನನಗೆ ಶಾಪವು ಪರಿಹಾರವಾಗುವ ಮಾರ್ಗವನ್ನು ಹೇಳು. ನಾನು ಭಾರತ ಭೂಮಿಯಲ್ಲಿ ಯೋಗಾಭ್ಯಾಸದಿಂದ ದೇಹತ್ಯಾಗವನ್ನು ಮಾಡುವುದು ಖಂಡಿತವಾದುದು. ಅತಿ ಕೋಪವನ್ನು ಮಾಡಿದ ನಾನು ಅಧೋಗತಿಯನ್ನು ಹೊಂದುವುದು ನಿಶ್ಚಯವಾದುದು. ಎಂದಳು. ॥೩-೪॥

ಗಂಗೆಯು ಹೇಳಿದಳು— ಓ ಜಗತ್ಪತಿಯಾದ ನಾರಾಯಣನೇ, ಯಾವ ತಪ್ಪಿನಿಂದ ನೀನು ನನ್ನನ್ನು ಬಿಟ್ಟಿರುವೆ. ನಾನು ಶರೀರವನ್ನು ತ್ಯಜಿಸುವೆನು. ನೀನು ತಪ್ಪಿಲ್ಲದ ಸ್ತ್ರೀಯರನ್ನು ಕೊಂದ ಪಾಪಕ್ಕೆ ಗುರಿಯಾಗುವೆ. ಯಾವ ಮನುಷ್ಯನು ಭೂಮಿಯಲ್ಲಿ ತಪ್ಪಿಲ್ಲದ ಹೆಂಡಿತಿಯನ್ನು ಬಿಡುವನೋ ಅವನು ಸರ್ವೇಶ್ವರನಾದ ದೇವನಾದರೂ ಕ್ರೂರವಾದ ನರಕಕ್ಕೆ ಹೋಗುವನು. ಎಂದಳು. ॥೫-೬॥

ಲಕ್ಷ್ಮೀದೇವಿಯು ಓ ಸ್ವಾಮಿಯೇ, ನೀನು ಸತ್ವಗುಣಸ್ವರೂಪನು. ನಿನಗೆ ಕೋಪವು ಹೇಗೆ ಬಂದೀತು. ಇಬ್ಬರು ಪತ್ನಿಯರಾದ ಗಂಗಾಸರಸ್ವತಿಯರಿಗೆ ಪ್ರಸನ್ನನಾಗು. ಒಳ್ಳೆಯ ಪತಿಗೆ ಕ್ಷಮಾಗುಣವೇ ಶ್ರೇಷ್ಠವಾದುದು. ನಾನು ಸರಸ್ವತಿಯ ಶಾಪದಿಂದ ಒಂದಂಶದಿಂದ ಭರತಖಂಡಕ್ಕೆ ಹೋಗುವೆನು. ಅಲ್ಲಿ ಎಷ್ಟು ಕಾಲವಿರಬೇಕು ? ನಿನ್ನ ಪಾದವನ್ನು ಪುನಃ ಬಂದು ಯಾವಾಗ ನೋಡುವೆನು ? ॥೭-೮॥

ದಾಸ್ಯಂತಿ ಪಾಪಿನಃ ಪಾಪಂ ಸದ್ಯಃ ಸ್ನಾನಾವಗಾಹನಾತ್ ।
ತೇನ ತೇನ ವಿಮುಕ್ತಾಽಹಮಾಗಮಿಷ್ಯಾಮಿ ತೇ ಪದಂ ॥೯॥

ಕಲಯಾ ತುಲಸೀರೂಪಂ ಧರ್ಮಧ್ವಜಸುತಾ ಸತೀ ।
ಭುಕ್ತ್ವಾ ಕದಾ ಲಭಿಷ್ಯಾಮಿ ತ್ವತ್ಪದಾಂಬುಜಮಚ್ಯುತ ॥೧೦॥

ವೃಕ್ಷರೂಪಾ ಭವಿಷ್ಯಾಮಿ ತ್ವದಧಿಷ್ಠಾತೃದೇವತಾ ।
ಸಮುದ್ಧರಿಷ್ಯಸಿ ಕದಾ ತನ್ಮೇ ಬ್ರೂಹಿ ಕೃಪಾನಿಧೇ ॥೧೧॥

ಗಂಗಾ ಸರಸ್ವತೀಶಾಪಾದ್ಯದಿ ಯಾಸ್ಯತಿ ಭಾರತೇ ।
ಶಾಪೇನ ಮುಕ್ತಾ ಪಾಪಾಚ್ಚ ಕದಾ ತ್ವಾಂ ಚ ಲಭಿಷ್ಯತಿ ॥೧೨॥

ಗಂಗಾಶಾಪೇನ ವಾ ವಾಣೀ ಯದಿ ಯಾಸ್ಯತಿ ಭಾರತಂ ।
ಕದಾ ಶಾಪಾದ್ವಿನಿರ್ಮುಚ್ಯ ಲಭಿಷ್ಯತಿ ಪದಂ ತವ ॥೧೩॥

ತಾಂ ವಾಣೀಂ ಬ್ರಹ್ಮಸದನಂ ಗಂಗಾಂ ವಾ ಶಿವಮಂದಿರಂ ।
ಗಂತುಂ ವದಸಿ ಹೇ ನಾಥ ತತ್ಕ್ಷಮಸ್ವ ಚ ತೇ ವಚಃ ॥೧೪॥

---

ನಾಶರಹಿತನಾದ ನಾರಾಯಣನೇ, ನಾನು ನದೀರೂಪವನ್ನು ಹೊಂದಿದರೆ ಪಾಪಿಗಳು ಸ್ನಾನಮಾಡಿ ತಮ್ಮ ಪಾಪವನ್ನು ನನ್ನಲ್ಲಿ ಬಿಡುವರು. ಅವನ್ನು ನಾನು ಕಳೆದುಕೊಂಡು ಯಾವ ಕಾರಣದಿಂದ ನಿನ್ನ ಪಾದಸಮೀಪಕ್ಕೆ ಬರುವೆನು ? ಒಂದಂಶದಿಂದ ತುಲಸೀರೂಪವನ್ನು ಧರಿಸಿ ಧರ್ಮಧ್ವಜನ ಮಗಳಾಗಿ ಸುಖಾದಿಗಳನ್ನನುಭವಿಸಿ ನಿನ್ನ ಪಾದವನ್ನು ಮತ್ತೆ ಬಂದು ಯಾವಾಗ ಕಂಡೇನು ? ॥೯-೧೦॥

ಓ ದಯಾಶಾಲಿಯಾದ ನಾರಾಯಣನೇ, ನೀನೇ ಆಶ್ರಯದೇವತೆಯಾಗಿರುವ ವೃಕ್ಷರೂಪವಾಗಿ ನಾನು ಆಗುತ್ತೇನೆ. ನನ್ನನ್ನು ಯಾವಾಗ ಈ ಶಾಪದಿಂದ ಉದ್ಧಾರ ಮಾಡುವೆ ? ಹೇಳು. ಸರಸ್ವತಿಯ ಶಾಪದಿಂದ ಗಂಗೆಯು ಭೂಲೋಕಕ್ಕೆ ಹೋದರೆ ಯಾವಾಗ ಅದುಹೋಗಿ ನಿನ್ನ ಪಾದ ಸಮೀಪಕ್ಕೆ ಬರುವಳು ? ॥೧೧-೧೨-೧೩॥

ಸರಸ್ವತಿಯನ್ನು ಬ್ರಹ್ಮನ ಮನೆಗೂ, ಗಂಗೆಯನ್ನು ಶಿವನ ಮನೆಗೂ, ಹೋಗಬೇಕೆಂದು ಹೇಳಿದೆಯಲ್ಲ. ಆ ನಿನ್ನ ಮಾತನ್ನು ಕ್ಷಮಿಸು. ಹೀಗೆಂದು ಹೇಳಿ ಲಕ್ಷ್ಮಿಯು ಪತಿಯ ಪಾದವನ್ನು ಹಿಡಿದುಕೊಂಡು ನಮಸ್ಕಾರ ಮಾಡಿ ತನ್ನ

**ಇತ್ಯುಕ್ತ್ವಾ ಕಮಲಾ ಕಾಂತಪಾದಂ ಧೃತ್ವಾ ನನಾಮ ಸಾ ।**
**ಸ್ವಕೇಶೈರ್ವೇಷ್ಟನಂ ಕೃತ್ವಾ ರುರೋದ ಚ ಪುನಃ ಪುನಃ ॥೧೫॥**

**ಉವಾಚ ಪದ್ಮನಾಭಸ್ತಾಂ ಪದ್ಮಾಂ ಕೃತ್ವಾ ಸ್ವವಕ್ಷಸಿ ।**
**ಈಷದ್ಧಾಸ್ಯಪ್ರಸನ್ನಾಸ್ಯೋ ಭಕ್ತಾನುಗ್ರಹಕಾರಕಃ ॥೧೬॥**

॥ ಶ್ರೀಭಗವಾನುವಾಚ ॥

**ತ್ವದ್ವಾಕ್ಯಮಾಚರಿಷ್ಯಾಮಿ ಸ್ವವಾಕ್ಯಂ ಚ ಸುರೇಶ್ವರಿ ।**
**ಸಮತಾಂ ಚ ಕರಿಷ್ಯಾಮಿ ಶೃಣು ತ್ವಂ ಕಮಲೇಕ್ಷಣೇ ॥೧೭॥**

**ಭಾರತೀ ಯಾ ತು ಕಲಯಾ ಸರಿದ್ರೂಪಾ ಚ ಭಾರತೇ ।**
**ಅರ್ಧಾ ಸಾ ಬ್ರಹ್ಮಸದನಂ ಸ್ವಯಂ ತಿಷ್ಠತು ಮದ್ಗೃಹೇ ॥೧೮॥**

**ತತ್ರೈವ ಚಂದ್ರಮೌಳೇಶ್ಚ ಮೌಳಿಂ ಪ್ರಾಪ್ಸ್ಯತಿ ದುರ್ಲಭಂ ।**
**ತತಃ ಸ್ವಭಾವತಃ ಪೂತಾಽಪ್ಯತಿಪೂತಾ ಭವಿಷ್ಯತಿ ॥೨೦॥**

---

ತಲೆಯ ಕೂದಲುಗಳಿಂದ ಅವನ ಪಾದವನ್ನು ಸುತ್ತಿ ಮತ್ತೆ ಮತ್ತೆ ಅತ್ತಳು. ॥೧೪-೧೫॥

ನಾರಾಯಣನು ಲಕ್ಷ್ಮಿಯನ್ನು ತನ್ನೆದೆಗೆ ಅಪ್ಪಿಕೊಂಡು ನಗುತ್ತಾ ಭಕ್ತರಿಗೆ ಅನುಗ್ರಹವನ್ನು ಮಾಡುವ ಮಾತನ್ನು ಆಡಿದನು. ॥೧೬॥

ಭಗವಂತನು ಹೇಳಿದನು—ಕಮಲದಂತೆ ಕಣ್ಣುಳ್ಳ ದೇವದೇವಿಯೇ, ನಿನ್ನ ಮಾತೂ ನನ್ನ ಮಾತೂ ಸಮವಾಗಿ ನಡೆಯುವಂತೆ ಮಾಡುತ್ತೇನೆ. ನಾನು ಹೇಳುವುದನ್ನು ಕೇಳು. ॥೧೭॥

ಸರಸ್ವತೀದೇವಿಯು ಒಂದು ಕಲಾಂಶದಿಂದ ಭರತಖಂಡದಲ್ಲಿ ನದೀರೂಪವಾಗಲಿ. ಅರ್ಧಾಂಶದಿಂದ ಬ್ರಹ್ಮನ ಮನೆಯಲ್ಲಿ, ಪೂರ್ಣಾಂಶದಿಂದ ಈ ವೈಕುಂಠದಲ್ಲಿಯೇ ಇರಲಿ. ಗಂಗೆಯು ಪೂರ್ಣಾಂಶದಿಂದ ಇಲ್ಲಿಯೇ ಇರಲಿ. ಕಲಾಂಶದಿಂದ ಭಗೀರಥನ ಹಿಂದೆ ಭೂಲೋಕಕ್ಕೆ ಹೋಗಲಿ. ಮೂರು ಲೋಕವನ್ನೂ ಪರಿಶುದ್ಧಿ ಮಾಡಲಿ. ಅಲ್ಲಿಯೇ ಚಂದ್ರಶೇಖರನಾದ ಈಶ್ವರನ ತಲೆಯಲ್ಲಿ ವಾಸಿಸಲಿ. ಇದರಿಂದ ಸ್ವಭಾವವಾಗಿ ಪರಿಶುದ್ಧವಾದ ಗಂಗೆಯು ಮತ್ತಷ್ಟು ಪರಿಶುದ್ಧಳಾಗುವಳು. ॥೧೮-೧೯-೨೦॥

ಕಲಾಂಶಾಂಶೇನ ಗಚ್ಛ ತ್ವಂ ಭಾರತೇ ವಾಮಲೋಚನೇ ।
ಪದ್ಮಾವತೀ ಸರಿದ್ರೂಪಾ ತುಲಸೀ ವೃಕ್ಷರೂಪಿಣೀ ॥೨೦॥

ಕಲೇಃ ಪಂಚಸಹಸ್ರೇ ಚ ಗತೇ ವರ್ಷೇ ಚ ಮೋಕ್ಷಣಂ ।
ಯುಷ್ಮಾಕಂ ಸರಿತಾಂ ಚೈವ ಮದ್ಗೇಹೇ ಚಾಗಮಿಷ್ಯಥ ॥೨೨॥

ಸಂಪದಾಂ ಹೇತುಭೂತಾ ಚ ವಿಪತ್ತಿಃ ಸರ್ವದೇಹಿನಾಂ ।
ವಿನಾ ವಿಪತ್ತೇರ್ಮಹಿಮಾ ಕೇಷಾಂ ಪದ್ಮಭವೇ ಭವೇತ್ ॥೨೩॥

ಮನ್ಮಂತ್ರೋಪಾಸಕಾನಾಂ ಚ ಸತಾಂ ಸ್ನಾನಾವಗಾಹನಾತ್ ।
ಯುಷ್ಮಾಕಂ ಮೋಕ್ಷಣಂ ಪಾಪಾದ್ದರ್ಶನಾತ್ಸ್ಪರ್ಶನಾತ್ತಥಾ ॥೨೪॥

ಪೃಥಿವ್ಯಾಂ ಯಾನಿ ತೀರ್ಥಾನಿ ಸಂತ್ಯಸಂಖ್ಯಾನಿ ಸುಂದರಿ ।
ಭವಿಷ್ಯಂತಿ ಚ ಪೂತಾನಿ ಮದ್ಭಕ್ತಸ್ಪರ್ಶದರ್ಶನಾತ್ ॥೨೫॥

---

ಸುಂದರವಾದ ಕಣ್ಣುಳ್ಳ ಲಕ್ಷ್ಮಿಯೇ, ನಿನ್ನ ಸೂಕ್ಷ್ಮಾಂಶದಿಂದ ಭರತಖಂಡಕ್ಕೆ ಹೋಗಿ ನೀನು ಪದ್ಮಾವತೀ ಎಂಬ ನದಿಯಾಗಿಯೂ ತುಲಸೀವೃಕ್ಷರೂಪವಾಗಿಯೂ ಅವತರಿಸು. ||೨೧||

ಕಲಿಯುಗದಲ್ಲಿ ಐದುಸಾವಿರ ವರುಷಗಳು ಕಳೆದಮೇಲೆ ನಿಮ್ಮ ಶಾಪವು ಕಳೆಯುವುದು. ಆಮೇಲೆ ನೀವು ಈ ನನ್ನ ಮನೆಗೆ ಬರುವಿರಿ. ||೨೨||

ಎಲೈ ಲಕ್ಷ್ಮಿಯೇ, ಸಮಸ್ತ ಪ್ರಾಣಿಗಳಿಗೂ ಈ ಜನನ ಮರಣರೂಪವಾದ ಸಂಸಾರದಲ್ಲಿ ಸಂಪತ್ತಿಗೆ ವಿಪತ್ತೇ ಕಾರಣವಾಗಿರುವುದು. ವಿಪತ್ತಿಲ್ಲದೆ ಮಹಿಮೆಯು ಯಾರಿಗೂ ಉಂಟಾಗದು. ||೨೩||

ನನ್ನ ಮಂತ್ರವನ್ನು ಜಪಮಾಡುವ ಸಜ್ಜನರ ಸ್ನಾನದಿಂದಲೂ ಅವರ ದರ್ಶನ ಸ್ಪರ್ಶನದಿಂದಲೂ ನದೀರೂಪವಾದ ನಿಮಗೂ ಪಾಪನಿವಾರಣೆಯಾಗುವುದು. ||೨೪||

ಸುಂದರಿಯಾದ ಲಕ್ಷ್ಮಿಯೇ, ಭೂಮಿಯಲ್ಲಿ ಲೆಕ್ಕವಿಲ್ಲದ ಎಷ್ಟು ತೀರ್ಥಗಳಿವೆಯೋ ಅವೆಲ್ಲವೂ ನನ್ನ ಭಕ್ತರ ಸ್ಪರ್ಶದರ್ಶನದಿಂದ ಪರಿಶುದ್ಧವಾಗುವುವು. ||೨೫||

**ಮನ್ಮಂತ್ರೋಪಾಸಕಾ ಭಕ್ತ್ಯಾ ವಿಶ್ರಮಂತಿ ಚ ಭಾರತೇ ।**
**ಪೂತಂ ಕರ್ತುಂ ತಾರಿತುಂ ಚ ಸುಪವಿತ್ರಾಂ ವಸುಂಧರಾಂ ॥೨೬॥**

**ಮದ್ಭಕ್ತಾ ಯತ್ರ ತಿಷ್ಠಂತಿ ಪಾದಂ ಪ್ರಕ್ಷಾಲಯಂತಿ ಚ ।**
**ತತ್ಸ್ಥಾನಂ ಚ ಮಹಾತೀರ್ಥಂ ಸುಪವಿತ್ರಂ ಭವೇದ್ಧ್ರುವಂ ॥೨೭॥**

**ಸ್ತ್ರೀಘ್ನೋ ಗೋಘ್ನಃ ಕೃತಘ್ನಶ್ಚ ಬ್ರಹ್ಮಘ್ನೋ ಗುರುತಲ್ಪಗಃ ।**
**ಜೀವನ್ಮುಕ್ತೋ ಭವೇತ್ಪೂತೋ ಮದ್ಭಕ್ತಸ್ಪರ್ಶದರ್ಶನಾತ್ ॥೨೮॥**

**ಏಕಾದಶೀವಿಹೀನಶ್ಚ ಸಂಧ್ಯಾಹೀನೋಽಥ ನಾಸ್ತಿಕಃ ।**
**ನರಘಾತೀ ಭವೇತ್ಪೂತೋ ಮದ್ಭಕ್ತಸ್ಪರ್ಶದರ್ಶನಾತ್ ॥೨೯॥**

**ಅಸಿಜೀವೀ ಮಸೀಜೀವೀ ಧಾವಕೋ ಗ್ರಾಮಯಾಚಕಃ ।**
**ವೃಷವಾಹೋ ಭವೇತ್ಪೂತೋ ಮದ್ಭಕ್ತಸ್ಪರ್ಶದರ್ಶನಾತ್ ॥೩೦॥**

---

ನನ್ನ ಮಂತ್ರವನ್ನು ಜಪಮಾಡುವ ಭಕ್ತರು ಪವಿತ್ರವಾದ ಈ ಭೂಮಿಯನ್ನು ಮತ್ತಷ್ಟು ಪರಿಶುದ್ಧವನ್ನಾಗಿ ಮಾಡುವುದಕ್ಕೂ ಅದಕ್ಕುಂಟಾಗುವ ದೋಷಗಳನ್ನು ಬಿಡಿಸಲಿಕ್ಕೂ ಭರತಖಂಡದಲ್ಲಿ ವಾಸಮಾಡುವರು. ||೨೬||

ನನ್ನ ಭಕ್ತರು ಎಲ್ಲಿರುವರೋ ಅವರು ಎಲ್ಲಿ ಕಾಲನ್ನು ತೊಳೆದುಕೊಳ್ಳುವರೋ ಆ ಪ್ರದೇಶವು ಪರಿಶುದ್ಧವಾದ ದೊಡ್ಡ ತೀರ್ಥವಾಗುವುದು. ಇದು ಖಂಡಿತವಾದುದು. ||೨೭||

ಸ್ತ್ರೀಯನ್ನೂ, ಗೋವನ್ನೂ, ಕೊಂದವನೂ ಉಪಕಾರಸ್ಮರಣೆ ಇಲ್ಲದವನೂ ಗುರುಪತ್ನೀಗಮನಮಾಡಿದವನೂ ನನ್ನ ಭಕ್ತರ ಸ್ಪರ್ಶದರ್ಶನದಿಂದ ಜೀವನ್ಮುಕ್ತನಾಗುವನು. ||೨೮||

ಏಕಾದಶೀ ವ್ರತವನ್ನು ಮಾಡದವನೂ ಸಂಧ್ಯಾವಂದನೆ ಮಾಡದವನೂ ವೇದಶಾಸ್ತ್ರಗಳಲ್ಲಿ ನಂಬಿಕೆಯಿಲ್ಲದವನೂ ಮನುಷ್ಯರನ್ನು ಕೊಲ್ಲುವವನೂ ಕತ್ತಿಯಿಂದ ಜೀವಿಸುವವನೂ ಬರೆವಣಿಗೆಯಿಂದ ಜೀವಿಸುವವನೂ ಅಗಸನ ಕೆಲಸಮಾಡುವವನೂ ಬಹುಮಾನಾರ್ಥವಾಗಿ ಗ್ರಾಮವನ್ನು ಕೇಳುವವನೂ ಎತ್ತಿನಮೇಲೆ ಸವಾರಿಮಾಡುವವನೂ ನಂಬಿಕೆಗೆ ದ್ರೋಹಮಾಡುವವನೂ ಸ್ನೇಹಿತರನ್ನು ನಾಶಮಾಡುವವನೂ ಸುಳ್ಳುಸಾಕ್ಷಿಯನ್ನು ಹೇಳುವವನೂ ನೆಲದಲ್ಲಿ ಮುಚ್ಚಿಟ್ಟಿದ್ದ ಹಣವನ್ನು ಕದಿಯು

ವಿಶ್ವಾಸಘಾತೀ ಮಿತ್ರಘ್ನೋ ಮಿಥ್ಯಾಸಾಕ್ಷ್ಯಸ್ಯ ದಾಯಕಃ ।
ಸ್ಥಾಪ್ಯಹಾರೀ ಭವೇತ್ಪೂತೋ ಮದ್ಭಕ್ತಸ್ಪರ್ಶದರ್ಶನಾತ್ ॥೩೧॥

ಅತ್ಯುಗ್ರವಾಗ್ದೂಷಕಶ್ಚ ಜಾರಕಃ ಪುಂಶ್ಚಲೀಪತಿಃ ।
ಪೂತಶ್ಚ ಪುಂಶ್ಚಲೀಪುತ್ರಃ ಮದ್ಭಕ್ತಸ್ಪರ್ಶದರ್ಶನಾತ್ ॥೩೨॥

ಶೂದ್ರಾಣಾಂ ಸೂಪಕಾರಶ್ಚ ದೇವಲೋ ಗ್ರಾಮಯಾಜಕಃ ।
ಅದೀಕ್ಷಿತೋ ಭವೇತ್ಪೂತೋ ಮದ್ಭಕ್ತಸ್ಪರ್ಶದರ್ಶನಾತ್ ॥೩೩॥

ಪಿತರಂ ಮಾತರಂ ಭಾರ್ಯಾಂ ಭ್ರಾತರಂ ತನಯಂ ಸುತಾಂ ।
ಗುರೋಃ ಕುಲಂ ಚ ಭಗಿನೀಂ ಚಕ್ಷುರ್ಹೀನಂ ಚ ಬಾಂಧವಂ ॥೩೪॥

ಶ್ವಶ್ರೂಂ ಚ ಶ್ವಶುರಂ ಚೈವ ಯೋ ನ ಪುಷ್ಣಾತಿ ಸುಂದರಿ ।
ಸ ಮಹಾಪಾತಕೀ ಪೂತೋ ಮದ್ಭಕ್ತಸ್ಪರ್ಶದರ್ಶನಾತ್ ॥೩೫॥

ಅಶ್ವತ್ಥನಾಶಕಶ್ಚೈವ ಮದ್ಭಕ್ತನಿಂದಕಸ್ತಥಾ ।
ಶೂದ್ರಾನ್ನಭೋಜೀ ವಿಪ್ರಶ್ಚ ಪೂತೋ ಮದ್ಭಕ್ತದರ್ಶನಾತ್ ॥೩೬॥

---

ವವನೂ ಕ್ರೂರವಾದ ಮಾತನಾಡುವವನೂ ಎಲ್ಲರನ್ನೂ ನಿಂದಿಸುವವನೂ ಪರಸ್ತ್ರೀ ಗಮನ ಮಾಡುವವನೂ ಪರಪುರುಷಗಮನ ಮಾಡುವವಳ ಗಂಡನೂ ಅವನ ಮಗನೂ ಶೂದ್ರರಿಗೆ ಅಡಿಗೆಕೆಲಸ ಮಾಡುವವನೂ ದೇವದ್ರವ್ಯದಿಂದ ಜೀವಿಸುವವನೂ ಒಟ್ಟು ಗ್ರಾಮಕ್ಕೆ ಪುರೋಹಿತನೂ (ಮಂತ್ರಾದಿ ದೀಕ್ಷೆಯ ನಿಯಮ) ಇಲ್ಲದವನೂ ಆದ ಬ್ರಾಹ್ಮಣನು ನನ್ನ ಭಕ್ತರ ಸ್ಪರ್ಶದರ್ಶನ ಇವುಗಳಿಂದ ಪರಿಶುದ್ಧನಾಗುವನು. ||೨೯-೩೦-೩೧-೩೨-೩೩||

ಲಕ್ಷ್ಮೀದೇವಿಯೇ, ತಂದೆ, ತಾಯಿ, ಹೆಂಡಿತಿ, ಸಹೋದರ, ಮಗ, ಮಗಳು, ಗುರುಗಳ ಮನೆಯವರು ಸಹೋದರೀ, ಕಣ್ಣಿಲ್ಲದ ನಂಟ ಅತ್ತೆ ಮಾವ ಇವರುಗಳನ್ನು ಯಾರು ಕಾಪಾಡುವುದಿಲ್ಲವೋ ಅವರು ಮಹಾಪಾಪಿಗಳಾಗುವರು. ಇಂಥವರೂ ಕೂಡ ನನ್ನ ಭಕ್ತರ ಸ್ಪರ್ಶದರ್ಶನಗಳಿಂದ ಶುದ್ಧರಾಗುವರು. ||೩೪-೩೫||

ಅರಳಿಯ ಮರವನ್ನು ನಾಶಮಾಡುವವನೂ ನನ್ನ ಭಕ್ತರನ್ನು ನಿಂದಿಸುವವನೂ ಶೂದ್ರರ ಅನ್ನವನ್ನು ಊಟಮಾಡುವ ಬ್ರಾಹ್ಮಣನೂ, ದೇವರ ದ್ರವ್ಯ

**ದೇವದ್ರವ್ಯಾಪಹಾರೀ ಚ ವಿಪ್ರದ್ರವ್ಯಾಪಹಾರಕಃ ।**
**ಲಾಕ್ಷಾಲೋಹರಸಾನಾಂ ಚ ವಿಕ್ರೇತಾ ದುಹಿತುಸ್ತಥಾ ॥೩೭॥**

**ಮಹಾಪಾತಕಿನಶ್ಚೈವ ಶೂದ್ರಾಣಾಂ ಶವದಾಹಕಃ ।**
**ಭವೇಯುರೇತೇ ಪೂತಾಶ್ಚ ಮದ್ಭಕ್ತಸ್ಪರ್ಶದರ್ಶನಾತ್ ॥೩೮॥**

॥ ಶ್ರೀಮಹಾಲಕ್ಷ್ಮೀರುವಾಚ ॥

**ಭಕ್ತಾನಾಂ ಲಕ್ಷಣಂ ಬ್ರೂಹಿ ಭಕ್ತಾನುಗ್ರಹಕಾತರ ।**
**ಯೇಷಾಂ ತು ದರ್ಶನಸ್ಪರ್ಶಾತ್ಸದ್ಯಃ ಪೂತಾ ನರಾಧಮಾಃ ॥೩೯॥**

**ಹರಿಭಕ್ತಿವಿಹೀನಾಶ್ಚ ಮಹಾಹಂಕಾರಸಂಯುತಾಃ ।**
**ಸ್ವಪ್ರಶಂಸಾರತಾ ಧೂರ್ತಾಃ ಶಠಾಶ್ಚ ಸಾಧುನಿಂದಕಾಃ ॥೪೦॥**

**ಪುನಂತಿ ಸರ್ವತೀರ್ಥಾನಿ ಯೇಷಾಂ ಸ್ನಾನಾವಗಾಹನಾತ್ ।**
**ಯೇಷಾಂ ಚ ಪಾದರಜಸಾ ಪೂತಾ ಪಾದೋದಕಾನ್ಮಹೀ ॥೪೧॥**

**ಯೇಷಾಂ ಸಂದರ್ಶನಂ ಸ್ಪರ್ಶಂ ಯೇ ವಾ ವಾಂಛಂತಿ ಭಾರತೇ ।**
**ಸರ್ವೇಷಾಂ ಪರಮೋ ಲಾಭೋ ವೈಷ್ಣವಾನಾಂ ಸಮಾಗಮಃ ॥೪೨॥**

---

ವನ್ನೂ ಬ್ರಾಹ್ಮಣನ ದ್ರವ್ಯವನ್ನೂ ಅಪಹರಿಸಿದವನೂ ಅರಗು, ಲೋಹ, ಉಪ್ಪು, ಬೆಲ್ಲ ಮುಂತಾದ ರಸದ್ರವ್ಯಗಳನ್ನೂ ಮಗಳನ್ನೂ ಮಾರುವವನೂ ಮಹಾಪಾಪ ಮಾಡಿದವನೂ ಶೂದ್ರರ ಶವವನ್ನು ಸುಟ್ಟವನೂ ಆದ ಬ್ರಾಹ್ಮಣನು ನನ್ನ ಭಕ್ತರ ಸ್ಪರ್ಶದರ್ಶನದಿಂದ ಶುದ್ಧನಾಗುವನು. ॥೩೬-೩೭-೩೮॥

ಮಹಾಲಕ್ಷ್ಮಿಯು ಹೇಳಿದಳು—ಭಕ್ತರಿಗೆ ಅನುಗ್ರಹಮಾಡುವುದರಲ್ಲಿ ಆಸಕ್ತನಾದ ನಾರಾಯಣನೇ! ಯಾವ ಭಕ್ತರ ಸ್ಪರ್ಶನ ದರ್ಶನದಿಂದ ನೀಚರಾದ ಮನುಜರೂ ಪರಿಶುದ್ಧರಾಗುವರೋ ಅಂತಹ ಭಕ್ತರ ಲಕ್ಷಣವನ್ನು ಹೇಳಬೇಕು.॥೩೯॥

ವಿಷ್ಣುಭಕ್ತಿಯಿಲ್ಲದವರೂ ವಿಶೇಷ ಅಹಂಕಾರದಿಂದ ಕೂಡಿದವರೂ ತಮ್ಮನ್ನು ತಾವೇ ಹೊಗಳಿಕೊಳ್ಳುವ ಧೂರ್ತರೂ ಸಜ್ಜನರನ್ನು ನಿಂದಿಸುವ ಶಠರೂ ಯಾವ ಭಕ್ತರ ದರ್ಶನದಿಂದ ಶುದ್ಧರಾಗುವರೋ ಆ ಭಕ್ತರ ಲಕ್ಷಣವನ್ನು ಹೇಳು. ॥೪೦॥

ಯಾರು ಸ್ನಾನಮಾಡುವುದರಿಂದ ಸಕಲ ತೀರ್ಥಗಳೂ ಪರಿಶುದ್ಧವಾಗುವುವೋ, ಯಾರ ಕಾಲಧೂಳಿಯಿಂದಲೂ ಕಾಲು ತೊಳೆದ ನೀರಿನಿಂದಲೂ ಭೂಮಿಯು

ನಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯಪಿ ಕಾಲೇನ ವಿಷ್ಣುಭಕ್ತಾಃ ಕ್ಷಣಾದಹೋ ॥೪೩॥

॥ ಸೂತ ಉವಾಚ ॥

ಮಹಾಲಕ್ಷ್ಮೀವಚಃ ಶ್ರುತ್ವಾ ಲಕ್ಷ್ಮೀಕಾಂತಶ್ಚ ಸಸ್ಮಿತಃ ।
ನಿಗೂಢತತ್ತ್ವಂ ಕಥಿತಮಪಿ ಶ್ರೇಷ್ಠೋಪಚಕ್ರಮೇ ॥೪೪॥

॥ ಶ್ರೀಭಗವಾನುವಾಚ ॥

ಭಕ್ತಾನಾಂ ಲಕ್ಷಣಂ ಲಕ್ಷ್ಮಿ ಗೂಢಂ ಶ್ರುತಿಪುರಾಣಯೋಃ ।
ಪುಣ್ಯಸ್ವರೂಪಂ ಪಾಪಘ್ನಂ ಸುಖದಂ ಭಕ್ತಿಮುಕ್ತಿದಂ ॥೪೫॥

ಸಾರಭೂತಂ ಗೋಪನೀಯಂ ನ ವಕ್ತವ್ಯಂ ಖಲೇಷು ಚ ।
ತ್ವಾಂ ಪವಿತ್ರಾಂ ಪ್ರಾಣತುಲ್ಯಾಂ ಕಥಯಾಮಿ ನಿಶಾಮಯ ॥೪೬॥

---

ಪರಿಶುದ್ಧವಾಗಿರುವುದೋ ಭರತಖಂಡದಲ್ಲಿ ಯಾರ ದರ್ಶನ ಸ್ಪರ್ಶನಗಳನ್ನು ಯಾರು ಅಪೇಕ್ಷಿಸುವರೋ ಅಂತಹ ವಿಷ್ಣುಭಕ್ತರ ಕೂಟವು ಸಮಸ್ತರಿಗೂ ಅತ್ಯುತ್ತಮವಾದ ಲಾಭವಾಗಿರುವುದು. ನೀರಿನಿಂದ ತುಂಬಿದ ಪ್ರದೇಶಗಳೆಲ್ಲವೂ ತೀರ್ಥಗಳಲ್ಲ. ಮಣ್ಣು ಕಲ್ಲುಗಳಿಂದ ಮಾಡಿದ ಮೂರ್ತಿಗಳೆಲ್ಲವೂ ದೇವತೆಗಳಲ್ಲ. ವಿಷ್ಣುಭಕ್ತರು ಒಂದು ಕ್ಷಣದೊಳಗಾಗಿ ಸಕಲವನ್ನೂ ಪರಿಶುದ್ಧವಾಗಿ ಮಾಡುವರು. ಇದು ಆಶ್ಚರ್ಯಕರ ವಾದುದು. ಆದುದರಿಂದ ಅಂತಹ ಭಕ್ತರ ಲಕ್ಷಣವನ್ನು ಹೇಳು. ॥೪೧-೪೨-೪೩॥

ಸೂತನು ಹೇಳಿದನು—ಮಹಾಲಕ್ಷ್ಮಿಯ ಮಾತನ್ನು ಕೇಳಿ ನಾರಾಯಣನು ನಗುತ್ತಾ ಗೋಪ್ಯವಾದುದಾದರೂ ತತ್ವವನ್ನು ಹೇಳುವುದಕ್ಕೆ ಪ್ರಾರಂಭಿಸಿದನು.॥೪೪॥

ಭಗವಂತನು ಹೇಳಿದನು—ಲಕ್ಷ್ಮೀದೇವಿಯೇ, ಭಕ್ತರ ಲಕ್ಷಣಗಳು ವೇದ ಗಳಲ್ಲಿಯೂ ಪುರಾಣಗಳಲ್ಲಿಯೂ ಗೋಪ್ಯವಾಗಿರುವುವು. ಅದು ಪುಣ್ಯರೂಪವಾಗಿ ಪಾಪವನ್ನು ನಾಶಮಾಡಿ ಸುಖವನ್ನೂ ಭಕ್ತಿಯನ್ನೂ ಮೋಕ್ಷವನ್ನೂ ಕೊಡ ತಕ್ಕುದು. ಇದು ಸಾರವಾದುದರಿಂದ ದುಷ್ಟರಿಗೆ ಹೇಳದೆ ಗುಟ್ಟಾಗಿ ಇರಬೇಕು. ಪರಿಶುದ್ಧಳೂ ಪ್ರಾಣಪ್ರಿಯಳೂ ಆದ ನಿನಗೆ ಹೇಳುವೆನು. ಕೇಳು. ॥೪೫-೪೬॥

ಗುರುವಕ್ತ್ರಾದ್ವಿಷ್ಣುಮಂತ್ರೋ ಯಸ್ಯಕರ್ಣೇ ಪತಿಷ್ಯತಿ ।
ವದಂತಿ ದೇವಾಸ್ತಂ ಚಾಪಿ ಪವಿತ್ರಂ ಚ ನರೋತ್ತಮಂ ॥೪೭॥

ಪುರುಷಾಣಾಂ ಶತಂ ಪೂರ್ವಂ ತಥಾತಜ್ಜನ್ಮಮಾತ್ರತಃ ।
ಸ್ವರ್ಗಸ್ಥಂ ನರಕಸ್ಥಂ ವಾ ಮುಕ್ತಿಮಾಪ್ನೋತಿ ತತ್ಕ್ಷಣಾತ್ ॥೪೮॥

ಯೈಃ ಕೈಶ್ಚಿದ್ಯತ್ರ ವಾ ಜನ್ಮ ಲಬ್ಧಂ ಯೇಷು ಚ ಜಂತುಷು ।
ಜೀವನ್ಮುಕ್ತಾಸ್ತು ತೇ ಪೂತಾ ಯಾಂತಿ ಕಾಲೇ ಹರೇಃ ಪದಂ ॥೪೯॥

ಮದ್ಭಕ್ತಿಯುಕ್ತೋ ಮರ್ತ್ಯಶ್ಚ ಸ ಮುಕ್ತೋ ಮದ್ಗುಣಾನ್ವಿತಃ ।
ಮದ್ಗುಣಾಧೀನವೃತ್ತಿರ್ಯಃ ಕಥಾವಿಷ್ಟಶ್ಚ ಸಂತತಂ ॥೫೦॥

ಮದ್ಗುಣಶ್ರುತಿಮಾತ್ರೇಣ ಸಾನಂದಃ ಪುಲಕಾನ್ವಿತಃ ।
ಸಗದ್ಗದಃ ಸಾಶ್ರುನೇತ್ರಃ ಸ್ವಾತ್ಮವಿಸ್ಮೃತ ಏವ ಚ ॥೫೧॥

---

ವಿಷ್ಣುವಿನ ಮಂತ್ರವು ಗುರುಗಳ ಬಾಯಿಂದ ಯಾವನ ಕಿವಿಗೆ ಬೀಳುವುದೋ ಅವನನ್ನು ದೇವತೆಗಳೂ ಕೂಡ ಶ್ರೇಷ್ಠನಾದ ಪುರುಷನೆಂದು ಹೇಳುವರು. ॥೪೭॥

ಅಂತಹ ಪುರುಷಶ್ರೇಷ್ಠನು ಹುಟ್ಟಿದಮಾತ್ರದಿಂದಲೇ ಅವನ ವಂಶದ ಹಿಂದಿನ ನೂರು ಜನರು ಸ್ವರ್ಗದಲ್ಲಿರಲಿ ನರಕದಲ್ಲಿರಲಿ ಮೋಕ್ಷವನ್ನು ಹೊಂದುವರು. ॥೪೮॥

ಆ ನೂರು ಜನರಲ್ಲಿ ಯಾರಾದರೂ ಎಲ್ಲಿಯಾದರೂ ಯಾವ ಪ್ರಾಣಿಗಳಲ್ಲಿ ಯಾದರೂ ಹುಟ್ಟಿದರೆ ಜೀವನ್ಮುಕ್ತರಾಗಿ ಪರಿಶುದ್ಧರಾಗಿ ಅವರ ಶರೀರತ್ಯಾಗಕಾಲದಲ್ಲಿ ವಿಷ್ಣುಸ್ಥಾನವಾದ ವೈಕುಂಠಕ್ಕೆ ಹೋಗುವರು. ॥೪೯॥

ನನ್ನಲ್ಲಿ ಭಕ್ತಿಯುಳ್ಳ ಮನುಷ್ಯನು ನನ್ನ ಗುಣಗಳಿಂದ ಕೂಡಿ ನನ್ನ ಗುಣ ಗಳಿಗೆ ಅಧೀನವಾದ ಮನೋವೃತ್ತಿಗಳಿಂದಲೂ ಜೀವನದಿಂದಲೂ ಕೂಡಿ ಯಾವಾ ಗಲೂ ನನ್ನ ಕಥೆಯಲ್ಲಾಸಕ್ತನಾಗಿರುವನು. ಅವನು ಮೋಕ್ಷವನ್ನು ಪಡೆಯು ವನು. ॥೫೦॥

ಭಕ್ತನು ನನ್ನ ಗುಣಗಳನ್ನು ಕೇಳಿದ ಮಾತ್ರದಿಂದಲೇ ಸಂತೋಷದಿಂದ ರೋಮಾಂಚವನ್ನು ಹೊಂದಿ ಕಣ್ಣಿನಲ್ಲಿ ನೀರುಂಟಾಗಿ ಕುತ್ತಿಗೆಯ ನರಗಳು ಬಿಗಿದು ಗದ್ಗದ ಧ್ವನಿಯಿಂದ ಕೂಡಿ ತನ್ನನ್ನೇ ತಾನು ಮರೆಯುವನು. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬ ನಾಲ್ಕು ಬಗೆಯ ಮೋಕ್ಷವನ್ನೂ ಸುಖ

ನ ವಾಂಛಂತಿ ಸುಖಂ ಮುಕ್ತಿಂ ಸಾಲೋಕ್ಯಾದಿಚತುಷ್ಟಯಂ ।
ಬ್ರಹ್ಮತ್ವಮಮರತ್ವಂ ವಾ ತದ್ವಾಂಛಾ ಮಮ ಸೇವನೇ ॥೫೨॥

ಇಂದ್ರತ್ವಂ ಚ ಮನುತ್ವಂ ಚ ಬ್ರಹ್ಮತ್ವಂ ಚ ಸುದುರ್ಲಭಂ ।
ಸ್ವರ್ಗರಾಜ್ಯಾದಿಭೋಗಂ ಚ ಸ್ವಪ್ನೇಽಪಿ ಚ ನ ವಾಂಛತಿ ॥೫೩॥

ಭ್ರಮಂತಿ ಭಾರತೇ ಭಕ್ತಾಸ್ತಾದೃಗ್ಜನ್ಮ ಸುದುರ್ಲಭಂ ।
ಮದ್ಗುಣಶ್ರವಣಾಃ ಶ್ರಾವ್ಯಗಾನೈರ್ನಿತ್ಯಂ ಮುದಾನ್ವಿತಾಃ ॥೫೪॥

ತೇ ಯಾಂತಿ ಚ ಮಹೀಂ ಪೂತ್ವಾ ನರಂ ತೀರ್ಥಂ ಮಮಾಲಯಂ ।
ಇತ್ಯೇವಂ ಕಥಿತಂ ಸರ್ವಂ ಪದ್ಮೇ ಕುರು ಯಥೋಚಿತಂ ॥೫೫॥
ತದಾಜ್ಞಯಾ ತಾಸ್ತಚ್ಚಕ್ರುರ್ಹರಿಸ್ತಸ್ಥೌ ಸುಖಾಸನೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಸಪ್ತಮೋಽಧ್ಯಾಯಃ

---

ವನ್ನೂ ಅಪೇಕ್ಷಿಸುವುದಿಲ್ಲ. ಅವನಿಗೆ ಬ್ರಹ್ಮನಾಗುವುದೂ ದೇವನಾಗುವುದೂ ಬೇಡ. ನನ್ನ ಸೇವೆಯೊಂದೇ ಅವನಿಗೆ ಇಷ್ಟವು. ॥೫೧-೫೨॥

ದೇವೇಂದ್ರನಾಗುವುದು ಮನುವಾಗುವುದು ಬ್ರಹ್ಮನಾಗುವುದು ಸ್ವರ್ಗಸುಖ ರಾಜ್ಯಾನುಭವಮಾಡುವ ಸುಖ ಇವುಗಳನ್ನು ಕನಸಿನಲ್ಲಿಯೂ ಭಕ್ತನು ಅಪೇಕ್ಷಿಸುವುದಿಲ್ಲ. ॥೫೩॥

ನನ್ನ ಗುಣಗಳನ್ನು ಕೇಳತಕ್ಕವರೂ ಯಾವಾಗಲೂ ಕಿವಿಗಿಂಪಾದ ಗಾನದಿಂದ ಸಂತೋಷಪಡತಕ್ಕವರೂ ಆದ ಭಕ್ತರು ಭರತಖಂಡದಲ್ಲಿ ಸಂಚರಿಸುತ್ತಿರುವರು. ಅಂತಹ ಹುಟ್ಟು ಬಹು ಕಷ್ಟದಿಂದ ದೊರೆಯುವುದು. ಆ ಭಕ್ತರು ಭೂಮಿಯನ್ನೂ ಮನುಜರನ್ನೂ ತೀರ್ಥಗಳನ್ನೂ ಪರಿಶುದ್ಧಮಾಡಿ ನನ್ನ ಸ್ಥಾನವಾದ ವೈಕುಂಠಕ್ಕೆ ಬರುವರು. ॥೫೪॥

ಲಕ್ಷ್ಮಿಪ್ರಿಯೇ, ನಿನಗೆ ಎಲ್ಲವನ್ನೂ ಹೇಳಿದೆನು. ನಿನಗೆ ಉಚಿತವಾಗಿ ತೋರಿದುದನ್ನು ಮಾಡು. ಎಂದು ನಾರಾಯಣನು ಹೇಳಿದನು. ಆ ಮೂವರೂ ಅವನ ಅಪ್ಪಣೆಯಂತೆ ಮಾಡಿದರು. ಹರಿಯು ಸುಖಾಸನದಲ್ಲಿ ಕುಳಿತಿದ್ದನು. ॥೫೫॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಅಷ್ಟಮೋಽಧ್ಯಾಯಃ ||

### ಎಂಟನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ಸರಸ್ವತೀ ಪುಣ್ಯಕ್ಷೇತ್ರಮಾಜಗಾಮ ಚ ಭಾರತೇ ।**
**ಗಂಗಾಶಾಪೇನ ಕಲಯಾ ಸ್ವಯಂ ತಸ್ಥೌ ಹರೇಃ ಪದೇ ॥೧॥**

**ಭಾರತೀ ಭಾರತಂ ಗತ್ವಾ ಬ್ರಾಹ್ಮೀ ಚ ಬ್ರಹ್ಮಣಃ ಪ್ರಿಯಾ ।**
**ವಾಣ್ಯಧಿಷ್ಠಾತೃದೇವೀ ಸಾ ತೇನ ವಾಣೀ ಪ್ರಕೀರ್ತಿತಾ ॥೨॥**

**ಸರೋ ವಾಪ್ಯಾಂ ಚ ಸ್ರೋತಸ್ಸು ಸರ್ವತ್ರೈವ ಹಿ ದೃಶ್ಯತೇ ।**
**ಹರಿಃ ಸರಸ್ವಾಂಸ್ತಸ್ಯೇಯಂ ತೇನ ನಾಮ್ನಾ ಸರಸ್ವತೀ ॥೩॥**

---

ನಾರಾಯಣನು ಹೇಳಿದನು--ಗಂಗೆಯ ಶಾಪದಿಂದ ಸರಸ್ವತಿಯು ಕಲಾಂಶದಿಂದ ಭರತಖಂಡದ ಪುಣ್ಯಕ್ಷೇತ್ರಕ್ಕೆ ಬಂದಳು. ಪೂರ್ಣಾಂಶದಿಂದ ವೈಕುಂಠದಲ್ಲಿದ್ದಳು. ||೧||

ಭರತಖಂಡಕ್ಕೆ ನದೀರೂಪದಿಂದ ಬಂದುದರಿಂದ ಭಾರತೀ ಎಂದೂ, ಬ್ರಹ್ಮನಿಗೆ ಪ್ರೀತಿಪಾತ್ರಳಾದುದರಿಂದ ಬ್ರಾಹ್ಮೀ ಎಂದೂ, ವಾಣೀ ಎಂದರೆ ಮಾತು, ಇದಕ್ಕೆ ಆಶ್ರಯವಾದ ದೇವತೆಯಾದುದರಿಂದ ವಾಣೀ ಎಂದೂ ಸರಸ್ವತಿಗೆ ಹೆಸರುಗಳು. ||೨||

ಸರೋವರ, ಭಾವಿ, ನದಿ ಮುಂತಾದ ಸಮಸ್ತ ಪ್ರದೇಶಗಳಲ್ಲಿಯೂ ಹರಿಯು ಸರ್ವವ್ಯಾಪಿಯಾಗಿರುವುದರಿಂದ ಅವನಿಗೆ ಸರಸ್ವಾನ್ ಎಂದು ಹೆಸರು. ಸರಸ್ವಾನ್ ಎಂಬ ಹರಿಯ ಶಕ್ತಿಸ್ವರೂಪಳಾದುದರಿಂದ ಸರಸ್ವತೀ ಎಂಬ ಹೆಸರು ಬಂದಿರುವುದು. ||೩||

ಸರಸ್ವತೀ ನದೀ ಸಾ ಚ ತೀರ್ಥರೂಪಾಽತಿಪಾವನೀ ।
ಪಾಪಿನಾಂ ಪಾಪದಾಹಾಯ ಜ್ವಲದಗ್ನಿಸ್ವರೂಪಿಣೀ ॥೪॥

ಪಶ್ಚಾದ್ಭಾಗೀರಥೀ ನೀತಾ ಮಹೀಂ ಭಗೀರಥೇನ ಚ ।
ಸಾ ವೈ ಜಗಾಮ ಕಲಯಾ ವಾಣೀ ಶಾಪೇನ ನಾರದ ॥೫॥

ತತ್ರೈವ ಸಮಯೇ ತಾಂ ಚ ದಧಾರ ಶಿರಸಾ ಶಿವಃ ।
ವೇಗಂ ಸೋಢುಮಯಂ ಶಕ್ತೋ ಭುವಃ ಪ್ರಾರ್ಥನಯಾ ವಿಭುಃ॥೬॥

ಪದ್ಮಾ ಜಗಾಮ ಕಲಯಾ ಸಾ ಚ ಪದ್ಮಾವತೀ ನದೀ ।
ಭಾರತಂ ಭಾರತೀಶಾಪಾತ್ಸ್ವಯಂ ತಸ್ಥೌ ಹರೇಃ ಪದೇ ॥೭॥

ತತೋಽನ್ಯಯಾ ಸಾ ಕಲಯಾ ಲೇಭೇ ಜನ್ಮ ಚ ಭಾರತೇ ।
ಧರ್ಮಧ್ವಜಸುತಾ ಲಕ್ಷ್ಮೀರ್ವಿಖ್ಯಾತಾ ತುಲಸೀತಿ ಚ ॥೮॥

---

ತೀರ್ಥರೂಪವಾದ ಸರಸ್ವತೀ ನದಿಯು ಮಹಾಪರಿಶುದ್ಧವಾದುದು. ಪಾಪಿಗಳ ಪಾಪವನ್ನು ಸುಡುವುದಕ್ಕೆ ಉರಿಯುತ್ತಿರುವ ಬೆಂಕಿಯಂತಿರುವುದು. ||೪||

ಆಮೇಲೆ ಸರಸ್ವತಿಯ ಶಾಪದಿಂದ ಗಂಗೆಯು ಕಲಾಂಶದಿಂದ ಭಾಗೀರಥೀ ಎಂಬ ಹೆಸರಿನಿಂದ ಭಗೀರಥನ ಹಿಂದೆ ಭೂಮಿಗೆ ಬಂದಳು. ||೫||

ಮೇಲಿನಿಂದ ಕೆಳಕ್ಕೆ ಬೀಳುತ್ತಿರುವ ಗಂಗೆಯ ವೇಗವನ್ನು ತಡೆಯಲಾರದೆ ಭೂದೇವಿಯು ಪ್ರಾರ್ಥನೆ ಮಾಡಲು ಆ ಸಮಯದಲ್ಲಿ ಶಿವನು ಗಂಗೆಯನ್ನು ತಲೆಯಲ್ಲಿ ಧರಿಸಿದನು. ||೬||

ಲಕ್ಷ್ಮಿಯು ಸರಸ್ವತಿಯ ಶಾಪದಿಂದ ತನ್ನ ಒಂದು ಕಲಾಂಶದಿಂದ ಭರತ ಖಂಡದಲ್ಲಿ ಪದ್ಮಾವತೀ ಎಂಬ ನದಿಯಾದಳು. ಪೂರ್ಣಾಂಶದಿಂದ ವೈಕುಂಠದಲ್ಲಿಯೇ ಇದ್ದಳು. ||೭||

ಮತ್ತೊಂದು ಕಲಾಂಶದಿಂದ ಭರತಖಂಡದಲ್ಲಿ ಧರ್ಮಧ್ವಜನೆಂಬ ರಾಜನ ಮಗಳಾಗಿ ಲಕ್ಷ್ಮೀ ಎಂದೂ ತುಲಸೀ ಎಂದೂ ಹೆಸರನ್ನು ಪಡೆದಳು. ||೮||

ಪುರಾ ಸರಸ್ವತೀಶಾಪಾತ್ಪಶ್ಚಾಚ್ಚ ಹರಿಶಾಪತಃ ।
ಬಭೂವ ವೃಕ್ಷರೂಪಾ ಸಾ ಕಲಯಾ ವಿಶ್ವಪಾವನೀ ॥೯॥

ಕಲೇಃ ಪಂಚ ಸಹಸ್ರಂ ಚ ವರ್ಷಂ ಸ್ಥಿತ್ವಾ ಚ ಭಾರತೇ ।
ಜಗ್ಮುಸ್ತಾಶ್ಚ ಸರಿದ್ರೂಪಂ ವಿಹಾಯ ಶ್ರೀಹರೇಃ ಪದಂ ॥೧೦॥

ಯಾನಿ ಸರ್ವಾಣಿ ತೀರ್ಥಾನಿ ಕಾಶೀಂ ವೃಂದಾವನಂ ವಿನಾ ।
ಯಾಸ್ಯಂತಿ ಸಾರ್ಧಂ ತಾಭಿಶ್ಚ ವೈಕುಂಠಮಾಜ್ಞಯಾ ಹರೇಃ ॥೧೧॥

ಶಾಲಿಗ್ರಾಮಃ ಶಕ್ತಿಶಿವೌ ಜಗನ್ನಾಥಶ್ಚ ಭಾರತಂ ।
ಕಲೇ ರ್ದಶಸಹಸ್ರಾಂತೇ ತ್ಯಕ್ತ್ವಾ ಯಾಂತಿ ನಿಜಂ ಪದಂ ॥೧೨॥

ಸಾಧವಶ್ಚ ಪುರಾಣಾನಿ ಶಂಖಾನಿ ಶ್ರಾದ್ಧತರ್ಪಣೇ ।
ವೇದೋಕ್ತಾನಿ ಚ ಕರ್ಮಾಣಿ ಯಯುಸ್ತೈಃ ಸಾರ್ಧಮೇವ ಚ ॥೧೩॥

---

ಮೊದಲು ಸರಸ್ವತಿಯ ಶಾಪದಿಂದಲೂ ಆಮೇಲೆ ಹರಿಯ ಶಾಪದಿಂದಲೂ ಲಕ್ಷ್ಮಿಯು ಮನುಷ್ಯರೂಪದಿಂದ ತುಲಸೀ ಎಂಬ ಹೆಸರನ್ನು ಪಡೆದಿದ್ದರೂ ಪ್ರಪಂಚವನ್ನು ಪರಿಶುದ್ಧಮಾಡುವ ವೃಕ್ಷರೂಪವಾಗಿಯೂ ಆದಳು. " ತವ ಕೇಶಸಮೂಹಶ್ಚ ಪುಣ್ಯವೃಕ್ಷೋ ಭವಿಷ್ಯತಿ " ಎಂದು ಇಪ್ಪತ್ತುನಾಲ್ಕನೆಯ ಅಧ್ಯಾಯದಲ್ಲಿ ಹರಿಯ ಶಾಪವಿಚಾರವನ್ನು ಹೇಳಿದೆ. ॥೯॥

ಭರತಖಂಡದಲ್ಲಿ ಕಲಿಯುಗದ ಐದುಸಾವಿರ ವರ್ಷಗಳವರೆಗೆ ಇದ್ದು ಆಮೇಲೆ ಆ ದೇವಿಯರು ನದೀರೂಪವನ್ನು ಬಿಟ್ಟು ವೈಕುಂಠಕ್ಕೆ ಹೋಗುವರು.॥೧೦॥

ಕಾಶೀ ವೃಂದಾವನ ಈ ಎರಡು ಕ್ಷೇತ್ರಗಳಲ್ಲಿರುವ ತೀರ್ಥಗಳು ಹೊರತು ಮಿಕ್ಕ ಸಮಸ್ತ ತೀರ್ಥಗಳೂ ಹರಿಯ ಆಜ್ಞೆಯಿಂದ ಆ ದೇವಿಯರ ಜೊತೆಯಲ್ಲಿ ವೈಕುಂಠಲೋಕಕ್ಕೆ ಹೋಗುವುವು. ॥೧೧॥

ಕಲಿಯುಗದ ಹತ್ತುಸಾವಿರ ವರ್ಷಗಳ ಕೊನೆಯಲ್ಲಿ ಸಾಲಿಗ್ರಾಮಪೂಜೆಯೂ ಶಕ್ತಿಶಿವಮೂರ್ತಿಗಳ ಪೂಜೆಯೂ ಪುರುಷೋತ್ತಮನಾದ ವಿಷ್ಣುವಿನ ಪೂಜೆಯೂ ಭರತಖಂಡವನ್ನು ಬಿಟ್ಟು ಸ್ವಸ್ಥಾನಕ್ಕೆ ಹೋಗುವುವು. ॥೧೨॥

ಸಾಧುಗಳೂ ಪುರಾಣಗಳೂ ಶಂಖಗಳೂ ಪಿತೃಶ್ರಾದ್ಧ ಮತ್ತು ತರ್ಪಣಗಳು ವೇದೋಕ್ತವಾದ ಸಮಸ್ತ ಕರ್ಮಗಳೂ ಅವುಗಳ ಜೊತೆಯಲ್ಲಿಯೇ ಹೋಗುವುವು. ॥೧೩॥

ದೇವಪೂಜಾ ದೇವನಾಮ ತತ್ಕೀರ್ತಿಗುಣಕೀರ್ತನಂ ।
ವೇದಾಂಗಾನಿ ಚ ಶಾಸ್ತ್ರಾಣಿ ಯಯುಸ್ತೈಸ್ಸಾರ್ಧಮೇವ ಚ ॥೧೪॥

ಸಂತಶ್ಚ ಸತ್ಯಧರ್ಮಶ್ಚ ವೇದಾಶ್ಚ ಗ್ರಾಮದೇವತಾಃ ।
ವ್ರತಂ ತಪಶ್ಚಾನಶನಂ ಯಯುಸ್ತೈಃ ಸಾರ್ಧಮೇವ ಚ ॥೧೫॥

ವಾಮಾಚಾರರತಾಃ ಸರ್ವೇ ಮಿಥ್ಯಾ ಕಪಟಸಂಯುತಾಃ ।
ತುಲಸೀರಹಿತಾ ಪೂಜಾ ಭವಿಷ್ಯತಿ ತತಃ ಪರಂ ॥೧೬॥

ಶಠಾಃ ಕ್ರೂರಾ ದಾಂಭಿಕಾಶ್ಚ ಮಹಾಹಂಕಾರಸಂಯುತಾಃ ।
ಚೋರಾಶ್ಚ ಹಿಂಸಕಾಃ ಸರ್ವೇ ಭವಿಷ್ಯಂತಿ ತತಃ ಪರಂ ॥೧೭॥

ಪುಂಸೋ ಭೇದಶ್ಚ ಸ್ತ್ರೀಭೇದೋ ವಿವಾಹೋ ವಾಽಪಿ ನಿರ್ಭಯಃ ।
ಸ್ವಸ್ವಾಮಿಭೇದೋ ವಸ್ತೂನಾಂ ಭವಿಷ್ಯತಿ ತತಃ ಪರಂ ॥೧೮॥

---

ದೇವರ ಪೂಜೆಯೂ ದೇವರನಾಮಕೀರ್ತನೆಯೂ ಗುಣಕೀರ್ತನೆಯೂ ವೇದಾಂಗಗಳೂ ಶಾಸ್ತ್ರಗಳೂ ಸಜ್ಜನರೂ ಸತ್ಯವೂ ಧರ್ಮವೂ ವೇದಗಳೂ ಗ್ರಾಮದೇವತೆಗಳೂ ವ್ರತಗಳೂ ತಪಸ್ಸೂ ಉಪವಾಸವ್ರತವೂ ಇವುಗಳೆಲ್ಲವೂ ಅವುಗಳ ಜೊತೆಯಲ್ಲಿಯೇ ಹೊರಟುಹೋಗುವುವು. ॥೧೪-೧೫॥

ಕಲಿಯುಗದಲ್ಲಿ ಹತ್ತುಸಾವಿರ ವರ್ಷವಾದಮೇಲೆ ಸಮಸ್ತರೂ ಮದ್ಯಮಾಂಸಗಳನ್ನು ಸೇವಿಸುವರು. ಸುಳ್ಳು ಮೋಸ ಇವುಗಳಿಂದ ಕೂಡಿರುವರು. ತುಲಸಿ ಇಲ್ಲದ ಪೂಜೆಯನ್ನು ಮಾಡುವರು. ॥೧೬॥

ಸಮಸ್ತಜನರೂ ಅವಿವೇಕಿಗಳೂ ಕ್ರೂರಿಗಳೂ ಜಂಬ ಮತ್ತು ಅಹಂಕಾರಗಳಿಂದ ಕೂಡಿದವರೂ ಕಳ್ಳರೂ ಹಿಂಸಕರೂ ಆಗುವರು. ಸ್ತ್ರೀಪುರುಷರೆಂಬ ಭೇದಮಾತ್ರವಿರುವುದು. ಜಾತಿಭೇದವಿರುವುದಿಲ್ಲ. ಆದುದರಿಂದ ವಿವಾಹವು ನಿರ್ಭಯವಾಗಿ ನಡೆಯುವುದು. ಜಾತಿಯ ಕಟ್ಟನ್ನು ಗಣಿಸುವುದಿಲ್ಲ. ತಂದೆಯ ವಸ್ತು ತಂದೆಯದೇ. ಮಗನದು ಮಗನದೇ. ಒಬ್ಬರ ವಸ್ತುವನ್ನೊಬ್ಬರಿಗೆ ಕೊಡುವುದಿಲ್ಲ. ॥೧೭-೧೮॥

ಸರ್ವೇ ಸ್ತ್ರೀವಶಗಾಃ ಪುಂಸಃ ಪುಂಶ್ಚಲ್ಯಶ್ಚ ಗೃಹೇ ಗೃಹೇ ।
ತರ್ಜನ್ಯೈರ್ಭರ್ತ್ಸನೈಃ ಶಶ್ವತ್ಸ್ವಾಮಿನಂ ತಾಡಯಂತಿ ಚ ॥೧೯॥

ಗೃಹೇಶ್ವರೀ ಚ ಗೃಹಿಣೀ ಗೃಹೀ ಭೃತ್ಯಾಧಿಕೋಽಧಮಃ ।
ಚೇಟೀ-ದಾಸಸಮೌ ವಧ್ವಾಃ ಶ್ವಶ್ರೂಶ್ಚ ಶ್ವಶುರಸ್ತಥಾ ॥೨೦॥

ಕರ್ತಾರೋ ಬಲಿನೋ ಗೇಹೇ ಯೋನಿಸಂಬಧಿ ಬಾಂಧವಾಃ ।
ವಿದ್ಯಾಸಂಬಂಧಿಭಿಸ್ಸಾರ್ಧಂ ಸಂಭಾಷಾಪಿ ನ ವಿದ್ಯತೇ ॥೨೧॥

ಯಥಾ ಪರಿಚಿತಾ ಲೋಕಾಸ್ತಥಾ ಪುಂಸಶ್ಚ ಬಾಂಧವಾಃ ।
ಸರ್ವಕರ್ಮಕ್ಷಮಾಃ ಪುಂಸೋ ಯೋಷಿತಾಮಾಜ್ಞಯಾ ವಿನಾ ॥೨೨॥

ಬ್ರಹ್ಮಕ್ಷತ್ರವಿಟ್ಶೂದ್ರಾಣಾಂ ಜಾತ್ಯಾಚಾರವಿವರ್ಜಿತಾಃ ।
ಸಂಧ್ಯಾ ಚ ಯಜ್ಞಸೂತ್ರಂ ಚ ಭವೇಲ್ಲುಪ್ತಂ ನ ಸಂಶಯಃ ॥೨೩॥

ಮ್ಲೇಚ್ಛಾಚಾರಾ ಭವಿಷ್ಯಂತಿ ವರ್ಣಾಶ್ಚತ್ವಾರ ಏವ ಚ ।
ಮ್ಲೇಚ್ಛಶಾಸ್ತ್ರಂ ಪಠಿಷ್ಯಂತಿ ಸ್ವಶಾಸ್ತ್ರಾಣಿ ವಿಹಾಯ ಚ ॥೨೪॥

---

ಸಮಸ್ತಪುರುಷರೂ ಸ್ತ್ರೀವಶರಾಗುವರು. ಪ್ರತಿಯೊಂದು ಮನೆಯಲ್ಲೂ ಪರಪುರುಷಾಸಕ್ತರಾದ ಸ್ತ್ರೀಯರಿರುವರು. ಅವರು ತಮ್ಮ ಪತಿಯನ್ನು ಹೆದರಿಸಿ ಬೈದು ಹೊಡೆಯುವರು. ಹೆಂಗಸೇ ಮನೆಗೆ ಒಡೆಯಳು. ಗಂಡನು ಆಳುಗಳಲ್ಲಿ ಮುಖ್ಯನು ಮತ್ತು ನೀಚನು. ಹೆಂಗಸಿನ ಅತ್ತೆ ಮಾವಂದಿರು ಆಳುಗಳಿಗೆ ಸಮಾನರು. ||೧೯-೨೦||

ಸ್ತ್ರೀಸಂಬಂಧಿಗಳಾದ ಬಂಧುಗಳೇ ಮನೆಯಲ್ಲಿ ಬಲಿಷ್ಠರಾಗಿ ಸಮಸ್ತ ಕೆಲಸಗಳನ್ನೂ ಮಾಡುವರು. ಪುರುಷನು ತನ್ನ ವಿದ್ಯಾಭ್ಯಾಸಕಾಲದ ಮಿತ್ರರೊಡನೆ ಮಾತನಾಡುವುದಕ್ಕೂ ಅವಕಾಶವಿಲ್ಲ. ಪುರುಷನ ನೆಂಟರು ಅಪರಿಚಿತರಾದ ಜನರಂತೆ ದೂರದಲ್ಲಿರಬೇಕು. ಹೆಂಗಸಿನ ಅಪ್ಪಣೆ ಇಲ್ಲದೆ ಯಾವ ಕೆಲಸವನ್ನು ಮಾಡುವುದಕ್ಕೂ ಪುರುಷನಿಗೆ ಶಕ್ತಿಯಿಲ್ಲ. ||೨೧-೨೨||

ಜನರು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರ ಜಾತಿಸಂಬಂಧವಾದ ಆಚಾರಗಳನ್ನು ಬಿಡುವರು. ದ್ವಿಜರು ಸಂಧ್ಯಾವಂದನೆಯನ್ನೂ ಯಜ್ಞೋಪವೀತವನ್ನೂ ತ್ಯಾಗಮಾಡುವರು. ನಾಲ್ಕು ವರ್ಣದವರೂ ಮ್ಲೇಚ್ಛರ ಆಚಾರವನ್ನು ಅನುಸರಿಸಿ ತಮ್ಮ ಶಾಸ್ತ್ರಗಳನ್ನು ಬಿಟ್ಟು ಅವರ ಶಾಸ್ತ್ರವನ್ನೇ ಅಭ್ಯಾಸಮಾಡುವರು. ||೨೩-೨೪||

ಬ್ರಹ್ಮಕ್ಷತ್ರವಿಶಾಂ ವಂಶಾಃ ಶೂದ್ರಾಣಾಂ ಸೇವಕಾಃ ಕಲೌ ।
ಸೂಪಕಾರಾ ಧಾವಕಾಶ್ಚ ವೃಷವಾಹಾಶ್ಚ ಸರ್ವಶಃ ॥೨೫॥

ಸತ್ಯಹೀನಾ ಜನಾಃ ಸರ್ವೇ ಸಸ್ಯಹೀನಾ ಚ ಮೇದಿನೀ ।
ಫಲಹೀನಾಶ್ಚ ತರವೋಽಪತ್ಯಹೀನಾಶ್ಚ ಯೋಷಿತಃ ॥೨೬॥

ಕ್ಷೀರಹೀನಾಸ್ತಥಾ ಗಾವಃ ಕ್ಷೀರಂ ಸರ್ಪಿರ್ವಿವರ್ಜಿತಂ ।
ದಂಪತೀ ಪ್ರೀತಿಹೀನೌ ಚ ಗೃಹಿಣಃ ಸತ್ಯವರ್ಜಿತಾಃ ॥೨೭॥

ಪ್ರತಾಪಹೀನಾ ಭೂಪಾಶ್ಚ ಪ್ರಜಾಶ್ಚ ಕರಪೀಡಿತಾಃ ।
ಜಲಹೀನಾ ಮಹಾನದ್ಯೋ ದೀರ್ಘಿಕಾ ಕಂದರಾದಯಃ ॥೨೮॥

ಧರ್ಮಹೀನಾಃ ಪುಣ್ಯಹೀನಾ ವರ್ಣಾಶ್ಚತ್ವಾರ ಏವ ಚ ।
ಲಕ್ಷೇಷು ಪುಣ್ಯವಾನ್ ಕೋಽಪಿ ನ ತಿಷ್ಠತಿ ತತಃ ಪರಂ ॥೨೯॥

ಕುತ್ಸಿತಾ ವಿಕೃತಾಕಾರಾ ನರಾ ನಾರ್ಯಶ್ಚ ಬಾಲಕಾಃ ।
ಕುವಾರ್ತಾ ಕುತ್ಸಿತಃ ಶಬ್ದೋ ಭವಿಷ್ಯತಿ ತತಃ ಪರಂ ॥೩೦॥

---

ಕಲಿಯುಗದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ವಂಶದವರು ಶೂದ್ರರಿಗೆ ಸೇವಕರಾಗಿ ಅಡಿಗೆಯವರಾಗಿಯೂ ಬಟ್ಟೆ ಒಗೆಯುವವರಾಗಿಯೂ ಎತ್ತುಗಳನ್ನು ಕಟ್ಟಿ ನೇಗಿಲು ಬಂಡಿಗಳನ್ನು ನಡೆಸುವವರಾಗಿಯೂ ಆಗುವರು. ॥೨೫॥

ಕಲಿಯುಗದಲ್ಲಿ ಎಲ್ಲ ಜನರೂ ಸತ್ಯವಂತರಲ್ಲ. ಭೂಮಿಯಲ್ಲಿ ಸಸ್ಯಗಳ ಬೆಳೆಸಿಲ್ಲ. ಮರಗಳಲ್ಲಿ ಹಣ್ಣುಗಳಿಲ್ಲ. ಸ್ತ್ರೀಯರಿಗೆ ಮಕ್ಕಳಿಲ್ಲ. ಹಸುಗಳಲ್ಲಿ ಹಾಲಿಲ್ಲ. ಹಾಲಿನಲ್ಲಿ ತುಪ್ಪವಿರುವುದಿಲ್ಲ. ಗಂಡಹೆಂಡಿರಲ್ಲಿ ಪರಸ್ಪರ ಪ್ರೀತಿಯಿರುವುದಿಲ್ಲ. ಗೃಹಸ್ಥರು ನಿಜವನ್ನು ಹೇಳುವವರಲ್ಲ. ರಾಜರಿಗೆ ಪರಾಕ್ರಮವಿಲ್ಲ. ಪ್ರಜೆಗಳಿಗೆ ಕಂದಾಯದ ಬಾಧೆಯು ವಿಶೇಷವಾಗುವುದು. ದೊಡ್ಡ ಸಣ್ಣ ನದಿಗಳಲ್ಲಿಯೂ ಪರ್ವತದ ಗುಹೆಗಳಲ್ಲಿಯೂ ನೀರಿಲ್ಲದೇ ಹೋಗುವುದು. ನಾಲ್ಕು ವರ್ಣದವರೂ ತಮ್ಮ ತಮ್ಮ ಧರ್ಮಗಳನ್ನು ಆಚರಿಸದೆ ಪುಣ್ಯಹೀನರಾಗುವರು. ॥೨೬-೨೭-೨೮॥

ಕಲಿಯುಗದಲ್ಲಿ ಹತ್ತುಸಾವಿರ ವರ್ಷವಾದ ಮೇಲೆ ಲಕ್ಷಜನದಲ್ಲಿ ಒಬ್ಬನಾದರೂ ಪುಣ್ಯವಂತನಿರುವುದಿಲ್ಲ. ಪುರುಷರೂ ಸ್ತ್ರೀಯರೂ ಹುಡುಗರೂ ಕೆಟ್ಟವ

ಕೇಚಿದ್ಗ್ರಾಮಾಶ್ಚ ನಗರಾ ನರಶೂನ್ಯಾ ಭಯಾನಕಾಃ ।
ಕೇಚಿತ್ಸ್ವಲ್ಪಕುಟೀರೇಣ ನರೇಣ ಚ ಸಮನ್ವಿತಾಃ ॥೩೦॥

ಅರಣ್ಯಾನಿ ಭವಿಷ್ಯಂತಿ ಗ್ರಾಮೇಷು ನಗರೇಷು ಚ ।
ಅರಣ್ಯವಾಸಿನಃ ಸರ್ವೇ ಜನಾಶ್ಚ ಕರಪೀಡಿತಾಃ ॥೩೨॥

ಸಸ್ಯಾನಿ ಚ ಭವಿಷ್ಯಂತಿ ತಟಾಕೇಷು ನದೀಷು ಚ ।
ಪ್ರಕೃಷ್ಟವಂಶಜಾ ಹೀನಾ ಭವಿಷ್ಯಂತಿ ಕಲೌ ಯುಗೇ ॥೩೩॥

ಅಲೀಕವಾದಿನೋ ಧೂರ್ತಾಃ ಶಠಾಶ್ಚಾಸತ್ಯವಾದಿನಃ ।
ಪ್ರಕೃಷ್ಟಾನಿ ಚ ಕ್ಷೇತ್ರಾಣಿ ಸಸ್ಯಹೀನಾನಿ ನಾರದ ॥೩೪॥

ಹೀನಾಃ ಪ್ರಕೃಷ್ಟಾ ಧನಿನೋ ದೇವಭಕ್ತಾಶ್ಚ ನಾಸ್ತಿಕಾಃ ।
ಹಿಂಸಕಾಶ್ಚ ದಯಾಹೀನಾಃ ಪೌರಾಶ್ಚ ನರಘಾತಿನಃ ॥೩೫॥

---

ರಾಗಿ ವಿಕಾರವಾದ ರೂಪವುಳ್ಳವರಾಗಿರುವರು. ಎಲ್ಲಿ ನೋಡಿದರೂ ಕೆಟ್ಟಮಾತನ್ನಾಡುವುದು, ಕೆಟ್ಟ ವರ್ತಮಾನವನ್ನು ಹೇಳುವುದು ರೂಢಿಗೆ ಬರುವುದು.॥೨೯-೩೦॥

ಕೆಲವು ನಗರಗಳು ನಗರಲಕ್ಷಣಕ್ಕೆ ವಿರುದ್ಧವಾಗಿ ಜನರಿಲ್ಲದೆ ಭಯಂಕರವಾಗಿರುವುವು. ಕೆಲವು ನಗರಗಳು ಸಣ್ಣ ಗುಡಿಸಲುಗಳಿಂದ ಕೂಡಿರುವುವು. ॥೩೧॥

ಗ್ರಾಮಗಳೂ ನಗರಗಳೂ ಅರಣ್ಯಗಳಾಗುವುವು. ಅರಣ್ಯದಲ್ಲಿರುವ ಜನರೆಲ್ಲರೂ ರಾಜರಿಗೆ ಹೆಚ್ಚು ಕಂದಾಯವನ್ನು ಕೊಡಬೇಕಾಗುವುದು. ಕೆರೆಗಳಲ್ಲಿಯೂ ನದಿಗಳಲ್ಲಿಯೂ ಸಸ್ಯಗಳು ಬೆಳೆಯುವುವು. ಉತ್ತಮವಂಶದವರೂ ಕಲಿಯುಗದಲ್ಲಿ ನೀಚರಾಗಿರುವರು. ॥೩೨-೩೩॥

ಮತ್ತು ಅವರು ಸುಳ್ಳು ಹೇಳುವವರೂ ಜೂಜಾಡುವವರೂ ಅವಿವೇಕಿಗಳೂ ಆಗುವರು. ಉತ್ತಮವಾದ ಗದ್ದೆ ಹೊಲಗಳಲ್ಲಿ ಪೈರುಗಳಿಲ್ಲದೆ ಹೋಗುವುದು.॥೩೪॥

ವಿಶೇಷ ಹಣವಂತರು ನೀಚರಾಗಿಯೂ ದೈವಭಕ್ತಿಯಿಲ್ಲದವರಾಗಿಯೂ ವೇದಶಾಸ್ತ್ರಗಳಲ್ಲಿ ನಂಬಿಕೆಯಿಲ್ಲದವರಾಗಿಯೂ ಇರುವರು. ಪಟ್ಟಣಿಗರು ಕರುಣೆಯಿಲ್ಲದವರಾಗಿಯೂ ಪ್ರಾಣಿಹಿಂಸೆ ಮಾಡತಕ್ಕವರಾಗಿಯೂ ಮನುಷ್ಯರನ್ನು ಕೊಲ್ಲತಕ್ಕವರಾಗಿಯೂ ಇರುವರು. ॥೩೫॥

ವಾಮನಾ ವ್ಯಾಧಿಯುಕ್ತಾಶ್ಚ ನರಾ ನಾರ್ಯಶ್ಚ ಸರ್ವತಃ ।
ಸ್ವಲ್ಪಾಯುಷೋ ಗದಾಯುಕ್ತಾ ಯೌವನ್ಯೆ ರಹಿತಾಃ ಕಲೌ ॥೩೬॥

ಪಲಿತಾಃ ಷೋಡಶೇ ವರ್ಷೇ ಮಹಾವೃದ್ಧಾಶ್ಚ ವಿಂಶತೌ ।
ಅಷ್ಟವರ್ಷಾ ಚ ಯುವತೀ ರಜೋಯುಕ್ತಾ ಚ ಗರ್ಭಿಣೀ ॥೩೭॥

ವತ್ಸರಾಂತಪ್ರಸೂತಾ ಸ್ತ್ರೀ ಷೋಡಶೇ ಚ ಜರಾನ್ವಿತಾ ।
ಪತಿಪುತ್ರವತೀ ಕಾಚಿತ್ಸರ್ವಾ ವಂಧ್ಯಾಃ ಕಲೌ ಯುಗೇ ॥೩೮॥

ಕನ್ಯಾವಿಕ್ರಯಿಣಃ ಸರ್ವೇ ವರ್ಣಾಶ್ಚತ್ವಾರ ಏವ ಚ ।
ಮಾತೃಜಾಯಾ ವಧೂನಾಂ ಚ ಜಾರೋಪೇತಾನ್ನಭಕ್ಷಕಾಃ ॥೩೯॥

ಕನ್ಯಾನಾಂ ಭಗಿನೀನಾಂ ವಾ ಜಾರೋಪಾತ್ತಾನ್ನಜೀವಿನಃ ।
ಹರೇರ್ನಾಮವಿಕ್ರಯಿಣೋ ಭವಿಷ್ಯಂತಿ ಕಲೌ ಯುಗೇ ॥೪೦॥

ಸ್ವಯಮುತ್ಸೃಜ್ಯ ದಾನಂ ಚ ಕೀರ್ತಿವರ್ಧನಹೇತವೇ ।
ತತಃ ಪಶ್ಚಾತ್ಸ್ವದಾನಂ ಚ ಸ್ವಯಮುಲ್ಲಂಘಯಿಷ್ಯತಿ ॥೪೧॥

---

ಎಲ್ಲಿ ನೋಡಿದರೂ ಪುರುಷರೂ ಸ್ತ್ರೀಯರೂ ಕುಳ್ಳರಾಗಿ ರೋಗದಿಂದ ಕೂಡಿರುವರು. ಸ್ವಲ್ಪವಾದ ಆಯುಸ್ಸುಳ್ಳವರಾಗಿ ರೋಗದಿಂದ ಕೂಡಿ ಪ್ರಾಯವಿಲ್ಲದವರಾಗಿರುವರು. ॥೩೬॥

ಸ್ತ್ರೀಯರು ಎಂಟುವರ್ಷಕ್ಕೆ ದೊಡ್ಡವರಾಗಿ ಗರ್ಭಿಣಿಯರಾಗುವರು. ಒಂದು ವರ್ಷದ ಮೇಲೆ ಪ್ರಸವಿಸುವರು. ಹದಿನಾರನೆಯ ವರ್ಷಕ್ಕೆ ಸಂಪೂರ್ಣ ಮುಪ್ಪಿನಿಂದ ಕೂಡಿ ಕೂದಲುಗಳು ಬೆಳ್ಳಗಾಗುವುವು. ಇಪ್ಪತ್ತನೆಯ ವರ್ಷಕ್ಕೆ ಸಂಪೂರ್ಣ ಮುದುಕಿಯರಾಗುವರು. ಕೆಲವರು ಮಾತ್ರ ಪತಿಯನ್ನೂ ಪುತ್ರರನ್ನೂ ಪಡೆದಿರುವರು. ಮಿಕ್ಕವರೆಲ್ಲರೂ ಬಂಜೆಯಾಗಿರುವರು. ॥೩೭-೩೮॥

ಸಮಸ್ತ ವರ್ಣದವರೂ ಹೆಣ್ಣನ್ನು ಮಾರುವರು. ತಾಯಿ, ಹೆಂಡತಿ, ಸೊಸೆ, ಮಗಳು, ಅಕ್ಕತಂಗಿಯರು ಇವರು ಜಾರೆಯರಾಗಿ ಸಂಪಾದಿಸಿದ ಹಣದಿಂದ ಜೀವನ ಮಾಡುವರು. ಹರಿನಾಮಜಪವನ್ನು ಮಾಡಿ ಅದರ ಪುಣ್ಯವನ್ನು ಮಾರಿ ಬಂದ ಹಣದಿಂದ ಜೀವಿಸುವರು. ॥೩೯-೪೦॥

ಜನರು ಹೆಸರುವಾಸಿಯನ್ನು ಹೆಚ್ಚಿಸಿಕೊಳ್ಳಲು ತಾವೇ ಕೊಟ್ಟಿದ್ದ ದಾನವನ್ನು ಆ ಮೇಲೆ ತಾವೇ ಇಲ್ಲವೆನ್ನುವರು! ॥೪೧॥

ದೇವವೃತ್ತಿಂ ಬ್ರಹ್ಮವೃತ್ತಿಂ ವೃತ್ತಿಂ ಗುರುಕುಲಸ್ಯ ಚ ।
ಸ್ವದತ್ತಾಂ ಪರದತ್ತಾಂ ವಾ ಸರ್ವಮುಲ್ಲಂಘಯಿಷ್ಯತಿ ॥೪೨॥

ಕನ್ಯಕಾಗಾಮಿನಃ ಕೇಚಿತ್ಕೇಚಿಚ್ಚ ಶ್ವಶ್ರುಗಾಮಿನಃ ।
ಕೇಚಿದ್ವಧೂಗಾಮಿನಶ್ಚ ಕೇಚಿಚ್ಚ ಸರ್ವಗಾಮಿನಃ ॥೪೩॥

ಭಗಿನೀಗಾಮಿನಃ ಕೇಚಿತ್ಸಪತ್ನೀ ಮಾತೃಗಾಮಿನಃ ।
ಭ್ರಾತೃಜಾಯಾಗಾಮಿನಶ್ಚ ಭವಿಷ್ಯಂತಿ ಕಲೌ ಯುಗೇ ॥೪೪॥

ಅಗಮ್ಯಾಗಮನಂ ಚೈವ ಕರಿಷ್ಯಂತಿ ಗೃಹೇ ಗೃಹೇ ।
ಮಾತೃಯೋನಿಂ ಪರಿತ್ಯಜ್ಯ ವಿಹರಿಷ್ಯಂತಿ ಸರ್ವತಃ ॥೪೫॥

ಪತ್ನೀನಾಂ ನಿರ್ಣಯೋ ನಾಸ್ತಿ ಭರ್ತ್ರೂಣಾಂ ಚ ಕಲೌಯುಗೇ ।
ಪ್ರಜಾನಾಂ ಚೈವ ಗ್ರಾಮಾಣಾಂ ವಸ್ತೂನಾಂ ಚ ವಿಶೇಷತಃ ॥೪೬॥

ಅಲೀಕವಾದಿನಃ ಸರ್ವೇ ಸರ್ವೇ ಚೋರಾಶ್ಚ ಲಂಪಟಾಃ ।
ಪರಸ್ಪರಂ ಹಿಂಸಕಾಶ್ಚ ಸರ್ವೇ ಚ ನರಘಾತಿನಃ ॥೪೭॥

---

ದೇವಾರಾಧನೆಗೂ, ಬ್ರಾಹ್ಮಣಜೀವನ ಜರುಗುವುದಕ್ಕೂ ಗುರುಗಳ ಜೀವನ ನಡೆಯುವುದಕ್ಕೂ ಕೊಟ್ಟ ಧನಕ್ಷೇತ್ರಾದಿಗಳನ್ನೂ ಎಲ್ಲವನ್ನೂ ಕಿತ್ತುಕೊಳ್ಳುವರು. ॥೪೨॥

ಕೆಲವರು ಮಗಳನ್ನೂ, ಕೆಲವರು ಅತ್ತೆಯನ್ನೂ, ಕೆಲವರು ಸೊಸೆಯನ್ನೂ, ಕೆಲವರು ಸಹೋದರಿಯರನ್ನೂ ಕೆಲವರು ಚಿಕ್ಕಮ್ಮನನ್ನೂ ಕೆಲವರು ಸಹೋದರನ ಹೆಂಡಿತಿಯನ್ನೂ, ಮತ್ತೆ ಕೆಲವರು ಯಾವ ಸಂಬಂಧವೂ ಇಲ್ಲದೆ ಸ್ತ್ರೀಮಾತ್ರರನ್ನೂ ಪತ್ನಿಯಾಗಿ ಪರಿಗ್ರಹಿಸುವರು. ಇದು ಕಲಿಸ್ವಭಾವವು. ॥೪೩-೪೪॥

ಹೀಗೆ ಪ್ರತಿಯೊಂದು ಮನೆಯಲ್ಲಿಯೂ ತಾಯಿಯನ್ನು ಬಿಟ್ಟು ಮಾಡಬಾರದ ಮಿಕ್ಕ ಸ್ತ್ರೀಸಂಗವನ್ನು ಮಾಡುವರು. ಕಲಿಯುಗದಲ್ಲಿ ಇವನಿಗೆ ಇವಳೇ ಪತ್ನೀ, ಇವಳಿಗೆ ಇವನೇ ಪತಿ ಎಂಬ ನಿರ್ಣಯವಿಲ್ಲ. ಪ್ರಜೆಗಳೂ ಗ್ರಾಮಗಳೂ ಪದಾರ್ಥಗಳೂ ಇಂಥವರದೇ ಎಂಬ ನಿಯಮವಿಲ್ಲ. ಯಾರದಾದರೂ ಆಗಬಹುದು.॥೪೫-೪೬॥

ಸಮಸ್ತರೂ ಸುಳ್ಳು ಹೇಳುತ್ತಾ ಕಳ್ಳರಾಗಿ ದುರ್ವ್ಯಾಪಾರಾಸಕ್ತರಾಗಿ ಒಬ್ಬರನ್ನೊಬ್ಬರು ಹಿಂಸೆಮಾಡುತ್ತಾ ಮನುಜರನ್ನು ಕೊಲ್ಲತಕ್ಕವರಾಗುವರು. ಬ್ರಾಹ್ಮಣ ಕ್ಷತ್ರಿಯ, ವೈಶ್ಯ ವಂಶದವರು ಪಾಪಿಗಳಾಗುವರು. ಅರಗು, ಕಬ್ಬಿಣ, ಉಪ್ಪು

ಬ್ರಹ್ಮಕ್ಷವಿಶಾಂ ವಂಶಾ ಭವಿಷ್ಯಂತಿ ಚ ಪಾಪಿನಃ ।
ಲಾಕ್ಷಲೋಹರಸಾನಾಂ ಚ ವ್ಯಾಪಾರಂ ಲವಣಸ್ಯ ಚ ॥೪೮॥

ವೃಷವಾಹಾ ವಿಪ್ರವಂಶಾಃ ಶೂದ್ರಾಣಾಂ ಶವದಾಹಿನಃ ।
ಶೂದ್ರಾನ್ನಭೋಜಿನಃ ಸರ್ವೇ ಸರ್ವೇ ಚ ವೃಷಲೀರತಾಃ ॥೪೯॥

ಪಂಚಯಜ್ಞವಿಹೀನಾಸ್ತು ಕುಹೂರಾತ್ರೌ ಚ ಭೋಜಿನಃ ।
ಯಜ್ಞಸೂತ್ರವಿಹೀನಾಶ್ಚ ಸಂಧ್ಯಾಶೌಚವಿಹೀನಕಾಃ ॥೫೦॥

ಪುಂಶ್ಚಲೀ ವಾರ್ಧುಷಾಜೀವಾ ಕುಟ್ಟನೀ ಚ ರಜಸ್ವಲಾ ।
ವಿಪ್ರಾಣಾಂ ರಂಧನಾಗಾರೇ ಭವಿಷ್ಯತಿ ಚ ಪಾಚಿಕಾ ॥೫೧॥

ಅನ್ನಾನಾಂ ನಿಯಮೋ ನಾಸ್ತಿ ಯೋನೀನಾಂ ಚ ವಿಶೇಷತಃ ।
ಆಶ್ರಮಾಣಾಂ ಜನಾನಾಂ ಚ ಸರ್ವೇ ಮ್ಲೇಚ್ಛಾಃ ಕಲೌಯುಗೇ॥೫೨॥

ಏವಂ ಕಲೌ ಸಂಪ್ರವೃತ್ತೇ ಸರ್ವಂ ಮ್ಲೇಚ್ಛಮಯಂಭವೇತ್ ।
ಹಸ್ತಪ್ರಮಾಣೇ ವೃಕ್ಷೇ ಚ ಅಂಗುಷ್ಠೇ ಚೈವ ಮಾನವೇ ॥೫೩॥

---

ಮುಂತಾದ ರಸದ್ರವ್ಯಗಳ ವ್ಯಾಪಾರವನ್ನು ಮಾಡುವರು. ಬ್ರಾಹ್ಮಣರು ಎತ್ತುಗಳನ್ನು ಕಟ್ಟಿ ಕೆಲಸಮಾಡುವರು. ಅದರಿಂದ ಜೀವಿಸುವರು. ಶೂದ್ರರ ಹೆಣವನ್ನು ಸುಡುವರು. ಶೂದ್ರರ ಅನ್ನವನ್ನು ತಿನ್ನುವರು. ಸಮಸ್ತರೂ ಶೂದ್ರಸ್ತ್ರೀಯರಲ್ಲಿ ಆಸಕ್ತರಾಗುವರು. ॥೪೭-೪೮-೪೯॥

ಬ್ರಾಹ್ಮಣರು ಪಂಚಯಜ್ಞಗಳನ್ನು ಮಾಡರು. ಅಮಾವಾಸ್ಯೆಯ ರಾತ್ರಿಯಲ್ಲಿ ಭೋಜನಮಾಡುವರು. ಯಜ್ಞೋಪವೀತವನ್ನು ಧರಿಸುವುದಿಲ್ಲ. ಸಂಧ್ಯಾವಂದನೆಯನ್ನೂ ಸ್ನಾನವನ್ನೂ ಮಾಡುವುದಿಲ್ಲ. ॥೫೦॥

ಬ್ರಾಹ್ಮಣನ ಅಡಿಗೆಯಮನೆಯಲ್ಲಿ ಪರಪುರುಷಾಸಕ್ತಳೂ ಬಡ್ಡಿಯ ಹಣದಿಂದ ಜೀವಿಸುವವಳೂ ಜಾತಿಯಿಂದ ಹೊರಗಾದವಳೂ ಅಡಿಗೆಯನ್ನು ಮಾಡುವಳು.॥೫೧॥

ಅನ್ನನಿಯಮವಾಗಲೀ ವರ್ಣಾಶ್ರಮನಿಯಮವಾಗಲೀ ಜನರಿಗೆ ಕಲಿಯುಗದಲ್ಲಿ ಇರುವುದಿಲ್ಲ. ಎಲ್ಲರೂ ಮ್ಲೇಚ್ಛರಾಗಿರುವರು. ॥೫೨॥

ಮರವು ಒಂದು ಮೊಳ ಎತ್ತರವೂ ಮನುಷ್ಯನು ಹೆಬ್ಬೆರಳಿನ ಪ್ರಮಾಣವುಳ್ಳವನೂ ಆಗುತ್ತಿರಲು ಕಲಿಯುಗವು ನಡೆಯುತ್ತಿದ್ದರೆ ಎಲ್ಲವೂ ಮ್ಲೇಚ್ಛರಿಂದ ತುಂಬಿರುವುದು. ॥೫೩॥

ವಿಪ್ರಸ್ಯ ವಿಷ್ಣುಯಶಸಃ ಪುತ್ರಃ ಕಲ್ಕಿರ್ಭವಿಷ್ಯತಿ ।
ನಾರಾಯಣಕಲಾಂಶಶ್ಚ ಭಗವಾನ್ ಬಲಿನಾಂ ವರಃ ॥೫೪॥

ದೀರ್ಘೇಣ ಕರವಾಲೇನ ದೀರ್ಘಘೋಟಕವಾಹಕಃ ।
ಮ್ಲೇಚ್ಛಶೂನ್ಯಾಂ ಚ ಪೃಥಿವೀಂ ತ್ರಿರಾತ್ರೇಣ ಕರಿಷ್ಯತಿ ॥೫೫॥

ನಿರ್ಮ್ಲೇಚ್ಛಾಂ ವಸುಧಾಂ ಕೃತ್ವಾ ಚಾಂತರ್ಧಾನಂ ಕರಿಷ್ಯತಿ ।
ಅರಾಜಕಾ ಚ ವಸುಧಾ ದಸ್ಯುಗ್ರಸ್ತಾ ಭವಿಷ್ಯತಿ ॥೫೬॥

ಸ್ಥೂಲಾಃಪ್ರಮಾಣಾ ಷಡ್ರಾತ್ರಂ ವರ್ಷಧಾರಾಪ್ಲುತಾ ಮಹೀ ।
ಲೋಕಶೂನ್ಯಾ ವೃಕ್ಷಶೂನ್ಯಾ ಗೃಹಶೂನ್ಯಾ ಭವಿಷ್ಯತಿ ॥೫೭॥

ತತಶ್ಚ ದ್ವಾದಶಾದಿತ್ಯಾಃ ಕರಿಷ್ಯಂತ್ಯುದಯಂ ಮುನೇ ।
ಪ್ರಾಪ್ನೋತಿ ಶುಷ್ಕತಾಂ ಪೃಥ್ವೀ ಸಮಾ ತೇಷಾಂ ಚ ತೇಜಸಾ ॥೫೮॥

ಕಲೌ ಗತೇ ಚ ದುರ್ಧರ್ಷೇ ಪ್ರವೃತ್ತೇ ಚ ಕೃತೇ ಯುಗೇ ।
ತಪಸ್ಸತ್ವಸಮಾಯುಕ್ತೋ ಧರ್ಮಃ ಪೂರ್ಣೋ ಭವಿಷ್ಯತಿ ॥೫೯॥

---

ಹೀಗಿರಲು ವಿಷ್ಣುಯಶಸ್ಸೆಂಬ ಬ್ರಾಹ್ಮಣನಿಗೆ ನಾರಾಯಣನು ಕಲಾಂಶದಿಂದ ಬಲಿಷ್ಠನಾದ ಕಲ್ಕಿ ಎಂಬ ಮಗನಾಗಿ ಹುಟ್ಟುವನು. ಅವನು ಉದ್ದವಾದ ಕತ್ತಿಯನ್ನು ಹಿಡಿದು ದೊಡ್ಡ ಕುದುರೆಯಮೇಲೆ ಕುಳಿತು ಭೂಮಿಯಲ್ಲಿರುವ ಮ್ಲೇಚ್ಛರನ್ನೆಲ್ಲರನ್ನೂ ಮೂರುದಿನಗಳೊಳಗೆ ನಾಶಮಾಡಿ ಮರೆಯಾಗಿ ಹೋಗುವನು. ಆ ಮೇಲೆ ಭೂಮಿಯಲ್ಲಿ ರಾಜರಿಲ್ಲದೆ ಕಳ್ಳರ ಕಾಟವು ಹೆಚ್ಚಾಗುವುದು. ||೫೪-೫೫-೫೬||

ವಿಸ್ತಾರವಾದ ಮತ್ತು ಭಾರವಾದ ಭೂಮಿಯು ಆರುದಿನಗಳವರೆಗೆ ಬಿಡದೇ ಹೊಯ್ಯುವ ಮಳೆಯಿಂದ ನೆನೆದು ಜನರೂ ಮರಗಳೂ ಇಲ್ಲದೇ ಹೋಗುವುವು. ನಾರದನೇ, ಆ ಮೇಲೆ ಹನ್ನೆರಡು ಸೂರ್ಯಮಂಡಲಗಳು ಉದಯಿಸಿ ಆ ತೇಜಸ್ಸಿನಿಂದ ಒಂದು ವರ್ಷದವರೆಗೆ ಭೂಮಿಯು ಸಂಪೂರ್ಣವಾಗಿ ಒಣಗಿಹೋಗುವುದು. ||೫೭-೫೮||

ಕಷ್ಟವಾದ ಕಲಿಯುಗವು ಕಳೆದುಹೋಗುತ್ತಲು ಕೃತಯುಗವು ಪ್ರಾರಂಭವಾಗುವುದು. ಆ ಯುಗದಲ್ಲಿ ತಪಸ್ಸು ಸತ್ವಗುಣ ಇವುಗಳಿಂದ ಕೂಡಿ ಧರ್ಮವು ಪೂರ್ಣವಾಗಿ ಆಚರಣೆಗೆ ಬರುವುದು. ಬ್ರಾಹ್ಮಣರೆಲ್ಲರೂ ಭೂಮಿಯಲ್ಲಿ ವೇದವನ್ನು

**ತಪಸ್ವಿನಶ್ಚ ಧರ್ಮಿಷ್ಠಾ ವೇದಜ್ಞಾ ಬ್ರಾಹ್ಮಣಾಃ ಭುವಿ ।**
**ಪತಿವ್ರತಾಶ್ಚ ಧರ್ಮಿಷ್ಠಾ ಯೋಷಿತಶ್ಚ ಗೃಹೇ ಗೃಹೇ ॥೬೦॥**

**ರಾಜಾನಃ ಕ್ಷತ್ರಿಯಾಸ್ಸರ್ವೇ ವಿಪ್ರಭಕ್ತಾ ಮನಸ್ವಿನಃ ।**
**ಪ್ರತಾಪವಂತೋ ಧರ್ಮಿಷ್ಠಾಃ ಪುಣ್ಯಕರ್ಮರತಾಃ ಸದಾ ॥೬೧॥**

**ವೈಶ್ಯಾ ವಾಣಿಜ್ಯನಿರತಾಃ ವಿಪ್ರಭಕ್ತಾಶ್ಚ ಧಾರ್ಮಿಕಾಃ ।**
**ಶೂದ್ರಾಶ್ಚ ಪುಣ್ಯಶೀಲಾಶ್ಚ ಧರ್ಮಿಷ್ಠಾ ವಿಪ್ರಸೇವಿನಃ ॥೬೨॥**

**ವಿಪ್ರಕ್ಷತ್ರವಿಶಾಂ ವಂಶಾ ದೇವೀಭಕ್ತಿಪರಾಯಣಾಃ ।**
**ದೇವೀಮಂತ್ರರತಾಸ್ಸರ್ವೇ ದೇವೀಧ್ಯಾನಪರಾಯಣಾಃ ॥೬೩॥**

**ಶ್ರುತಿಸ್ಮೃತಿಪುರಾಣಜ್ಞಾಃ ಪುಮಾಂಸ ಋತುಗಾಮಿನಃ ।**
**ಲೇಶೋ ನಾಸ್ತಿ ಹ್ಯಧರ್ಮಸ್ಯ ಪೂರ್ಣೋ ಧರ್ಮಃ ಕೃತೇ ಯುಗೇ ॥೬೪॥**

---

ತಿಳಿದವರಾಗಿಯೂ ತಪಸ್ವಿಗಳಾಗಿಯೂ ಧರ್ಮಾತ್ಮರಾಗಿಯೂ ಇರುವರು. ಪ್ರತಿಯೊಂದು ಮನೆಯಲ್ಲಿಯೂ ಸ್ತ್ರೀಯರು ಪ್ರತಿವ್ರತೆಯರಾಗಿಯೂ ಧರ್ಮಮಾರ್ಗದಲ್ಲಿರತಕ್ಕವರಾಗಿಯೂ ಇರುವರು. ||೫೯-೬೦||

ಸಮಸ್ತರಾಜರುಗಳೂ ಮತ್ತು ಕ್ಷತ್ರಿಯರೂ ಗೌರವಶಾಲಿಗಳಾಗಿಯೂ ಪರಾಕ್ರಮಿಗಳಾಗಿಯೂ ಧರ್ಮಮಾರ್ಗದಲ್ಲಿ ಪುಣ್ಯಕಾರ್ಯವನ್ನು ಮಾಡುವವರಾಗಿಯೂ ಬ್ರಾಹ್ಮಣಭಕ್ತರಾಗಿಯೂ ಇರುವರು. ವೈಶ್ಯರು ಧರ್ಮವಾಗಿ ವ್ಯಾಪಾರಮಾಡುವರು. ಶೂದ್ರರು ಪುಣ್ಯಕಾರ್ಯವನ್ನು ಮಾಡುತ್ತಾ ವಿಪ್ರಜನರ ಸೇವಕರಾಗಿರುವರು. ||೬೧-೬೨||

ಬ್ರಾಹ್ಮಣಾದಿ ಮೂರು ವರ್ಣದವರೂ ದೇವೀಮಂತ್ರವನ್ನು ಜಪಮಾಡಿ ಧ್ಯಾನಾಸಕ್ತರಾಗಿರುವರು. ಗಂಡಸರೆಲ್ಲರೂ ವೇದಶಾಸ್ತ್ರಪುರಾಣಗಳನ್ನು ತಿಳಿದವರಾಗಿ ಋತುಕಾಲದಲ್ಲಿ ಸ್ತ್ರೀಸಂಗಮಾಡುತ್ತಾ ಅಧರ್ಮಕ್ಕೆ ಸ್ವಲ್ಪವೂ ಅವಕಾಶವಿಲ್ಲದಂತೆ ನಡೆಯುವುದರಿಂದ ಕೃತಯುಗದಲ್ಲಿರುವಂತೆ ಧರ್ಮವು ಪೂರ್ಣವಾಗಿರುವುದು. ||೬೩-೬೪||

ಧರ್ಮಸ್ತ್ರಿಪಾಚ್ಚ ತ್ರೇತಾಯಾಂ ದ್ವಿಪಾಚ್ಚ ದ್ವಾಪರೇ ತತಃ ।
ಕಲೌ ವೃತ್ತೇ ಚೈಕಪಾಚ್ಚ ಸರ್ವಲುಪ್ತಿಸ್ತತಃ ಪರಂ ॥೬೫॥

ವಾರಾಃ ಸಪ್ತ ತಥಾ ವಿಪ್ರ ತಿಥಯಃ ಷೋಡಶ ಸ್ಮೃತಾಃ ।
ತಥಾ ದ್ವಾದಶ ಮಾಸಾಶ್ಚ ಋತವಶ್ಚ ಷಡೇವ ಚ ॥೬೬॥

ದ್ವೌ ಪಕ್ಷೌ ಚಾಯನೇ ದ್ವೇ ಚ ಚತುರ್ಭಿಃ ಪ್ರಹರೈರ್ದಿನಂ ।
ಚತುರ್ಭಿಃ ಪ್ರಹರೈ ರಾತ್ರಿರ್ಮಾಸಸ್ತ್ರಿಂಶದ್ದಿನೈಸ್ತಥಾ ॥೬೭॥

ವರ್ಷಂ ಪಂಚವಿಧಂ ಜ್ಞೇಯಂ ಕಾಲಸಂಖ್ಯಾವಿಧಿಕ್ರಮೇ ।
ಯಥಾ ಚಾಽಽಯಾಂತಿ ಯಾಂತ್ಯೇವ ಯಥಾ ಯುಗಚತುಷ್ಟಯಂ॥೬೮॥

ವರ್ಷೇ ಪೂರ್ಣೇ ನರಾಣಾಂ ಚ ದೇವಾನಾಂ ಚ ದಿವಾನಿಶಂ ।
ಶತತ್ರಯೇ ಷಷ್ಟ್ಯಧಿಕೇ ನರಾಣಾಂ ಚ ಯುಗೇ ಗತೇ ॥೬೯॥

ದೇವಾನಾಂ ಚ ಯುಗಂ ಜ್ಞೇಯಂ ಕಾಲಸಂಖ್ಯಾವಿದಾಂ ಮತಂ ।
ಮನ್ವಂತರಂ ತು ದಿವ್ಯಾನಾಂ ಯುಗಾನಾಮೇಕಸಪ್ತತಿಃ ॥೭೦॥

---

ಧರ್ಮವು ತ್ರೇತಾಯುಗದಲ್ಲಿ ಮೂರುಭಾಗವೂ ದ್ವಾಪರದಲ್ಲಿ ಎರಡು ಭಾಗವೂ ಕಲಿಯುಗದಲ್ಲಿ ಮೊದಲಿನಲ್ಲಿ ಒಂದು ಭಾಗವೂ ಇದ್ದು ಕೊನೆಗೆ ಧರ್ಮವೆಲ್ಲವೂ ಲೋಪವಾಗುವುದು. ॥೬೫॥

ನಾರದನೇ, ಕೇಳು. ಏಳು ವಾರಗಳು ಹದಿನಾರು ತಿಥಿಗಳು ಹನ್ನೆರಡು ತಿಂಗಳುಗಳು, ಆರು ಋತುಗಳು, ಎರಡು ಪಕ್ಷಗಳು, ಎರಡು ಅಯನಗಳು. ಹಗಲು ರಾತ್ರಿಗಳಿಗೆ ನಾಲ್ಕು ನಾಲ್ಕು ಯಾಮಗಳು. ಮೂವತ್ತು ದಿನಗಳಿಗೊಂದು ಮಾಸ. ವರ್ಷಗಳು ಐದು ಬಗೆಯಾಗಿರುವುವು. (ಇದನ್ನು ಎಂಟನೆಯ ಸ್ಕಂಧದಲ್ಲಿ ಹೇಳಿದೆ.) ಈ ಕಾಲಸಂಖ್ಯಾಕ್ರಮದಿಂದ ನಾಲ್ಕು ಯುಗಗಳು ಬರುತ್ತಲೂ ಹೋಗುತ್ತಲೂ ಇರುವುವು. ॥೬೬-೬೭-೬೮॥

ಮನುಷ್ಯರಿಗೆ ಒಂದು ವರ್ಷವಾದರೆ ದೇವತೆಗಳಿಗೆ ಅದು ಒಂದು ದಿನವಾಗುವುದು. ಮುನ್ನೂರರವತ್ತು ಯುಗಗಳು ಮನುಷ್ಯರಿಗೆ ಕಳೆದರೆ ದೇವತೆಗಳಿಗೆ ಒಂದು ಮನ್ವಂತರವಾಗುವುದು. ॥೬೯-೭೦॥

ಮನ್ವಂತರಸಮಂ ಜ್ಞೇಯಂ ಆಯುಷ್ಯಂ ಚ ಶಚೀಪತೇಃ ।
ಅಷ್ಟಾವಿಂಶತಿಮೇ ಚಂದ್ರೇ ಗತೇ ಬ್ರಹ್ಮದಿವಾನಿಶಂ ॥೭೧॥

ಅಷ್ಟೋತ್ತರಶತೇ ವರ್ಷೇ ಗತೇ ಪಾತಶ್ಚ ಬ್ರಹ್ಮಣಃ ।
ಪ್ರಳಯಃ ಪ್ರಾಕೃತೋ ಜ್ಞೇಯಸ್ತತ್ರಾದೃಷ್ಟಾ ವಸುಂಧರಾ ॥೭೨॥

ಜಲಪ್ಲುತಾನಿ ವಿಶ್ವಾನಿ ಬ್ರಹ್ಮವಿಷ್ಣುಶಿವಾದಯಃ ।
ಋಷಯೋ ಜ್ಞಾನಿನಃ ಸರ್ವೇ ಲೀನಾಃ ಸತ್ಯೇ ಚಿದಾತ್ಮನಿ ॥೭೩॥

ತತ್ರೈವ ಪ್ರಕೃತಿರ್ಲೀನಾ ತತ್ರ ಪ್ರಾಕೃತಿಕೋ ಲಯಃ ।
ಲಯೇ ಪ್ರಾಕೃತಿಕೇ ಜಾತೇ ಪಾತೇ ಚ ಬ್ರಹ್ಮಣೋ ಮುನೇ ॥೭೪॥

ನಿಮೇಷಮಾತ್ರಂ ಕಾಲಶ್ಚ ಶ್ರೀದೇವ್ಯಾಃ ಪ್ರೋಚ್ಯತೇ ಮುನೇ ।
ಏವಂ ನಶ್ಯಂತಿ ಸರ್ವಾಣಿ ಬ್ರಹ್ಮಾಂಡಾನ್ಯಖಿಲಾನಿ ಚ ॥೭೫॥

---

ದೇವೇಂದ್ರನಿಗೆ ಒಂದು ಮನ್ವಂತರ ಮಾತ್ರ ಆಯಸ್ಸು. ಹೀಗೆ ಇಪ್ಪತ್ತೆಂಟು ಮಂದಿ ದೇವೇಂದ್ರರು ಹೋದ ಮೇಲೆ ಬ್ರಹ್ಮನಿಗೆ ಒಂದು ದಿನವಾಗುವುದು. ಹೀಗೆ ಒಂದುನೂರೆಂಟು ವರ್ಷಗಳು ಕಳೆದರೆ ಬ್ರಹ್ಮನ ಆಯುಸ್ಸು ಮುಗಿಯುವುದು. ಇದನ್ನೇ ಪ್ರಾಕೃತಪ್ರಳಯವೆಂದು ಹೇಳುವರು. ಈ ಸಮಯದಲ್ಲಿ ಭೂಮಿಯು ಕಾಣಿಸದೆ ಹೋಗುವುದು. ಎಂದರೆ ಭೂಮಿಯು ಕ್ರಮವಾಗಿ ನೀರು, ತೇಜಸ್ಸು, ವಾಯು, ಅಹಂಕಾರ, ಮಹತ್ತತ್ವ, ಪ್ರಕೃತಿ ಇವುಗಳಲ್ಲಿ, ಸೃಷ್ಟಿಕ್ರಮಕ್ಕೆ ಎದುರಾದ ಕ್ರಮದಲ್ಲಿ, ಕಾರ್ಯಗಳು ತಮ್ಮ ಕಾರಣದಲ್ಲಿ ಲಯವಾಗುವುವು. ॥೭೧-೭೨॥

ಪ್ರಾಕೃತಪ್ರಳಯದಲ್ಲಿ ಪ್ರಪಂಚವೆಲ್ಲವೂ ಮಹಾಜಲದಲ್ಲಿ ಮುಳುಗಿರುವುದು. ತ್ರಿಮೂರ್ತಿಗಳೂ ಋಷಿಗಳೂ ಜ್ಞಾನಿಗಳೂ ಎಲ್ಲರೂ ಜ್ಞಾನಸ್ವರೂಪನಾದ ಆತ್ಮನಲ್ಲಿ ಲೀನವಾಗಿರುವರು. ಪ್ರಕೃತಿಯೂ ಅಲ್ಲಿಯೇ ಲೀನವಾಗಿರುವುದು. ಎಂದರೆ ಸರ್ವಾಧಿಷ್ಠಾನವಾದ ಬ್ರಹ್ಮತತ್ವದಲ್ಲಿ ಲೀನವಾಗಿರುವುದು. ॥೭೩॥

ಪ್ರಾಕೃತ ಪ್ರಳಯದಲ್ಲಿ ಬ್ರಹ್ಮನ ಆಯುಸ್ಸು ಮುಗಿಯಲು ಆ ಕಾಲವು ಶ್ರೀದೇವಿಗೆ ಒಂದು ನಿಮಿಷ ಮಾತ್ರವಾಗಿರುವುದು. ಹೀಗೆ ಒಂದು ನಿಮಿಷಮಾತ್ರ

**ನಿಮೇಷಾಂತರಕಾಲೇನ ಪುನಃ ಸೃಷ್ಟಿಕ್ರಮೇಣ ಚ ।**
**ಏವಂ ಕತಿವಿಧಾ ಸೃಷ್ಟಿಃ ಲಯಃ ಕತಿವಿಧೋಽಪಿ ವಾ ॥೭೬॥**

**ಕತಿ ಕಲ್ಪಾ ಗತಾ ಯಾತಾಃ ಸಂಖ್ಯಾಂ ಜಾನಾತಿ ಕಃ ಪುಮಾನ್ ।**
**ಸೃಷ್ಟೀನಾಂ ಚ ಲಯಾನಾಂ ಚ ಬ್ರಹ್ಮಾಂಡಾನಾಂ ಚ ನಾರದ ॥೭೭॥**

**ಬ್ರಹ್ಮಾದೀನಾಂ ಚ ಬ್ರಹ್ಮಾಂಡೇ ಸಂಖ್ಯಾಂ ಜಾನಾತಿ ಕಃ ಪುಮಾನ್ ।**
**ಬ್ರಹ್ಮಾಂಡಾನಾಂ ಚ ಸರ್ವೇಷಾಂ ಈಶ್ವರಶ್ಚೈಕ ಏವ ಸಃ ॥೭೮॥**

**ಸರ್ವೇಷಾಂ ಪರಮಾತ್ಮಾ ಚ ಸಚ್ಚಿದಾನಂದರೂಪಧೃಕ್ ।**
**ಬ್ರಹ್ಮಾದಯಶ್ಚ ತಸ್ಯಾಂಶಾ ಸ್ತಸ್ಯಾಂಶಶ್ಚ ಮಹಾವಿರಾಟ್ ॥೭೯॥**

**ತಸ್ಯಾಂಶಶ್ಚ ವಿರಾಟ್ ಕ್ಷುದ್ರಃ ಸೈವೇಯಂ ಪ್ರಕೃತಿಃ ಪರಾ ।**
**ತಸ್ಯಾಃ ಸಕಾಶಾತ್ಸಂಜಾತೋಽಪ್ಯರ್ಧನಾರೀಶ್ವರಸ್ತತಃ ॥೮೦॥**

---

ದಲ್ಲಿ ಅನೇಕ ಬ್ರಹ್ಮಾಂಡಗಳ ನಾಶವೂ ಅಷ್ಟೇ ಕಾಲದಲ್ಲಿ ಪುನಃ ಸೃಷ್ಟಿಯೂ ನಡೆಯುತ್ತಾ ಸೃಷ್ಟಿಸ್ಥಿತಿಲಯಗಳನ್ನು ಲೆಕ್ಕಿಸಲಾಗುವುದಿಲ್ಲ. ॥೭೪-೭೫-೭೬॥

ನಾರದನೇ, ಹೀಗೆ ಎಷ್ಟು ಕಲ್ಪಗಳು ಕಳೆದವೋ ಬಂದವೋ ಎಷ್ಟು ಬ್ರಹ್ಮಾಂಡಗಳು ಸೃಷ್ಟಿಯಾದವೋ ಲಯವಾದವೋ ಬ್ರಹ್ಮಾಂಡದಲ್ಲಿ ಬ್ರಹ್ಮಾದಿ ದೇವತೆಗಳು ಎಷ್ಟು ಜನರಿದ್ದರೋ ಈ ಸಂಖ್ಯೆಗಳನ್ನು ಯಾವನು ತಾನೇ ಹೇಳ ಬಲ್ಲನು ? ಆದರೂ ಸಮಸ್ತ ಬ್ರಹ್ಮಾಂಡಗಳಿಗೂ ಒಬ್ಬನೇ ಈಶ್ವರನು. ॥೭೭-೭೮॥

ಅವನೇ ಸಚ್ಚಿದಾನಂದರೂಪನಾದ ಪರಮಾತ್ಮನು. ಬ್ರಹ್ಮಾದಿದೇವತೆಗಳೂ ಮಹಾವಿರಾಟ್ ಪುರುಷನೂ ಆ ಪರಮಾತ್ಮನ ಅಂಶ. ಕ್ಷುದ್ರವಿರಾಟ್ಪುರುಷನು ಮಹಾ ವಿರಾಟ್ ಪುರುಷನ ಅಂಶ. ಆ ಸಚ್ಚಿದಾನಂದರೂಪ ಪರಮಾತ್ಮನೇ ಪರಾಪ್ರಕೃತಿಯು. ಮಾಯಾವಿಶಿಷ್ಟಚೈತನ್ಯವೆಂದರೆ ಮೂಲಪ್ರಕೃತಿಯಲ್ಲಿ ಪ್ರಕಾಶಿಸಿದ ಚೈತನ್ಯವನ್ನೇ ಮೂಲಪ್ರಕೃತಿ ಎಂದು ಹೇಳುವುದರಿಂದ ಪ್ರಕೃತಿಗೂ ಪರಮಾತ್ಮನಿಗೂ ಭೇದವಿಲ್ಲ. ಆ ಮೂಲಪ್ರಕೃತಿಯ ದೆಸೆಯಿಂದ ವೇದಗಳಲ್ಲಿ ಹೇಳಿರುವಂತೆ ಪಂಚಮಹಾಭೂತಗಳು ಉತ್ಪತ್ತಿಯಾದ ಮೇಲೆ ಅರ್ಧನಾರೀಶ್ವರನು ಎಂದರೆ ಗೋಪಾಲ ಸುಂದರೀನಾಮಕ ವಾದ ಶ್ರೀಕೃಷ್ಣನು ಹುಟ್ಟಿದನೆಂದು ಅಭಿಪ್ರಾಯವು. ॥೭೯-೮೦॥

ಸ್ಯೈವ ಕೃಷ್ಣೋ ದ್ವಿಧಾ ಭೂತೋ ದ್ವಿಭುಜಶ್ಚ ಚತುರ್ಭುಜಃ ।
ಚತುರ್ಭುಜಶ್ಚ ವೈಕುಂಠೇ ಗೋಲೋಕೇ ದ್ವಿಭುಜಃ ಸ್ವಯಂ ॥೮೧॥

ಬ್ರಹ್ಮಾದಿತೃಣಪರ್ಯಂತಂ ಸರ್ವಂ ಪ್ರಾಕೃತಿಕಂ ಭವೇತ್ ।
ಯದ್ಯತ್ಪ್ರಾಕೃತಿಕಂ ಸೃಷ್ಟಂ ಸರ್ವಂ ನಶ್ವರಮೇವ ಚ ॥೮೨॥

ಏವಂ ವಿಧಂ ಸೃಷ್ಟಿಹೇತು ಸತ್ಯಂ ನಿತ್ಯಂ ಸನಾತನಂ ।
ಸ್ವೇಚ್ಛಾಮಯಂ ಪರಂ ಬ್ರಹ್ಮ ನಿರ್ಗುಣಂ ಪ್ರಕೃತೇಃ ಪರಂ ॥೮೩॥

ನಿರುಪಾಧಿ ನಿರಾಕಾರಂ ಭಕ್ತಾನುಗ್ರಹಕಾತರಂ ।
ಕರೋತಿ ಬ್ರಹ್ಮಾ ಬ್ರಹ್ಮಾಂಡಂ ಯಜ್ಜ್ಞಾನಾತ್ಕಮಲೋದ್ಭವಃ ॥೮೪॥

ಶಿವೋ ಮೃತ್ಯುಂಜಯಶ್ಚೈವ ಸಂಹರ್ತಾ ಸರ್ವಸತ್ವವಿತ್ ।
ಯಜ್ಜ್ಞಾನಾದ್ಯಸ್ಯ ತಪಸಾ ಸರ್ವೇಶಸ್ತು ತಪೋ ಮಹಾನ್ ॥ ೮೫॥

ಮಹಾವಿಭೂತಿಯುಕ್ತಶ್ಚ ಸರ್ವಜ್ಞಃ ಸರ್ವದರ್ಶನಃ ।
ಸರ್ವವ್ಯಾಪೀ ಸರ್ವಪಾತಾ ಪ್ರದಾತಾ ಸರ್ವಸಂಪದಾಂ ॥೮೬॥

---

ಆ ಕೃಷ್ಣನೇ ದ್ವಿಭುಜ ಚತುರ್ಭುಜನಾಗಿ ಎರಡು ರೂಪನಾದನು. ಚತುರ್ಭುಜನು ವೈಕುಂಠದಲ್ಲೂ ದ್ವಿಭುಜನು ಗೋಲೋಕದಲ್ಲಿಯೂ ಇರುವರು. ಬ್ರಹ್ಮನು ಮೊದಲುಗೊಂಡು ಒಂದು ಹುಲ್ಲುಕಡ್ಡಿಯ ವರೆಗಿರುವ ಸಮಸ್ತವೂ ಪ್ರಕೃತಿ ಸಂಬಂಧವಾದುವು. ಪ್ರಕೃತಿ ಸೃಷ್ಟಿಯೆಲ್ಲವೂ ನಾಶವಾಗತಕ್ಕವು. ||೮೧-೮೨||

ಆದರೆ ಈ ರೀತಿಯಾದ ಸೃಷ್ಟಿಗೆ ಆಧಿಷ್ಠಾನಕಾರಣವಾದ ಪರಬ್ರಹ್ಮವಸ್ತುವು ಮಾತ್ರ ಯಾವಾಗಲೂ ಇರತಕ್ಕುದು. ಅನಾದಿಯಾದುದು. ನಿರ್ಗುಣವಾದುದು. ಸ್ವಪ್ರಕಾಶಸ್ವರೂಪವಾದುದು. ಪ್ರಕೃತಿಗಿಂತ ಶ್ರೇಷ್ಠವಾದುದು. ನಿರಾಕಾರವಾಗಿ ಯಾವ ಬಾಧೆಯೂ ಇಲ್ಲದುದಾಗಿ ಭಕ್ತರಿಗೆ ಅನುಗ್ರಹಮಾಡುವುದರಲ್ಲಿ ಆಸಕ್ತವಾದುದಾಗಿರುವುದು. ಮತ್ತು ತನ್ನ ಇಚ್ಛಾರೂಪವಾಗಿರುವ ಮಾಯೆಗೆ ಅಧೀನವಾಗದೆ ಇರುವುದು. ||೮೩||

ಯಾವ ಈ ಪರಮಾತ್ಮನ ಸಂಬಂಧವಾದ ಜ್ಞಾನದಿಂದಲೇ ಬ್ರಹ್ಮನು ಬ್ರಹ್ಮಾಂಡವನ್ನು ಸೃಷ್ಟಿಸುವನು. ಶಿವನು ಸಂಹರಿಸುವನು. ಮಹಾತಪಸ್ವಿಯೂ ಸರ್ವೇಶ್ವರನೂ ಅನೇಕ ಸಂಪತ್ತುಗಳಿಂದ ಕೂಡಿದವನೂ ಸರ್ವವ್ಯಾಪಿಯೂ ಸಂಪ

ಮಹಾಮಾಯಾ ಚ ಪ್ರಕೃತಿಃ ಸರ್ವಶಕ್ತಿಮಯೀಶ್ವರೀ ।
ವಿಷ್ಣುಃ ಸರ್ವೇಶ್ವರಃ ಶ್ರೀಮಾನ್ಯದ್ಭಕ್ತ್ಯಾ ತಸ್ಯ ಸೇವಯಾ ॥೮೭॥

ಸೈವ ಪ್ರೋಕ್ತಾ ಭಗವತೀ ಸಚ್ಚಿದಾನಂದರೂಪಿಣೀ ।
ಯಜ್ಜ್ಞಾನಾದ್ಯಸ್ಯ ತಪಸಾ ಯದ್ಭಕ್ತ್ಯಾ ಯಸ್ಯ ಸೇವಯಾ ॥೮೮॥

ಸಾವಿತ್ರೀ ದೇವಮಾತಾ ಚ ವೇದಾಧಿಷ್ಠಾತೃದೇವತಾ ।
ಪೂಜ್ಯಾ ದ್ವಿಜಾನಾಂ ವೇದಜ್ಞಾ ಯಜ್ಜ್ಞಾನಾದ್ಯಸ್ಯ ಸೇವಯಾ ॥೮೯॥

ಸರ್ವವಿದ್ಯಾಧಿದೇವೀ ಸಾ ಪೂಜ್ಯಾ ಚ ವಿದುಷಾಂ ಪರಾ ।
ಯತ್ಸೇವಯಾ ಯತ್ತಪಸಾ ಸರ್ವವಿಶ್ವೇಷು ಪೂಜಿತಾ ॥೯೦॥

ಸರ್ವಗ್ರಾಮಾಧಿದೇವೀ ಸಾ ಸರ್ವಸಂಪತ್ಪ್ರದಾಯಿನೀ ।
ಸರ್ವೇಶ್ವರೀ ಸರ್ವವಂದ್ಯಾ ಸರ್ವೇಷಾಂ ಪುತ್ರದಾಯಿನೀ ॥೯೧॥

---

ತ್ತುಗಳನ್ನು ಕೊಡತಕ್ಕವನೂ ಆದ ವಿಷ್ಣುವು ಆ ಬ್ರಹ್ಮಾಂಡವನ್ನು ಪಾಲಿಸುವನು. ಈ ತ್ರಿಮೂರ್ತಿಗಳಿಗೆ ಆ ಪರಮಾತ್ಮನ ಭಕ್ತಿಯಿಂದಲೂ ಸೇವೆಯಿಂದಲೂ ಈ ಶಕ್ತಿಯು ಬಂದಿರುವುದು. ||೮೫-೮೬||

ಮಹಾಮಾಯಾಸ್ವರೂಪಳಾದ ಪ್ರಕೃತಿಯೂ ಸಮಸ್ತಶಕ್ತಿಸ್ವರೂಪಳಾದವಳು. ಅವಳೂ ಸಚ್ಚಿದಾನಂದಸ್ವರೂಪಳು. ಪರಮಾತ್ಮ ಸಂಬಂಧವಾದ ಜ್ಞಾನ, ತಪಸ್ಸು, ಸೇವೆ ಇವುಗಳಿಂದ ಆ ದೇವಿಗೆ ಭಗವತೀ ಎಂದು ಹೆಸರು ಬಂದಿರುವುದು. ಆ ಮೂಲಪ್ರಕೃತಿಯ ಸಂಬಂಧವಾದ ಜ್ಞಾನ, ತಪಸ್ಸು, ಸೇವೆ ಇವುಗಳಿಂದ ವೇದಕ್ಕೆ ಆಶ್ರಯಸ್ವರೂಪಳೂ ದೇವತೆಗಳಿಗೆ ತಾಯಿಯಂತಿರತಕ್ಕವಳೂ ಆದ ಸಾವಿತ್ರೀದೇವಿಯು ದ್ವಿಜರಾದ ಮೂರುವರ್ಣದವರಿಗೂ ಪೂಜ್ಯಳಾಗಿರುವಳು.||೮೭-೮೮-೮೯||

ಆ ಮೂಲಪ್ರಕೃತಿಯ ಸೇವೆಯಿಂದಲೇ ಸರಸ್ವತಿಯು ಸಮಸ್ತ ವಿದ್ಯೆಗಳಿಗೂ ದೇವತೆಯಾಗಿ ವಿದ್ವಾಂಸರಿಗೆ ಪೂಜಾಯೋಗ್ಯಳಾಗಿರುವಳು. ಲಕ್ಷ್ಮೀದೇವಿಯೂ ಸಮಸ್ತ ಗ್ರಾಮಗಳಿಗೂ ಮುಖ್ಯ ದೇವತೆಯಾಗಿ ಸಕಲ ಸಂಪತ್ತುಗಳನ್ನೂ ಕೊಡತಕ್ಕವಳಾಗಿ ಎಲ್ಲರಿಗೂ ಪುತ್ರರನ್ನು ಕೊಡತಕ್ಕವಳಾಗಿ ಸರ್ವರಿಗೂ ನಮಸ್ಕಾರಯೋಗ್ಯಳಾಗಿರುವಳು. ||೯೦-೯೧||

ಸರ್ವಸ್ತುತಾ ಚ ಸರ್ವಜ್ಞಾ ಸರ್ವದುರ್ಗಾರ್ತಿನಾಶಿನೀ ।
ಕೃಷ್ಣವಾಮಾಂಸಸಂಭೂತಾ ಕೃಷ್ಣಪ್ರಾಣಾಧಿ ದೇವತಾ ॥೯೨॥

ಕೃಷ್ಣಪ್ರಾಣಾಧಿಕಾ ಪ್ರೇಮ್ಣಾ ರಾಧಿಕಾ ಶಕ್ತಿಸೇವಯಾ ।
ಸರ್ವಾಧಿಕಂ ಚ ರೂಪಂ ಚ ಸೌಭಾಗ್ಯಂ ಮಾನಗೌರವೇ ॥೯೩॥

ಕೃಷ್ಣವಕ್ಷಸ್ಥಲಸ್ಥಾನಂ ಪತ್ನೀತ್ವೇ ಪ್ರಾಪ ಸೇವಯಾ ।
ತಪಶ್ಚಕಾರ ಸಾ ಪೂರ್ವಂ ಶತಶೃಂಗೇ ಚ ಪರ್ವತೇ ॥೯೪॥

ದಿವ್ಯವರ್ಷಸಹಸ್ರಂ ಚ ಪತಿಪ್ರಾಪ್ತ್ಯರ್ಥನೇವ ಚ ।
ಜಾತೇ ಶಕ್ತಿಪ್ರಸಾದೇ ತು ದೃಷ್ಟ್ವಾ ಚಂದ್ರಕಲೋಪಮಾಂ ॥೯೫॥

ಕೃಷ್ಣೋ ವಕ್ಷಃ ಸ್ಥಲೇ ಕೃತ್ವಾ ರುರೋದ ಕೃಪಯಾ ವಿಭುಃ ।
ವರಂ ತಸ್ಯೈ ದದೌ ಸಾರಂ ಸರ್ವೇಷಾಮಪಿ ದುರ್ಲಭಂ ॥೯೬॥

---

ಆ ಮೂಲಪ್ರಕೃತಿದೇವಿಯ ಸೇವೆಯಿಂದಲೇ ದುರ್ಗಾದೇವಿಯು ಸರ್ವಜ್ಞಳಾಗಿ ಸಮಸ್ತರ ಕಷ್ಟಗಳನ್ನೂ ನಾಶಮಾಡತಕ್ಕವಳಾಗಿ ಎಲ್ಲರಿಂದಲೂ ಹೊಗಳಿಸಿಕೊಳ್ಳತಕ್ಕವಳು. ರಾಧಾದೇವಿಯೂ ಕೃಷ್ಣನ ಎಡಭಾಗದಲ್ಲಿ ಹುಟ್ಟಿ ಕೃಷ್ಣನ ಪ್ರಾಣಕ್ಕೆ ಆಶ್ರಯಳಾಗಿ ಪ್ರೀತಿವಿಷಯದಲ್ಲಿ ಕೃಷ್ಣನ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಪಾತ್ರಳಾಗಿ ಎಲ್ಲ ದೇವಿಯರಿಗಿಂತಲೂ ಹೆಚ್ಚಾದ ರೂಪವನ್ನೂ ಸಂಪತ್ತನ್ನೂ ಮರ್ಯಾದೆಯನ್ನೂ ಹೊಂದಿ ಕೃಷ್ಣನ ಪತ್ನಿಯಾಗಿ ಅವನ ವಕ್ಷಸ್ಥಳದಲ್ಲಿಯೇ ವಾಸವಾಗಿರುವಳು. ॥೯೨-೯೩॥

ರಾಧಾದೇವಿಯು ಗೋಪಾಲಸುಂದರೀರೂಪನಾದ ಕೃಷ್ಣನನ್ನೇ ಪತಿಯನ್ನಾಗಿ ಪಡೆಯಬೇಕೆಂದು ಪೂರ್ವದಲ್ಲಿ ಶತಶೃಂಗವೆಂಬ ಪರ್ವತದಲ್ಲಿ ದೇವಮಾನದ ಸಾವಿರ ವರ್ಷ ತಪಸ್ಸು ಮಾಡಿ ಶಕ್ತಿದೇವಿಯ ಪ್ರಸನ್ನತೆಯನ್ನು ಪಡೆದಳು. ಕೃಷ್ಣನು ಚಂದ್ರನ ಕಾಂತಿಗೆ ಸಮಾನಳಾದ ಆ ರಾಧೆಯನ್ನು ನೋಡಿ ತನ್ನೆದೆಯಲ್ಲಿಟ್ಟುಕೊಂಡು ಅವಳ ತಪಸ್ಸಿನ ಕಷ್ಟದ ವಿಷಯದಲ್ಲಿ ದಯೆಯಿಂದ ಅತ್ತನು. ಮತ್ತು ಇತರರಿಗೆ ದೊರೆಯದ ಶ್ರೇಷ್ಠವಾದ ವರವನ್ನು ಅವಳಿಗೆ ಕೊಟ್ಟನು. ॥೯೪-೯೫-೯೬॥

ಮಮ ವಕ್ಷಃ ಸ್ಥಲೇ ತಿಷ್ಠ ಮಮ ಭಕ್ತಾ ಚ ಶಾಶ್ವತಾ ।
ಸೌಭಾಗ್ಯೇನ ಚ ಮಾನೇನ ಪ್ರೇಮ್ಣಾ ಚ ಗೌರವೇಣ ಚ ॥೯೭॥

ತ್ವಂ ಮೇ ಶ್ರೇಷ್ಠಾ ಚ ಜ್ಯೇಷ್ಠಾ ಚ ಪ್ರೇಯಸೀ ಸರ್ವಯೋಷಿತಾಂ ।
ವರಿಷ್ಠಾ ಚ ಗರಿಷ್ಠಾ ಚ ಸಂಸ್ತುತಾ ಪೂಜಿತಾ ಮಯಾ ॥೯೮॥

ಸತತಂ ತವ ಸಾಧ್ಯೋಽಹಂ ವಶ್ಯಶ್ಚ ಪ್ರಾಣವಲ್ಲಭೇ ।
ಇತ್ಯುಕ್ತ್ವಾ ಚ ಜಗನ್ನಾಥಶ್ಚಕಾರ ಲಲನಾಂ ತತಃ ॥೯೯॥

ಸಪತ್ನೀ ರಹಿತಾಂ ತಾಂ ಚ ಚಕಾರ ಪ್ರಾಣವಲ್ಲಭಾಂ ।
ಅನ್ಯಾ ಯಾ ಯಾಶ್ಚ ತಾ ದೇವ್ಯಃ ಪೂಜಿತಾಃ ಶಕ್ತಿಸೇವಯಾ॥೧೦೦॥

ತಪಸ್ತು ಯಾದೃಶಂ ಯಾಸಾಂ ತಾದೃಕ್ತಾದೃಕ್ಫಲಂ ಮುನೇ ।
ದಿವ್ಯಂ ವರ್ಷಸಹಸ್ರಂ ಚ ತಪಸ್ತಪ್ತ್ವಾ ಹಿಮಾಚಲೇ ॥೧೦೧॥

---

ಆ ವರವೇನೆಂದರೆ—ರಾಧೆಯೇ, ನೀನು ನನ್ನ ಭಕ್ತಳಾಗಿ ಯಾವಾಗಲೂ ನನ್ನ ಎದೆಯಲ್ಲಿಯೇ ವಾಸವಾಗಿರು. ಸಂಪತ್ತು, ಮರ್ಯಾದೆ, ಪ್ರೀತಿ, ಗೌರವಗಳಲ್ಲಿ ನೀನು ನನಗಿಂತಲೂ ಶ್ರೇಷ್ಠಳು. ಮತ್ತು ದೊಡ್ಡವಳು. ಇತರ ಸ್ತ್ರೀಯರಿಗಿಂತಲೂ ಅತ್ಯಂತ ಪ್ರೀತಿಪಾತ್ರಳೂ ದೊಡ್ಡವಳೂ ಶ್ರೇಷ್ಠಳೂ ಆದುದರಿಂದ ನಿನ್ನನ್ನು ನಾನು ಪೂಜಿಸಿ ಸ್ತೋತ್ರಮಾಡಿರುವೆನು. ಪ್ರಾಣಪ್ರಿಯಳೇ, ನಾನು ನಿನ್ನ ವಶನಾಗಿ ಯಾವಾಗಲೂ ನಿನ್ನ ಇಷ್ಟದಂತೆ ನಡೆಯುವೆನು. ಹೀಗೆಂದು ಹೇಳಿ ಕೃಷ್ಣನು ಬೇರೆ ಪತ್ನಿಯರನ್ನು ಅಪೇಕ್ಷಿಸದೆ ಆಕೆಯನ್ನೇ ಪ್ರಾಣಪ್ರಿಯಳನ್ನಾಗಿ ಮಾಡಿಕೊಂಡನು. ಹೀಗೆ ಪ್ರಕೃತಿಯ ಆರಾಧನೆಯೇ ಎಲ್ಲರ ಮಹಿಮೆಗೆ ಕಾರಣವಾಗಿದೆ. ||೯೭-೯-೮-೯೯||

ನಾರದನೇ, ಪಂಚ ಪ್ರಕೃತಿಯನ್ನು ಬಿಟ್ಟು ಪ್ರಕೃತಿಯ ಕಲಾಂಶದಿಂದ ಅವತರಿಸಿದ ಸಮಸ್ತ ದೇವಿಯರೂ ಶಕ್ತಿದೇವಿಯ ಸೇವೆಯಿಂದಲೇ ತಾವು ಮಾಡಿದ ತಪಸ್ಸಿಗೆ ತಕ್ಕ ಫಲವನ್ನು ಪಡೆದರು! ||೧೦೦||

ದುರ್ಗಾದೇವಿಯು ದೇವಮಾನದ ಒಂದು ಸಾವಿರ ವರ್ಷದವರೆಗೆ ಹಿಮವತ್ಪರ್ವತದಲ್ಲಿ ತಪಸ್ಸುಮಾಡಿ ಸರ್ವಪೂಜ್ಯಳಾದಳು. ಸರಸ್ವತಿಯು ಗಂಧಮಾದನ ಪರ್ವತದಲ್ಲಿ ಒಂದು ಲಕ್ಷ ದಿವ್ಯವರ್ಷ ತಪಸ್ಸುಮಾಡಿ ಸರ್ವವಂದ್ಯಳಾದಳು.

ದುರ್ಗಾ ಚ ತತ್ಪರಂ ಧ್ಯಾತ್ವಾ ಸರ್ವಪೂಜ್ಯಾ ಬಭೂವ ಹ ।
ಸರಸ್ವತೀ ತಪಸ್ತಪ್ತ್ವಾ ಪರ್ವತೇ ಗಂಧಮಾದನೇ ॥೧೦೨॥

ಲಕ್ಷವರ್ಷಂ ಚ ದಿವ್ಯಂ ಚ ಸರ್ವವಿದ್ಯಾ ಬಭೂವ ಸಾ ।
ಲಕ್ಷ್ಮೀರ್ಯುಗಶತಂ ದಿವ್ಯಂ ತಪಸ್ತಪ್ತ್ವಾ ಚ ಪುಷ್ಕರೇ ॥೧೦೩॥

ಸರ್ವಸಂಪತ್ಪ್ರದಾತ್ರೀ ಚ ಜಾತಾ ದೇವೀ ನಿಷೇವಣಾತ್ ।
ಸಾವಿತ್ರೀ ಮಲಯೇ ತಪ್ತ್ವಾ ಪೂಜ್ಯಾ ವಂದ್ಯಾ ಬಭೂವ ಸಾ ॥೧೦೪॥

ಷಷ್ಟಿವರ್ಷಸಹಸ್ರಂ ಚ ದಿವ್ಯಂ ಧ್ಯಾತ್ವಾ ಚ ತತ್ಪರಂ ।
ಶತಮನ್ವಂತರಂ ತಪ್ತಂ ಶಂಕರೇಣ ಪುರಾ ವಿಭೋ ॥೧೦೫॥

ಶತಮನ್ವಂತರಂ ಚೈವ ಬ್ರಹ್ಮಾ ಶಕ್ತಿಂ ಜಜಾಪ ಹ ।
ಶತಮನ್ವಂತರಂ ವಿಷ್ಣುಃ ತಪ್ತ್ವಾ ಪಾತಾ ಬಭೂವ ಹ ॥೧೦೬॥

ದಶಮನ್ವಂತರಂ ತಪ್ತ್ವಾ ಶ್ರೀಕೃಷ್ಣಃ ಪರಮಂ ತಪಃ ।
ಗೋಲೋಕಂ ಪ್ರಾಪ್ತವಾನ್ ದಿವ್ಯಂ ಮೋದತೇಽದ್ಯಾಪಿ ಯತ್ರ ಹಿ ॥೧೦೭॥

---

ಲಕ್ಷ್ಮಿಯು ಪುಷ್ಕರಕ್ಷೇತ್ರದಲ್ಲಿ ದೇವಮಾನದ ನೂರು ಯುಗಗಳ ವರೆಗೆ ತಪಸ್ಸು ಮಾಡಿ ಮೂಲಪ್ರಕೃತಿಯ ಸೇವೆಯನ್ನು ಮಾಡಿ ಸಕಲ ಸಂಪತ್ತುಗಳನ್ನೂ ಕೊಡುವ ಶಕ್ತಿಯನ್ನು ಪಡೆದಳು. ಸಾವಿತ್ರೀದೇವಿಯು ಅರವತ್ತುಸಾವಿರ ದಿವ್ಯವರ್ಷದವರೆಗೆ ಮಲಯಪರ್ವತದಲ್ಲಿ ತಪಸ್ಸುಮಾಡಿ ಮೂಲಪ್ರಕೃತಿಯ ಪಾದವನ್ನು ಧ್ಯಾನಿಸಿ ಎಲ್ಲರಿಗೂ ಪೂಜ್ಯಳಾಗಿಯೂ ನಮಸ್ಕಾರಕ್ಕೆ ಯೋಗ್ಯಳಾಗಿಯೂ ಆದಳು. ||೧೦೧-೧೦೨-೧೦೩-೧೦೪||

ಒಂದುನೂರು ಮನ್ವಂತರಗಳವರೆಗೆ ಮೂಲಪ್ರಕೃತಿಯನ್ನು ಕುರಿತು ತಪಸ್ಸು ಮಾಡಿ ಬ್ರಹ್ಮ ವಿಷ್ಣು ಮಹೇಶ್ವರರು ಸೃಷ್ಟಿ ಸ್ಥಿತಿ ಲಯ ಸಾಮರ್ಥ್ಯವನ್ನು ಪಡೆದರು. ||೧೦೫-೧೦೬||

ಹತ್ತು ಮನ್ವಂತರಗಳವರೆಗೆ ಶ್ರೀಕೃಷ್ಣನು ದೇವಿಯನ್ನು ಕುರಿತು ತಪಸ್ಸು ಮಾಡಿ ಶ್ರೇಷ್ಠವಾದ ಗೋಲೋಕವನ್ನು ಪಡೆದು ಸಂತೋಷದಿಂದಿರುವನು. ಧರ್ಮ

ದಶಮನ್ವಂತರಂ ಧರ್ಮಸ್ತಪಸ್ತ್ವಾ ಚ ಭಕ್ತಿಸಂಯುತಃ ।
ಸರ್ವಪ್ರಾಣಃ ಸರ್ವಪೂಜ್ಯಃ ಸರ್ವಾಧಾರೋ ಬಭೂವ ಸಃ ॥೧೦೮॥

ಏವಂ ದೇವ್ಯಾಶ್ಚ ತಪಸಾ ಸರ್ವೇ ದೇವಾಶ್ಚ ಪೂಜಿತಾಃ ।
ಮುನಯೋ ಮನವೋ ಭೂಪಾ ಬ್ರಾಹ್ಮಣಾಶ್ಚೈವ ಪೂಜಿತಾಃ ॥೧೦೯॥

ಏವಂ ತೇ ಕಥಿತಂ ಸರ್ವಂ ಪುರಾಣಂ ಸ ಯಥಾಗಮಂ ।
ಗುರುವಕ್ತ್ರಾದ್ಯಥಾಜ್ಞಾತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೧೧೦॥

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ ಅಷ್ಟಮೋಽಧ್ಯಾಯಃ

---

ದೇವನೂ ಕೂಡ ಹತ್ತು ಮನ್ವಂತರಗಳವರೆಗೆ ತಪಸ್ಸುಮಾಡಿ ಸರ್ವಪೂಜ್ಯನಾಗಿಯೂ ಸಮಸ್ತಕ್ಕೂ ಆಶ್ರಯಸ್ವರೂಪನಾಗಿಯೂ ಸಕಲರಿಗೂ ಪ್ರೀತಿಪಾತ್ರನಾಗಿಯೂ ಇರುವನು. ||೧೦೭-೧೦೮||

ಹೀಗೆ ದೇವಿಯನ್ನು ಕುರಿತು ತಪಸ್ಸುಮಾಡಿ ಸಮಸ್ತದೇವತೆಗಳೂ ಪೂಜ್ಯರಾದರು. ಮುನಿಗಳೂ ಮನುಗಳೂ ರಾಜರೂ ಬ್ರಾಹ್ಮಣರೂ ಕೂಡ ದೇವಿಯ ತಪಸ್ಸಿನಿಂದಲೇ ಪೂಜ್ಯತೆಯನ್ನು ಪಡೆದಿರುವರು. ಎಲೈ ನಾರದನೇ, ಈ ರೀತಿಯಾಗಿ ವೇದವನ್ನನುಸರಿಸಿದ ಪುರಾಣಕಥೆಯನ್ನು, ಗುರುವಾದ ಧರ್ಮದೇವನಿಂದ ಹೇಗೆ ಕೇಳಿದನೋ ಹಾಗೆಯೇ ನಿನಗೆ ಹೇಳಿರುವೆನು. ಮತ್ತೆ ನನ್ನನ್ನು ಏನನ್ನು ಕೇಳಬೇಕೆಂದು ಅಪೇಕ್ಷಿಸುವೆ ? ಹೇಳು ಎಂದನು. ||೧೦೯-೧೧೦||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ನವಮೋಽಧ್ಯಾಯಃ ||

### ಒಂಬತ್ತನೆಯ ಅಧ್ಯಾಯವು

|| ನಾರದ ಉವಾಚ ||

**ದೇವ್ಯಾ ನಿಮೇಷಮಾತ್ರೇಣ ಬ್ರಹ್ಮಣಃ ಪಾತ ಏವ ಚ ।**
**ತಸ್ಯ ಪಾತಃ ಪ್ರಾಕೃತಿಕಃ ಪ್ರಲಯಃ ಪರಿಕೀರ್ತಿತಃ ॥೧॥**

**ಪ್ರಲಯೇ ಪ್ರಾಕೃತೇ ಚೋಕ್ತಾ ತತ್ರಾಽದೃಷ್ಟಾ ವಸುಂಧರಾ ।**
**ಜಲಪ್ಲುತಾನಿ ವಿಶ್ವಾನಿ ಸರ್ವೇ ಲೀನಾಃ ಪರಾತ್ಮನಿ ॥೨॥**

**ವಸುಂಧರಾ ತಿರೋಭೂತಾ ಕುತ್ರ ವಾ ಸಾ ಚ ತಿಷ್ಠತಿ ।**
**ಸೃಷ್ಟೇರ್ವಿಧಾನಸಮಯೇ ಸಾಽಽವಿರ್ಭೂತಾ ಕಥಂ ಪುನಃ ॥೩॥**

**ಕಥಂ ಬಭೂವ ಸಾ ಧನ್ಯಾ ಮಾನ್ಯಾ ಸರ್ವಾಶ್ರಯಾ ಜಯಾ ।**
**ತಸ್ಯಾಶ್ಚ ಜನ್ಮಕಥನಂ ವದ ಮಂಗಳಕಾರಣಂ ॥೪॥**

---

ದೇವಿಯ ಒಂದು ನಿಮಿಷಕಾಲದಲ್ಲಿ ಬ್ರಹ್ಮನ ಆಯುಸ್ಸು ಮುಗಿಯುವುದು. ಆಗಲೇ ಪ್ರಾಕೃತಪ್ರಲಯವು. ಆ ಕಾಲದಲ್ಲಿ ಭೂಮಿಯು ಅಗೋಚರವಾಗುವುದು. ಸಮಸ್ತ ಪ್ರಪಂಚವೂ ನೀರಿನಲ್ಲಿ ಮುಳುಗಿ ಪರಮಾತ್ಮನಲ್ಲಿ ಲೀನವಾಗುವುದು ಎಂದು ಹಿಂದೆ ಹೇಳಿದೆ. ಮರೆಯಾದ ಭೂಮಿಯು ಎಲ್ಲಿರುವುದು ? ಪುನಃ ಸೃಷ್ಟಿಕಾಲದಲ್ಲಿ ಹೇಗೆ ವ್ಯಕ್ತವಾಗುವುದು ? ಆ ಭೂಮಿಯು ಹೇಗೆ ಸಮಸ್ತಕ್ಕೂ ಆಶ್ರಯವಾಗಿ ಪೂಜ್ಯವಾಗಿ ಗೌರವಕ್ಕೆ ಪಾತ್ರವಾಗಿ ಆಯಿತೋ ಆ ಮಂಗಳಕರವಾದ ಭೂದೇವಿಯ ಉತ್ಪತ್ತಿಯ ಕಥೆಯನ್ನು ಹೇಳಬೇಕು ಎಂದು ನಾರದನು ಪ್ರಶ್ನೆ ಮಾಡಿದನು. ||೧-೨-೩-೪||

|| ಶ್ರೀನಾರಾಯಣ ಉವಾಚ ||

ಸರ್ವಾದಿಸೃಷ್ಟೌ ಸರ್ವೇಷಾಂ ಜನ್ಮ ದೇವ್ಯಾ ಇತಿ ಶ್ರುತಿಃ ।
ಆವಿರ್ಭಾವಸ್ತಿರೋಭಾವಃ ಸರ್ವೇಷು ಪ್ರಲಯೇಷು ಚ ||೫||

ಶ್ರೂಯತಾಂ ವಸುಧಾಜನ್ಮ ಸರ್ವಮಂಗಳಕಾರಣಂ ।
ವಿಘ್ನನಿಘ್ನಕರಂ ಪಾಪನಾಶನಂ ಪುಣ್ಯವರ್ಧನಂ ||೬||

ಅಹೋ ಕೇಚಿದ್ವದಂತೀತಿ ಮಧುಕೈಟಭಮೇದಸಾ ।
ಬಭೂವ ವಸುಧಾ ಧನ್ಯಾ ತದ್ವಿರುದ್ಧಮತಃ ಶೃಣು ||೭||

ಊಚತುಸ್ತೌ ಪುರಾ ವಿಷ್ಣುಂ ತುಷ್ಟೌ ಯುದ್ಧೇನ ತೇಜಸಾ ।
ಆವಾಂ ವಧೋ ನ ಯತ್ರೋರ್ವೀ ಪಾಥಸಾ ಸಂವೃತೇತಿ ಚ ||೮||

ತಯೋರ್ಜೀವನ ಕಾಲೇನ ಪ್ರತ್ಯಕ್ಷಾ ಸಾಽಭವತ್ಸ್ಫುಟಂ ।
ತತೋ ಬಭೂವ ಮೇದಶ್ಚ ಮರಣಾನಂತರಂ ತಯೋಃ ||೯||
ಮೇದಿನೀತಿ ಚ ವಿಖ್ಯಾತೇತ್ಯುಕ್ತಾ ಮೇತನ್ಮತಂ ಶೃಣು ।

---

ಎಲ್ಲಕ್ಕೂ ಆದಿಸೃಷ್ಟಿಯಲ್ಲಿಯೂ ಸಮಸ್ತರ ಉತ್ಪತ್ತಿಯೂ ದೇವಿಯ ದೆಸೆಯಿಂದಲೇ ಎಂದೂ, ಎಲ್ಲ ಪ್ರಲಯದಲ್ಲೂ ಆ ದೇವಿಯಲ್ಲಿಯೇ ಎಲ್ಲವೂ ಲೀನವಾಗುವುದೆಂದೂ ವೇದದಲ್ಲಿ ಹೇಳಿರುವುದು. ಪಾಪನಾಶಕವಾದ ವಿಘ್ನವನ್ನು ನಾಶಮಾಡುವ ಪುಣ್ಯವನ್ನು ಹೆಚ್ಚಿಸುವ ಮಂಗಳಕರವಾದ ಭೂದೇವಿಯ ಉತ್ಪತ್ತಿಯ ವಿಷಯವನ್ನು ಹೇಳುವೆನು ಕೇಳು. ||೫-೬||

ಕೆಲವರು ಮಧುಕೈಟಭರ ಮೆದಸ್ಸಿನಿಂದ ಮೇದಿನಿ (ಭೂಮಿ) ಯಾಯಿತೆಂದು ಹೇಳುವರು. ಇದು ವಿರುದ್ಧವಾದ ಮಾತು. ಆ ಮಧುಕೈಟಭರು ಪೂರ್ವದಲ್ಲಿ ವಿಷ್ಣುವನ್ನು ಕುರಿತು ಅವನ ತೇಜಸ್ಸಿನಿಂದಲೂ ಯುದ್ಧದಿಂದಲೂ ಸಂತುಷ್ಟರಾಗಿ ಅವನಿಗೆ ವರವನ್ನು ಕೊಡುತ್ತಾ, ಎಲ್ಲಿ ಭೂಮಿಯು ನೀರಿನಿಂದ ಮುಚ್ಚಿರುವುದೋ ಅಲ್ಲಿ ನಮ್ಮ ನಾಶವಿಲ್ಲ. ಎಂದು ಹೇಳಿದರು. ಇದರಿಂದ ಅವರು ಬದುಕಿದ್ದಾಗ ಭೂಮಿಯು ಚೆನ್ನಾಗಿ ಕಾಣಿಸುತ್ತಿರಲಿಲ್ಲ. ವಿಷ್ಣುವು ತನ್ನ ತೊಡೆಯಮೇಲೆ ಅವರನ್ನು ಕೊಂದ ಮೇಲೆ ಅವರ ಮೇದಸ್ಸು ನೀರಿನಲ್ಲಿ ತೇಲುತ್ತಿದ್ದು ಸೂರ್ಯ

ಜಲಧೌತಾ ಕೃತಾಪೂರ್ವಂ ವರ್ಧಿತಾ ಮೇದಸಾ ಯತಃ ॥೧೦॥

ಕಥಯಾಮಿ ತೇ ತಜ್ಜನ್ಮ ಸಾರ್ಥಕಂ ಸರ್ವಮಂಗಳಂ ।
ಪುರಾ ಶ್ರುತಂ ಯಚ್ಛ್ರುತ್ಯುಕ್ತಂ ಧರ್ಮವಕ್ತ್ರಾಚ್ಚ ಪುಷ್ಕರೇ ॥೧೧॥

ಮಹಾವಿರಾಟ್ಛರೀರಸ್ಯ ಜಲಸ್ಥಸ್ಯ ಚಿರಂ ಸ್ಫುಟಂ ।
ಮನೋ ಬಭೂವ ಕಾಲೇನ ಸರ್ವಾಂಗಂ ವ್ಯಾಪಕಂ ಧ್ರುವಂ ॥೧೨॥

ತಚ್ಚ ಪ್ರವಿಷ್ಟಂ ಸರ್ವೇಷಾಂ ತಲ್ಲೋಮ್ನಾಂ ವಿವರೇಷು ಚ ।
ಕಾಲೇನ ಮಹತಾ ಪಶ್ಚಾದ್ಬಭೂವ ವಸುಧಾ ಮುನೇ ॥೧೩॥

ಪ್ರತ್ಯೇಕಂ ಪ್ರತಿಲೋಮ್ನಾಂ ಚ ಕೂಪೇಷು ಸಂಸ್ಥಿತಾ ಸದಾ ।
ಆವಿರ್ಭೂತಾ ತಿರೋಭೂತಾ ಸ ಜಲಾ ಚ ಪುನಃ ಪುನಃ ॥೧೪॥

ಆವಿರ್ಭೂತಾ ಸೃಷ್ಟಿಕಾಲೇ ತಜ್ಜಲೋಪರ್ಯುಪಸ್ಥಿತಾ ।
ಪ್ರಲಯೇ ಚ ತಿರೋಭೂತಾ ಜಲಸ್ಯಾಭ್ಯಂತರೇ ಸ್ಥಿತಾ ॥೧೫॥

---

ಕಿರಣದಿಂದ ಒಣಗಿ ಗಟ್ಟಿಯಾಗಿ ಮೇದಿನಿಯಾಯಿತು ಎಂದು ಹೇಳುವರು. ॥೭-೮-೯॥

ಮೊದಲು ಭೂಮಿಯು ನೀರಿನಲ್ಲಿ ಮುಳುಗಿದ್ದು ವರಾಹಾವತಾರದಲ್ಲಿ ನೀರಿನಿಂದ ಭೂಮಿಯನ್ನೆತ್ತಿದ ಮೇಲೆ ಮಧುಕೈಟಭರ ಮೇದಸ್ಸಿನಿಂದ ತುಂಬಿದುದರಿಂದ ಮೇದಿನಿಯಾಯಿತೆಂದು ಹೇಳುವರು. ॥೧೦॥

ನಾನು ಪೂರ್ವದಲ್ಲಿ ಪುಷ್ಕರಕ್ಷೇತ್ರದಲ್ಲಿ ನಮ್ಮ ತಂದೆಯಾದ ಧರ್ಮದೇವನಿಂದ ಕೇಳಿದ ಮಂಗಳಕರವಾದ ಸಾರ್ಥಕವಾದ ಭೂಮಿಯ ಉತ್ಪತ್ತಿ ಕಥೆಯನ್ನು ಹೇಳುವೆನು ಕೇಳು. ॥೧೧॥

ಬಹಳಕಾಲ ನೀರಿನಲ್ಲಿದ್ದ ಮಹಾವಿರಾಟ್ಪುರುಷನ ಮನಸ್ಸು ಅವನ ಸಮಸ್ತ ಅಂಗಗಳಲ್ಲಿಯೂ ವ್ಯಾಪಿಸಿ ಅವನ ರೋಮಕೂಪಗಳಲ್ಲಿಯೂ ಪ್ರವೇಶಿಸಿತು. ಬಹಳ ಕಾಲದ ಮೇಲೆ ಪಂಚೀಕರಣಸಮಯದಲ್ಲಿ ಭೂಮಿಯಾಗಿ ಪ್ರತಿ ರೋಮಗಳಲ್ಲಿಯೂ ನೀರಿನೊಳಗೆ ಇದ್ದಿತು. ಸೃಷ್ಟಿಕಾಲದಲ್ಲಿ ಆ ಭೂಮಿಯು ನೀರಿನ ಮೇಲೆ ಕಾಣುತ್ತಿರುವುದು. ಪ್ರಲಯದಲ್ಲಿ ಆ ರೋಮಕೂಪಗಳಲ್ಲಿರುವ ನೀರಿನಲ್ಲಿಯೇ ಲೀನವಾಗಿರುವುದು. ॥೧೨-೧೩-೧೪-೧೫॥

ಪ್ರತಿವಿಶ್ವೇಷು ವಸುಧಾ ಶೈಲಕಾನನಸಂಯುತಾ ।
ಸಪ್ತಸಾಗರಸಂಯುಕ್ತಾ ಸಪ್ತದ್ವೀಪಸಮನ್ವಿತಾ ॥೧೬॥

ಹೇಮಾದ್ರಿಮೇರು ಸಂಯುಕ್ತಾ ಗ್ರಹಚಂದ್ರಾರ್ಕಸಂಯುತಾ ।
ಬ್ರಹ್ಮವಿಷ್ಣುಶಿವಾದ್ಯೈಶ್ಚ ಸುರೈರ್ಲೋಕೈಸ್ತದಾಜ್ಞಯಾ ॥೧೭॥

ಪುಣ್ಯತೀರ್ಥಸಮಾಯುಕ್ತಾ ಪುಣ್ಯಭಾರತಸಂಯುತಾ ।
ಕಾಂಚನೀಭೂಮಿಸಂಯುಕ್ತಾ ಸಪ್ತಸ್ವರ್ಗಸಮನ್ವಿತಾ ॥೧೮॥

ಪಾತಾಲಸಪ್ತಂ ತದಧಸ್ತದೂರ್ಧ್ವಂ ಬ್ರಹ್ಮಲೋಕತಃ ।
ಧ್ರುವಲೋಕಶ್ಚ ತತ್ರೈವ ಸರ್ವಂ ವಿಶ್ವಂ ಚ ತತ್ರ ವೈ ॥೧೯॥

ಏವಂ ಸರ್ವಾಣಿ ವಿಶ್ವಾನಿ ಪೃಥಿವ್ಯಾಂ ನಿರ್ಮಿತಾನಿ ಚ ।
ನಶ್ವರಾಣಿ ಚ ವಿಶ್ವಾನಿ ಸರ್ವಾಣಿ ಕೃತ್ರಿಮಾಣಿ ವೈ ॥೨೦॥

ಪ್ರಲಯೇ ಪ್ರಾಕೃತೇ ಚೈವ ಬ್ರಹ್ಮಣಶ್ಚ ನಿಪಾತನೇ ।
ಮಹಾವಿರಾಡಾದಿಸೃಷ್ಟೌ ಸೃಷ್ಟಃ ಕೃಷ್ಣೇನ ಚಾತ್ಮನಾ ॥೨೧॥

ನಿತ್ಯಾ ಚ ಸ್ಥಿತಿಪ್ರಲಯೌ ಕಾಷ್ಠಾ ಕಾಲೇಶ್ವರೈಃ ಸಹ ।
ನಿತ್ಯಾಧಿಷ್ಠಾತೃದೇವೀ ಸಾ ವಾರಾಹೇ ಪೂಜಿತಾ ಸುರೈಃ ॥೨೨॥

---

ಪ್ರತಿಯೊಂದು ಪ್ರಪಂಚದಲ್ಲಿಯೂ ಭೂಮಿಯು ಪರ್ವತಗಳು ಕಾಡು ಸಪ್ತಸಮುದ್ರಗಳು ಸಪ್ತದ್ವೀಪಗಳು ಸುವರ್ಣಯುಕ್ತವಾದ ಮೇರುಪರ್ವತ ಗ್ರಹಗಳು ಸೂರ್ಯಚಂದ್ರರು ಬ್ರಹ್ಮ ವಿಷ್ಣು ಶಿವನೇ ಮೊದಲಾದ ದೇವತೆಗಳು ಪುಣ್ಯತೀರ್ಥಗಳು ಪುಣ್ಯಕರವಾದ ಭರತಖಂಡದ ಏಳು ಸ್ವರ್ಗಗಳು ಏಳು ಪಾತಾಳಲೋಕಗಳು ಬ್ರಹ್ಮಲೋಕ ಧ್ರುವಲೋಕ ಇವುಗಳಿಂದ ಕೂಡಿರುವುದು. ||೧೬-೧೭-೧೮-೧೯||

ಈ ರೀತಿಯಾಗಿ ಭೂಮಿಯಲ್ಲಿ ನಿರ್ಮಿಸಿದ ಸಮಸ್ತ ಪ್ರಪಂಚವೂ ಪ್ರಾಕೃತ ಪ್ರಳಯದಲ್ಲಿ ನಾಶವಾಗತಕ್ಕುದು ಮತ್ತು ಕೃತ್ರಿಮವಾದುದು. ಎಂದರೆ ಮಿಥ್ಯಾಭೂತವಾದುದು. ಇದು ಮಹಾವಿರಾಟ್ಪುರುಷನ ಮೊದಲನೆಯ ಸೃಷ್ಟಿಯಲ್ಲಿ ಕೃಷ್ಣನು ಸೃಷ್ಟಿಮಾಡಿದುದು. ||೨೦-೨೧||

ಪ್ರಪಂಚದ ಸ್ಥಿತಿ ಮತ್ತು ಪ್ರಳಯಗಳು ಪ್ರವಾಹರೂಪವಾದ ದಿಕ್ಕು ಕಾಲ ಈಶ್ವರರೊಡನೆ ಸತ್ಯವಾದುವು. ಪರಮಾರ್ಥ ನಿತ್ಯವಲ್ಲ. ಪ್ರವಾಹರೂಪವಾಗಿಯೇ

ಮುನಿಭಿರ್ಮನುಭಿರ್ವಿಪ್ರೈರ್ಗಂಧರ್ವಾದಿಭಿರೇವ ಚ ।
ವಿಷ್ಣೋರ್ವರಾಹರೂಪಸ್ಯ ಪತ್ನೀ ಸಾ ಶ್ರುತಿಸಂಮತಾ ॥೨೩॥

ತತ್ಪುತ್ರೋ ಮಂಗಲೋ ಜ್ಞೇಯೋ ಘಟೇಶೋ ಮಂಗಳಾತ್ಮಜಃ ।
ಪೂಜಿತಾ ಕೇನ ರೂಪೇಣ ವಾರಾಹೇ ಚ ಸುರೈರ್ಮಹೀ ॥೨೪॥

ವಾರಾಹೇ ಚೈವ ವಾರಾಹೀ ಸರ್ವೈಃ ಸರ್ವಾಶ್ರಯಾ ಸತೀ ।
ಮೂಲಪ್ರಕೃತಿಸಂಭೂತಾ ಪಂಚೀಕರಣಮಾರ್ಗತಃ ॥೨೫॥

ತಸ್ಯಾಃ ಪೂಜಾವಿಧಾನಂ ಚಾಽಪ್ಯಧಶ್ಚೋರ್ಧ್ವಮನೇಕಶಃ ।
ಮಂಗಳಂ ಮಂಗಳಸ್ಯಾಪಿ ಜನ್ಮ ವ್ಯಾಸಂ ವದ ಪ್ರಭೋ ॥೨೬॥

॥ ನಾರಾಯಣ ಉವಾಚ ॥

ವಾರಾಹೀ ಚ ವರಾಹಶ್ಚ ಬ್ರಹ್ಮಣಾ ಸಂಸ್ತುತಃ ಪುರಾ ।
ಉದ್ದಧಾರ ಮಹೀಂ ಹಿತ್ವಾ ಹಿರಣ್ಯಾಕ್ಷಂ ರಸಾತಲಾತ್ ॥೨೭॥

---

ನಿತ್ಯವಾದ ಭೂಮಿಗೆ ಆಧಾರವಾದ ಭೂದೇವಿಯ ಮೂರ್ತಿಯನ್ನು ವರಾಹಕಲ್ಪದಲ್ಲಿ ದೇವತೆಗಳು ಮುನಿಗಳು ಬ್ರಾಹ್ಮಣರು ಗಂಧರ್ವರು ಮೊದಲಾದವರು ಪೂಜಿಸಿದರು. ಆ ಭೂದೇವಿಯು ವರಾಹಾವತಾರ ಮಾಡಿದ ವಿಷ್ಣುವಿಗೆ ವೇದಸಮ್ಮತವಾದ ಪತ್ನಿಯಾಗಿರುವಳು. ॥೨೨-೨೩॥

ವರಾಹರೂಪನಾದ ವಿಷ್ಣುವಿನಿಂದ ಭೂದೇವಿಯಗರ್ಭದಲ್ಲಿ ಮಂಗಳ (ಅಂಗಾರಕ) ನು ಹುಟ್ಟಿದನು. ಅವನ ಮಗ ಘಟೇಶನು. ಮೂಲಪ್ರಕೃತಿಯಿಂದ ಪಂಚೀಕರಣಮಾರ್ಗದಲ್ಲಿ ಹುಟ್ಟಿದ ವರಾಹರೂಪವಾದ ವಿಷ್ಣುವಿನ ಪತ್ನಿಯಾದ, ಸಮಸ್ತರಿಗೂ ಆಶ್ರಯಳಾದ ವಾರಾಹೀದೇವಿಯನ್ನು ಸ್ವರ್ಗ ಮರ್ತ್ಯ ಪಾತಾಳಲೋಕಗಳಲ್ಲಿ ದೇವಾದಿಗಳು ಯಾವ ರೂಪದಿಂದ ಪೂಜಿಸಿದರು ? ಆ ಪೂಜಾವಿಧಾನವನ್ನೂ ಮಂಗಳಕರವಾದ ಮಂಗಳನ ಉತ್ಪತ್ತಿಯನ್ನೂ ವಿಸ್ತಾರವಾಗಿ ಹೇಳಬೇಕು. ಎಂದು ನಾರದನು ಹೇಳಿದನು. ॥೨೪-೨೫-೨೬॥

ನಾರಾಯಣನು ಹೇಳಿದನು—ವರಾಹಕಲ್ಪದಲ್ಲಿ ಬ್ರಹ್ಮನು ವರಾಹಮೂರ್ತಿಯನ್ನು ಸ್ತೋತ್ರಮಾಡಿದನು. ಆ ವರಾಹಮೂರ್ತಿಯು ಹಿರಣ್ಯಾಕ್ಷನನ್ನು ಕೊಂದು ಭೂಮಿಯನ್ನು ಪಾತಾಳದಿಂದ ಮೇಲಕ್ಕೆ ಎತ್ತಿದನು. ಆಮೇಲೆ ಆ ಭೂಮಿಯನ್ನು

**ಜಲೇ ತಾಂ ಸ್ಥಾಪಯಾಮಾಸ ಪದ್ಮಪತ್ರಂ ಯಥಾ ಹ್ರದೇ ।**
**ತತ್ರೈವ ನಿರ್ಮಮೇ ಬ್ರಹ್ಮಾ ವಿಶ್ವಂ ಸರ್ವಂ ಮನೋಹರಂ ॥೨೮॥**

**ದೃಷ್ಟ್ವಾ ತದಧಿದೇವೀಂ ಚ ಸಕಾಮಾಂ ಕಾಮುಕೋ ಹರಿಃ ।**
**ವರಾಹರೂಪೀ ಭಗವಾನ್ ಕೋಟಿಸೂರ್ಯಸಮಪ್ರಭಃ ॥೨೯॥**

**ಕೃತ್ವಾ ರತಿಕಲಾಂ ಸರ್ವಾಂ ಮೂರ್ತಿಂ ಚ ಸುಮನೋಹರಾಂ ।**
**ಕ್ರೀಡಾಂ ಚಕಾರ ರಹಸಿ ದಿವ್ಯವರ್ಷಮಹರ್ನಿಶಂ ॥೩೦॥**

**ಸುಖಸಂಭೋಗಸಂಸ್ಪರ್ಶಾನ್ಮೂರ್ಛಾಂ ಸಂಪ್ರಾಪ ಸುಂದರೀ ।**
**ವಿದಗ್ಧಾಯಾ ವಿದಗ್ಧೇನ ಸಂಗಮೋಽತಿಸುಖಪ್ರದಃ ॥೩೦॥**

**ವಿಷ್ಣುಸ್ತದಂಗ ಸಂಶ್ಲೇಷಾದ್ಬುಬುಧೇ ನ ದಿವಾನಿಶಂ ।**
**ವರ್ಷಾಂತೇ ಚೇತನಾಂ ಪ್ರಾಪ್ಯ ಕಾಮೀ ತತ್ಯಾಜ ಕಾಮುಕೀಂ ॥೩೨॥**

**ಪೂರ್ವರೂಪಂ ವರಾಹಂ ಚ ದಧಾರ ಸ ಚ ಲೀಲಯಾ ।**
**ಪೂಜಾಂ ಚಕಾರ ತಾಂ ದೇವೀಂ ಧ್ಯಾತ್ವಾ ಚ ಧರಣೀಂ ಸತೀಂ ॥೩೩॥**

---

ನೀರಿನ ಮಡುವಿನಲ್ಲಿ ಕಮಲದ ಎಲೆಯು ಇರುವಂತೆ ಸಮುದ್ರದಲ್ಲಿ ಸ್ಥಾಪಿಸಿದನು. ಅಲ್ಲಿಯೇ ಬ್ರಹ್ಮನು ಮನೋಹರವಾದ ಪ್ರಪಂಚವನ್ನು ಸೃಷ್ಟಿಮಾಡಿದನು. ॥೨೭-೨೮॥

ವರಾಹ ರೂಪಿಯಾದ ಕೋಟಿಸೂರ್ಯಪ್ರಕಾಶದಂತೆ ಹೊಳೆಯುವ ಹರಿಯು ಆ ಭೂಮಿಗೆ ಅಭಿಮಾನಿದೇವತೆಯಾದ ದೇವಿಯನ್ನು ನೋಡಿ ಕಾಮಾಸಕ್ತಳಾಗಿರುವುದನ್ನು ತಿಳಿದು ತಾನೂ ಆ ದೇವಿಯನ್ನು ಕಾಮಿಸುತ್ತಾ ರತಿಯೋಗ್ಯವಾದ ಸುಂದರವಾದ ಮೂರ್ತಿರೂಪದಿಂದ ದೇವಮಾನದ ಒಂದುನೂರುವರ್ಷದವರೆಗೆ ಹಗಲೂ ರಾತ್ರಿಯೂ ಗೋಪ್ಯವಾಗಿ ಆ ದೇವಿಯೊಡನೆ ಕ್ರೀಡಿಸಿದನು. ॥೨೯-೩೦॥

ಸುಂದರಿಯಾದ ಆ ವಾರಾಹೀ ದೇವಿಯು ಸುಖಕರವಾದ ಸಂಭೋಗದಿಂದ ಮೂರ್ಛೆಯನ್ನು ಹೊಂದಿದಳು ! ಸ್ತ್ರೀಪುರುಷರಿಬ್ಬರೂ ಕಾಮಕಲಾವಿಶಾರದರಾದರೆ ಅವರ ಕೂಟವು ವಿಶೇಷ ಸುಖವನ್ನುಂಟುಮಾಡುವುದು. ವಿಷ್ಣುವು ಆ ದೇವಿಯ ಅಂಗಸ್ಪರ್ಶದಿಂದ ಹಗಲೂ ರಾತ್ರಿಯೂ ಎಚ್ಚರವನ್ನು ಹೊಂದಲಿಲ್ಲ. ಒಂದು ವರ್ಷದ ಮೇಲೆ ಜ್ಞಾನವನ್ನು ಪಡೆದು ದೇವಿಯನ್ನು ಬಿಟ್ಟನು. ॥೩೧-೩೨॥

ಬಳಿಕ ಆ ವಿಷ್ಣುವು ತನ್ನ ಹಿಂದಿನ ವರಾಹರೂಪವನ್ನು ಹೊಂದಿ ಆ ಭೂದೇವಿಯನ್ನು ಧ್ಯಾನಿಸಿ ಧೂಪ, ದೀಪ, ನೈವೇದ್ಯ, ಮಂಗಳದ್ರವ್ಯಗಳು, ಗಂಧ,

ಧೂಪೈರ್ದೀಪೈಶ್ಚ ನೈವೇದ್ಯೈಃ ಸಿಂಧೂರೈರನುಲೇಪನೈಃ ।
ವಸ್ತ್ರೈಃ ಪುಷ್ಪೈಶ್ಚ ಬಲಿಭಿಃ ಸಂಪೂಜ್ಯೋವಾಚ ತಾಂ ಹರಿಃ ॥೩೪॥

॥ ಶ್ರೀ ಭಗವಾನುವಾಚ ॥

ಸರ್ವಾಧಾರಾ ಭವ ಶುಭೇ ಸರ್ವೈಃ ಸಂಪೂಜಿತಾ ಸುಖಂ ।
ಮುನಿಭಿರ್ಮನುಭಿರ್ದೇವೈಃ ಸಿದ್ಧೈಶ್ಚ ದಾನವಾದಿಭಿಃ ॥೩೫॥

ಅಂಬುವಾಚೀ ತ್ಯಾಗದಿನೇ ಗೃಹಾರಂಭೇ ಪ್ರವೇಶನೇ ।
ವಾಪೀತಡಾಗಾರಂಭೇ ಚ ಗೃಹೇ ಚ ಕೃಷಿಕರ್ಮಣಿ ॥೩೬॥

ತವ ಪೂಜಾಂ ಕರಿಷ್ಯಂತಿ ಮದ್ವರೇಣ ಸುರಾದಯಃ ।
ಮೂಢಾ ಯೇ ನ ಕರಿಷ್ಯಂತಿ ಯಾಸ್ಯಂತಿ ನರಕಂ ಚ ತೇ ॥೩೭॥

॥ ವಸುಧೋವಾಚ ॥

ವಹಾಮಿ ಸರ್ವಂ ವಾರಾಹರೂಪೇಣಾಹಂ ತವಾಜ್ಞಯಾ ।
ಲೀಲಾಮಾತ್ರೇಣ ಭಗವನ್ವಿಶ್ವಂ ಚ ಸಚರಾಚರಂ ॥೩೮॥

---

ಪುಷ್ಪ, ವಸ್ತ್ರ, ಬಲಿಪ್ರದಾನ ಇವುಗಳಿಂದ ಪೂಜಿಸಿ ಆ ದೇವಿಯನ್ನು ಕುರಿತು ಮುಂದೆ ಹೇಳುವಂತೆ ಮಾತನಾಡಿದನು. ॥೩೩-೩೪॥

ಭಗವಂತನು ಹೇಳಿದನು—ಎಲೈ ಮಂಗಳಕರಳಾದ ಭೂದೇವಿಯೇ, ನೀನು ಸಮಸ್ತ ವಸ್ತುಗಳಿಗೂ ಆಶ್ರಯಳಾಗಿ ಮುನಿಗಳು ಮಾನವರು ದೇವ ದೈತ್ಯರು ಮೊದಲಾದವರಿಂದ ಪೂಜೆಯನ್ನು ಹೊಂದು. ಆರಿದ್ರಾನಕ್ಷತ್ರದ ಮೊದಲನೆಯ ಪಾದದಲ್ಲಿ ಭೂದೇವಿಯು ಋತುಮತಿಯಾದಳು. ಆದುದರಿಂದ ಮೊದಲು ಮೂರು ದಿನಗಳು ಅಂಬುವಾಚೀ ಎಂಬ ಹೆಸರನ್ನು ಪಡೆದಿರುವುದು. ಅಂಬುವಾಚೀ ದಿನವನ್ನು ಬಿಟ್ಟು ಮನೆಯನ್ನು ಕಟ್ಟುವಾಗಲೂ ಗೃಹಪ್ರವೇಶಕಾಲದಲ್ಲಿಯೂ ಭಾವಿ, ಕೆರೆಗಳನ್ನು ತೋಡುವಾಗಲೂ ವ್ಯವಸಾಯಮಾಡುವ ಕಾಲದಲ್ಲಿಯೂ ಮೊದಲು ನಿನ್ನನ್ನು ಪೂಜಿಸುವರು ಇದು ನನ್ನ ವರವು. ಯಾವ ಮೂಢರು ನಿನ್ನ ಪೂಜೆಯನ್ನು ಮಾಡುವುದಿಲ್ಲವೋ ಅವರು ನರಕಕ್ಕೆ ಹೋಗುವರು. ॥೩೫-೩೬-೩೭॥

ವಸುಧೆಯು ಹೇಳಿದಳು—ಎಲೈ ವರಾಹಸ್ವಾಮಿಯೋ, ನಿನ್ನ ಅಪ್ಪಣೆಯಿಂದ ಈ ನನ್ನ ಸ್ವರೂಪದಿಂದಲೇ ಸಮಸ್ತ ಚರಾಚರ ಪ್ರಾಣಿಗಳಿಂದ ಕೂಡಿದ ಪ್ರಪಂಚವನ್ನು ಸುಲಭವಾಗಿ ಧರಿಸಬಲ್ಲೆನು. ॥೩೮॥

ಮುಕ್ತಾಂ ಶುಕ್ತಿಂ ಹರೇರರ್ಚಾಂ ಶಿವಲಿಂಗಂ ಶಿವಾಂ ತಥಾ ।
ಶಂಖಂ ಪ್ರದೀಪಂ ಯಂತ್ರಂ ಚ ಮಾಣಿಕ್ಯಂ ಹೀರಕಂ ತಥಾ ॥೩೯॥

ಯಜ್ಞಸೂತ್ರಂ ಚ ಪುಷ್ಪಂ ಚ ಪುಸ್ತಕಂ ತುಲಸೀದಲಂ ।
ಜಪಮಾಲಾಂ ಪುಷ್ಪಮಾಲಾಂ ಕರ್ಪೂರಂ ಚ ಸುವರ್ಣಕಂ ॥೪೦॥

ಗೋರೋಚನಂ ಚಂದನಂ ಚ ಶಾಲಗ್ರಾಮಜಲಂ ತಥಾ ।
ಏತಾನ್ವೋಢುಮಶಕ್ತಾಽಹಂ ಕ್ಲಿಷ್ಟಾ ಚ ಭಗವನ್ ಶೃಣು ॥೪೧॥

॥ ಶ್ರೀಭಗವಾನುವಾಚ ॥

ದ್ರವ್ಯಾಣ್ಯೇತಾನಿ ಯೇ ಮೂಢಾ ಅರ್ಪಯಿಷ್ಯಂತಿ ಸುಂದರಿ ।
ಯಾಸ್ಯಂತಿ ಕಾಲಸೂತ್ರಂ ತೇ ದಿವ್ಯಂ ವರ್ಷಶತಂ ತ್ವಯಿ ॥೪೨॥

ಇತ್ಯೇವಮುಕ್ತ್ವಾ ಭಗವಾ ನ್ವಿರರಾಮ ಚ ನಾರದ ।
ಬಭೂವ ತೇನ ಗರ್ಭೇಣ ತೇಜಸ್ವೀ ಮಂಗಳಗ್ರಹಃ ॥೪೩॥

ಪೂಜಾಂ ಚಕ್ರುಃ ಪೃಥಿವ್ಯಾಶ್ಚ ತೇ ಸರ್ವೇ ಚಾಜ್ಞಯಾ ಹರೇಃ ।
ಕಣ್ವಶಾಖೋಕ್ತಧ್ಯಾನೇನ ತುಷ್ಟುವುಶ್ಚ ಸ್ತವೇನ ತೇ ॥೪೪॥

---

ಮುತ್ತು, ಮುತ್ತಿನಚಿಪ್ಪು, ಹರಿಯಪ್ರತಿಮೆ, ಶಿವಲಿಂಗ, ದೇವಪ್ರತಿಮೆ, ಶಂಖ, ದೀಪ, ಯಂತ್ರ, ಕೆಂಪುರತ್ನ, ಗೋಮೇಧಿಕ, ಯಜ್ಞೋಪವೀತ, ಹೂ, ಪುಸ್ತಕ, ತುಲಸೀದಲ, ಜಪಮಾಲೆ, ಹೂಮಾಲೆ, ಕರ್ಪೂರ, ಶ್ರೀಗಂಧ, ಚಿನ್ನ, ಗೋರೋಚನ, ಸಾಲಿಗ್ರಾಮ, ತೀರ್ಥ ಇವುಗಳನ್ನು ನಾನು ಧರಿಸಲಾರೆನು. ಇದು ನನಗೆ ಕಷ್ಟವಾಗುವುದು. ॥೩೯-೪೦-೪೧॥

ಭಗವಂತನು ಹೇಳಿದನು — ಈ ಪದಾರ್ಥಗಳನ್ನು ಯಾವ ಬುದ್ಧಿಹೀನರು ನಿನ್ನ ಮೇಲಿಡುವರೋ ಅವರು ಕಾಲಸೂತ್ರವೆಂಬ ನರಕಕ್ಕೆ ಹೋಗುವರು. ದೇವಮಾನದ ನೂರುವರ್ಷಗಳ ವರೆಗೆ ಅಲ್ಲಿ ಕಷ್ಟವನ್ನನುಭವಿಸುವರು. ಎಂದು ಹೇಳಿ ಹರಿಯು ಸುಮ್ಮನಾದನು. ಆ ಭೂದೇವಿಯ ಗರ್ಭದಲ್ಲಿ ಪ್ರಕಾಶವಾದ ಮಂಗಳಗ್ರಹವು ಉತ್ಪನ್ನವಾಯಿತು. ॥೪೨-೪೩॥

ಹರಿಯ ಆಜ್ಞೆಯಿಂದ ಸಮಸ್ತರೂ ಭೂದೇವಿಯನ್ನು ಪೂಜೆಮಾಡಿದರು. ಕಣ್ವಶಾಖೆಯಲ್ಲಿ ಹೇಳಿದ ಧ್ಯಾನಮಂತ್ರದಿಂದ ಸ್ತೋತ್ರಮಾಡಿದರು. ಮೂಲಮಂತ್ರ

ಧದುಮೂರ್ಲೇನ ಮಂತ್ರೇಣ ನೈವೇದ್ಯಾದಿಕಮೇವ ಚ ।
ಸಂಸ್ತುತಾ ತ್ರಿಷು ಲೋಕೇಷು ಪೂಜಿತಾ ಸಾ ಬಭೂವ ಹ ॥೪೫॥

॥ ನಾರದ ಉವಾಚ ॥

ಕಿಂ ಧ್ಯಾನಂ ಸ್ತವನಂ ತಸ್ಯಾ ಮೂಲಮಂತ್ರಂ ಚ ಕಿಂ ವದ ।
ಗೂಢಂ ಸರ್ವಪುರಾಣೇಷು ಶ್ರೋತುಂ ಕೌತೂಹಲಂ ಮಮ ॥೪೬॥

॥ ಶ್ರೀ ನಾರಾಯಣ ಉವಾಚ ॥

ಆದೌ ಚ ಪೃಥಿವೀ ದೇವೀ ವರಾಹೇಣ ಚ ಪೂಜಿತಾ ।
ತತೋ ಹಿ ಬ್ರಹ್ಮಣಾ ಪಶ್ಚಾತ್ಪೂಜಿತಾ ಪೃಥಿವೀ ತದಾ ॥೪೭॥

ತತಸ್ಸರ್ವೈರ್ಮುನೀಂದ್ರೈಶ್ಚ ಮನುಭಿರ್ಮಾನವಾದಿಭಿಃ ।
ಧ್ಯಾನಂ ಚ ಸ್ತವನಂ ಮಂತ್ರಂ ಶೃಣುವಕ್ಷ್ಯಾಮಿ ನಾರದ ॥೪೮॥

ಓಂ ಹ್ರೀಂ ಶ್ರೀಂ ಕ್ಲೀಂ ವಸುಧಾಯೈ ಸ್ವಾಹೇತ್ಯನೇನ
ಮಂತ್ರೇಣ ವಿಷ್ಣುನಾ ಪೂಜಿತಾ ಪುರಾ ।
ಶ್ವೇತಪಂಕಜವರ್ಣಾಭಾಂ ಶರಚ್ಚಂದ್ರನಿಭಾನನಾಂ ॥೪೯॥

---

ದಿಂದ ನೈವೇದ್ಯಾದಿಗಳನ್ನು ಸಮರ್ಪಿಸಿದರು. ಆಮೇಲೆ ಭೂದೇವಿಯು ಮೂರು ಲೋಕದಲ್ಲಿಯೂ ಪೂಜೆಯನ್ನು ಹೊಂದಿದಳು. ॥೪೪-೪೫॥

ಆ ಭೂದೇವಿಯ ಧ್ಯಾನಕ್ರಮವೆಂತು ? ಸ್ತೋತ್ರವಾವುದು ? ಮೂಲಮಂತ್ರ ವೇನು ? ಸಮಸ್ತ ಪುರಾಣಗಳಲ್ಲಿಯೂ ಗೋಪ್ಯವಾದ ಇದನ್ನು ಕೇಳಬೇಕೆಂಬ ಕುತೂಹಲವಿರುವುದೆಂದು ನಾರದನು ಹೇಳಿದನು. ॥೪೬॥

ನಾರಾಯಣನು ಹೇಳಿದನು—ನಾರದನೇ, ಕೇಳು. ಮೊದಲು ಆ ಭೂದೇವಿ ಯನ್ನು ವರಾಹಸ್ವಾಮಿಯು ಪೂಜಿಸಿದನು. ಆಮೇಲೆ ಬ್ರಹ್ಮನು ಪೂಜಿಸಿದನು. ಬಳಿಕ ಸಮಸ್ತ ಮುನಿಗಳೂ ದೇವತೆಗಳೂ ಮಾನವರೂ ಪೂಜಿಸಿದರು. ಆ ಭೂದೇವಿಯ ಧ್ಯಾನವನ್ನೂ ಸ್ತೋತ್ರವನ್ನೂ ಮೂಲಮಂತ್ರವನ್ನೂ ಹೇಳುವೆನು ಕೇಳು. ॥೪೭-೪೮॥

ಮೊದಲು ವಿಷ್ಣುವು ಓಂ, ಹ್ರೀಂ, ಶ್ರೀಂ, ಕ್ಲೀಂ ವಸುಧಾಯೈ ಸ್ವಾಹಾ ಎಂಬ ಮಂತ್ರದಿಂದ ಭೂದೇವಿಯನ್ನು ಪೂಜಿಸಿದನು. ಬಿಳಿಯ ಕಮಲದ ಬಣ್ಣದಂತೆ

ಚಂದನೋಕ್ಷಿಪ್ತಸರ್ವಾಂಗೀಂ ರತ್ನಭೂಷಣಭೂಷಿತಾಂ ।
ರತ್ನಾಧಾರಾಂ ರತ್ನಗರ್ಭಾಂ ರತ್ನಾಕರಸಮನ್ವಿತಾಂ ॥೩೦॥

ವಹ್ನಿಶುದ್ಧಾಂಶುಕಾಧಾನಾಂ ಸಸ್ಮಿತಾಂ ವಂದಿತಾಂ ಭಜೇ ।
ಧ್ಯಾನೇನಾಽನೇನ ಸಾ ದೇವೀ ಸರ್ವೈಶ್ಚ ಪೂಜಿತಾಽಭವತ್ ॥೩೧॥

ಸ್ತವನಂ ಶೃಣು ವಿಪ್ರೇಂದ್ರ ಕಣ್ವಶಾಖೋಕ್ತಮೇವ ಚ ।

॥ ಶ್ರೀ ನಾರಾಯಣ ಉವಾಚ ॥

ಜಯೇ ಜಯೇ ಜಲಾಧಾರೇ ಜಲಶೀಲೇ ಜಯಪ್ರದೇ ॥೩೨॥

ಯಜ್ಞಸೂಕರ ಜಾಯೇ ತ್ವಂ ಜಯಂ ದೇಹಿ ಜಯಾವಹೇ ।
ಮಂಗಳೇ ಮಂಗಳಾಧಾರೇ ಮಾಂಗಲ್ಯೇ ಮಂಗಳಪ್ರದೇ ॥೩೩॥

ಮಂಗಳಾರ್ಥಂ ಮಂಗಳೇಶೇ ಮಂಗಳಂ ದೇಹಿ ಮೇ ಭವೇ ।
ಸರ್ವಾಧಾರೇ ಚ ಸರ್ವಜ್ಞೇ ಸರ್ವಶಕ್ತಿಸಮನ್ವಿತೇ ॥೩೪॥

---

ಕಾಂತಿಯುಳ್ಳ ಶರದೃತುವಿನ ಚಂದ್ರನಿಗೆ ಸಮಾನವಾದ ಮುಖವುಳ್ಳ, ಮೈಗೆಲ್ಲಕ್ಕೂ ಶ್ರೀಗಂಧವನ್ನು ಬಳಿದುಕೊಂಡಿರುವ ರತ್ನದ ಆಭರಣಗಳನ್ನಿಟ್ಟಿರುವ, ರತ್ನಗಳಿಗೆ ಆಶ್ರಯವಾಗಿ ತನ್ನ ಗರ್ಭದಲ್ಲಿ ರತ್ನಗಳನ್ನುಳ್ಳ ಸಮುದ್ರದಿಂದ ಸುತ್ತಿಕೊಂಡಿರುವ, ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನು ಧರಿಸಿರುವ ನಗುತ್ತಿರುವ ದೇವಿಯನ್ನು ಧ್ಯಾನಮಾಡುವೆನು ಎಂಬ ಅರ್ಥವುಳ್ಳ ಈ ಧ್ಯಾನಮಂತ್ರದಿಂದ ಎಲ್ಲರೂ ಭೂದೇವಿಯನ್ನು ಪೂಜಿಸಿದರು. ॥೪೯-೩೦-೩೧॥

ನಾರಾಯಣನು ಹೇಳಿದನು—ಎಲೈ ಬ್ರಾಹ್ಮಣಶ್ರೇಷ್ಠನೇ, ಕಣ್ವಶಾಖೆಯಲ್ಲಿ ಹೇಳಿರುವ ಭೂದೇವಿಯ ಸ್ತೋತ್ರವನ್ನು ಹೇಳುವೆನು ಕೇಳು. ಜಯಸ್ವರೂಪಳಾದವಳೇ! ನೀರಿಗೆ ಆಶ್ರಯವಾಗಿ ನೀರಿನಂತೆ ಚಂಚಲಸ್ವಭಾವದವಳೇ! ಜಯವನ್ನು ಕೊಡತಕ್ಕವಳೇ! ಯಜ್ಞವರಾಹನ ಪತ್ನಿಯೇ! ನಮಗೆ ಜಯವನ್ನು ಕರುಣಿಸು. ಮಂಗಳಸ್ವರೂಪಳೇ! ಮಂಗಳಕ್ಕೆ ಆಶ್ರಯಳಾಗಿ ಮಂಗಳವನ್ನು ಕೊಡತಕ್ಕವಳೇ! ಶ್ರೇಯಸ್ಸಿಗೋಸ್ಕರವಾಗಿ ನಮಗೆ ಮಂಗಳವನ್ನುಂಟುಮಾಡು. ॥೩೨-೩೩॥

ಸಮಸ್ತವಸ್ತುವಿಗೂ ಆಶ್ರಯಳಾದವಳೇ! ಎಲ್ಲವನ್ನೂ ಬಲ್ಲವಳೇ! ಸಮಸ್ತ ಶಕ್ತಿಗಳಿಂದಲೂ ಕೂಡಿದವಳೇ! ಸಮಸ್ತ ಇಷ್ಟಾರ್ಥಗಳನ್ನೂ ಕೊಡತಕ್ಕವಳೇ!

ಸರ್ವಕಾಮಪ್ರದೇ ದೇವಿ ಸರ್ವೇಷ್ಟಂ ದೇಹಿ ಮೇ ಭವೇ ।
ಪುಣ್ಯಸ್ವರೂಪೇ ಪುಣ್ಯಾನಾಂ ಬೀಜರೂಪೇ ಸನಾತನಿ ॥೫೫॥

ಪುಣ್ಯಾಶ್ರಯೇ ಪುಣ್ಯವತಾಮಾಲಯೇ ಪುಣ್ಯದೇ ಭವೇ ।
ಸರ್ವಸಸ್ಯಾಲಯೇ ಸರ್ವಸಸ್ಯಾಢ್ಯೇ ಸರ್ವಸಸ್ಯದೇ ॥೫೬॥

ಸರ್ವಸಸ್ಯಹರೇ ಕಾಲೇ ಸರ್ವಸಸ್ಯಾತ್ಮಿಕೇ ಭವೇ ।
ಭೂಮೇ ಭೂಮಿಪಸರ್ವಸ್ವೇ ಭೂಮಿಪಾಲ ಪರಾಯಣೇ ॥೫೭॥

ಭೂಮಿಪಾನಾಂ ಸುಖಕರೇ ಭೂಮಿಂ ದೇಹಿ ಚ ಭೂಮಿದೇ ।
ಇದಂ ಸ್ತೋತ್ರಂ ಮಹಾಪುಣ್ಯಂ ಪ್ರಾತರುತ್ಥಾಯ ಯಃ ಪಠೇತ್ ॥೫೪॥

ಕೋಟಿಜನ್ಮಸು ಸ ಭವೇತ್ ಬಲವಾನ್ಭೂಮಿಪೇಶ್ವರಃ ।
ಭೂಮಿದಾನಕೃತಂ ಪುಣ್ಯಂ ಲಭತೇ ಪಠನಾಜ್ಜನೈಃ ॥೫೯॥

---

ನನಗೆ ಸಕಲ ಇಷ್ಟಾರ್ಥಗಳನ್ನೂ ಕೊಡು. ಪುಣ್ಯಸ್ವರೂಪಳೇ! ಪುಣ್ಯಗಳಿಗೆ ಕಾರಣಳಾದವಳೇ! ಪುಣ್ಯಕಾರ್ಯಗಳಿಗೆ ಆಶ್ರಯಳಾದವಳೇ! ಪುಣ್ಯವಂತರಿಗೆ ಮನೆಯಾದವಳೇ! ನಮಗೆ ಪುಣ್ಯವನ್ನು ಕೊಡು. ಎಲ್ಲ ಸಸ್ಯಗಳಿಗೂ ಮನೆಯಾದವಳೇ! ಸಮಸ್ತ ಸಸ್ಯಗಳಿಂದಲೂ ಕೂಡಿದವಳೇ! ಎಲ್ಲ ಸಸ್ಯಗಳನ್ನೂ ಕೊಡತಕ್ಕವಳೇ! ಪ್ರಳಯಕಾಲದಲ್ಲಿ ಎಲ್ಲ ಸಸ್ಯಗಳನ್ನೂ ನಾಶಮಾಡತಕ್ಕವಳೇ! ಸಮಸ್ತ ಸಸ್ಯಸ್ವರೂಪಳೇ! ರಾಜರಿಗೆ ಸಮಸ್ತ ವಸ್ತುಸ್ವರೂಪವಾದವಳೆ! ರಾಜರ ಶ್ರೇಯಸ್ಸಿನಲ್ಲಾಸಕ್ತಳಾದವಳೇ! ರಾಜರಿಗೆ ಸುಖವನ್ನುಂಟುಮಾಡುವವಳೇ! ಭಕ್ತರಿಗೆ ಅವಲಂಬನೆಯನ್ನು ಕೊಡತಕ್ಕವಳೇ,ನಮಗೆ ಭೂಮಿಯನ್ನು ಕೊಡು. ||೫೪-೫೫-೫೬-೫೭||

ಮಹಾಪುಣ್ಯಕರವಾದ ಈ ಸ್ತೋತ್ರವನ್ನು ಪ್ರಾತಃಕಾಲದಲ್ಲಿ ಎದ್ದು ಯಾರು ಹೇಳುವರೋ ಅವರು ಕೋಟಿಜನ್ಮಗಳು ಕಳೆಯುವವರೆಗೂ ಬಲಿಷ್ಠರಾದ ರಾಜರಾಗಿ ಹುಟ್ಟುವರು. ಮತ್ತು ಸಾಮಾನ್ಯ ಜನರು ಭೂಮಿದಾನ ಮಾಡಿದ ಪುಣ್ಯವನ್ನು ಪಡೆವರು. ||೫೪-೫೯||

ಭೂಮಿದಾನಹರಾತ್ಪಾಪಾನ್ಮುಚ್ಯತೇ ನಾತ್ರಸಂಶಯಃ ।
ಅಂಬುವಾಚೀ ಭೂಕರಣಪಾಪಾತ್ಸ ಮುಚ್ಯತೇ ಧ್ರುವಂ ॥೬೦॥

ಅನ್ಯಕೂಪೇ ಕೂಪಖನನಪಾಪಾತ್ಸ ಮುಚ್ಯತೇ ಧ್ರುವಂ ।
ಪರಭೂಮಿಹರಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥೬೧॥

ಭೂಮೌ ವೀರ್ಯತ್ಯಾಗಪಾಪಾದ್ಭೂಮೌ ದೀಪಾದಿ ಸ್ಥಾಪನಾತ್ ।
ಪಾಪೇನ ಮುಚ್ಯತೇ ಸೋಽಪಿ ಸ್ತೋತ್ರಸ್ಯ ಪಠನಾನ್ಮುನೇ ॥೬೨॥

ಅಶ್ವಮೇಧಶತಂ ಪುಣ್ಯಂ ಲಭತೇ ನಾತ್ರ ಸಂಶಯಃ ।
ಭೂಮಿದೇವ್ಯಾ ಮಹಾಸ್ತೋತ್ರಂ ಸರ್ವಕಲ್ಯಾಣಕಾರಕಂ ॥೬೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ನವಮೋಽಧ್ಯಾಯಃ

---

ಭೂಮಿದಾನಕ್ಕೆ ವಿಘ್ನ ಮಾಡಿದ ಪಾಪದಿಂದಲೂ ಭೂಮಿಯು ರಜಸ್ವಲೆಯಾದಾಗ, ಎಂದರೆ ಆಷಾಢಮಾಸದಲ್ಲಿ ಆರ್ದ್ರಾನಕ್ಷತ್ರದ ದಿನದಿಂದ ಮೂರುದಿನಗಳು ವ್ಯವಸಾಯಮಾಡಿದ ಪಾಪದಿಂದಲೂ ಬಿಡುಗಡೆಯನ್ನು ಹೊಂದುವರು.॥೬೦॥

ಈ ಸ್ತೋತ್ರವನ್ನು ಹೇಳುವುದರಿಂದ ಮತ್ತೊಬ್ಬರು ತೆಗೆದ ಭಾವಿಯಲ್ಲಿ ಅವರ ಅಪ್ಪಣೆಯಿಲ್ಲದೆ ಭಾವಿಯನ್ನು ತೋಡಿಸಿದ ಪಾಪವೂ ಪರರ ಭೂಮಿಯನ್ನು ಕಿತ್ತುಕೊಂಡ ಪಾಪವೂ ಭೂಮಿಯಲ್ಲಿ ವೀರ್ಯವನ್ನು ಬಿಟ್ಟ ಪಾಪವೂ ದೀಪಾದಿಗಳನ್ನಿರಿಸಿದ ಪಾಪವೂ ಇವುಗಳೆಲ್ಲವೂ ನಾಶವಾಗುವುವು. ಈ ಭೂಮಿದೇವಿಯ ಮಹಾಸ್ತೋತ್ರವು ಸಮಸ್ತ ಮಂಗಳಗಳನ್ನು ಕೊಡುವುದು. ಸಂದೇಹವಿಲ್ಲವು. ॥೬೧-೬೨-೬೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ದಶಮೋಽಧ್ಯಾಯಃ ||

### ಹತ್ತನೆಯ ಅಧ್ಯಾಯವು

|| ನಾರದ ಉವಾಚ ||

**ಭೂಮಿದಾನ ಕೃತಂ ಪುಣ್ಯಂ ಪಾಪಂ ತದ್ಧರಣೇನ ಚ ।**
**ಪರಭೂಹರಣಾತ್ಪಾಪಂ ಕೂಪೇ ಕೂಪಖನನೇ ತಥಾ ॥೧॥**

**ಅಂಬುವಾಚ್ಯಾಂ ಭೂಖನನೇ ವೀರ್ಯಸ್ಯ ತ್ಯಾಗ ಏವ ಚ ।**
**ದೀಪಾದಿಸ್ಥಾಪನಾತ್ಪಾಪಂ ಶ್ರೋತುಮಿಚ್ಛಾಮಿ ಯತ್ನತಃ ॥೨॥**

**ಅನ್ಯದ್ವಾ ಪೃಥಿವೀಜನ್ಯಂ ಪಾಪಂ ಯತ್ಪೃಚ್ಛತೇ ಪರಂ ।**
**ಯದಸ್ತಿ ತತ್ಪ್ರತೀಕಾರಂ ವದ ವೇದವಿದಾಂ ವರ ॥೩॥**

---

ನಾರದನು ಹೇಳಿದನು—ಭೂಮಿಯ ದಾನವನ್ನು ಮಾಡುವುದರಿಂದ ಯಾವ ಪುಣ್ಯವು ಬರುವುದು ? ಪರರ ಭೂಮಿಯನ್ನು ಕಿತ್ತುಕೊಳ್ಳುವುದರಿಂದ ಯಾವ ಪಾಪವು ಬರುವುದು ? ಮತ್ತೊಬ್ಬರು ತೋಡಿಸಿದ ಭಾವಿಯಲ್ಲಿ ನೀರು ಬರದೆ ಇದ್ದುದರಿಂದ ಅವರ ಅನುಮತಿಯಿಲ್ಲದೆ ಆ ಭಾವಿಯನ್ನು ತೋಡಿಸುವುದರಿಂದ ಯಾವ ಪಾಪವು ಬರುವುದು ? ಅಂಬುವಾಚಿಯೆಂಬ ಭೂಮಿಯು ರಜಸ್ವಲೆಯಾದ ಕಾಲದಲ್ಲಿ (ಆರಿದ್ರಾ ನಕ್ಷತ್ರದ ನಾಲ್ಕನೆಯ ಪಾದದಲ್ಲಿ ಸೂರ್ಯನಿರುವಾಗ) ಭೂಮಿಯನ್ನಗೆದು ವ್ಯವಸಾಯ ಮಾಡುವುದರಿಂದಲೂ, ವೀರ್ಯವನ್ನು ಭೂಮಿಯಮೇಲೆ ವಿಸರ್ಜಿಸುವುದರಿಂದಲೂ, ನೆಲದಮೇಲೆ ದೀಪವನ್ನಿಡುವುದರಿಂದಲೂ, ಯಾವ ಪಾಪವು ಬರುವುದು ? ಇದನ್ನೆಲ್ಲವನ್ನೂ ಕೇಳಬೇಕೆಂದು ಅಪೇಕ್ಷಿಸುವೆನು. ||೧-೨||

ನೆಲದ ಸಂಬಂಧವಾದ ಪಾಪವು ಬೇರೆ ಯಾವುದಿದ್ದರೂ ಅದನ್ನೂ ಅದಕ್ಕೆ

|| ಶ್ರೀನಾರಾಯಣ ಉವಾಚ ||

**ವಿತಸ್ತಿಮಾತ್ರಭೂಮಿಂ ಚ ಯೋ ದದಾತಿ ಚ ಭಾರತೇ ।**
**ಸಂಧ್ಯಾಪೂತಾಯ ವಿಪ್ರಾಯ ಸ ಯಾತಿ ಶಿವಮಂದಿರಂ ॥೪॥**

**ಭೂಮಿಂ ಚ ಸರ್ವಸಸ್ಯಾಢ್ಯಾಂ ಬ್ರಾಹ್ಮಣಾಯ ದದಾತಿ ಚ ।**
**ಭೂಮಿರೇಣುಪ್ರಮಾಣಾಬ್ದಮಂತೇ ವಿಷ್ಣುಪದೇ ಸ್ಥಿತಿಃ ॥೫॥**

**ಗ್ರಾಮಂ ಭೂಮಿಂ ಚ ಧಾನ್ಯಂ ಚ ಬ್ರಾಹ್ಮಣಾಯ ದದಾತಿ ಯಃ ।**
**ಸರ್ವಪಾಪಾದ್ವಿನಿರ್ಮುಕ್ತೌ ಚೋಭೌ ದೇವೀಪುರಸ್ಥಿತೌ ॥೬॥**

---

ಪ್ರತೀಕಾರವನ್ನೂ ವೇದವನ್ನು ತಿಳಿದವರಲ್ಲಿ ಶ್ರೇಷ್ಠನಾದ ನಾರಾಯಣನೇ, ನೀನು ನನಗೆ ಹೇಳಬೇಕು. ||೩||

ನಾರಾಯಣಮುನಿಯು ಹೇಳಿದನು—ಭರತಖಂಡದಲ್ಲಿ ಒಂದು ಗೇಣುದ್ದ ಭೂಮಿಯನ್ನು ಸಂಧ್ಯಾವಂದನೆಯಿಂದ ಪರಿಶುದ್ಧನಾದ ಬ್ರಾಹ್ಮಣನಿಗೆ ದಾನಮಾಡಿದವನು ಕೈಲಾಸಕ್ಕೆ ಹೋಗುವನು. ||೪||

ಸಮಸ್ತ ಸಸ್ಯಗಳಿಂದ ತುಂಬಿದ ಭೂಮಿಯನ್ನು ಬ್ರಾಹ್ಮಣನಿಗೆ ದಾನಮಾಡಿದವನು ಆ ಭೂಮಿಯಲ್ಲಿರುವ ದೂಳಿನ ಕಣಗಳ ಸಂಖ್ಯೆಯಷ್ಟುಕಾಲ ವಿಷ್ಣುಲೋಕದಲ್ಲಿ ಸುಖವನ್ನನುಭವಿಸುವನು. ||೫||

ಗ್ರಾಮವನ್ನೂ ಧಾನ್ಯವನ್ನೂ ಬ್ರಾಹ್ಮಣನಿಗೆ ಯಾರು ಕೊಡುವರೋ ಹಾಗೆ ಕೊಟ್ಟವರೂ ದಾನವನ್ನು ತೆಗೆದುಕೊಂಡವರೂ ಇಬ್ಬರೂ ಸಕಲ ಪಾಪಗಳನ್ನೂ ಕಳೆದುಕೊಂಡು ದೇವೀಸ್ಥಾನವಾದ ಮಣಿದ್ವೀಪದಲ್ಲಿ ವಾಸಮಾಡುತ್ತ ಸಾಲೋಕ್ಯ ಮುಕ್ತಿಯನ್ನು ಪಡೆವರು. ದಾನವನ್ನು ತೆಗೆದುಕೊಳ್ಳುವುದಕ್ಕೂ ತಕ್ಕ ಯೋಗ್ಯತೆಯು ಬೇಕು. ವೇದಾಧ್ಯಯನ ಸಂಪನ್ನನಾಗಿಯೂ ಕುಟುಂಬಿಯಾಗಿಯೂ ದಾನ ದ್ರವ್ಯವನ್ನು ಧರ್ಮಮಾರ್ಗದಲ್ಲಿ ವಿನಿಯೋಗಿಸುವವನಾಗಿಯೂ ಇರುವವನಿಗೆ ಪ್ರತಿಗ್ರಹಣದಿಂದಲೂ ಪುಣ್ಯವೇ ಬರುವುದು. ಹೇಗೆಂದರೆ ಸತ್ಪಾತ್ರದಲ್ಲಿ ದಾನವನ್ನು ಮಾಡಿದರೆ ಧರ್ಮವು ಊರ್ಜಿತವಾಗಿರುವುದು. ಇಂತಹ ಧರ್ಮಾಚರಣೆಗೆ ದಾತೃವು ಎಷ್ಟು ಅವಶ್ಯಕವೋ ಪ್ರತಿಗೃಹೀತೃವೂ ಅಷ್ಟೇ ಅವಶ್ಯಕವು. " ಧರ್ಮೋವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂಬಂತೆ ದಾನವನ್ನು ಕೊಡುವವನೂ ತೆಗೆದುಕೊಳ್ಳುವವನೂ ಧಾರ್ಮಿಕರಾಗಿರುವುದಾದರೆ ಮಾತ್ರ ಧರ್ಮಾಚರಣೆಯು ನೆರವೇರಿ, ಅದಕ್ಕೆ

ಭೂಮಿದಾನಂ ಚ ತತ್ಕಾಲೇ ಯಸ್ಸಾಧುಶ್ಚಾನುಮೋದತೇ ।
ಸ ಚ ಪ್ರಯಾತಿ ವೈಕುಂಠೇ ಮಿತ್ರಗೋತ್ರಸಮನ್ವಿತಃ ॥೭॥

ಸ್ವದತ್ತಾಂ ಪರದತ್ತಾಂ ವಾ ಬ್ರಹ್ಮವೃತ್ತಿಂ ಹರೇತ್ತು ಯಃ ।
ಸ ತಿಷ್ಠತಿ ಕಾಲಸೂತ್ರೇ ಯಾವಚ್ಚಂದ್ರ ದಿವಾಕರೌ ॥೮॥

ತತ್ಪುತ್ರಪೌತ್ರಪ್ರಭೃತಿಃ ಭೂಮಿಹೀನಃ ಶ್ರಿಯಾ ಹತಃ ।
ಪುತ್ರಹೀನೋ ದರಿದ್ರಶ್ಚ ಘೋರಂ ಯಾತಿ ಚ ರೌರವಂ ॥೯॥

ಗವಾಂ ಮಾರ್ಗಂ ವಿನಿಷ್ಕೃಷ್ಯಯಶ್ಚ ಸಸ್ಯಂ ದದಾತಿ ಚ ।
ದಿವ್ಯಂ ವರ್ಷಶತಂ ಚೈವ ಕುಂಭೀಪಾಕೇ ಚ ತಿಷ್ಠತಿ ॥೧೦॥

---

ನೆರವಾದ ಇಬ್ಬರಿಗೂ ಪುಣ್ಯವು ಬರುತ್ತೆಂಬುದು ನ್ಯಾಯ್ಯವೂ ಸ್ವಾಭಾವಿಕವೂ ಆಗಿದೆ. ಎಂದು ತಾತ್ಪರ್ಯವು. ॥೬॥

ಯಾವ ಸಜ್ಜನನು ಭೂದಾನಮಾಡಿದುದನ್ನು ಒಪ್ಪಿಕೊಳ್ಳುವನೋ ಎಂದರೆ ಭೂಮಿದಾನಕ್ಕೆ ಪ್ರೋತ್ಸಾಹಿಸುತ್ತಾ ಕಾಪಾಡುವನೋ ಅವನು ತನ್ನ ಮಿತ್ರರ ವಂಶ ದೊಡನೆ ವೈಕುಂಠಲೋಕದಲ್ಲಿ ಸುಖವನ್ನನುಭವಿಸುವನು. ॥೭॥

ತಾನು ಕೊಟ್ಟುದನ್ನಾಗಲಿ, ಅಥವಾ ಇತರರು ಕೊಟ್ಟಿದ್ದುದನ್ನಾಗಲಿ, ಬ್ರಾಹ್ಮ ಣನ ಜೀವನಾಧಾರವಾದ ಭೂಮಿಯನ್ನು ಯಾವನು ಕಿತ್ತುಕೊಳ್ಳುವನೋ ಅವನು ಕಾಲಸೂತ್ರವೆಂಬ ನರಕದಲ್ಲಿ ಚಂದ್ರಸೂರ್ಯರಿರುವವರೆಗೂ ಇರುವನು. ॥೮॥

ಮತ್ತು ಅವನ ಮಕ್ಕಳು ಮೊಮ್ಮಕ್ಕಳು ಮುಂತಾದವರು ಭೂಮಿಯಿಲ್ಲದ ವರಾಗಿಯೂ ಸಂಪತ್ತಿಲ್ಲದವರಾಗಿಯೂ ಮಕ್ಕಳಿಲ್ಲದೆಯೂ ದರಿದ್ರರಾಗಿಯೂ ದುಃಖ ವನ್ನನುಭವಿಸಿ ಭಯಂಕರವಾದ ರೌರವವೆಂಬ ನರಕಕ್ಕೆ ಹೋಗುವರು. ॥೯॥

ಗೋವುಗಳು ಸಂಚರಿಸುವ ಮತ್ತು ಅವುಗಳು ಮೇಯುತ್ತಿರುವ ಗೋಮಾಳ ವನ್ನು ಯಾವನು ಆಕ್ರಮಿಸಿ ಅದನ್ನು ವ್ಯವಸಾಯಮಾಡಿ ಆ ಭೂಮಿಯನ್ನು ದಾನಮಾಡುವನೋ ಅವನು ದೇವಮಾನದ ನೂರುವರ್ಷಗಳ ವರೆಗೆ ಕುಂಭೀಪಾಕ ವೆಂಬ ನರಕದಲ್ಲಿರುವನು. ॥೧೦॥

ಗೋಷ್ಠಂ ತಡಾಕಂ ನಿಷ್ಕೃಷ್ಯ ಮಾರ್ಗೇ ಸಸ್ಯಂ ದದಾತಿ ಯಃ ।
ಸ ಚ ತಿಷ್ಠತ್ಯಸಿಪತ್ರೇ ಯಾವದಿಂದ್ರಾಶ್ಚತುರ್ದಶ ॥೧೧॥

ಪಂಚಪಿಂಡಾನನುದ್ಧೃತ್ಯ ಪರಕೂಪೇ ಚ ಸ್ನಾತಿ ಯಃ ।
ಪ್ರಾಪ್ನೋತಿ ನರಕಂ ಚೈವ ಸ್ನಾನಂ ನಿಷ್ಫಲಮೇವ ಚ ॥೧೨॥

ಕಾಮೀ ಭೂಮೌ ಚ ರಹಸಿ ವೀರ್ಯತ್ಯಾಗಂ ಕರೋತಿ ಯಃ ।
ಭೂಮಿರೇಣುಪ್ರಮಾಣಂ ಚ ವರ್ಷಂ ತಿಷ್ಠತಿ ರೌರವೇ ॥೧೩॥

ಅಂಬುವಾಚ್ಯಾಂ ಭೂಕರಣಂ ಯಃ ಕರೋತಿ ಚ ಮಾನವಃ ।
ಸ ಯಾತಿ ಕೃಮಿದಂಶಂ ಚ ಸ್ಥಿತಿಸ್ತತ್ರ ಚತುರ್ಯುಗಂ ॥೧೪॥

---

ದನಗಳ ಕೊಟ್ಟಿಗೆಯನ್ನೂ ಕೆರೆಯ ಅಂಗಳವನ್ನೂ ಆಕ್ರಮಿಸಿಕೊಂಡು ಆ ಭೂಮಿಯಲ್ಲಿ ವ್ಯವಸಾಯ ಮಾಡಿ ಅಂತಹ ಭೂಮಿಯನ್ನು ದಾನಮಾಡಿದವರು ಹದಿನಾಲ್ಕು ಜನ ದೇವೇಂದ್ರರ ಅಧಿಕಾರವು ಮುಗಿಯುವವರೆಗೂ ಅಸಿಪತ್ರವೆಂಬ ನರಕದಲ್ಲಿ ದುಃಖವನ್ನನುಭವಿಸುವರು. ॥೧೧॥

ಇತರರು ಮಾಡಿಸಿದ ಬಾವಿ ಕೆರೆ ಮುಂತಾದ ಜಲಾಶಯಗಳಲ್ಲಿ ಸ್ನಾನಮಾಡ ಬೇಕಾದರೆ ಆ ಜಲಾಶಯದಿಂದ ಐದುಹಿಡಿ ಮಣ್ಣನ್ನು ತೆಗೆದುಹಾಕಿ ಸ್ನಾನಮಾಡ ಬೇಕು. ಹಾಗೆ ಮಾಡದಿದ್ದರೆ ಅವನು ಮಾಡಿದ ಸ್ನಾನವು ನಿಷ್ಫಲವಾಗುವುದಲ್ಲದೆ ನರಕವೂ ಪ್ರಾಪ್ತಿಯಾಗುವುದು. ॥೧೨॥

ಕಾಮೋದ್ರೇಕದಿಂದ ಗುಟ್ಟಾಗಿ ಭೂಮಿಯ ಮೇಲೆ ವೀರ್ಯವನ್ನು ವಿಸರ್ಜಿಸಿ ದವನು ಆ ಭೂಮಿಯ ದೂಳಿನ ಕಣದ ಸಂಖ್ಯೆಯಷ್ಟು ವರ್ಷ ರೌರವನೆಂಬ ನರಕ ದಲ್ಲಿರುವನು. ॥೧೩॥

ಆರಿದ್ರಾನಕ್ಷತ್ರದ ನಾಲ್ಕನೆಯ ಪಾದದಲ್ಲಿ ಸೂರ್ಯನಿರುವಾಗ ಭೂಮಿಯು ರಜಸ್ವಲೆಯಾಗುವಳು. ಆ ಕಾಲದಲ್ಲಿ ಯಾವ ಮನುಜನು ಭೂಮಿಯಲ್ಲಿ ವ್ಯವ ಸಾಯವನ್ನು ಮಾಡಲು ಪ್ರಾರಂಭಿಸುವನೋ ಅವನು ನಾಲ್ಕು ಯುಗಗಳ ವರೆಗೆ ಕೃಮಿದಂಶವೆಂಬ ನರಕದಲ್ಲಿ ದುಃಖವನ್ನನುಭವಿಸುವನು. ॥೧೪॥

ಪರಕೀಯೇ ಲುಪ್ತಕೂಪೇ ಕೂಪಂ ಮೂಢಃ ಕರೋತಿ ಯಃ ।
ಪುಷ್ಕರಿಣ್ಯಾಂ ಚ ಲುಪ್ತಾಯಾಂ ಪುಷ್ಕರಿಣೀಂ ದದಾತಿ ಯಃ ॥೧೫॥

ಸರ್ವಂ ಫಲಂ ಪರಸ್ಯೈವ ತಪ್ತಕುಂಡಂ ವ್ರಜೇಚ್ಚ ಸಃ ।
ತತ್ರ ತಿಷ್ಠತಿ ಸಂತಪ್ತೋ ಯಾವದಿಂದ್ರಾಶ್ಚತುರ್ದಶ ॥೧೬॥

ಪರಕೀಯೇ ತಡಾಗೇ ಚ ಪಂಕಮುದ್ಧೃತ್ಯ ಚೋಽನ್ಯಜೇತ್ ।
ರೇಣುಪ್ರಮಾಣವರ್ಷಂ ಚ ಬ್ರಹ್ಮಲೋಕೇ ವಸೇನ್ನರಃ ॥೧೭॥

ಪಿಂಡಂ ಪಿತ್ರೇ ಭೂಮಿಭರ್ತುರ್ನ ಪ್ರದಾಯ ಚ ಮಾನವಃ ।
ಶ್ರಾದ್ಧಂ ಕರೋತಿ ಯೋ ಮೂಢೋ ನರಕಂ ಯಾತಿ ನಿಶ್ಚಿತಂ ॥೧೮॥

ಭೂಮೌ ದೀಪಂ ಯೋಽರ್ಪಯತಿ ಸ ಚಾಂಧಃ ಸಪ್ತಜನ್ಮಸು ।
ಭೂಮೌ ಶಂಖಂ ಚ ಸಂಸ್ಥಾಪ್ಯ ಕುಷ್ಠಂ ಜನ್ಮಾಂತರೇ ಲಭೇತ್ ॥೧೯॥

---

ಮತ್ತೊಬ್ಬರು ತೋಡಿಸಿದ ನೀರಿಲ್ಲದ ಬಾವಿಯನ್ನು ಮತ್ತು ಕೊಳವನ್ನು ಅವನ ಅನುಮತಿಯಿಲ್ಲದೆ ಯಾವ ಮೂಢನು ಅವುಗಳಲ್ಲಿ ನೀರು ಬರುವಂತೆ ಸರಿಮಾಡಿಸುವನೋ ಹಾಗೆ ಮಾಡಿಸಿದವನ ಫಲವು ಮೊದಲು ಅವುಗಳನ್ನು ಮಾಡಿಸಿದವನಿಗೇ ಹೋಗುವುದು. ಅವನಪ್ಪಣೆಯಿಲ್ಲದೆ ಮಾಡಿಸಿದ ದೋಷದಿಂದ ಇವನಿಗೆ ಹದಿನಾಲ್ಕು ಜನ ದೇವೇಂದ್ರರ ಅಧಿಕಾರವು ಮುಗಿಯುವ ವರೆಗೂ ತಪ್ತಕುಂಡವೆಂಬ ನರಕದಲ್ಲಿ ಸಂತಾಪದುಃಖವುಂಟಾಗುವುದು. ॥೧೫-೧೬॥

ಮತ್ತೊಬ್ಬರು ಮಾಡಿಸಿದ ಕೆರೆಯಲ್ಲಿ ಸ್ವಲ್ಪ ಕೆಸರನ್ನು ತೆಗೆದುಹಾಕಿ ಸ್ನಾನ ಮಾಡಬೇಕು. ಹಾಗೆ ಮಾಡಿದರೆ ಆ ಕೆಸರಿನಲ್ಲಿ ಎಷ್ಟು ರೇಣುಗಳಿವೆಯೋ ಅಷ್ಟು ವರ್ಷಗಳ ವರೆಗೆ ಆ ಮನುಷ್ಯನಿಗೆ ಬ್ರಹ್ಮಲೋಕವಾಸವು ಪ್ರಾಪ್ತಿಯಾಗುವುದು. ॥೧೭॥

ಮತ್ತೊಬ್ಬರ ಮನೆಯಲ್ಲಿ ಶ್ರಾದ್ಧವನ್ನು ಮಾಡುವಾಗ ಆ ಮನೆಯ ಯಜಮಾನನ ಪಿತೃಗಳನ್ನುದ್ದೇಶಿಸಿ ದಾನಮಾಡಿ ಶ್ರಾದ್ಧವನ್ನು ಮಾಡಬೇಕು. ಹಾಗೆ ಮಾಡದಿದ್ದರೆ ಎಂದರೆ ಯಾವ ದಾನವನ್ನೂ ಮಾಡದೆ ತನ್ನ ಪಿತೃಗಳ ಶ್ರಾದ್ಧವನ್ನು ಮಾಡಿದರೆ ಆ ಮೂಢನು ನರಕಕ್ಕೆ ಹೋಗುವನು. ಮನೆಗೆ ಬಾಡಿಗೆ ಮುಂತಾದುವನ್ನು ಕೊಡುತ್ತಾ ವಾಸವಾಗಿದ್ದರೆ ಇದನ್ನು ಮಾಡಬೇಕಾದುದಿಲ್ಲ. ॥೧೮॥

ನೆಲದ ಮೇಲೆ ದೀಪವನ್ನಿರಿಸಿದವರು ಏಳು ಜನ್ಮಗಳ ವರೆಗೆ ಕುರುಡರಾಗಿ

ಮುಕ್ತಾಂ ಮಾಣಿಕ್ಯಹೀರೌ ಚ ಸುವರ್ಣಂ ಚ ಮಣಿಂ ತಥಾ ।
ಪಂಚ ಸಂಸ್ಥಾಪಯೇದ್ಭೂಮೌ ಸಚಾಂಧಃ ಸಪ್ತಜನ್ಮಸು ॥೨೦॥

ಶಿವಲಿಂಗಂ ಶಿವಾಮರ್ಚಾಂ ಯಶ್ಚಾರ್ಪಯತಿ ಭೂತಲೇ ।
ಶತಮನ್ವಂತರಂ ಯಾವತ್ ಕೃಮಿಭಕ್ಷಸ್ಸ ತಿಷ್ಠತಿ ॥೨೧॥

ಶಂಖಂ ಯಂತ್ರಂ ಶಿಲಾತೋಯಂ ಪುಷ್ಪಂ ಚ ತುಲಸೀದಲಂ ।
ಯಶ್ಚಾರ್ಪಯತಿ ಭೂಮೌ ಚ ಸ ತಿಷ್ಠೇನ್ನರಕೇ ಧ್ರುವಂ ॥೨೨॥

ಜಪಮಾಲಾಂ ಪುಷ್ಪಮಾಲಾಂ ಕರ್ಪೂರಂ ರೋಚನಂ ತಥಾ ।
ಯೋ ಮೂಢಶ್ಚಾರ್ಪಯೇದ್ಭೂಮೌ ಸ ಯಾತಿ ನರಕಂ ಧ್ರುವಂ ॥೨೩॥

ಭೂಮೌ ಚಂದನಕಾಷ್ಠಂ ಚ ರುದ್ರಾಕ್ಷಂ ಕುಶಮೂಲಕಂ ।
ಸಂಸ್ಥಾಪ್ಯ ಭೂಮೌ ನರಕೇ ವಸೇನ್ಮಂನ್ವಂತರಾವಧಿ ॥೨೪॥

ಪುಸ್ತಕಂ ಯಜ್ಞಸೂತ್ರಂ ಚ ಭೂಮೌ ಸಂಸ್ಥಾಪಯೇನ್ನರಃ ।
ನ ಭವೇದ್ವಿಪ್ರಯೋನೌ ಚ ತಸ್ಯ ಜನ್ಮಾಂತರೇ ಜನಿಃ ॥೨೫॥

---

ಹುಟ್ಟುವರು. ಶಂಖವನ್ನಿರಿಸಿದವರು ಮುಂದಿನ ಜನ್ಮದಲ್ಲಿ ಕುಷ್ಠರೋಗಿಗಳಾಗುವರು. ॥೧೯॥

ಮುತ್ತು ಕೆಂಪು ರತ್ನ ಗೋಮೇದಿಕ ಚಿನ್ನ ಇತರ ರತ್ನಗಳು ಇವುಗಳನ್ನು ನೆಲದ ಮೇಲೆ ಇರಿಸಿದವರು ಏಳುಜನ್ಮಗಳವರೆಗೆ ಕುರುಡರಾಗಿ ಹುಟ್ಟುವರು. ॥೨೦॥

ಶಿವಲಿಂಗವನ್ನೂ ದೇವೀಮೂರ್ತಿಯನ್ನೂ ಸಾಲಿಗ್ರಾಮವನ್ನೂ ಯಾರು ನೆಲದಮೇಲೆ ಇರಿಸುವರೋ ಅವರು ನೂರು ಮನ್ವಂತರಗಳ ವರೆಗೆ ಕೃಮಿಭಕ್ಷ ನರಕದಲ್ಲಿರುವರು. ॥೨೧॥

ಶಂಖ, ಯಂತ್ರ, ಸಾಲಿಗ್ರಾಮತೀರ್ಥ, ಹೂ, ತುಲಸೀದಲ, ಜಪಸರ, ಹೂಮಾಲೆ, ಕರ್ಪೂರ, ಗೋರೋಚನ ಇವುಗಳನ್ನು ನೆಲದಮೇಲೆ ಇರಿಸುವ ಮೂಢನು ಖಂಡಿತವಾಗಿ ನರಕಕ್ಕೆ ಹೋಗುವನು. ॥೨೨-೨೩॥

ನೆಲದ ಮೇಲೆ ಗಂಧದ ಕೊರಡನ್ನೂ ರುದ್ರಾಕ್ಷಿಯನ್ನೂ ದರ್ಭೆಯನ್ನೂ ಇರಿಸಿದವರು ಒಂದು ಮನ್ವಂತರ ಕಾಲ ನರಕದಲ್ಲಿ ವಾಸಮಾಡುವರು. ಪುಸ್ತಕ

ಬ್ರಹ್ಮಹತ್ಯಾಸಮಂ ಪಾಪಮಿಹ ವೈ ಲಭತೇ ಧ್ರುವಂ ।
ಗ್ರಂಥಿಯುಕ್ತಂ ಯಜ್ಞಸೂತ್ರಂ ಪೂಜ್ಯಂ ಚ ಸರ್ವವರ್ಣಕೈಃ ॥೨೬॥

ಯಜ್ಞಂ ಕೃತ್ವಾ ತು ಯೋ ಭೂಮಿಂ ಕ್ಷೀರೇಣ ನಹಿ ಸಿಂಚತಿ ।
ಸ ಯಾತಿ ತಪ್ತಭೂಮಿಂ ಚ ಸಂತಪ್ತಃ ಸಪ್ತಜನ್ಮಸು ॥೨೭॥

ಭೂಕಂಪೇ ಗ್ರಹಣೇ ಯೋ ಹಿ ಕರೋತಿ ಖನನಂ ಭುವಃ ।
ಜನ್ಮಾಂತರೇ ಮಹಾಪಾಪೋ ಹ್ಯಂಗಹೀನೋ ಭವೇದ್ಧ್ರುವಂ ॥೨೮॥

ಭವನಂ ಯತ್ರ ಸರ್ವೇಷಾಂ ಭೂಮಿಸ್ತೇನ ಪ್ರಕೀರ್ತಿತಾ ।
ಕಾಶ್ಯಪೀ ಕಶ್ಯಪಸ್ಯೇಯ ಮಚಲಾ ಸ್ಥಿರರೂಪತಃ ॥೨೯॥

---

ಯಜ್ಞೋಪವೀತ ಇವುಗಳನ್ನು ನೆಲದ ಮೇಲೆ ಇರಿಸಿದವನು ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟುವುದಿಲ್ಲ. ॥೨೪-೨೫॥

ಬ್ರಹ್ಮ ಗಂಟನ್ನು ಹಾಕಿದ ಯಜ್ಞೋಪವೀತವು ಸಕಲ ವರ್ಣದವರಿಗೂ ಪೂಜ್ಯವಾದ ವಸ್ತುವು. ಇದನ್ನು ನೆಲದಮೇಲಿರಿಸಿದರೆ ಬ್ರಹ್ಮಹತ್ಯೆಗೆ ಸಮಾನವಾದ ಪಾಪಬರುವುದು. ॥೨೬॥

ಯಜ್ಞವನ್ನು ಮಾಡಿದ ಮೇಲೆ ಆ ಯಜ್ಞಭೂಮಿಗೆ ಹಾಲನ್ನು ಚುಮುಕಿಸ ಬೇಕು. ಹಾಗೆ ಮಾಡದಿದ್ದರೆ ಏಳು ಜನ್ಮಗಳ ವರೆಗೆ ತಪ್ತಭೂಮಿ ಅಂದರೆ ಮರಳುಕಾಡಿನಲ್ಲಿ ಸಂತಾಪವುಳ್ಳವನಾಗಿ ಹುಟ್ಟುವನು. ॥೨೭॥

ಭೂಮಿ ನಡುಗಿದಾಗಲೂ ಸೂರ್ಯಚಂದ್ರರಿಗೆ ಗ್ರಹಣವಾದ ಕಾಲದಲ್ಲಿಯೂ ಯಾವನು ನೆಲವನ್ನು ಅಗೆಯುವನೋ ಅವನು ಮತ್ತೊಂದು ಜನ್ಮದಲ್ಲಿ ಮಹಾ ಪಾಪಿಯೂ ಅಂಗಹೀನನೂ ಆಗಿ ಹುಟ್ಟುವನು. ಇದು ಖಂಡಿತವಾದ ಮಾತು. ॥೨೮॥

ನೆಲದ ಮೇಲೆ ಸಮಸ್ತ ಪ್ರಾಣಿಗಳೂ ವಾಸಮಾಡುವುದರಿಂದ ಭೂಮಿ ಯೆಂದೂ, ಕಶ್ಯಪಮುನಿಯ ಪುತ್ರಿಯಾದುದರಿಂದ ಕಾಶ್ಯಪಿಯೆಂದೂ, ಸ್ಥಿರವಾದ ರೂಪದಿಂದ ಅಚಲಾ ಎಂದೂ, ಪ್ರಪಂಚವನ್ನು ಧರಿಸಿರುವುದರಿಂದ ವಿಶ್ವಂಭರಾ

**ವಿಶ್ವಂಭರಾ ಧಾರಣಾಚ್ಚಾಽನಂತಾ ನಂತಸ್ವರೂಪತಃ ।**
**ಪೃಥಿವೀ ಪೃಥುಕನ್ಯಾತ್ವಾ ದ್ವಿಸ್ತೃತತ್ವಾ ನ್ಮಹಾಮುನೇ ॥೩೦॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ**
**ದಶಮೋಽಧ್ಯಾಯಃ**

---

ಎಂದೂ ಅನೇಕ ರೂಪವಾಗಿರುವುದರಿಂದ ಅನಂತಾ ಎಂದೂ ಪೃಥುವೆಂಬ ರಾಜನ ಕನ್ಯೆಯಾಗಿ ಜನಿಸಿದುದರಿಂದ ಅಥವಾ ವಿಸ್ತಾರವಾಗಿರುವುದರಿಂದ ಪೃಥಿವೀ ಎಂದೂ ಈ ಭೂಮಿಗೆ ಹೆಸರು ಬಂದಿರುವುದು. ॥೨೯-೩೦॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಏಕಾದಶೋಽಧ್ಯಾಯಃ ||

### ಹನ್ನೊಂದನೆಯ ಅಧ್ಯಾಯವು

|| ನಾರದ ಉವಾಚ ||

**ಶ್ರುತಂ ಪೃಥಿವ್ಯುಪಾಖ್ಯಾನಂ ಅತೀವಸುಮನೋಹರಂ ।**
**ಗಂಗೋಪಾಖ್ಯಾನಮಧುನಾ ವದ ವೇದವಿದಾಂ ವರ ॥೧॥**

**ಭಾರತೇ ಭಾರತೀಶಾಪಾತ್ಸಾಜಗಾಮ ಸುರೇಶ್ವರೀ ।**
**ವಿಷ್ಣುಸ್ವರೂಪಾ ಪರಮಾ ಸ್ವಯಂ ವಿಷ್ಣುಪದೀತಿ ಚ ॥೨॥**

**ಕಥಂ ಕುತ್ರಯುಗೇ ಕೇನ ಪ್ರಾರ್ಥಿತಾ ಪ್ರೇರಿತಾ ಪುರಾ ।**
**ತತ್ಕ್ರಮಂ ಶ್ರೋತುಮಿಚ್ಛಾಮಿ ಪಾಪಘ್ನಂ ಪುಣ್ಯದಂ ಶುಭಂ ॥೩॥**

---

ವೇದವನ್ನು ತಿಳಿದವರಲ್ಲಿ ಶ್ರೇಷ್ಠನಾದ ನಾರಾಯಣಮುನಿಯೇ, ಮನಸ್ಸಿಗೆ ಹೆಚ್ಚು ಸಂತೋಷವನ್ನುಂಟುಮಾಡುವ ಭೂಮಿಯ ಉಪಾಖ್ಯಾನವನ್ನು ಕೇಳಿದೆನು. ಈಗ ಗಂಗೆಯ ಉಪಾಖ್ಯಾನವನ್ನು ಹೇಳಬೇಕು. ವಿಷ್ಣುಸ್ವರೂಪಳೂ ಅತ್ಯಂತ ಶ್ರೇಷ್ಠಳೂ ವಿಷ್ಣುಪದೀ ಎಂಬ ಹೆಸರು ಪಡೆದವಳೂ ಆದ ಗಂಗಾದೇವಿಯು ಸರಸ್ವತಿಯ ಶಾಪದಿಂದ ಹೇಗೆ ಯಾವ ಯುಗದಲ್ಲಿ ಯಾರ ಪ್ರಾರ್ಥನೆಯಿಂದ ಯಾರ ಪ್ರೇರಣೆಯಿಂದ ಭರತಖಂಡಕ್ಕೆ ಬಂದಳು. ಪಾಪವನ್ನು ನಾಶಮಾಡಿ ಪುಣ್ಯ ಫಲವನ್ನು ಕೊಡುವ ಗಂಗೆಯ ಅವತಾರಕ್ರಮವನ್ನು ಕೇಳಬೇಕೆಂದು ಬಯಸು ವೆನು. ಎಂದು ನಾರದನು ಹೇಳಿದನು. ||೧-೨-೩||

|| ಶ್ರೀನಾರಾಯಣ ಉವಾಚ ||

ರಾಜರಾಜೇಶ್ವರಃ ಶ್ರೀಮಾನ್ಸಗರಃ ಸೂರ್ಯವಂಶಜಃ ।
ತಸ್ಯ ಭಾರ್ಯಾ ಚ ವೈದರ್ಭೀ ಶೈಬ್ಯಾ ಚ ದ್ವೇ ಮನೋಹರೇ ||೪||

ತತ್ಪತ್ನ್ಯಾಮೇಕಪುತ್ರಶ್ಚ ಬಭೂವ ಸುಮನೋಹರಃ ।
ಅಸಮಂಜ ಇತ ಖ್ಯಾತಃ ಶೈಬ್ಯಾಯಾಂ ಕುಲವರ್ಧನಃ ||೫||

ಅನ್ಯಾ ಚಾಽಽರಾಧಯಾಮಾಸ ಶಂಕರಂ ಪುತ್ರಕಾಮುಕೀ ।
ಬಭೂವ ಗರ್ಭಸ್ತಸ್ಯಾಶ್ಚ ಹರಸ್ಯ ಚ ವರೇಣ ಹ ||೬||

ಗತೇ ಶತಾಬ್ದೇ ಪೂರ್ಣೇ ಚ ಮಾಂಸಪಿಂಡಂ ಸುಷಾವ ಸಾ ।
ತಂ ದೃಷ್ಟ್ವಾ ಸಾ ಶಿವಂ ಧ್ಯಾತ್ವಾ ರುರೋದೋಚ್ಚೈಃ ಪುನಃ ಪುನಃ||೭||

ಶಂಭುರ್ಬ್ರಾಹ್ಮಣರೂಪೇಣ ತತ್ಸಮೀಪಂ ಜಗಾಮ ಹ ।
ಚಕಾರ ಸಂವಿಭಜ್ಯೈತತ್ಪಿಂಡಂ ಷಷ್ಟಿಸಹಸ್ರಧಾ ||೮||

---

ನಾರಾಯಣನು ಹೇಳಿದನು—ಸೂರ್ಯವಂಶದಲ್ಲಿ ಹುಟ್ಟಿದ ಸಗರನೆಂಬ ಚಕ್ರವರ್ತಿಯಿದ್ದನು. ಅವನಿಗೆ ವೈದರ್ಭೀ, ಶೈಬ್ಯೆ ಎಂಬ ಇಬ್ಬರು ಪತ್ನಿಯರಿದ್ದರು. ಅವರಿಬ್ಬರೂ ಮನೋಹರವಾದ ರೂಪವುಳ್ಳವರಾಗಿದ್ದರು. ||೪||

ಅವನ ಹೆಂಡಿತಿಯಾದ ಶೈಬ್ಯೆಯಲ್ಲಿ ಅಸಮಂಜನೆಂಬ ವಂಶಾಭಿವೃದ್ಧಿಕರನೂ ಸುಂದರನೂ ಆದ ಒಬ್ಬನೇ ಒಬ್ಬ ಮಗನು ಹುಟ್ಟಿದನು. ||೫||

ಮತ್ತೊಬ್ಬ ಹೆಂಡಿತಿಯಾದ ವೈದರ್ಭಿಯು ಮಕ್ಕಳಲ್ಲಿ ಅಪೇಕ್ಷೆಯಿಂದ ಶಂಕರನನ್ನು ಪೂಜಿಸಿದಳು. ಶಿವನ ವರದಿಂದ ಅವಳೂ ಗರ್ಭವನ್ನು ಧರಿಸಿ ಒಂದು ನೂರು ವರ್ಷ ಸಂಪೂರ್ಣವಾದ ಮೇಲೆ ಒಂದು ಮಾಂಸದ ಉಂಡೆಯನ್ನು ಹೆತ್ತಳು. ಆಕೆಯು ಆ ಮಾಂಸದ ಉಂಡೆಯನ್ನು ನೋಡಿ ಆಶಾಭಂಗದಿಂದ ಶಿವನನ್ನು ಸ್ಮರಿಸಿ ಮತ್ತೆ ಮತ್ತೆ ಗಟ್ಟಿಯಾಗಿ ಅತ್ತಳು. ||೬-೭||

ಈಶ್ವರನು ಬ್ರಾಹ್ಮಣ ರೂಪದಿಂದ ಆಕೆಯ ಸಮೀಪಕ್ಕೆ ಬಂದು ಆ ಪಿಂಡವನ್ನು ಅರವತ್ತು ಸಾವಿರ ಪಾಲುಮಾಡಿದನು. ಆ ಸಮಸ್ತ ಪಾಲುಗಳೂ ಮಹಾಬಲ ಪರಾಕ್ರಮಗಳಿಂದ ಕೂಡಿದ ಗ್ರೀಷ್ಮರುತುವಿನ ಮಧ್ಯಾಹ್ನದ ಸೂರ್ಯನ ಕಾಂತಿಯಂತೆ

ಸರ್ವೇ ಬಭೂವುಃ ಪುತ್ರಾಶ್ಚ ಮಹಾಬಲಪರಾಕ್ರಮಾಃ ।
ಗ್ರೀಷ್ಮಮಧ್ಯಾಹ್ನಮಾರ್ತಾಂಡ ಪ್ರಭಾಮುಷ್ಟಕಲೇವರಾಃ ॥೯॥

ಕಪಿಲಸ್ಯ ಮುನೇಃ ಶಾಪಾದ್ಬಭೂವುರ್ಭಸ್ಮಸಾಚ್ಚ ತೇ ।
ರಾಜಾ ರುರೋದ ತಚ್ಛ್ರುತ್ವಾ ಜಗಾಮ ಗಹನೇ ವನೇ ॥೧೦॥

ತಪಶ್ಚಕಾರಾಸಮಂಜೋ ಗಂಗಾನಯನ ಕಾರಣಾತ್ ।
ಲಕ್ಷವರ್ಷಂ ತಪಸ್ತಪ್ತ್ವಾ ಮಮಾರ ಕಾಲಯೋಗತಃ ॥೧೧॥

ಅಂಶುಮಾಂಸ್ತಸ್ಯ ತನಯೋ ಗಂಗಾನಯನಕಾರಣಾತ್ ।
ತಪಃ ಕೃತ್ವಾ ಲಕ್ಷವರ್ಷಂ ಮಮಾರ ಕಾಲಯೋಗತಃ ॥೧೨॥

ಭಗೀರಥಸ್ತಸ್ಯ ಪುತ್ರೋ ಮಹಾಭಾಗವತಃ ಸುಧೀಃ ।
ವೈಷ್ಣವೋ ವಿಷ್ಣುಭಕ್ತಶ್ಚ ಗುಣವಾನಜರಾಮರಃ ॥೧೩॥

---

ಕಾಂತಿಯುಳ್ಳವರಾದ ಮಕ್ಕಳಾದರು. ಆ ಮಕ್ಕಳು ಕಪಿಲಮುನಿಯ ಶಾಪದಿಂದ ಬೂದಿಯಾದರು. ಸಗರಚಕ್ರವರ್ತಿಯು ಈ ಮಾತನ್ನು ಕೇಳಿ ಬಹಳವಾಗಿ ದುಃಖ ಪಟ್ಟು ರಾಜ್ಯವನ್ನು ಬಿಟ್ಟು ಕಾಡಿಗೆ ಹೋದನು. ||೮-೯-೧೦||

ಅಸಮಂಜನು ತನ್ನ ಸಪತ್ನೀ ಮಾತೃವಿನ ಮಕ್ಕಳಾದ ಸಹೋದರರನ್ನು ಉದ್ಧಾರಮಾಡಬೇಕೆಂದು ಗಂಗೆಯನ್ನು ತರಬೇಕೆಂಬ ಉದ್ದೇಶದಿಂದ ಒಂದು ಲಕ್ಷವರ್ಷ ತಪಸ್ಸನ್ನು ಮಾಡಿ ಮರಣಕಾಲ ಬಂದುದರಿಂದ ಸತ್ತುಹೋದನು. ||೧೧||

ಹಾಗೆಯೇ ಆ ಅಸಮಂಜನ ಮಗನಾದ ಅಂಶುಮಂತನೂ ಒಂದು ಲಕ್ಷ ವರ್ಷಗಳ ವರೆಗೆ ಗಂಗಾನದಿಯನ್ನು ಭೂಲೋಕಕ್ಕೆ ಕರೆತರುವುದಕ್ಕೋಸ್ಕರ ತಪಸ್ಸನ್ನು ಮಾಡಿದನು. ಆದರೂ ಅವನ ಆಯುಃಕಾಲವು ಮುಗಿದುಹೋದುದರಿಂದ ಉದ್ದೇಶವು ನೆರವೇರುವುದಕ್ಕೆ ಮುಂಚಿತವಾಗಿಯೇ ಮರಣವನ್ನು ಪಡೆದನು. ||೧೨||

ಮಹಾಭಕ್ತನೂ ಬುದ್ಧಿವಂತನೂ ವಿಷ್ಣುಭಕ್ತಿಯುಳ್ಳವನೂ ಮುಪ್ಪುಮರಣ ವಿಲ್ಲದವನೂ ಆದ ಅಂಶುಮಂತನ ಮಗನಾದ ಭಗೀರಥನು ಗಂಗೆಯನ್ನು ತರಬೇ

ತಪಃ ಕೃತ್ವಾ ಲಕ್ಷವರ್ಷಂ ಗಂಗಾನಯನಕಾರಣಾತ್ ।
ದದರ್ಶ ಕೃಷ್ಣಂ ಗ್ರೀಷ್ಮಸ್ಥ ಸೂರ್ಯೋಽಚಿತಸಮಪ್ರಭಂ ॥೧೪॥

ದ್ವಿಭುಜಂ ಮುರಲೀಹಸ್ತಂ ಕಿಶೋರಂ ಗೋಪವೇಷಿಣಂ ।
ಗೋಪಾಲಸುಂದರೀರೂಪಂ ಭಕ್ತಾನುಗ್ರಹರೂಪಿಣಂ ॥೧೫॥

ಸ್ವೇಚ್ಛಾಮಯಂ ಪರಂಬ್ರಹ್ಮ ಪರಿಪೂರ್ಣತಮಂ ಪ್ರಭುಂ ।
ಬ್ರಹ್ಮವಿಷ್ಣುಶಿವಾದ್ಯೈಶ್ಚ ಸ್ತುತಂ ಮುನಿಗಣೈರ್ನುತಂ ॥೧೬॥

ನಿರ್ಲಿಪ್ತಂ ಸಾಕ್ಷಿರೂಪಂ ಚ ನಿರ್ಗುಣಂ ಪ್ರಕೃತೇಃ ಪರಂ ।
ಈಷದ್ಧಾಸ್ಯ-ಪ್ರಸನ್ನಾಸ್ಯಂ ಭಕ್ತಾನುಗ್ರಹಕಾರಣಂ ॥೧೬॥

ವಹ್ನಿಶುದ್ಧಾಂಶುಕಾಧಾನಂ ರತ್ನಭೂಷಣಭೂಷಿತಂ ।
ತುಷ್ಟಾವ ದೃಷ್ಟ್ವಾ ನೃಪತಿಃ ಪ್ರಣಮ್ಯ ಚ ಪುನಃ ಪುನಃ ॥೧೮॥

ಲೀಲಯಾ ಚ ವರಂ ಪ್ರಾಪ ವಾಂಛಿತಂ ವಂಶಕಾರಣಂ ।
ಕೃತ್ವಾ ಚ ಸ್ತವನಂ ದಿವ್ಯಂ ಪುಲಕಾಂಕಿತವಿಗ್ರಹಃ ॥೧೯॥

---

ಕೆಂದು ಲಕ್ಷವರ್ಷ ತಪಸ್ಸುಮಾಡಿ ಕೋಟಿಸೂರ್ಯಪ್ರಕಾಶಮಾನವಾದ ತೇಜಸ್ಸುಳ್ಳ ಕೃಷ್ಣನನ್ನು ದರ್ಶನಮಾಡಿದನು. ॥೧೩-೧೪॥

ಅವನು ನೋಡಿದ ಕೃಷ್ಣನು ಹೇಗಿದ್ದನೆಂದರೆ :-ಎರಡು ತೋಳುಗಳುಳ್ಳವನು. ಕೈಯಲ್ಲಿ ಕೊಳಲನ್ನು ಹಿಡಿದವನು. ಚಿಕ್ಕವಯಸ್ಸಿನ ಗೊಲ್ಲನಂತಿರುವನು. ಮೂಲ ಪ್ರಕೃತಿಯಿಂದ ಸೃಷ್ಟಿಗೆ ಮೊದಲೇ ಹುಟ್ಟಿ ಗೋಲೋಕಕ್ಕೆ ಆಶ್ರಯಳಾದ ಗೋಪಾಲ ಸುಂದರೀ ಎಂಬ ಶಕ್ತಿದೇವಿಯ ಸ್ವರೂಪನು. ಭಕ್ತರಿಗೆ ವರವನ್ನು ಕೊಡುವ ಸ್ವಭಾವದವನು. ತನ್ನ ಇಚ್ಛೆಯಿಂದ ಸಮಸ್ತಕ್ಕೂ ಆಧಾರವಾದ ಪರಿಪೂರ್ಣವಾದ ಪರಬ್ರಹ್ಮಸ್ವರೂಪನು. ಬ್ರಹ್ಮ ವಿಷ್ಣು ಶಿವರಿಂದ ಪೂಜೆಮಾಡಿಸಿಕೊಳ್ಳತಕ್ಕವನು. ಮಹರ್ಷಿಗಳಿಂದ ನಮಸ್ಕಾರ ಮಾಡಿಸಿಕೊಳ್ಳತಕ್ಕವನು. ॥೧೫-೧೬॥

ಸುಖದುಃಖಾದಿಗಳ ಸಂಬಂಧವಿಲ್ಲದೆ ಕೇವಲ ಸಾಕ್ಷಿಚೇತನನಾಗಿ ಯಾವ ಗುಣವಿಕಾರವೂ ಇಲ್ಲದೆ ಪ್ರಕೃತಿಗಿಂತ ಶ್ರೇಷ್ಠನಾಗಿ ಸಾಕಾರನಾಗಿ ಹುಸಿನಗೆಯಿಂದ ಕೂಡಿದ, ಪರಿಶುದ್ಧವಾದ ವಸ್ತ್ರವನ್ನೂ ರತ್ನಾಭರಣಗಳನ್ನೂ ಧರಿಸಿ ಭಕ್ತರಿಗೆ ಅನುಗ್ರಹಮಾಡುತ್ತಿರುವ ಕೃಷ್ಣನನ್ನು ನೋಡಿ ರಾಜನು ಮತ್ತೆ ಮತ್ತೆ ನಮಸ್ಕಾರ

|| ಶ್ರೀಭಗವಾನುವಾಚ ||

ಭಾರತಂ ಭಾರತೀಶಾಪಾದ್ಗಚ್ಛ ಶೀಘ್ರಂ ಸುರೇಶ್ವರಿ ।
ಸಗರಸ್ಯ ಸುತಾನ್ಸರ್ವಾನ್ಪೂತಾನ್ಕುರು ಮಮಾಜ್ಞಯಾ ॥೨೦॥

ತ್ವತ್ಸ್ಪರ್ಶವಾಯುನಾ ಪೂತಾ ಯಾಸ್ಯಂತಿ ಮಮ ಮಂದಿರಂ ।
ಬಿಭ್ರತೋ ಮಮ ಮೂರ್ತೀಶ್ಚ ದಿವ್ಯ ಸ್ಯಂದನಗಾಮಿನಃ ॥೨೧॥

ಮತ್ಪಾರ್ಷದಾ ಭವಿಷ್ಯಂತಿ ಸರ್ವಕಾಲಂ ನಿರಾಮಯಾಃ ।
ಸಮುಚ್ಛಿದ್ಯ ಕರ್ಮಭೋಗಾನ್ಕೃತಾನ್ ಜನ್ಮನಿ ಜನ್ಮನಿ ॥೨೨॥

ಕೋಟಿಜನ್ಮಾರ್ಜಿತಂ ಪಾಪಂ ಭಾರತೇ ಯತ್ಕೃತಂ ನೃಭಿಃ ।
ಗಂಗಾಯಾ ವಾತಸ್ಪರ್ಶೇನ ನಶ್ಯತೀತಿ ಶ್ರುತೌ ಶ್ರುತಂ ॥೨೩॥

ಸ್ಪರ್ಶನಾದ್ದರ್ಶನಾದ್ದೇವ್ಯಾಃ ಪುಣ್ಯಂ ದಶಗುಣಂ ತತಃ ।
ಮೌಸಲಸ್ನಾನಮಾತ್ರೇಣ ಸಾಮಾನ್ಯೇ ದಿವಸೇ ನೃಣಾಂ ॥೨೪॥

---

ಮಾಡಿ ದಿವ್ಯವಾದ ಸ್ತೋತ್ರವನ್ನು ಮಾಡಿ ತನ್ನ ವಂಶವನ್ನು ಉದ್ಧರಿಸುವ ತನಗಿಷ್ಟವಾದ ವರವನ್ನು ಸುಲಭವಾಗಿ ಪಡೆದನು. ||೧೭-೧೮-೧೯||

ಭಗವಂತನಾದ ಕೃಷ್ಣನು ಗಂಗಾದೇವಿಯನ್ನು ಕುರಿತು ಹೀಗೆ ಹೇಳಿದನು. ಎಲೈ ಗಂಗಾದೇವಿಯೇ, ನೀನು ಸರಸ್ವತಿಯ ಶಾಪದಿಂದ ಭರತಖಂಡಕ್ಕೆ ಹೋಗು. ನನ್ನ ಪ್ಪಣೆಯಿಂದ ಸಗರನ ಅರವತ್ತುಸಾವಿರ ಮಕ್ಕಳನ್ನು ಪರಿಶುದ್ಧರನ್ನಾಗಿ ಮಾಡು. ನಿನ್ನನ್ನು ಮುಟ್ಟಿದ ಗಾಳಿಯಿಂದಲೇ ಪರಿಶುದ್ಧರಾದ ಅವರು ನನ್ನ ಸಮಾನವಾದ ರೂಪವನ್ನು ಹೊಂದಿ ದಿವ್ಯವಾದ ರಥದ ಮೇಲೆ ಕುಳಿತು ನನ್ನ ಗೋಲೋಕಕ್ಕೆ ಬರುವರು. ಅವರು ಪ್ರತಿಯೊಂದು ಜನ್ಮದಲ್ಲಿಯೂ ಮಾಡಿದ ಒಳ್ಳೆಯ ಮತ್ತು ಕೆಟ್ಟ ಕರ್ಮಗಳ ಅಲ್ಪ ಫಲಾನುಭವವನ್ನು ನಾಶಮಾಡಿಕೊಂಡು ಯಾವಾಗಲೂ ರೋಗವಿಲ್ಲದವರಾಗಿ ನನ್ನ ಸೇವಕರಾಗಿರುವರು. ||೨೦-೨೧-೨೨||

ಮನುಷ್ಯರು ಭರತಖಂಡದಲ್ಲಿ ಒಂದುಕೋಟಿ ಜನ್ಮದಲ್ಲಿ ಸಂಪಾದಿಸಿದ ಪಾಪವು ಗಂಗೆಯನ್ನು ಮುಟ್ಟಿದ ಗಾಳಿಯ ಸ್ಪರ್ಶಗಳಿಂದ ನಾಶವಾಗಲು ಪುಣ್ಯವು ಹತ್ತರಷ್ಟು ಹೆಚ್ಚುವುದು. ಈ ಫಲವು ಸಾಮಾನ್ಯದಿನದಲ್ಲಿ ಸುಮ್ಮನೆ ಮುಳುಗಿದವರಿಗೆ ಎಂದರೆ ವಿವೇಕಜ್ಞಾನದಿಂದ ಕೂಡಿದ ಪೂಜಾಸ್ತೋತ್ರಾದಿಗಳಿಲ್ಲದೆ ಒನಕೆಯು ನೀರಿನಲ್ಲಿ ಮುಳುಗಿದಂತೆ ಮುಳುಗಿದವರಿಗೂ ಉಂಟಾಗುವುದು. ||೨೩-೨೪||

ಶತಕೋಟಿಜನ್ಮಸಾಪಂ ನಶ್ಯತೀತಿ ಶ್ರುತೌ ಶ್ರುತಂ ।
ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ॥೨೫॥

ಜನ್ಮಸಂಖ್ಯಾರ್ಜಿತಾನ್ಯೇವ ಕಾಮತೋಽಪಿ ಕೃತಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ಮೌಸಲಸ್ನಾನತೋ ನೃಣಾಂ ॥೨೬॥

ಪುಣ್ಯಾಹಸ್ನಾನತಃ ಪುಣ್ಯಂ ವೇದಾ ನೈವ ವದಂತಿ ಚ ।
ಕಿಂಚಿದ್ವದಂತಿ ತೇ ವಿಪ್ರ ಫಲಮೇವ ಯಥಾಗಮಂ ॥೨೭॥

ಬ್ರಹ್ಮವಿಷ್ಣುಶಿವಾದ್ಯಾಶ್ಚ ಸರ್ವಂ ನೈವ ವದಂತಿ ಚ ।
ಸಾಮಾನ್ಯದಿವಸಸ್ನಾನಸಂಕಲ್ಪಂ ಶ್ರುಣು ಸುಂದರಿ ॥೨೮॥

ಪುಣ್ಯಂ ದಶಗುಣಂ ಚೈವ ಮೌಸಲಸ್ನಾನತಃ ಪರಂ ।
ತತಸ್ತ್ರಿಂಶದ್ಗುಣಂ ಪುಣ್ಯಂ ರವಿಸಂಕ್ರಮಣೇ ದಿನೇ ॥೨೯॥

ಅಮಾಯಾಂ ಚಾಪಿ ತತ್ತುಲ್ಯಂ ದ್ವಿಗುಣಂ ದಕ್ಷಿಣಾಯನೇ ।
ತತೋ ದಶಗುಣಂ ಪುಣ್ಯಂ ನರಾಣಾಮುತ್ತರಾಯಣೇ ॥೩೦॥

---

ನೂರುಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಬ್ರಹ್ಮಹತ್ಯಾದಿ ಮಹಾಪಾಪಗಳು ಎಷ್ಟಿದ್ದರೂ ಅವೆಲ್ಲವೂ, ಮನಃಪೂರ್ವಕವಾಗಿ ಮಾಡಿದ ದುಷ್ಕಾರ್ಯಗಳ ಪಾಪಗಳೆಷ್ಟಿದ್ದರೂ ಅವೆಲ್ಲವೂ ಮುಸಲಸ್ನಾನದಿಂದಲೇ ನಾಶವಾಗುವುವು. ಎಂದು ವೇದದಲ್ಲಿ ಹೇಳಿರುವುದು. ॥೨೫-೨೬॥

ಪುಣ್ಯದಿವಸಗಳಲ್ಲಿ ಗಂಗೆಯ ಸ್ನಾನಫಲವೆಲ್ಲವನ್ನು ಬುದ್ಧಿಗೋಚರವಾಗದುದರಿಂದ ವೇದವೂ ಹೇಳಿಲ್ಲ. ಬ್ರಹ್ಮ, ವಿಷ್ಣು, ಶಿವಾದಿ ದೇವತೆಗಳೂ ಗಂಗೆಯ ಸ್ನಾನದಿಂದುಂಟಾಗುವ ಫಲವೆಲ್ಲವನ್ನು ಹೇಳಲಾರರು. ಎಂದು ಒಂದು ಮಾತನ್ನು ಮಾತ್ರ ಹೇಳಿರುವುದು ! ಸಾಮಾನ್ಯದಿವಸದ ಮೌಸಲಸ್ನಾನಕ್ಕೂ ಸಂಕಲ್ಪಪೂರ್ವಕವಾಗಿ ಮಾಡುವ ಸ್ನಾನಕ್ಕೂ ಇರುವ ಫಲಗಳ ವ್ಯತ್ಯಾಸವನ್ನು ಹೇಳುವೆನು ಕೇಳು. ॥೨೭-೨೮॥

ಮುಸಲಸ್ನಾನಕ್ಕಿಂತಲೂ ಸಂಕಲ್ಪಸ್ನಾನವು ಹತ್ತರಷ್ಟು ಪುಣ್ಯಕರವಾದುದು. ಅದಕ್ಕಿಂತಲೂ ಸಂಕ್ರಮಣದ ದಿನದಲ್ಲಿಯೂ ಅಮಾವಾಸ್ಯೆಯ ದಿನದಲ್ಲಿಯೂ ಸ್ನಾನವು ಮೂವತ್ತರಷ್ಟು ಫಲಕಾರಿಯಾದುದು. ದಕ್ಷಿಣಾಯನದಲ್ಲಿ ಇದರ ಎರಡ

ಚಾತುರ್ಮಾಸ್ಯಾಂ ಪೌರ್ಣಮಾಸ್ಯಾಮನಂತಂ ಪುಣ್ಯಮೇವ ಚ ।
ಅಕ್ಷಯಾಯಾಂ ಚ ತತ್ತುಲ್ಯಂ ಚೈತದ್ವೇದೇ ನಿರೂಪಿತಂ ॥೩೧॥

ಅಸಂಖ್ಯಪುಣ್ಯಫಲದಮೇತೇಷು ಸ್ನಾನದಾನಕಂ ।
ಸಾಮಾನ್ಯದಿವಸಸ್ನಾನಾದ್ದಾನಾಚ್ಛತಗುಣಂ ಫಲಂ ॥೩೨॥

ಮನ್ವಂತರಾದ್ಯಾಯಾಂ ತಿಥೌ ಯುಗಾದ್ಯಾಯಾಂ ತಥೈವ ಚ ।
ಮಾಘಸ್ಯ ಸಿತಸಪ್ತಮ್ಯಾಂ ಭೀಷ್ಮಾಷ್ಟಮ್ಯಾಂ ತಥೈವ ಚ ॥೩೩॥

ಅಥಾಪ್ಯಶೋಕಾಷ್ಟಮ್ಯಾಂ ಚ ನವಮ್ಯಾಂ ಚ ತಥಾ ಹರೇಃ ।
ತತೋಽಪಿ ದ್ವಿಗುಣಂ ಪುಣ್ಯಂ ನಂದಾಯಾಂ ತವ ದುರ್ಲಭಂ ॥೩೪॥

ದಶಹರಾದಶಮ್ಯಾಂ ತು ಯುಗಾದ್ಯಾದಿಸಮಂ ಫಲಂ ।
ನಂದಾ ಸಮಂ ಚ ವಾರುಣ್ಯಾಂ ಮಹತ್ಪೂರ್ವೇ ಚತುರ್ಗುಣಂ ॥೩೫॥

ತತಶ್ಚತುರ್ಗುಣಂ ಪುಣ್ಯಂ ದ್ವಿಮಹತ್ಪೂರ್ವಕೇ ಸತೀ ।
ಪುಣ್ಯಂ ಕೋಟಿಗುಣಂ ಚೈವ ಸಾಮಾನ್ಯಸ್ನಾನತೋಽಪಿ ಯತ್ ॥೩೬॥

---

ರಷ್ಟು ಉತ್ತರಾಯಣದಲ್ಲಿ ಹತ್ತರಷ್ಟು ಚಾತುರ್ಮಾಸ್ಯದಲ್ಲಿ ಪೂರ್ಣಿಮೆಯ ದಿನದಲ್ಲಿಯೂ ಲೆಕ್ಕವಿಲ್ಲದಷ್ಟು ಅಕ್ಷಯ್ಯನವಮಿಯ ದಿನವೂ ಲೆಕ್ಕವಿಲ್ಲದಷ್ಟು ಪುಣ್ಯವುಂಟಾಗುವುದೆಂದು ವೇದದಲ್ಲಿ ಹೇಳಿರುವುದು. ॥೨೯-೩೦-೩೧॥

ಮೇಲೆ ಹೇಳಿದ ಪುಣ್ಯದಿವಸಗಳಲ್ಲಿ ಸ್ನಾನಮಾಡಿ ದಾನಗಳನ್ನು ಮಾಡಿದರೆ ಲೆಕ್ಕವಿಲ್ಲದಷ್ಟು ಪುಣ್ಯಫಲವುಂಟಾಗುವುದು. ಮನ್ವಂತರಾದಿಗಳಲ್ಲಿಯೂ ಯುಗಾದಿಗಳಲ್ಲಿಯೂ ಮಾಘ ಶುದ್ಧ ಸಪ್ತಮಿಯ ದಿನದಲ್ಲಿಯೂ ಭೀಷ್ಮಾಷ್ಟಮಿಯ ದಿನದಲ್ಲಿಯೂ ಅಶೋಕಾಷ್ಟಮಿಯಲ್ಲಿಯೂ ಶ್ರೀರಾಮನವಮಿ ದಿನದಲ್ಲಿಯೂ ದಶಹರ ಪ್ರತಿಪತ್ತಿನಲ್ಲಿಯೂ ಸ್ನಾನದಾದಾನಾದಿಗಳನ್ನು ಮಾಡಿದರೆ ಹಿಂದೆ ಹೇಳಿದುದರ ಎರಡರಷ್ಟು ಫಲವುಂಟಾಗುವುದು. ॥೩೨-೩೩-೩೪॥

ದಶಹರದಶಮಿಯ ದಿನ ಯುಗಾದ್ಯಾದಿಗಳಿಗೆ ಸಮವಾದ ಫಲವು. ಮಹಾವಾರುಣಿಯ ದಿನ (ನಂದಾ) ದಶಹರಪ್ರತಿಪತ್ತಿನ ನಾಲ್ಕರಷ್ಟು ಮಹಾಮಹಾವಾರುಣಿಯ ದಿನ ಹಿಂದೆ ಹೇಳಿದುದರ ನಾಲ್ಕರಷ್ಟು ಫಲವು ಬರುವುದು. ಚಂದ್ರಗ್ರಹಣದಲ್ಲಿ ಸಾಮಾನ್ಯಸ್ನಾನದ ಕೋಟಿಪಾಲು ಹೆಚ್ಚು ಫಲವು. ಇದಕ್ಕಿಂತ ಸೂರ್ಯಗ್ರಹಣದಲ್ಲಿ

ಚಂದ್ರೋಪರಾಗಸಮಯೇ ಸೂರ್ಯೇ ದಶಗುಣಂ ತತಃ ।
ಪುಣ್ಯಮರ್ಧೋದಯೇ ಕಾಲೇ ತತಶ್ಶತಗುಣಂ ಫಲಂ ॥೩೭॥

ಇತ್ಯೇವಮುಕ್ತ್ವಾ ದೇವೇಶೋ ವಿರರಾಮ ತಯೋಃ ಪುರಃ ।
ತಮುವಾಚ ತತೋ ಗಂಗಾ ಭಕ್ತಿನಮ್ರಾತ್ಮಕಂಧರಾ ॥೩೮॥

॥ ಗಂಗೋವಾಚ ॥

ಯಾಮಿ ಚೇದ್ಭಾರತಂ ನಾಥ ಭಾರತೀ ಶಾಪತಃ ಪುರಾ ।
ತವಾಜ್ಞಯಾ ಚ ರಾಜೇಂದ್ರ ತಪಸಾ ಚೈವ ಸಾಂಪ್ರತಂ ॥೩೯॥

ದಾಸ್ಯಂತಿ ಪಾಪಿನೋ ಮಹ್ಯಂ ಪಾಪಾನಿ ಯಾನಿ ಕಾನಿ ಚ ।
ತಾನಿ ಮೇ ಕೇನ ನಶ್ಯಂತಿ ತಮುಪಾಯಂ ವದ ಪ್ರಭೋ ॥೪೦॥

ಕತಿಕಾಲಂ ಪರಿಮಿತಂ ಸ್ಥಿತಿರ್ಮೇ ತತ್ರ ಭಾರತೇ ।
ಕದಾ ಯಾಸ್ಯಾಮಿ ದೇವೇಶ ತದ್ವಿಷ್ಣೋಃ ಪರಮಂ ಪದಂ ॥೪೧॥

---

ಹತ್ತುಪಾಲು ಹೆಚ್ಚು, ಇದಕ್ಕಿಂತಲೂ ಅರ್ಧೋಧಯ ಕಾಲದಲ್ಲಿ ನೂರರಷ್ಟು ಹೆಚ್ಚು ಫಲವೂ ಬರುವುದು. ॥೩೫-೩೬-೩೭॥

ಶ್ರೀಕೃಷ್ಣನು ಗಂಗಾಭಗಿರಥರೆದುರಿಗೆ ಹೀಗೆ ಹೇಳಿ ಸುಮ್ಮನಾದನು. ಆಮೇಲೆ ಗಂಗಾದೇವಿಯು ಭಕ್ತಿಯಿಂದ ಕುತ್ತಿಗೆಯನ್ನು ಬಗ್ಗಿಸಿಕೊಂಡು ಆ ಕೃಷ್ಣನನ್ನು ಕುರಿತು ಹೇಳಿದಳು. ॥೩೮॥

ಗಂಗೆಯು ಶ್ರೀಕೃಷ್ಣನನ್ನು ಕುರಿತು ಓ ಸ್ವಾಮಿಯೇ, ಸರಸ್ವತಿಯ ಶಾಪದಿಂದಲೂ ನಿನ್ನ ಅಪ್ಪಣೆಯಿಂದಲೂ ಭಗೀರಥರಾಜನ ತಪಸ್ಸಿನಿಂದಲೂ ನಾನೀಗ ಭರತಖಂಡಕ್ಕೆ ಹೋದರೆ ಅಲ್ಲಿ ಪಾಪಿಗಳು ತಮ್ಮ ಪಾಪವನ್ನೆಲ್ಲನ್ನೂ ನನಗೆ ಕೊಡುವರು. ಆಗ ನನಗೆ ಬಂದ ಪಾಪಗಳು ಯಾವ ಉಪಾಯದಿಂದ ನಾಶವಾಗುವುವೋ ಆ ಉಪಾಯವನ್ನು ಹೇಳು. ನಾನು ಭರತಖಂಡದಲ್ಲಿ ಎಷ್ಟುಕಾಲವಿರಬೇಕು ? ಯಾವಾಗ ವಿಷ್ಣುವಿನ ಸ್ಥಳವಾದ ವೈಕುಂಠಲೋಕಕ್ಕೆ ಹೋಗುವೆನು ? ದಯವಿಟ್ಟು ತಿಳಿಸು. ॥೩೯-೪೦-೪೧॥

ಮಮಾಽನ್ಯದ್ವಾಂಛಿತಂ ಯದ್ಯತ್ಸರ್ವಂ ಜಾನಾಸಿ ಸರ್ವವಿತ್ ।
ಸರ್ವಾಂತರಾತ್ಮನ್ಸರ್ವಜ್ಞ ತದುಪಾಯಂ ವದ ಪ್ರಭೋ ॥೪೨॥

॥ ಶ್ರೀ ಭಗವಾನುವಾಚ ॥

ಜಾನಾಮಿ ವಾಂಛಿತಂ ಗಂಗೇ ತವ ಸರ್ವಂ ಸುರೇಶ್ವರಿ ।
ಪತಿಸ್ತೇ ದ್ರವರೂಪಾಯಾ ಲವಣೋದೋ ಭವಿಷ್ಯತಿ ॥೪೩॥

ಸ ಮಮಾಂಶ ಸ್ವರೂಪಶ್ಚ ತ್ವಂ ಚ ಲಕ್ಷ್ಮೀ ಸ್ವರೂಪಿಣೀ ।
ವಿದಗ್ಧಾಯಾ ವಿದಗ್ಧೇನ ಸಂಗಮೋ ಗುಣವಾನ್ಭುವಿ ॥೪೪॥

ಯಾವಂತ್ಯಃ ಸಂತಿ ನದ್ಯಶ್ಚ ಭಾರತ್ಯಾದ್ಯಾಶ್ಚ ಭಾರತೇ ।
ಸೌಭಾಗ್ಯಾ ತ್ವಂ ಚ ತಾಸ್ವೇವ ಲವಣೋದಸ್ಯ ಸೌರತೇ ॥೪೫॥

ಅದ್ಯಪ್ರಭೃತಿ ದೇವೇಶಿ ಕಲೇಃ ಪಂಚಸಹಸ್ರಕಂ ।
ವರ್ಷಂ ಸ್ಥಿತಿಸ್ತೇ ಭಾರತ್ಯಾಃ ಶಾಪೇನ ಭಾರತೇ ಭುವಿ ॥೪೬॥

ನಿತ್ಯಂ ತ್ವಮಬ್ಧಿನಾ ಸಾರ್ಧಂ ಕರಿಷ್ಯಸಿ ರಹೋ ರತಿಃ ।
ತ್ವಮೇವ ರಸಿಕಾ ದೇವೀ ರಸಿಕೇಂದ್ರೇಣ ಸಂಯುತಾ ॥೪೭॥

---

ಸರ್ವಾಂತರ್ಯಾಮಿಯೂ ಸರ್ವಜ್ಞನೂ ಎಲ್ಲವನ್ನೂ ಬಲ್ಲವನೂ ಆದ ಓ ಸ್ವಾಮಿಯೇ, ನೀನು ನನ್ನ ಬೇರೆ ಇಷ್ಟಾರ್ಥಗಳೇನೆಂಬುದನ್ನೂ ತಿಳಿದಿರುವೆ. ಆದುದರಿಂದ ನಾನು ಮತ್ತೆ ವೈಕುಂಠದಲ್ಲಿ ಹರಿಯ ಸಮೀಪದಲ್ಲಿರುವ ಉಪಾಯವನ್ನು ಹೇಳು ಎಂದು ಗಂಗೆಯು ಕೇಳಿದಳು. ॥೪೨॥

ಭಗವಂತನು ಹೇಳಿದನು— ಗಂಗಾದೇವಿಯೇ, ನಿನ್ನ ಅಪೇಕ್ಷೆಯನ್ನು ನಾನು ಬಲ್ಲೆನು. ದ್ರವರೂಪಳಾದ ನಿನಗೆ ಲವಣಸಮುದ್ರನು ಪತಿಯಾಗುವನು. ಆ ಸಮುದ್ರನು ನನ್ನ ಅಂಶದವನು. ನೀನು ಲಕ್ಷ್ಮಿಯ ಅಂಶದವಳು. ರಸಿಕಳಿಗೆ ರಸಿಕನೊಡನೆ ಭೂಮಿಯಲ್ಲುಂಟಾಗುವ ಸಂಬಂಧವು ಗುಣಯುಕ್ತವಾದುದು. ಭರತಖಂಡದಲ್ಲಿ ಸರಸ್ವತಿ ಮುಂತಾದ ಎಷ್ಟು ನದಿಗಳಿವೆಯೋ ಅವುಗಳೆಲ್ಲಕ್ಕಿಂತಲೂ ನೀನು ಸಮುದ್ರನ ಸಂಬಂಧದಲ್ಲಿ ಮುಖ್ಯಳಾಗಿರುವೆ. ॥೪೩-೪೪-೪೫॥

ಗಂಗಾದೇವಿಯೇ, ಸರಸ್ವತಿಯ ಶಾಪದಿಂದ ಭಾರತ ಭೂಮಿಯಲ್ಲಿ ನೀನು ಕಲಿಯುಗದಲ್ಲಿ ಐದುಸಾವಿರ ವರ್ಷಗಳವರೆಗೆ ಇರುವೆ. ಪ್ರತಿದಿನವೂ ಸಮುದ್ರ

ತ್ವಾಂ ಸ್ತೋಷ್ಯಂತಿ ಚ ಸ್ತೋತ್ರೇಣ ಭಗೀರಥಕೃತೇನ ಚ ।
ಭಾರತಸ್ಥಾ ಜನಾಸ್ಸರ್ವೇ ಪೂಜಯಿಷ್ಯಂತಿ ಭಕ್ತಿತಃ ॥೪೮॥

ಕಣ್ವಶಾಖೋಕ್ತಧ್ಯಾನೇನ ಧ್ಯಾತ್ವಾ ತ್ವಾಂ ಪೂಜಯಿಷ್ಯತಿ ।
ಯಸ್ಸ್ತೌತಿ ಪ್ರಣಮೇನ್ನಿತ್ಯಂ ಸೋಽಶ್ವಮೇಧಫಲಂ ಲಭೇತ್ ॥೪೯॥

ಗಂಗಾ ಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥೫೦॥

ಸಹಸ್ರಪಾಪಿನಾಂ ಸ್ನಾನಾದ್ಯತ್ಪಾಪಂ ತೇ ಭವಿಷ್ಯತಿ ।
ಪ್ರಕೃತೇರ್ಭಕ್ತಸಂಸ್ಪರ್ಶಾದೇವ ತದ್ಧಿ ವಿನಂಕ್ಷ್ಯತಿ ॥೫೧॥

ಪಾಪಿನಾಂ ತು ಸಹಸ್ರಾಣಾಂ ಶವಸ್ಪರ್ಶೇನ ಯತ್ತ್ವಯಿ ।
ತನ್ಮಂತ್ರೋಪಾಸಕಸ್ನಾನಾತ್ತದಘಂ ಚ ವಿನಂಕ್ಷ್ಯತಿ ॥೫೨॥

---

ನೊಡನೆ ಗೋಪ್ಯವಾಗಿ ಸುಖದಲ್ಲಿರುವೆ. ನೀವಿಬ್ಬರೂ ರಸಿಕರಾದುದರಿಂದ ನಿಮ್ಮ ಕೂಟವು ಮಹಾಸುಖಪ್ರದವಾಗಿರುವುದು. ||೪೬-೪೭||

ಭಾರತಭೂಮಿಯಲ್ಲಿರುವ ಜನರೆಲ್ಲರೂ ಭಗೀರಥನು ಮಾಡಿದ ಸ್ತೋತ್ರದಿಂದ ನಿನ್ನನ್ನು ಸ್ತೋತ್ರಮಾಡಿ ಭಕ್ತಿಯಿಂದ ಪೂಜಿಸುವರು. ನಿನ್ನನ್ನು ಯಾವ ಮನುಷ್ಯನು ಕಣ್ವಶಾಖೆಯಲ್ಲಿ ಹೇಳಿದ ಧ್ಯಾನದಿಂದ ಪ್ರತಿದಿನವೂ ಧ್ಯಾನಮಾಡಿ ಪೂಜಿಸಿ ನಮಸ್ಕಾರಮಾಡುವನೋ ಅವನು ಅಶ್ವಮೇಧವೆಂಬ ಯಜ್ಞದ ಫಲವನ್ನು ಹೊಂದುವನು. ನೂರು ಗಾವುದ ದೂರದಲ್ಲಿದ್ದರೂ ಯಾವ ಮನುಷ್ಯನು ಗಂಗಾ ಗಂಗಾ ಎಂಬುದಾಗಿ ಹೇಳುವನೋ ಅವನು ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ವಿಷ್ಣುಲೋಕಕ್ಕೆ ಹೋಗುವನು. ||೪೮-೪೯-೫೦||

ಸಾವಿರ ಪಾಪಿಗಳು ಸ್ನಾನಮಾಡುವುದರಿಂದ ಯಾವ ಪಾಪವು ನಿನಗೆ ಉಂಟಾಗುವುದೋ ಅದು ಮೂಲಪ್ರಕೃತಿಯಾದ ಭುವನೇಶ್ವರಿಯ ಭಕ್ತನೊಬ್ಬನ ಸ್ಪರ್ಶದಿಂದ ನಾಶವಾಗುವುದು. ಒಂದು ಸಾವಿರ ಪಾಪಿಗಳ ಶವಸ್ಪರ್ಶದಿಂದ ಉಂಟಾಗುವ ಪಾಪವು ಭುವನೇಶ್ವರಿಯ ಮಂತ್ರೋಪಾಸನೆ ಮಾಡುವವನೊಬ್ಬನ ಸ್ನಾನದಿಂದ ನಾಶವಾಗುವುದು. ||೫೧-೫೨||

ತತ್ರೈವ ತ್ವಮಧಿಷ್ಠಾನಂ ಕರಿಷ್ಯಸ್ಯಘಮೋಚನಂ ।
ಸಾರ್ಧಂ ಸರಿದ್ಭಿಃ ಶ್ರೇಷ್ಠಾಭಿಃ ಸರಸ್ವತ್ಯಾದಿಭಿಃ ಶುಭೇ ॥೫೩॥

ತತ್ತು ತೀರ್ಥಂ ಭವೇತ್ಸದ್ಯೋ ಯತ್ರ ತದ್ಗುಣಕೀರ್ತನಂ ।
ತ್ವದ್ರೇಣುಸ್ಪರ್ಶಮಾತ್ರೇಣ ಪೂತೋ ಭವತಿ ಪಾತಕೀ ॥೫೪॥

ರೇಣುಪ್ರಮಾಣವರ್ಷಂ ಚ ದೇವೀ ಲೋಕೇ ವಸೇದ್ಧ್ರುವಂ ।
ಜ್ಞಾನೇನ ತ್ವಯಿ ಯೇ ಭಕ್ತ್ಯಾ ಮನ್ನಾಮಸ್ಮೃತಿಪೂರ್ವಕಂ ॥೫೫॥

ಸಮುತ್ಸೃಜಂತಿ ಪ್ರಾಣಾಂಶ್ಚ ತೇ ಗಚ್ಛಂತಿ ಹರೇಃ ಪದಂ ।
ಪಾರ್ಷದಪ್ರವರಾಸ್ತೇ ಚ ಭವಿಷ್ಯಂತಿ ಹರೇಃ ಚಿರಂ ॥೫೬॥
ಲಯಂ ಪ್ರಾಕೃತಿಕಂ ಚೇತಿ ದ್ರಕ್ಷ್ಯಂತಿ ಚಾಽಪ್ಯಸಂಖ್ಯಕಂ ।

---

ಶ್ರೇಷ್ಠವಾದ ಸರಸ್ವತ್ಯಾದಿ ನದಿಗಳಿಂದ ಕೂಡಿ ನೀನೆಲ್ಲಿರುವೆಯೋ ಅಲ್ಲಿಯೇ ಜನರ ಪಾಪಗಳನ್ನು ನಾಶಮಾಡುವೆ. ॥೫೩॥

ಎಲ್ಲಿ ಮೂಲಪ್ರಕೃತಿಯಾದ ಭುವನೇಶ್ವರಿಯ ಗುಣಕೀರ್ತನೆಯಾಗುವುದೋ ಆ ನಿನ್ನ ದಡದಲ್ಲಿ ಜನರು ನಿನ್ನ ನೀರಿನ ಹನಿಯ ಸ್ಪರ್ಶದಿಂದ ತಮ್ಮ ಪಾಪಗಳನ್ನು ಕಳೆದುಕೊಂಡು ಶುದ್ಧರಾಗುವರು. ಅವರು ಸ್ನಾನಮಾಡಿದ ನೀರಿನಲ್ಲಿ ಎಷ್ಟು ಹನಿಗಳಿವೆಯೋ ಅಷ್ಟು ವರ್ಷಗಳು ದೇವೀಲೋಕವಾದ ಮಣಿದ್ವೀಪದಲ್ಲಿ ವಾಸಮಾಡುವರು. ನಿನ್ನಲ್ಲಿ ಭಕ್ತಿಯಿಂದ ನನ್ನ ನಾಮವನ್ನು ಸ್ಮರಿಸುತ್ತಾ ಯಾವ ಭಕ್ತರು ಮನಃಪೂರ್ವಕವಾಗಿ ಪ್ರಾಣವನ್ನು ಬಿಡುವರೋ ಅವರು ಹರಿಯಸ್ಥಾನವಾದ ವೈಕುಂಠಕ್ಕೆ ಹೋಗುವರು. ಅಲ್ಲಿ ಬಹುಕಾಲದ ವರೆಗೆ ಹರಿಯ ಸೇವಕರಾಗಿರುವರು. ಮತ್ತು ಲೆಕ್ಕವಿಲ್ಲದಷ್ಟು ಪ್ರಾಕೃತ ಪ್ರಳಯುಗಳನ್ನು ನೋಡುವರು. ॥೫೪-೫೫-೫೬॥

ಮರಣಹೊಂದಿದವನು ಮಹಾಪುಣ್ಯವಂತನಾಗಿದ್ದರೆ ಅವನ ಶವವನ್ನು ನಿನ್ನಲ್ಲಿ ಹಾಕುವರು. ಅವನ ಶವವು (ಮೂಳೆಯು) ಎಷ್ಟುದಿನ ನಿನ್ನಲ್ಲಿರುವುದೋ ಅಷ್ಟುದಿನ ವೈಕುಂಠದಲ್ಲಿ ಅವನಿರುವನು. ಆಮೇಲೆ ಅನೇಕ ಶರೀರಗಳನ್ನು ಪಡೆದು ತನ್ನ ಕರ್ಮಫಲವನ್ನನುಭವಿಸಿದ ಮೇಲೆ ಅವನಿಗೆ ನನ್ನ ಸಾರೂಪ್ಯವನ್ನು ಕೊಟ್ಟು ನನ್ನ ಸಮೀಪದ ಸೇವಕನನ್ನಾಗಿ ಮಾಡಿಟ್ಟುಕೊಳ್ಳುವೆನು. ॥೫೭-೫೮॥

ನ್ಮೃತಸ್ಯ ಬಹುಪುಣ್ಯೇನ ತಚ್ಛವಂ ತ್ವಯಿ ವಿನ್ಯಸೇತ್ ॥೫೭॥

ಪ್ರಯಾಂತಿ ಸ ಚ ವೈಕುಂಠಂ ಯಾವದಹ್ನಃ ಸ್ಥಿತಿಸ್ತ್ವಯಿ ।
ಕಾಯವ್ಯೂಹಂ ತತಃ ಕೃತ್ವಾ ಭೋಜಯಿತ್ವಾ ಸ್ವಕರ್ಮಕಂ ॥೫೮॥

ತಸ್ಮೈ ದದಾಮಿ ಸಾರೂಪ್ಯಂ ಕರೋಮಿ ತಂ ಚ ಪಾರ್ಷದಂ ।
ಅಜ್ಞಾನೀ ತ್ವಜ್ಜಲಸ್ಪರ್ಶಾದ್ಯದಿ ಪ್ರಾಣಾನ್ಸಮುತ್ಸೃಜೇತ್ ॥೫೯॥

ತಸ್ಮೈ ದದಾಮಿ ಸಾಲೋಕ್ಯಂ ಕರೋಮಿ ತಂ ಚ ಪಾರ್ಷದಂ ।
ಅನ್ಯತ್ರ ವಾ ತ್ಯಜೇತ್ಪ್ರಾಣಾಂ ಸ್ತ್ವನ್ನಾಮಸ್ಮೃತಿಪೂರ್ವಕಂ ॥೬೦॥

ತಸ್ಮೈ ದದಾಮಿ ಸಾಲೋಕ್ಯಂ ಯಾವದ್ವೈ ಬ್ರಹ್ಮಣೋ ವಯಃ ।
ಅನ್ಯತ್ರ ವಾ ತ್ಯಜೇತ್ಪ್ರಾಣಾಂಸ್ತ್ವನ್ನಾಮಸ್ಮೃತಿಪೂರ್ವಕಂ ॥೬೧॥

ತಸ್ಮೈ ದದಾಮಿ ಸಾರೂಪ್ಯಮಸಂಖ್ಯಂ ಪ್ರಾಕೃತಂ ಲಯಂ ।
ರತ್ನೇಂದ್ರಸಾರನಿರ್ಮಾಣಯಾನೇನ ಸಹ ಪಾರ್ಷದೈಃ ॥೬೨॥

ಸದ್ಯಃ ಪ್ರಯಾತಿ ಗೋಲೋಕಂ ಮಮ ತುಲ್ಯೋ ಭವೇದ್ಧ್ರುವಂ ।
ತೀರ್ಥೇಽಪ್ಯತೀರ್ಥೇ ಮರಣೇ ವಿಶೇಷೋ ನಾಸ್ತಿ ಕಶ್ಚನ ॥೬೩॥

---

ಅಜ್ಞಾನಿಯಾದವನು ನಿನ್ನ ನೀರನ್ನು ಮುಟ್ಟಿ ಪ್ರಾಣವನ್ನು ಬಿಟ್ಟರೆ ಅವನಿಗೆ ನನ್ನ ಲೋಕವಾಸವನ್ನು ಕೊಟ್ಟು ಅವನನ್ನು ನನ್ನ ಸೇವಕನನ್ನಾಗಿ ಮಾಡಿಕೊಳ್ಳುವೆನು. ಬೇರೆ ಕಡೆಯಲ್ಲಿ ನಿನ್ನ ನಾಮಸ್ಮರಣೆ ಮಾಡುತ್ತಾ ಪ್ರಾಣವನ್ನು ಬಿಟ್ಟರೆ ಅವನಿಗೂ ಬ್ರಹ್ಮನ ಆಯುಸ್ಸು ಮುಗಿಯುವ ವರೆಗೂ ಸಾಲೋಕ್ಯಮುಕ್ತಿಯನ್ನು ಕೊಡುವೆನು. ॥೫೯-೬೦॥

ಮನುಷ್ಯನು ಬೇರೆಯ ಸ್ಥಳದಲ್ಲಿದ್ದರೂ ಭಕ್ತಿಯಿಂದ ನಿನ್ನ ನಾಮಸ್ಮರಣೆ ಮಾಡುತ್ತಾ ಪ್ರಾಣವನ್ನು ಬಿಟ್ಟರೆ ಅನೇಕ ಪ್ರಾಕೃತ ಪ್ರಳಯಗಳ ವರೆಗೆ ನನ್ನ ಸಾರೂಪ್ಯಮುಕ್ತಿಯನ್ನವನಿಗೆ ಕೊಡುವೆನು. ಅವನು ಇಂದ್ರನೀಲರತ್ನದಿಂದ ಮಾಡಿದ ವಿಮಾನವನ್ನೇರಿ ನನ್ನ ಸೇವಕರೊಡನೆ ಗೋಲೋಕಕ್ಕೆ ಹೋಗಿ ನನ್ನ ಸಮಾನನಾಗುವನು. ಇದು ನಿಜವು. ॥೬೧-೬೨॥

ನನ್ನ ಮಂತ್ರಜಪ ಎಂದರೆ ಗೋಪಾಲಸುಂದರೀ ಮಂತ್ರೋಪಾಸನ ಮಾಡ ತಕ್ಕವರಿಗೂ ಪ್ರತಿದಿನವೂ ದೇವೀನೈವೇದ್ಯವನ್ನೂ ಭೋಜನಮಾಡತಕ್ಕವರಿಗೂ

ಮನ್ಮಂತ್ರೋಪಾಸಕಾನಾಂ ತು ನಿತ್ಯಂ ನೈವೇದ್ಯಭೋಜಿನಾಂ ।
ಪೂತಂ ಕರ್ತುಂ ಸ ಶಕ್ತೋ ಹಿ ಲೀಲಯಾ ಭುವನತ್ರಯಂ ॥೬೪॥

ರತ್ನೇಂದ್ರಸಾರಯಾನೇನ ಗೋಲೋಕಂ ಸಂಪ್ರಯಾಂತಿ ಚ ।
ಮದ್ಭಕ್ತಾ ಬಾಂಧವಾ ಯೇಷಾಂ ತೇಽಪಿ ಪಶ್ವಾದಯೋಽಪಿ ಹಿ ॥೬೫॥

ಪ್ರಯಾಂತಿ ರತ್ನಯಾನೇನ ಗೋಲೋಕಂ ಚಾತಿ ದುರ್ಲಭಂ ।
ಯತ್ರ ಯತ್ರ ಸ್ಮೃತಾಸ್ತೇ ಚ ಜ್ಞಾನೇನ ಜ್ಞಾನಿನಃ ಸತಿ ॥೬೬॥

ಜೀವನ್ಮುಕ್ತಾಶ್ಚ ತೇ ಪೂತಾ ಮದ್ಭಕ್ತೇಃ ಸಂವಿಧಾನತಃ ।
ಇತ್ಯುಕ್ತ್ವಾ ಶ್ರೀಹರಿಸ್ತಾಂ ಚ ಪ್ರತ್ಯುವಾಚ ಭಗೀರಥಂ ॥೬೭॥

ಸ್ತುಹಿ ಗಂಗಾಮಿಮಾಂ ಭಕ್ತ್ಯಾ ಪೂಜಾಂ ಚ ಕುರು ಸಾಂಪ್ರತಂ ।
ಭಗೀರಥಸ್ತಾಂ ತುಷ್ಟಾವ ಪೂಜಯಾಮಾಸ ಭಕ್ತಿತಃ ॥೬೮॥

ಕೌಥುಮೋಕ್ತೇನ ಧ್ಯಾನೇನ ಸ್ತೋತ್ರೇಣಾಪಿ ಪುನಃ ಪುನಃ ।
ಪ್ರಣನಾಮ ಚ ಶ್ರೀಕೃಷ್ಣಂ ಪರಮಾತ್ಮಾನಮೀಶ್ವರಂ ॥೬೯॥
ಭಗೀರಥಶ್ಚ ಗಂಗಾಂ ಚ ಸೋಽಂತರ್ಧಾನಂ ಚಕಾರ ಹ ।

---

ತೀರ್ಥಕ್ಷೇತ್ರದಲ್ಲಾಗಲೀ ಸಾಮಾನ್ಯಸ್ಥಳದಲ್ಲಾಗಲೀ ಮರಣವಾದಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ಏಕೆಂದರೆ, ಅಂತಹ ಉಪಾಸಕನು ಸುಲಭವಾಗಿ ಮೂರು ಲೋಕವನ್ನೂ ಪರಿಶುದ್ಧಮಾಡಲು ಶಕ್ತನಾಗಿರುತ್ತಾನೆ. ॥೬೩-೬೪॥

ನನ್ನ ಭಕ್ತರೂ ಅವರ ಬಂಧುಗಳೂ ಅವರ ಪಶುಗಳೂ ಸಹ ಇಂದ್ರನೀಲ ಮಣಿಯಿಂದ ಮಾಡಿದ ವಿಮಾನದಲ್ಲಿ ಕುಳಿತು ದುರ್ಲಭವಾದ ಗೋಲೋಕಕ್ಕೆ ಹೋಗುವರು. ॥೬೫॥

ಎಲೈ ಪತಿವ್ರತೆಯಾದ ಗಂಗೆಯೇ, ಜ್ಞಾನಿಗಳು ಎಲ್ಲಿದ್ದರೂ ತಮ್ಮ ಜ್ಞಾನದಿಂದ ಭುವನೇಶ್ವರೀ ದೇವಿಯನ್ನು ಸ್ಮರಣಮಾಡುವರು. ಅವರು ನನ್ನ ಭಕ್ತಿಯ ಮಹಿಮೆಯಿಂದ ಜೀವನ್ಮುಕ್ತರಾಗಿ ಪರಿಶುದ್ಧರಾಗುವರು. ಹೀಗೆಂದು ಹರಿಯು ಗಂಗೆಗೆ ಹೇಳಿ ಭಗೀರಥನನ್ನು ಕುರಿತು ಮಾತನಾಡುವನು. ॥೬೬-೬೭॥

ಭಗೀರಥನೇ, ಈ ಗಂಗೆಯನ್ನು ಭಕ್ತಿಯಿಂದ ಸ್ತೋತ್ರಮಾಡಿ ಪೂಜಿಸು. ಎನ್ನಲು ಭಗೀರಥನು ಆಗ ಗಂಗೆಯನ್ನು ಸ್ತೋತ್ರಮಾಡಿ ಭಕ್ತಿಯಿಂದ ಪೂಜಿಸಿ

ಕೇನ ಧ್ಯಾನೇನ ಸ್ತೋತ್ರೇಣ ಕೇನ ಪೂಜಾಕ್ರಮೇಣ ಚ ॥೭೦॥

ಪೂಜಾಂ ಚಕಾರ ನೃಪತಿರ್ವದ ವೇದವಿದಾಂ ವರ ।
ಸ್ನಾತ್ವಾ ನಿತ್ಯಕ್ರಿಯಾಂ ಕೃತ್ವಾ ಧೃತ್ವಾ ಧೌತೇ ಚ ವಾಸಸೀ ॥೭೧॥

ಸಂಪೂಜ್ಯ ದೇವಷಟ್ಕಂ ಚ ಸಂಯತೋ ಭಕ್ತಿಪೂರ್ವಕಂ ।
ಗಣೇಶಂ ಚ ದಿನೇಶಂ ಚ ವಹ್ನಿಂ ವಿಷ್ಣುಂ ಶಿವಂ ಶಿವಾಂ ॥೭೨॥

ಸಂಪೂಜ್ಯ ದೇವಷಟ್ಕಂ ಚ ಸೋಽಧಿಕಾರೀ ಚ ಪೂಜನೇ ।
ಗಣೇಶಂ ವಿಘ್ನನಾಶಾಯ ಆರೋಗ್ಯಾಯ ದಿವಾಕರಂ ॥೭೩॥

ವಹ್ನಿಂ ಶೌಚಾಯ ವಿಷ್ಣುಂ ಚ ಲಕ್ಷ್ಮ್ಯರ್ಥಂ ಪೂಜಯೇನ್ನರಃ ।
ಶಿವಂ ಜ್ಞಾನಾಯ ಜ್ಞಾನೇಶಂ ಶಿವಾಂ ಚ ಮುಕ್ತಿಸಿದ್ಧಯೇ ॥೭೪॥

---

ಕೌಥುಮಿಶಾಖೆಯಲ್ಲಿ ಹೇಳಿದ ಧ್ಯಾನಕ್ರಮದಿಂದ ಮತ್ತೆ ಮತ್ತೆ ಸ್ತೋತ್ರಮಾಡಿ ಪೂಜಿಸಿ ಪರಮಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿದನು. ಆಮೇಲೆ ಭಗೀರಥನೂ ಗಂಗೆಯೂ ಕಣ್ಮರೆಯಾದರು. ॥೬೮-೬೯॥

ವೇದವನ್ನು ತಿಳಿದವರಲ್ಲಿ ಶ್ರೇಷ್ಠನಾದ ನಾರಾಯಣಮುನಿಯೇ, ಯಾವ ಧ್ಯಾನಸ್ತೋತ್ರಗಳಿಂದ ಯಾವ ಪೂಜಾಕ್ರಮದಿಂದ ಆ ರಾಜನು ಗಂಗೆಯನ್ನು ಪೂಜಿಸಿದನು? ಹೇಳು, ಎಂದು ನಾರದಮುನಿಯು ಕೇಳಿದನು. ॥೭೦॥

ನಾರಾಯಣನು ಹೇಳಿದನು—ಸ್ನಾನಮಾಡಿ ಪರಿಶುದ್ಧವಾದ ವಸ್ತ್ರಗಳನ್ನುಟ್ಟು ಸಂಧ್ಯಾವಂದನಾದಿಗಳನ್ನು ಮಾಡಿ ಗಣೇಶ, ಸೂರ್ಯ, ಅಗ್ನಿ, ವಿಷ್ಣು, ಶಿವ, ಪಾರ್ವತೀ ಈ ಆರು ದೇವತೆಗಳನ್ನು ಪೂಜಿಸಬೇಕು. ಈ ಆರು ದೇವತೆಗಳನ್ನು ಪೂಜಿಸಿದವನೇ ಗಂಗೆಯನ್ನು ಪೂಜಿಸುವುದಕ್ಕೆ ಅಧಿಕಾರಿಯಾಗುವನು. ॥೭೧-೭೨॥

ವಿಘ್ನನಾಶಕ್ಕಾಗಿ ಗಣೇಶನನ್ನೂ ಆರೋಗ್ಯಕ್ಕಾಗಿ ಸೂರ್ಯನನ್ನೂ ಶುದ್ಧಿಗಾಗಿ ಅಗ್ನಿಯನ್ನೂ ಧನಪ್ರಾಪ್ತಿಗಾಗಿ ವಿಷ್ಣುವನ್ನೂ ಜ್ಞಾನಕ್ಕಾಗಿ ಜ್ಞಾನಾಧಿಪತಿಯಾದ ಶಿವನನ್ನೂ ಮೋಕ್ಷಫಲಪ್ರಾಪ್ತಿಗಾಗಿ ಪಾರ್ವತಿಯನ್ನೂ ಎಂದರೆ ಮೂಲಪ್ರಕೃತಿಯಾದ ಭುವನೇಶ್ವರಿಯನ್ನು ಪೂಜಿಸಿ ಬುದ್ಧಿವಂತನಾದವನು ಈ ಗಂಗೆಯನ್ನು

ಸಂಪೂಜ್ಯೈತಾಂ ಲಭೇತ್ಪ್ರಾಜ್ಞೋ ವಿಪರೀತಮತೋಽನ್ಯಥಾ ।
ದಧ್ಯಾವನೇನ ಧ್ಯಾನೇನ ತದ್ಧ್ಯಾನಂ ಶೃಣು ನಾರದ ॥೭೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಏಕಾದಶೋಽಧ್ಯಾಯಃ

---

ಪೂಜಿಸಬೇಕು. ಹಾಗೆ ಮಾಡದೆ ಹೋದರೆ ವಿರುದ್ಧಫಲವಾಗುವುದು. ಭಗೀರಥನು ಯಾವಕ್ರಮದಿಂದ ಧ್ಯಾನಮಾಡಿದನೋ ಅದನ್ನು ಹೇಳುವೆನು ಕೇಳು. ||೭೩-೭೪-೭೫||

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ದ್ವಾದಶೋಽಧ್ಯಾಯಃ ||

### ಹನ್ನೆರಡನೆಯ ಅಧ್ಯಾಯವು

|| ಶ್ರೀ ನಾರಾಯಣ ಉವಾಚ ||

**ಧ್ಯಾನಂ ಚ ಕಣ್ವಶಾಖೋಕ್ತಂ ಸರ್ವಪಾಪಪ್ರಣಾಶನಂ ।**
**ಶ್ವೇತಪಂಕಜವರ್ಣಾಭಾಂ ಗಂಗಾಂ ಪಾಪಪ್ರಣಾಶಿನೀಂ ॥೧॥**

**ಕೃಷ್ಣವಿಗ್ರಹಸಂಭೂತಾಂ ಕೃಷ್ಣತುಲ್ಯಾಂ ಪರಾಂ ಸತೀಂ ।**
**ವಹ್ನಿಶುದ್ಧಾಂಶುಕಾಧಾನಾಂ ರತ್ನಭೂಷಣಭೂಷಿತಾಂ ॥೨॥**

**ಶರತ್ಪೂರ್ಣೇಂದು ಶತಕಮ್ಯಷ್ಟಶೋಭಕರಾಂ ಪರಾಂ ।**
**ಈಷದ್ಧಾಸ್ಯಪ್ರಸನ್ನಾಸ್ಯಾಂ ಶಶ್ವತ್ಸುಸ್ಥಿರಯೌವನಾಂ ॥೩॥**

---

ನಾರಾಯಣನು ಹೇಳಿದನು — ಕಣ್ವಶಾಖೆಯಲ್ಲಿ ಹೇಳಿರುವ ಧ್ಯಾನವು ಸಮಸ್ತ ಪಾಪಗಳನ್ನೂ ನಾಶಮಾಡುವುದು. ಆ ಧ್ಯಾನವು ಯಾವುದೆಂದರೆ— ಪಾಪವನ್ನು ನಾಶಮಾಡುವ ಗಂಗೆಯು ಬಿಳಿಯ ಕಮಲದಂತೆ ಬಣ್ಣವುಳ್ಳವಳು. ಕೃಷ್ಣನ ಶರೀರದಿಂದ ಹುಟ್ಟಿ ಕೃಷ್ಣನಿಗೆ ಸಮಾನಳಾಗಿ ಶ್ರೇಷ್ಠಳಾದ ಪತಿವ್ರತೆಯಾಗಿರುವಳು. ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನುಟ್ಟು ರತ್ನಾಭರಣಗಳನ್ನು ಧರಿಸಿರುವಳು. ॥೧-೨॥

ಶರದೃತುವಿನ ಒಂದುನೂರು ಪೂರ್ಣಚಂದ್ರರ ಕಾಂತಿಗೆ ಗಣಿಯಾದವಳು. ನಗುಮುಖದಿಂದ ಕೂಡಿ ಶಾಶ್ವತವಾದ ಪ್ರಾಯವುಳ್ಳವಳು. ನಾರಾಯಣನಿಗೆ ಪ್ರೀತಿಪಾತ್ರಳಾಗಿ ಶಾಂತಸ್ವಭಾವದವಳಾಗಿ ಆ ನಾರಾಯಣನ ಸಂಪತ್ತಿನಿಂದ ಕೂಡಿ

ನಾರಾಯಣಪ್ರಿಯಾಂ ಶಾಂತಾಂ ತತ್ಸೌಭಾಗ್ಯಸಮನ್ವಿತಾಂ ।
ಬಿಭ್ರತೀಂ ಕಬರೀಭಾರಂ ಮಾಲತೀಮಾಲ್ಯಸಂಯುತಂ ॥೪॥

ಸಿಂಧೂರಬಿಂದುಲಲಿತಂ ಸಾರ್ಧಂ ಚಂದನಬಿಂದುಭಿಃ ।
ಕಸ್ತೂರೀಪತ್ರಕಂ ಗಂಡೇ ನಾನಾಚಿತ್ರಸಮನ್ವಿತಂ ॥೫॥

ಪಕ್ವಬಿಂಬವಿನಿಂದ್ಯಾಚ್ಛಚಾರ್ವೋಷ್ಠಪುಟಮುತ್ತಮಂ ।
ಮುಕ್ತಾಪಂಕ್ತಿಪ್ರಭಾಮುಷ್ಟದಂತಪಂಕ್ತಿಮನೋರಮಾಂ ॥೬॥

ಸುಚಾರುವಕ್ತ್ರನಯನಂ ಸಕಟಾಕ್ಷಂ ಮನೋಹರಂ ।
ಕಠಿನಂಶ್ರೀಫಲಾಕಾರಂ ಸ್ತನಯುಗ್ಮಂ ಚ ಬಿಭ್ರತೀಂ ॥೭॥

ಬೃಹಚ್ಛ್ರೋಣೀಂ ಸುಕಠಿನಾಂ ರಂಭಾಸ್ತಂಭವಿನಿಂದಿತಾಂ ।
ಸ್ಥಲಪದ್ಮಪ್ರಭಾಮುಷ್ಟಪದಪದ್ಮಯುಗಂಬರಂ ॥೮॥

ರತ್ನಪಾದುಕಸಂಯುಕ್ತಂ ಕುಂಕುಮಾಕ್ತಂ ಸಯಾವಕಂ ।
ದೇವೇಂದ್ರಮೌಳಿಮಂದಾರಮಕರಂದಕಣಾರುಣಂ ॥೯॥

---

ದವಳು. ಇರುವಂತಿಗೆಯ ಹೂವಿನ ಸರವನ್ನು ಧರಿಸಿರುವ ಕೂದಲುಗಳುಳ್ಳವಳು. ||೩-೪||

ಹಣೆಯಲ್ಲಿ ಶ್ರೀಗಂಧದ ಬಿಂದುಗಳೊಡನೆ ಚಂದ್ರದ ಬಿಂದುಗಳನ್ನು ಧರಿಸಿ ಕೆನ್ನೆಯಲ್ಲಿ ಬಗೆ ಬಗೆಯ ಚಿತ್ರಗಳಿಂದ ಕೂಡಿದ ಕಸ್ತೂರೀಪತ್ರರಚನೆಯನ್ನು ಮಾಡಿಕೊಂಡು ಮನೋಹರಳಾಗಿರುವಳು. ತೊಂಡೆಯ ಹಣ್ಣಿನ ಬಣ್ಣವನ್ನು ತಿರಸ್ಕರಿಸುವ ಶ್ರೇಷ್ಠವಾದ ತುಟಿಗಳುಳ್ಳವಳು. ಮುತ್ತಿನ ಸಾಲಿನ ಕಾಂತಿಯಂತೆ ಶುದ್ಧವಾದ ಹಲ್ಲಿನ ಸಾಲಿನಿಂದ ಕೂಡಿದವಳು. ||೫-೬||

ಮನೋಹರವಾದ ಮುಖವೂ ಓರೆನೋಟದ ಕಣ್ಣೂ ಬಿಲ್ವಪತ್ರೆಯ ಹಣ್ಣಿಗೆ ಸಮಾನವೂ ಕಠಿನವೂ ಆದ ಸ್ತನಗಳೂ ಉಳ್ಳವಳು. ||೭||

ಗಟ್ಟಿಯಾದ ಮತ್ತು ಬಾಳೆಯ ಕಂಭವನ್ನು ತಿರಸ್ಕರಿಸುವ ನುಣುಪುಳ್ಳ ದೊಡ್ಡದಾದ ತೊಡೆಗಳೂ ನೆಲದಾವರೆಯ ಕಾಂತಿಯನ್ನು ಅಪಹರಿಸುವ ಪಾದಪದ್ಮದ ವರೆಗೂ ಇರುವ ವಸ್ತ್ರವೂ ಉಳ್ಳವಳು. ರತ್ನದ ಹಾವುಗೆಯನ್ನು ಮೆಟ್ಟಿ ಕುಂಕುಮದಿಂದ ನೆನೆದಿರುವ ಯಾವಕವೆಂಬ ರಸಲೇಪದಿಂದ ಕೂಡಿ ದೇವೇಂದ್ರನು ಮುಡಿದಿರುವ

ಸುರಸಿದ್ಧಮುನೀಂದ್ರೈಶ್ಚ ದತ್ತಾರ್ಘ್ಯಸಂಯುತಂ ಸದಾ ।
ತಪಸ್ವಿಮೌಳಿನಿಕರಭ್ರಮರಶ್ರೇಣಿಸಂಯುತಂ ॥೧೦॥

ಮುಕ್ತಿಪ್ರದಂ ಮುಮುಕ್ಷೂಣಾಂ ಕಾಮಿನಾಂ ಸರ್ವಭೋಗದಂ ।
ವರಾಂ ವರೇಣ್ಯಾಂ ವರದಾಂ ಭಕ್ತಾನುಗ್ರಹಕಾರಿಣೀಂ ॥೧೧॥

ಶ್ರೀವಿಷ್ಣೋಃ ಪದದಾತ್ರೀಂ ಚ ಭಜೇ ವಿಷ್ಣುಪದೀಂ ಸತೀಂ ।
ಇತ್ಯನೇನೈವ ಧ್ಯಾನೇನ ಧ್ಯಾತ್ವಾ ತ್ರಿಪಥಗಾಂ ಶುಭಾಂ ॥೧೨॥

ದತ್ತ್ವಾ ಸಂಪೂಜಯೇದ್ಬ್ರಹ್ಮನ್ನುಪಚಾರಾಣಿ ಷೋಡಶ ।
ಆಸನಂ ಪಾದ್ಯಮರ್ಘ್ಯಂ ಚ ಸ್ನಾನೀಯಂ ಚಾನುಲೇಪನಂ ॥೧೩॥

ಧೂಪಂ ದೀಪಂ ಚ ನೈವೇದ್ಯಂ ತಾಂಬೂಲಂ ಶೀತಲಂ ಜಲಂ ।
ವಸನಂ ಭೂಷಣಂ ಮಾಲ್ಯಂ ಗಂಧಮಾಚಮನೀಯಕಂ ॥೧೪॥

ಮನೋಹರಂ ಸುತಲ್ಪಂ ಚ ದೇಯಾನ್ಯೇತಾನಿ ಷೋಡಶ ।
ದತ್ತ್ವಾ ಭಕ್ತ್ಯಾ ಚ ಪ್ರಣಮೇತ್ಸಂಸ್ತೂಯ ಸಂಪುಟಾಂಜಲಿಃ ॥೧೫॥

---

ಮಂದಾರಪುಷ್ಪದ ಮಕರಂದದ ಹನಿಗೆ ಸಮಾನವಾದ ಕೆಂಪಾದ ಬಣ್ಣದಿಂದ ಶೋಭಿಸುವ, ದೇವತೆಗಳು, ಸಿದ್ಧರು, ಮುನಿಗಳು, ಮಾಡಿದ ಪೂಜೆಯುಳ್ಳ, ತಪಸ್ವಿಗಳ ಶಿರಸ್ಸುಗಳೆಂಬ ಭ್ರಮರದ ಸಾಲಿನಿಂದ ಕೂಡಿದ, ಮೋಕ್ಷಾಪೇಕ್ಷೆಯುಳ್ಳವರಿಗೆ ಮೋಕ್ಷವನ್ನೂ ಫಲಾಪೇಕ್ಷೆಯುಳ್ಳವರಿಗೆ ಸಮಸ್ತ ಸುಖವನ್ನೂ ಕೊಡುವ, ಪಾದಪದ್ಮವುಳ್ಳವಳು. ॥೮-೯-೧೦-॥

ಅತ್ಯಂತ ಶ್ರೇಷ್ಠಳೂ ಭಕ್ತರಿಗೆ ಅನುಗ್ರಹಮಾಡತಕ್ಕವಳೂ ವರವನ್ನು ಕೊಡತಕ್ಕವಳೂ ಶ್ರೀ ವಿಷ್ಣುವಿನ ಸ್ಥಾನವನ್ನು ಕೊಡತಕ್ಕವಳೂ ಆದ ವಿಷ್ಣುಪಾದೋದ್ಭವಳಾದ ಗಂಗಾದೇವಿಯನ್ನು ಧ್ಯಾನಿಸುವೆನು. ಹೀಗೆಂದು ಈ ಧ್ಯಾನಶ್ಲೋಕಗಳಿಂದಲೇ ಗಂಗೆಯನ್ನು ಧ್ಯಾನಿಸಬೇಕು. ॥೧೧-೧೨॥

ನಾರದನೇ, ಆ ಗಂಗಾದೇವಿಗೆ ಆಸನ, ಪಾದ್ಯ, ಅರ್ಘ್ಯ, ಸ್ನಾನ, ಗಂಧ (ಸ್ನಾನಚೂರ್ಣ) ಧೂಪ, ದೀಪ, ನೈವೇದ್ಯ, ತಾಂಬೂಲ, ಶೀತಜಲ, ವಸ್ತ್ರ, ಆಭರಣ, ಹೂ, ಗಂಧ, ಆಚಮನೀಯ, ಮನೋಹರವಾದ ಹಾಸಿಗೆ ಈ ಹದಿನಾರು ವಿಧವಾದ ಪೂಜೆಯನ್ನು ಸಮರ್ಪಿಸಿ ಭಕ್ತಿಯಿಂದ ಸ್ತೋತ್ರಮಾಡಿ ಕೈಮುಗಿದು

**ಸಂಪೂಜ್ಯೈವಂ ಪ್ರಕಾರೇಣ ಸೋಽಶ್ವಮೇಧಫಲಂ ಲಭೇತ್ ।**

|| ನಾರದ ಉವಾಚ ||

**ಶ್ರೋತುಮಿಚ್ಛಾಮಿ ದೇವೇಶ ಲಕ್ಷ್ಮೀಕಾಂತಜಗತ್ಪತೇ ||೧೬||**

**ವಿಷ್ಣೋರ್ವಿಷ್ಣುಪದೀಸ್ತೋತ್ರಂ ಪಾಪಘ್ನಂ ಪುಣ್ಯಕಾರಕಂ ।**

|| ಶ್ರೀ ನಾರಾಯಣ ಉವಾಚ ||

**ಶೃಣು ನಾರದ ವಕ್ಷ್ಯಾಮಿ ಪಾಪಘ್ನಂ ಪುಣ್ಯಕಾರಣಂ ||೧೭||**

**ಶಿವಸಂಗೀತಸಂಮುಗ್ಧಂ ಶ್ರೀಕೃಷ್ಣಾಂಗಸಮುದ್ಭವಾಂ ।**
**ರಾಧಾಂಗದ್ರವಸಂಯುಕ್ತಾಂ ತಾಂ ಗಂಗಾಂ ಪ್ರಣಮಾಮ್ಯಹಂ ||೧೮||**

**ಯಜ್ಜನ್ಮಸೃಷ್ಟೇರಾದೌ ಚ ಗೋಲೋಕೇ ರಾಸಮಂಡಲೇ ।**
**ಸನ್ನಿಧಾನೇ ಶಂಕರಸ್ಯ ತಾಂ ಗಂಗಾಂ ಪ್ರಣಮಾಮ್ಯಹಂ ||೧೯||**

**ಗೋಪೈರ್ಗೋಪೀಭಿರಾಕೀರ್ಣೇ ಶುಭೇ ರಾಧಾಮಹೋತ್ಸವೇ ।**
**ಕಾರ್ತಿಕೇ ಪೂರ್ಣಿಮಾಯಾಂ ಚ ತಾಂ ಗಂಗಾಂ ಪ್ರಣಮಾಮ್ಯಹಂ ||೨೦||**

**ಕೋಟಿಯೋಜನವಿಸ್ತೀರ್ಣಾ ದೈರ್ಘ್ಯೇ ಲಕ್ಷಗುಣಾ ತತಃ ।**
**ಸಮಾವೃತಾ ಯಾ ಗೋಲೋಕಂ ತಾಂ ಗಂಗಾಂ ಪ್ರಣಮಾಮ್ಯಹಂ ||೨೧||**

---

ನಮಸ್ಕರಿಸಬೇಕು. ಹೀಗೆ ಪೂಜೆಮಾಡಿದವರು ಅಶ್ವಮೇಧಯಜ್ಞದ ಫಲವನ್ನು ಹೊಂದುವರು. ||೧೩-೧೪-೧೫||

ಶ್ರೀಕೃಷ್ಣನನ್ನು ಕುರಿತು — ಲಕ್ಷ್ಮೀಕಾಂತನೂ ಜಗತ್ತಿಗೆ ಒಡೆಯನೂ ಆದ ದೇವಶ್ರೇಷ್ಠನೇ, ಪಾಪವನ್ನು ನಾಶಮಾಡಿ ಪುಣ್ಯವನ್ನು ಕೊಡತಕ್ಕ ವಿಷ್ಣುಪದೀ ಸ್ತೋತ್ರವನ್ನು ಕೇಳಬೇಕೆಂದು ಬಯಸುವೆನು. ಎಂದು ನಾರದನು ಹೇಳಿದನು.||೧೬||

ನಾರಾಯಣನು ಹೇಳಿದನು—ನಾರದನೇ ಕೇಳು. ಎಂದು ಆ ಸ್ತೋತ್ರವನ್ನು ನಾರಾಯಣಮುನಿಯು ಹೇಳುವನು. ಇಲ್ಲಿ ಹೇಳುವ ಸ್ತೋತ್ರದ ಅರ್ಥವೆಲ್ಲವೂ ಈ ಸ್ತೋತ್ರದ ಮುಂದಿನ ಕಥೆಯಲ್ಲಿ ಸ್ಪಷ್ಟವಾಗಿರುವುದರಿಂದ ಈ ಸ್ತೋತ್ರಕ್ಕೆ ಅರ್ಥವನ್ನು ಬರೆಯಲಿಲ್ಲ. ಸ್ತೋತ್ರವನ್ನು ಮಾತ್ರ ಬರೆದಿದೆ. ||೧೭-೧೮||

ಷಷ್ಟಿಲಕ್ಷಯೋಜನಾ ಯಾ ತತೋ ದೈರ್ಘ್ಯೇ ಚತುರ್ಗುಣಾ ।
ಸಮಾವೃತಾ ಯಾ ವೈಕುಂಠೇ ತಾಂ ಗಂಗಾಂ ಪ್ರಣಮಾಮ್ಯಹಂ ॥೨೨॥

ತ್ರಿಂಶಲ್ಲಕ್ಷಯೋಜನಾ ಯಾ ದೈರ್ಘ್ಯೇ ಪಂಚಗುಣಾ ತತಃ ।
ಆವೃತಾ ಬ್ರಹ್ಮಲೋಕೇ ಯಾ ತಾಂ ಗಂಗಾಂ ಪ್ರಣಮಾಮ್ಯಹಂ ॥೨೩॥

ತ್ರಿಂಶಲ್ಲಕ್ಷಯೋಜನಾ ಯಾ ದೈರ್ಘ್ಯೇ ಚತುರ್ಗುಣಾ ತತಃ ।
ಆವೃತಾ ಶಿವಲೋಕೇ ಯಾ ತಾಂ ಗಂಗಾಂ ಪ್ರಣಮಾಮ್ಯಹಂ ॥೨೪॥

ಲಕ್ಷಯೋಜನವಿಸ್ತೀರ್ಣಾ ದೈರ್ಘ್ಯೇ ಸಪ್ತಗುಣಾ ತತಃ ।
ಆವೃತಾ ಧ್ರುವಲೋಕೇ ಯಾ ತಾಂ ಗಂಗಾಂ ಪ್ರಣಮಾಮ್ಯಹಂ ॥೨೫॥

ಲಕ್ಷಯೋಜನವಿಸ್ತೀರ್ಣಾ ದೈರ್ಘ್ಯೇ ಪಂಚಗುಣಾ ತತಃ ।
ಆವೃತಾ ಚಂದ್ರಲೋಕೇ ಯಾ ತಾಂ ಗಂಗಾಂ ಪ್ರಣಮಾಮ್ಯಹಂ ॥೨೬॥

ಷಷ್ಟಿಸಹಸ್ರಯೋಜನಾ ಯಾ ದೈರ್ಘ್ಯೇ ದಶಗುಣಾ ತತಃ ।
ಆವೃತಾ ಸೂರ್ಯಲೋಕೇ ಯಾ ತಾಂ ಗಂಗಾಂ ಪ್ರಣಮಾಮ್ಯಹಂ ॥೨೭॥

ಲಕ್ಷಯೋಜನವಿಸ್ತೀರ್ಣಾ ದೈರ್ಘ್ಯೇ ಪಂಚಗುಣಾ ತತಃ ।
ಆವೃತಾ ಯಾ ತಪೋಲೋಕೇ ತಾಂ ಗಂಗಾಂ ಪ್ರಣಮಾಮ್ಯಹಂ ॥೨೮॥

ಸಹಸ್ರಯೋಜನಾಯಾಮಾ ದೈರ್ಘ್ಯೇ ದಶಗುಣಾ ತತಃ ।
ಆವೃತಾ ಜನಲೋಕೇ ಯಾ ತಾಂ ಗಂಗಾಂ ಪ್ರಣಮಾಮ್ಯಹಂ ॥೨೯॥

ದಶಲಕ್ಷಯೋಜನಾ ಯಾ ದೈರ್ಘ್ಯೇ ಪಂಚಗುಣಾ ತತಃ ।
ಆವೃತಾ ಯಾ ಮಹರ್ಲೋಕೇ ತಾಂ ಗಂಗಾಂ ಪ್ರಣಮಾಮ್ಯಹಂ ॥೩೦॥

ಸಹಸ್ರಯೋಜನಾಯಾಮಾ ದೈರ್ಘ್ಯೇ ಶತಗುಣಾ ತತಃ ।
ಆವೃತಾ ಯಾ ಚ ಕೈಲಾಸೇ ತಾಂ ಗಂಗಾಂ ಪ್ರಣಮಾಮ್ಯಹಂ ॥೩೧॥

ಶತಯೋಜನವಿಸ್ತೀರ್ಣಾ ದೈರ್ಘ್ಯೇ ದಶಗುಣಾ ತತಃ ।
ಮಂದಾಕಿನೀ ಯೇಂದ್ರಲೋಕೇ ತಾಂ ಗಂಗಾಂ ಪ್ರಣಮಾಮ್ಯಹಂ ॥೩೨॥

ಪಾತಾಲೇ ಭೋಗವತೀ ಚೈವ ವಿಸ್ತೀರ್ಣಾ ದಶಯೋಜನಾ ।
ತತೋ ದಶಗುಣಾ ದೈರ್ಘ್ಯೇ ತಾಂ ಗಂಗಾಂ ಪ್ರಣಮಾಮ್ಯಹಂ ॥೩೩॥

ಕ್ರೋಶೈಕಮಾತ್ರವಿಸ್ತೀರ್ಣಾ ತತಃ ಕ್ಷೀಣಾ ಚ ಕುತ್ರಚಿತ್ ।
ಕ್ಷಿತೌ ಚಾಲಕನಂದಾ ಯಾ ತಾಂ ಗಂಗಾಂ ಪ್ರಣಮಾಮ್ಯಹಂ ॥೩೪॥

ಸತ್ಯೇ ಯಾ ಕ್ಷೀರವರ್ಣಾ ಚ ತ್ರೇತಾಯಾಮಿಂದುಸನ್ನಿಭಾ ।
ದ್ವಾಪರೇ ಚಂದನಾಭಾ ಯಾ ತಾಂ ಗಂಗಾಂ ಪ್ರಣಮಾಮ್ಯಹಂ ॥೩೫॥

ಜಲಪ್ರಭಾ ಕಲೌ ಯಾ ಚ ನಾಽನ್ಯತ್ರ ಪೃಥಿವೀತಲೇ ।
ಸ್ವರ್ಗೇ ಚ ನಿತ್ಯಂ ಕ್ಷೀರಾಭಾ ತಾಂ ಗಂಗಾಂ ಪ್ರಣಮಾಮ್ಯಹಂ ॥೩೬॥

ಯತ್ತೋಯಕಣಿಕಾಸ್ಪರ್ಶೇ ಪಾಪಿನಾಂ ಜ್ಞಾನಸಂಭವಃ ।
ಬ್ರಹ್ಮಹತ್ಯಾದಿಕಂ ಪಾಪಂ ಕೋಟಿಜನ್ಮಾರ್ಜಿತಂ ದಹೇತ್ ॥೩೭॥

ಇತ್ಯೇವಂ ಕಥಿತಾ ಬ್ರಹ್ಮನ್ ಗಂಗಾಪದ್ಯೈಕವಿಂಶತಿಃ ।
ಸ್ತೋತ್ರರೂಪಂ ಚ ಪರಮಂ ಪಾಪಘ್ನಂ ಪುಣ್ಯಜೀವನಂ ॥೩೮॥

ನಿತ್ಯಂ ಯೋ ಹಿ ಪಠೇದ್ಭಕ್ತ್ಯಾ ಸಂಪೂಜ್ಯ ಚ ಸುರೇಶ್ವರೀಂ ।
ಸೋಽಶ್ವಮೇಧಫಲಂ ನಿತ್ಯಂ ಲಭತೇ ನಾತ್ರ ಸಂಶಯಃ ॥೩೯॥

ಅಪುತ್ರೋ ಲಭತೇ ಪುತ್ರಂ ಭಾರ್ಯಾಹೀನೋ ಲಭೇತ್ ಸ್ತ್ರಿಯಂ ।
ರೋಗಾತ್ಪ್ರಮುಚ್ಯತೇ ರೋಗೀ ಬಂಧಾನ್ಮುಕ್ತೋ ಭವೇದ್ಧ್ರುವಂ ॥೪೦॥

---

ಎಲೈ ನಾರದನೇ, ಶ್ರೇಷ್ಠವಾದ, ಪಾಪವನ್ನು ನಾಶಮಾಡಿ ಸುಖವನ್ನುಂಟು ಮಾಡುವ ಗಂಗಾಸ್ತೋತ್ರರೂಪವಾದ ಇಪ್ಪತ್ತೊಂದು ಪದ್ಯವನ್ನು ಹೇಳಿರುವೆನು. ಈ ಸ್ತೋತ್ರವನ್ನು ಪ್ರತಿದಿನವೂ ಯಾವನು ಗಂಗೆಯನ್ನು ಪೂಜಿಸಿ ಪಠಿಸುವನೋ ಅವನು ಪ್ರತಿದಿನವೂ ಅಶ್ವಮೇಧಯಜ್ಞದ ಫಲವನ್ನು ಹೊಂದುವನು. ॥೧೯–೩೯॥

ಮಕ್ಕಳಿಲ್ಲದವನು ಮಕ್ಕಳನ್ನೂ ಹೆಂಡಿತಿಯಿಲ್ಲದವನು ಹೆಂಡಿತಿಯನ್ನೂ ಪಡೆಯುವನು. ರೋಗಿಯು ರೋಗದಿಂದ ಬಿಡುಗಡೆ ಹೊಂದುವನು. ಸೆರೆಸಿಕ್ಕಿದವನು ಸೆರೆಯಿಂದ ಬಿಡುಗಡೆ ಹೊಂದುವನು. ಕೀರ್ತಿಯಿಲ್ಲದವನು ಕೀರ್ತಿಯನ್ನೂ ದಡ್ಡನು ವಿದ್ಯೆಯನ್ನೂ ಪಡೆಯುವನು. ಯಾವನು ಪ್ರಾತಃಕಾಲದಲ್ಲಿ ಎದ್ದು

**ಅಸ್ಪಷ್ಟಕೀರ್ತಿಃ ಸುಯಶಾ ಮೂರ್ಖೋ ಭವತಿ ಪಂಡಿತಃ ।**
**ಯಃ ಪಠೇತ್ಪ್ರಾತರುತ್ಥಾಯ ಗಂಗಾಸ್ತೋತ್ರಮಿದಂ ಶುಭಂ ॥೪೧॥**

**ಶುಭಂ ಭವೇಚ್ಚ ದುಃಸ್ವಪ್ನೇ ಗಂಗಾಸ್ನಾನಫಲಂ ಲಭೇತ್ ।**

॥ ಶ್ರೀ ನಾರಾಯಣ ಉವಾಚ ॥

**ಸ್ತೋತ್ರೇಣಾನೇನ ಗಂಗಾಂ ಚ ಸ್ತುತ್ವಾ ಚೈವ ಭಗೀರಥಃ ॥೪೨॥**

**ಜಗಾಮ ತಾಂ ಗೃಹೀತ್ವಾ ಚ ಯತ್ರ ನಷ್ಟಾಶ್ಚ ಸಾಗರಾಃ ।**
**ವೈಕುಂಠಂ ತೇ ಯಯುಸ್ತೂರ್ಣಂ ಗಂಗಾಯಾಃ ಸ್ಪರ್ಶವಾಯುನಾ ॥೪೩॥**

**ಭಗೀರಥೇನ ಸಾ ನೀತಾ ತೇನ ಭಾಗೀರಥೀ ಸ್ಮೃತಾ ।**
**ಇತ್ಯೇವಂ ಕಥಿತಂ ಸರ್ವಂ ಗಂಗೋಪಾಖ್ಯಾನಮುತ್ತಮಂ ॥೪೪॥**

**ಪುಣ್ಯದಂ ಮೋಕ್ಷದಂ ಸಾರಂ ಕಿಂ ಭೂಯಃ ಶ್ರೋತುಮಿಚ್ಛಸಿ ।**

॥ ನಾರದ ಉವಾಚ ॥

**ಕಥಂ ಗಂಗಾ ತ್ರಿಪಥಗಾ ಜಾತಾ ಭುವನಪಾಲಿನೀ ॥೪೫॥**

---

ಮಂಗಳಕರವಾದ ಈ ಗಂಗಾಸ್ತೋತ್ರವನ್ನು ಹೇಳುವನೋ ಅವನಿಗೆ ಕೆಟ್ಟಕನಸುಗಳೂ ಮಂಗಳವನ್ನುಂಟುಮಾಡುವುವು. ಮತ್ತು ಗಂಗಾಸ್ನಾನ ಫಲವು ಬರುವುದು. ॥೪೦-೪೧॥

ನಾರಾಯಣನು ಹೇಳಿದನು—ಈ ಸ್ತೋತ್ರದಿಂದ ಭಗೀರಥನು ಗಂಗೆಯನ್ನು ಸ್ತೋತ್ರಮಾಡಿ ಆ ಗಂಗೆಯನ್ನು ಕರೆದುಕೊಂಡು ಸಗರನ ಮಕ್ಕಳು ನಾಶವಾದ ಸ್ಥಳಕ್ಕೆ ಹೋದನು. ಆ ಗಂಗೆಯನ್ನು ಮುಟ್ಟಿದ ಗಾಳಿಯಿಂದಲೇ ಆ ಸಗರಪುತ್ರರು ಆಕ್ಷಣದಲ್ಲಿಯೇ ವೈಕುಂಠಕ್ಕೆ ಹೋದರು. ॥೪೨-೪೩॥

ಭಗೀರಥನು ಕರೆದುಕೊಂಡು ಹೋದುದರಿಂದ ಗಂಗೆಗೆ ಭಾಗೀರಥೀ ಎಂದು ಹೆಸರಾಯಿತು. ಪುಣ್ಯವನ್ನೂ ಮೋಕ್ಷವನ್ನೂ ಕೊಡುವ ಸಾರವಾದ ಗಂಗೆಯ ಕಥೆಯನ್ನು ಎಲ್ಲವನ್ನೂ ಹೇಳಿದೆನು. ಮತ್ತೇನನ್ನು ಕೇಳಬೇಕೆಂದು ಬಯಸುವೆ ? ಎಂದು ನಾರಾಯಣಮುನಿಯು ಹೇಳಿದನು. ॥೪೪॥

ನಾರದನು ಹೇಳಿದನು—ಗಂಗೆಗೆ ತ್ರಿಪಥಗೆ ಎಂದು ಹೇಗೆ ಹೆಸರು ಬಂದಿತು ? ಅದು ಎಲ್ಲಿ ಯಾವಾಗ ಉಂಟಾಯಿತು ? ಅವಳು ಭೂಮಿಯಲ್ಲಿ ಹೇಗೆ ಪರಿಶುದ್ಧ

**ಕುತ್ರ ವಾ ಕೇನ ವಿಧಿನಾ ತತ್ಸರ್ವಂ ವದ ಮೇ ಪ್ರಭೋ ।**
**ತತ್ರಸ್ಥಾಶ್ಚ ಜನಾ ಯೇ ಯೇ ತೇ ಚ ಕಿಂ ಚಕ್ರುರುತ್ತಮಂ ॥೪೬॥**

**ಏತತ್ಸರ್ವಂ ತು ವಿಸ್ತೀರ್ಣಂ ಕೃತ್ವಾ ವಕ್ತುಮಿಹಾರ್ಹಸಿ ।**
**ಕಾರ್ತಿಕ್ಯಾಂ ಪೂರ್ಣಿಮಾಯಾಂ ತು ರಾಧಾಯಾಃ ಸುಮಹೋತ್ಸವಃ॥೪೭॥**

**ಕೃಷ್ಣಸ್ಸಂಪೂಜ್ಯ ತಾಂ ರಾಧಾಂ ಉವಾಸ ರಾಸಮಂಡಲೇ ।**
**ಕೃಷ್ಣೇನ ಪೂಜಿತಾಂ ತಾಂ ತು ಸಂಪೂಜ್ಯ ಹೃಷ್ಟಮಾನಸಾಃ ॥೪೮॥**

**ಊಚುರ್ಬ್ರಹ್ಮಾದಯಃ ಸರ್ವೇ ಋಷಯಃ ಶೌನಕಾದಯಃ ।**
**ಏತಸ್ಮಿನ್ನಂತರೇ ಕೃಷ್ಣಸಂಗೀತಾ ಚ ಸರಸ್ವತೀ ॥೪೯॥**

**ಜಗೌ ಸುಂದರತಾಲೇನ ವೀಣಯಾ ಚ ಮನೋಹರಂ ।**
**ತುಷ್ಟೋ ಬ್ರಹ್ಮಾ ದದೌ ತಸ್ಯೈ ರತ್ನೇಂದ್ರಸಾರಹಾರಕಂ ॥೫೦॥**

**ಶಿವೋ ಮಣೀಂದ್ರಸಾರಂ ತು ಸರ್ವಬ್ರಹ್ಮಾಂಡದುರ್ಲಭಂ ।**
**ಕೃಷ್ಣಃ ಕೌಸ್ತುಭರತ್ನಂ ಚ ಸರ್ವರತ್ನಾತ್ಪರಂ ವರಂ ॥೫೧॥**

---

ಮಾಡತಕ್ಕವಳಾದಳು? ಆ ಭೂಮಿಯಲ್ಲಿದ್ದ ಯಾವ ಯಾವ ಜನರು ಯಾವ ಯಾವ ಉತ್ತಮವಾದ ಕೆಲಸವನ್ನು ಮಾಡಿದರು? ಅವುಗಳೆಲ್ಲವನ್ನೂ ವಿಸ್ತಾರಮಾಡಿ ಹೇಳಬೇಕೆಂದು ನಾರದನು ಪ್ರಶ್ನೆಮಾಡಿದನು. ॥೪೫-೪೬॥

ಕಾರ್ತಿಕಮಾಸದ ಪೂರ್ಣಿಮೆಯ ದಿನ ರಾಧಾಮಹೋತ್ಸವದ ದಿನವು. ಆ ದಿನ ಕೃಷ್ಣನು ರಾಧೆಯನ್ನು ಪೂಜಿಸಿ ರಾಸಮಂಡಲದಲ್ಲಿದ್ದನು. ಕೃಷ್ಣನು ಪೂಜಿಸಿದ ಆ ರಾಧೆಯನ್ನು ಬ್ರಹ್ಮನೇ ಮೊದಲಾದ ದೇವತೆಗಳೂ ಶೌನಕಾದಿ ಋಷಿಗಳೂ ಪೂಜಿಸಿ ಸಂತೋಷಚಿತ್ತರಾಗಿದ್ದರು. ॥೪೭-೪೮॥

ಆ ಸಮಯದಲ್ಲಿ ಕೃಷ್ಣನ ಸಂಬಂಧವಾದ ಸಂಗೀತಶಾಸ್ತ್ರಕ್ಕೆ ಅಭಿಮಾನ ದೇವತೆಯಾದ ಸರಸ್ವತೀದೇವಿಯು ಇಂಪಾದ ತಾಳಲಯದಿಂದ ಕೂಡಿದ ವೀಣೆಯಿಂದ ಮನೋಹರವಾಗಿ ಗಾನಮಾಡಿದಳು. ಅದಕ್ಕೆ ಸಂತೋಷಪಟ್ಟು, ಬ್ರಹ್ಮನು ಶ್ರೇಷ್ಠವಾದ ರತ್ನದ ಹಾರವನ್ನೂ, ಶಿವನು ಸಮಸ್ತ ಬ್ರಹ್ಮಾಂಡಗಳಲ್ಲೂ ದೊರೆಯದ ಶ್ರೇಷ್ಠವಾದ ಇಂದ್ರನೀಲರತ್ನವನ್ನೂ ಕೃಷ್ಣನು ರತ್ನಶ್ರೇಷ್ಠವಾದ ಕೌಸ್ತುಭರತ್ನವನ್ನೂ ಸರಸ್ವತಿಗೆ ಕೊಟ್ಟರು. ॥೪೯-೫೦-೫೧॥

ಅಮೂಲ್ಯರತ್ನನಿರ್ಮಾಣಂ ಹಾರಸಾರಂ ಚ ರಾಧಿಕಾ ।
ನಾರಾಯಣಶ್ಚ ಭಗವಾನ್ ದದೌ ಮಾಲಾಂ ಮನೋಹರಾಂ ॥೫೨॥

ಅಮೂಲ್ಯರತ್ನನಿರ್ಮಾಣಂ ಲಕ್ಷ್ಮೀಃ ಕನಕಕುಂಡಲಂ ।
ವಿಷ್ಣುಮಾಯಾ ಭಗವತೀ ಮೂಲಪ್ರಕೃತಿರೀಶ್ವರೀ ॥೫೩॥

ದುರ್ಗಾ ನಾರಾಯಣೀಶಾನಾ ಬ್ರಹ್ಮಭಕ್ತಿಂ ಸುದುರ್ಲಭಾಂ ।
ಧರ್ಮಬುದ್ಧಿಂ ಚ ಧರ್ಮಶ್ಚ ಯಶಶ್ಚ ವಿಪುಲಂ ಭವೇ ॥೫೪॥

ವಹ್ನಿಶುದ್ಧಾಂಶುಕಂ ವಹ್ನಿರ್ವಾಯುಶ್ಚ ಮಣಿನೂಪುರಾನ್ ।
ಏತಸ್ಮಿನ್ನಂತರೇ ಶಂಭುರ್ಬ್ರಹ್ಮಣಾ ಪ್ರೇರಿತೋ ಮುಹುಃ ॥೫೫॥

ಜಗೌ ಶ್ರೀಕೃಷ್ಣಸಂಗೀತಂ ರಾಸೋಲ್ಲಾಸ ಸಮನ್ವಿತಂ ।
ಮೂರ್ಛಾಂ ಪ್ರಾಪುಸ್ಸುರಾಸ್ಸರ್ವೇ ಚಿತ್ರಪುತ್ತಲಿಕಾ ಯಥಾ ॥೫೬॥

ಕಷ್ಟೇನ ಚೇತನಾಂ ಪ್ರಾಪ್ಯ ದದೃಶೂ ರಾಸಮಂಡಲೇ ।
ಸ್ಥಲಂ ಸರ್ವಂ ಜಲಾಕೀರ್ಣಂ ರಾಧಾಕೃಷ್ಣವಿಹೀನಕಂ ॥೫೭॥

---

ರಾಧೆಯು ಬಹಳ ಬೆಲೆಯುಳ್ಳ ರತ್ನಗಳಿಂದ ಮಾಡಿದ ಶ್ರೇಷ್ಠವಾದ ಹಾರವನ್ನೂ ನಾರಾಯಣನು ಸುಂದರವಾದ ಮಾಲೆಯನ್ನೂ ಲಕ್ಷ್ಮಿಯು ಬಹಳ ಬೆಲೆಯುಳ್ಳ ರತ್ನಗಳಿಂದ ಮಾಡಿದ ಚಿನ್ನದ ಕುಂಡಲ (ಓಲೆ) ಗಳನ್ನೂ ವೈಷ್ಣವೀ ಮಾಯೆ, ದುರ್ಗಾ, ನಾರಾಯಣೀ ಎಂದು ಹೆಸರನ್ನು ಪಡೆದ ಮೂಲಪ್ರಕೃತಿಯು ಸಾಮಾನ್ಯರಿಗೆ ದೊರೆಯದಿರುವ ಪರಮಾತ್ಮಭಕ್ತಿಯನ್ನೂ ಧರ್ಮದೇವನು ಧರ್ಮಬುದ್ಧಿಯನ್ನೂ ಪ್ರಪಂಚದಲ್ಲಿ ವಿಸ್ತಾರವಾದ ಯಶಸ್ಸನ್ನೂ ಅಗ್ನಿಯು ಪರಿಶುದ್ಧವಾದ ವಸ್ತ್ರವನ್ನೂ ವಾಯುವು ರತ್ನಾಭರಣವನ್ನೂ ಕೊಟ್ಟರು. ॥೫೨-೫೩-೫೪॥

ಈ ಸಮಯದಲ್ಲಿ ಮತ್ತೆ ಮತ್ತೆ ಬ್ರಹ್ಮನು ಪ್ರೇರೇಪಿಸಿದುದರಿಂದ ಶಿವನು ರಾಸೋಲ್ಲಾಸದಿಂದ ಕೂಡಿದ ಶ್ರೀಕೃಷ್ಣನ ಸಂಬಂಧವಾದ ಸಂಗೀತವನ್ನು ಹಾಡಿದನು. ಸಮಸ್ತ ದೇವತೆಗಳೂ ಚಿತ್ರದ ಗೊಂಬೆಗಳಂತೆ ಮೂರ್ಛೆಯನ್ನು ಹೊಂದಿದರು! ಬಳಿಕ ಕಷ್ಟದಿಂದ ಎಚ್ಚರಿಕೆಯನ್ನು ಹೊಂದಿ ರಾಸಮಂಡಲದಲ್ಲಿ ರಾಧಾಕೃಷ್ಣರಿಲ್ಲದೆ ಆ ಪ್ರದೇಶವೆಲ್ಲವೂ ನೀರಿನಿಂದ ತುಂಬಿರುವುದನ್ನು ನೋಡಿದರು! ॥೫೫-೫೬-೫೭॥

**ಅತ್ಯುಚ್ಚೈರುರುದುಃ ಸರ್ವೇ ಗೋಪಾ ಗೋಪ್ಯಃ ಸುರಾ ದ್ವಿಜಾಃ ।**
**ಧ್ಯಾನೇನ ಬ್ರಹ್ಮಾ ಬುಬುಧೇ ಸರ್ವಂ ತೀರ್ಥಮಭೀಪ್ಸಿತಂ ॥೫೮॥**

**ಗತಶ್ಚ ರಾಧಯಾ ಸಾರ್ಧಂ ಶ್ರೀಕೃಷ್ಣೋ ದ್ರವತಾಮಿತಿ ।**
**ತತೋ ಬ್ರಹ್ಮಾದಯಸ್ಸರ್ವೇ ತುಷ್ಟುವುಃ ಪರಮೇಶ್ವರಂ ॥೫೯॥**

**ಸ್ವಮೂರ್ತಿಂ ದರ್ಶಯ ವಿಭೋ ವಾಂಛಿತಂ ವರಮೇವ ನಃ ।**
**ಏತಸ್ಮಿನ್ನಂತರೇ ತತ್ರ ವಾಗ್ಬಭೂವಾಽಶರೀರಿಣೀ ॥೬೦॥**

**ತಾಮೇವ ಶುಶ್ರುವುಃ ಸರ್ವೇ ಸುವ್ಯಕ್ತಾಂ ಮಧುರಾನ್ವಿತಾಂ ।**
**ಸರ್ವಾತ್ಮಾಽಹಮಿಯಂ ಶಕ್ತಿರ್ಭಕ್ತಾನುಗ್ರಹವಿಗ್ರಹಾ ॥೬೧॥**

**ಮಮಾಽಪ್ಯಸ್ಯಾಶ್ಚ ದೇಹೇನ ಕರ್ತವ್ಯಂ ಚ ಕಿಮಾವಯೋಃ ।**
**ಮನವೋ ಮಾನವಾಃ ಸರ್ವೇ ಮುನಯಶ್ಚೈವ ವೈಷ್ಣವಾಃ ॥೬೨॥**

**ಮನ್ಮಂತ್ರಪೂತಾ ಮಾಂ ದ್ರಷ್ಟುಮಾಗಮಿಷ್ಯಂತಿ ಮತ್ಪದಂ ।**
**ಮೂರ್ತಿಂ ದ್ರಷ್ಟುಂ ಚ ಸುವ್ಯಕ್ತಾಂ ಯದೀಚ್ಛತ ಸುರೇಶ್ವರಾಃ ॥೬೩॥**

---

ಹೀಗೆ ರಾಧಾಕೃಷ್ಣರು ಲೋಕೋದ್ಧಾರಕ್ಕಾಗಿ ತೀರ್ಥಸ್ವರೂಪರಾಗಲು ಅದನ್ನು ತಿಳಿಯದೆ ಸಮಸ್ತ ಗೋಪರೂ ಗೋಪಿಯರೂ ದೇವತೆಗಳೂ ಬ್ರಾಹ್ಮಣರೂ ಗಟ್ಟಿಯಾಗಿ ಅತ್ತರು. ಬ್ರಹ್ಮನು ಧ್ಯಾನದಿಂದ ರಾಧೆಯೊಡನೆ ಶ್ರೀಕೃಷ್ಣನು ಲೋಕೋದ್ಧಾರಕ್ಕಾಗಿ ದ್ರವರೂಪವಾಗಿ ಪುಣ್ಯತೀರ್ಥಸ್ವರೂಪವಾದನೆಂದು ತಿಳಿದನು. ಆಮೇಲೆ ಬ್ರಹ್ಮಾದಿ ಸಮಸ್ತ ದೇವತೆಗಳೂ ಎಲೈ ಸ್ವಾಮಿಯೇ, ನಿನ್ನ ಸಾಕಾರವಾದ ರೂಪವನ್ನು ತೋರಿಸು. ಇದೇ ನಮಗಿಷ್ಟವಾದವರವು. ಎಂದು ಪರಮೇಶ್ವರನನ್ನು ಸ್ತೋತ್ರ ಮಾಡಿದರು. ॥೫೮-೫೯॥

ಆ ಸಮಯದಲ್ಲಿ ಅಶರೀರವಾಣಿಯೊಂದು ಕೇಳಿಸಿತು. ಆ ಮಧುರವಾದ ಮಾತನ್ನು ಎಲ್ಲರೂ ಕೇಳಿದರು. "ನಾನು ಸರ್ವವ್ಯಾಪಕನಾದವನು. ನನಗೂ ನಿಮಗೂ ಯಾವಾಗಲೂ ಅಗಲುವಿಕೆಯಿಲ್ಲ. ನಮ್ಮ ದೇಹಗಳಿಂದ ಮಾತ್ರ ನಿಮಗೆ ಅಗಲಿಕೆಯುಂಟಾಗಿರುವುದು. ಮಿಥ್ಯಾರೂಪವಾದ ದೇಹಗಳಿಂದ ಮಾತ್ರ ನಿಮಗೇನು ಪ್ರಯೋಜನ? ನನ್ನಂತೆಯೇ ಈ ಶಕ್ತಿಯೂ ಭಕ್ತಾನುಗ್ರಹತತ್ಪರಳು. ॥೬೦-೬೧॥

ಭಕ್ತರ ದರ್ಶನಕ್ಕಾಗಿ ನನ್ನ ಮೂರ್ತಿಯನ್ನಪೇಕ್ಷಿಸಿದರೆ ಮನುಗಳೂ ಮಾನವರೂ ಸಮಸ್ತ ಋಷಿಗಳೂ ವಿಷ್ಣುಭಕ್ತರೂ ನನ್ನನ್ನು ನೋಡುವುದಕ್ಕಾಗಿ

ಕರೋತು ಶಂಭುಸ್ತತ್ರೈವಂ ಮದೀಯಂ ವಾಕ್ಯಪಾಲನಂ ।
ಸ್ವಯಂ ವಿಧಾತಸ್ತ್ವಂ ಬ್ರಹ್ಮನ್ನಾಜ್ಞಾಂ ಕುರು ಜಗದ್ಗುರುಂ ॥೬೪॥

ಕರ್ತುಂ ಶಾಸ್ತ್ರವಿಶೇಷಂ ಚ ವೇದಾಂಗಂ ಸುಮನೋಹರಂ ।
ಅಪೂರ್ವಂ ಮಂತ್ರನಿಕರೈಃ ಸರ್ವಾಭೀಷ್ಟಫಲಪ್ರದೈಃ ॥೬೫॥

ಸ್ತೋತ್ರೈಶ್ಚ ನಿಕರೈರ್ಧ್ಯಾನೈರ್ಯುತಂ ಪೂಜಾವಿಧಿಕ್ರಮೈಃ ।
ಮನ್ಮಂತ್ರಕವಚಸ್ತೋತ್ರಂ ಕೃತ್ವಾ ಯತ್ನೇನ ಗೋಪನಂ ॥೬೬॥

ಭವಂತಿ ವಿಮುಖಾ ಯೇನ ಜನಾ ಮಾಂ ತತ್ಕರಿಷ್ಯತಿ ।
ಸಹಸ್ರೇಷು ಶತೇಷ್ವೇಕೋ ಮನ್ಮಂತ್ರೋಪಾಸಕೋ ಭವೇತ್ ॥೬೭॥

ಜನಾ ಮನ್ಮಂತ್ರಪೂತಾಶ್ಚ ಗಮಿಷ್ಯಂತಿ ಚ ಮತ್ಪದಂ ।
ಅನ್ಯಥಾ ನ ಭವಿಷ್ಯಂತಿ ಸರ್ವೇ ಗೋಲೋಕವಾಸಿನಃ ॥೬೮॥

ನಿಷ್ಫಲಂ ಭವಿತಾ ಸರ್ವಂ ಬ್ರಹ್ಮಾಂಡಂ ಚೈವ ಬ್ರಹ್ಮಣಃ ।
ಜನಾಃ ಪಂಚಪ್ರಕಾರಾಶ್ಚ ಯುಕ್ತಾಃ ಸ್ರಷ್ಟುಂ ಭವೇ ಭವೇ ॥೬೯॥

---

ನನ್ನ ಸ್ಥಾನವಾದ ಗೋಲೋಕಕ್ಕೆ ಬರುವರು. ಎಲೈ ಬ್ರಹ್ಮನೇ, ನೀನು ಜಗದ್ಗುರುವಾದ ಈಶ್ವರನಿಗೆ ನನ್ನ ಮಾತನ್ನು ನಡೆಸು ಎಂದು ಅರಿಕೆಯನ್ನು ಮಾಡು. ||೬೨-೬೩-೬೪||

ವೇದದ ಅಂಗವಾದ ಅಪೂರ್ವವಾದ ಮಂತ್ರಗಳಿಂದ ತುಂಬಿದ ಇಷ್ಟಾರ್ಥ ಫಲವನ್ನು ಕೊಡತಕ್ಕ ಸ್ತೋತ್ರಗಳ ಸಮೂಹ ಧ್ಯಾನಪೂಜಾವಿಧಾನಗಳಿಂದ ಕೂಡಿದ ಪ್ರಯತ್ನಪೂರ್ವಕವಾಗಿ ಗೋಪ್ಯವಾಗಿ ಇಟ್ಟುಕೊಂಡಿರಬೇಕಾದ ವಿಶೇಷ ಶಾಸ್ತ್ರವಾದ ಸಾತ್ವತತಂತ್ರವನ್ನು ಉಪದೇಶ ಮಾಡಬೇಕೆಂದು ತಿಳಿಯಿಸು. ||೬೫-೬೬||

ಹಾಗೆ ಆ ಶಾಸ್ತ್ರವನ್ನು ಗೋಪನಮಾಡುವುದರಿಂದ ಪಾಪಿಗಳಾದ ಜನರು ನನ್ನ ಭಕ್ತಿಯಿಲ್ಲದವರಾಗುವರು. ಆದರೂ ನೂರು ಸಾವಿರಕ್ಕೆ ಒಬ್ಬರು ಸಜ್ಜನರಾಗಿ ನನ್ನ ಮಂತ್ರವನ್ನು ಉಪಾಸನಮಾಡುವರು. ||೬೭||

ಕೆಲವರೆದುರಿಗೆ ನನ್ನ ಮಂತ್ರವನ್ನು ಪ್ರಕಾಶಪಡಿಸಿದರೂ ಕ್ರಮವಾಗಿ ಅದು ಎಲ್ಲರಲ್ಲಿಯೂ ಹರಡಿ ಆ ಮಂತ್ರದಿಂದ ಪರಿಶುದ್ಧರಾದ ಸಮಸ್ತ ಜನರೂ ಗೋಲೋಕವಾಸಿಗಳಾಗುವರು. ಹಾಗಾದರೆ ಸಮಸ್ತ ಬ್ರಹ್ಮಾಂಡಸೃಷ್ಟಿಯೂ ನಿಷ್ಫಲವಾಗುವುದು.

ಪೃಥಿವೀವಾಸಿನಃ ಕೇಚಿತ್ಕೇಚಿತ್ಸ್ವರ್ಗನಿವಾಸಿನಃ ।
ಇದಂ ಕರ್ತುಂ ಮಹಾದೇವಃ ಕರೋತಿ ದೇವಸಂಸದಿ ॥೭೦॥

ಪ್ರತಿಜ್ಞಾಂ ಸುದೃಢಾಂ ಸದ್ಯಸ್ತತೋ ಮೂರ್ತಿಂ ಚ ದ್ರಕ್ಷ್ಯತಿ ।
ಇತ್ಯೇವಮುಕ್ತ್ವಾ ಗಗನೇ ವಿರರಾಮ ಸನಾತನಃ ॥೭೧॥

ತಚ್ಛ್ರುತ್ವಾ ಜಗತಾಂ ಧಾತಾ ತಮುವಾಚ ಶಿವಂ ಮುದಾ ।
ಬ್ರಹ್ಮಣೋ ವಚನಂ ಶ್ರುತ್ವಾ ಜ್ಞಾನೇಶೋ ಜ್ಞಾನಿನಾಂ ವರಃ ॥೭೨॥

ಗಂಗಾತೋಯಂ ಕರೇ ಕೃತ್ವಾ ಸ್ವೀಕಾರಂ ಚ ಚಕಾರ ಸಃ ।
ಸಂಯುಕ್ತಂ ವಿಷ್ಣುಮಾಯಾಯಾ ಮಂತ್ರೌಘೈಃ ಶಾಸ್ತ್ರಮುತ್ತಮಂ ॥೭೩॥

ವೇದಸಾರಂ ಕರಿಷ್ಯಾಮಿ ಪ್ರತಿಜ್ಞಾಪಾಲನಾಯ ಚ ।
ಗಂಗಾತೋಯಮುಪಸ್ಪೃಶ್ಯ ಮಿಥ್ಯಾ ಯದಿ ವದೇಜ್ಜನಃ ॥೭೪॥

---

ಆದುದರಿಂದ ಬ್ರಹ್ಮನೇ, ಪ್ರತಿಯೊಂದು ಜನ್ಮದಲ್ಲಿಯೂ ಭಿನ್ನ ಸಂಸ್ಕಾರ ರುಚಿಗಳಿಂದ ಐದು ಪ್ರಕಾರವಾದ ಜನರನ್ನು ನೀನು ಸೃಷ್ಟಿಸಬೇಕು. ಕೆಲವರು ಭೂಮಿಯಲ್ಲಿಯೂ ಕೆಲವರು ಸ್ವರ್ಗದಲ್ಲಿಯೂ ವಾಸಿಸುವರು. ॥೬೮-೬೯॥

ಮಹಾದೇವನಾದ ಶಿವನು ಈ ಸಾತ್ವತತಂತ್ರಶಾಸ್ತ್ರವನ್ನು ಮಾಡುತ್ತೇನೆಂದು ದೇವತೆಗಳ ಸಭೆಯಲ್ಲಿ ಬಲವಾದ ಪ್ರತಿಜ್ಞೆಯನ್ನು ಮಾಡಿದೊಡನೆಯೇ ನನ್ನ ಮೂರ್ತಿಯನ್ನು ನೋಡುವಿರಿ" ಹೀಗೆಂದು ಹೇಳಿ ಆಕಾಶವಾಣಿಯು ಸುಮ್ಮನಾಯಿತು. ॥೭೦-೭೧॥

ಆಕಾಶವಾಣಿಯನ್ನು ಕೇಳಿ ಸೃಷ್ಟಿಕರ್ತನಾದ ಬ್ರಹ್ಮನು ಸಂತೋಷದಿಂದ ಶಿವನಿಗೆ ಹೇಳಿದನು. ಬ್ರಹ್ಮನ ಮಾತನ್ನು ಕೇಳಿ ಜ್ಞಾನಿಗಳಲ್ಲಿ ಶ್ರೇಷ್ಠನಾದ ಶಿವನು ಗಂಗೆಯ ನೀರನ್ನು ಕೈಯಲ್ಲಿ ಹಿಡಿದುಕೊಂಡು ಮುಂದೆ ಹೇಳುವಂತೆ ಪ್ರತಿಜ್ಞೆ ಮಾಡಿದನು. ॥೭೨॥

ರಾಧಾದೇವಿಯ ಮಂತ್ರಸಮೂಹಗಳಿಂದ ಕೂಡಿದ ವೇದವಿರುದ್ಧವಲ್ಲದ ವಿಷ್ಣು ಮಂತ್ರ ವಿಷಯವಾದ ಶಾಸ್ತ್ರವನ್ನು ಮಾಡುತ್ತೇನೆ. ಪ್ರತಿಜ್ಞಾಪಾಲನೆಗಾಗಿ ಗಂಗೆಯ ನೀರನ್ನು ಮುಟ್ಟಿ ಯಾವನು ಸುಳ್ಳನ್ನು ಹೇಳುವನೋ ಅವನು ಬ್ರಹ್ಮನ ಆಯುಸ್ಸು ಮುಗಿಯುವವರೆಗೂ ಕಾಲಸೂತ್ರವೆಂಬ ನರಕದಲ್ಲಿರುವನು. ॥೭೩-೭೪॥

ಸ ಯಾತಿ ಕಾಲಸೂತ್ರಂ ಚ ಯಾವದ್ವೈ ಬ್ರಹ್ಮಣೋ ವಯಃ ।
ಇತ್ಯುಕ್ತೇ ಶಂಕರೇ ಬ್ರಹ್ಮನ್ ಗೋಲೋಕೇ ಸುರಸಂಸದಿ ॥೭೫॥

ಆವಿರ್ಬಭೂವ ಶ್ರೀಕೃಷ್ಣೋ ರಾಧಯಾ ಸಹಿತಸ್ತತಃ ।
ತಂ ಸುದೃಷ್ಟ್ವಾ ಚ ಸಂಹೃಷ್ಟಾಸ್ತುಷ್ಟುವುಃ ಪುರುಷೋತ್ತಮಂ ॥೭೬॥

ಪರಮಾನಂದಪೂರ್ಣಾಶ್ಚ ಚಕ್ರುಶ್ಚ ಪುನರುತ್ಸವಂ ।
ಕಾಲೇನ ಶಂಭುರ್ಭಗವಾನ್ಮುಕ್ತಿದೀಪಂ ಚಕಾರ ಸಃ ॥೭೭॥

ಇತ್ಯೇವಂ ಕಥಿತಂ ಸರ್ವಂ ಸುಗೋಪ್ಯಂ ಚ ಸುದುರ್ಲಭಂ ।
ಸ ಏವ ದ್ರವರೂಪಾ ಸಾ ಗಂಗಾ ಗೋಲೋಕಸಂಭವಾ ॥೭೮॥

ರಾಧಾಕೃಷ್ಣಾಂಗಸಂಭೂತಾ ಭುಕ್ತಿಮುಕ್ತಿಫಲಪ್ರದಾ ।
ಸ್ಥಾನೇ ಸ್ಥಾನೇ ಸ್ಥಾಪಿತಾ ಸಾ ಕೃಷ್ಣೇನ ಚ ಪರಾತ್ಮನಾ ॥೭೯॥
ಕೃಷ್ಣಸ್ವರೂಪಾ ಪರಮಾ ಸರ್ವಬ್ರಹ್ಮಾಂಡಪೂಜಿತಾ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ದ್ವಾದಶೋಽಧ್ಯಾಯಃ

---

ನಾರದನೇ, ಶಿವನು ಗೋಲೋಕದಲ್ಲಿ ದೇವತೆಗಳ ಸಭೆಯಲ್ಲಿ ಹೀಗೆ ಪ್ರತಿಜ್ಞೆಮಾಡಲು ಶ್ರೀಕೃಷ್ಣನು ರಾಧೆಯೊಡನೆ ಕಾಣಿಸಿಕೊಂಡನು. ಅವರೆಲ್ಲರೂ ಆ ಪುರುಷಶ್ರೇಷ್ಠನಾದ ಕೃಷ್ಣನನ್ನು ಕಂಡು ಸಂತೋಷದಿಂದ ಸ್ತೋತ್ರಮಾಡಿದರು. ॥೭೫-೭೬॥

ಅವರೆಲ್ಲರೂ ಬಹಳ ಸಂತೋಷವನ್ನು ಹೊಂದಿ ಮತ್ತೆ ರಾಧಾಮಹೋತ್ಸವವನ್ನೂ ಮಾಡಿದರು. ಕೆಲವು ಕಾಲದಮೇಲೆ ಶಿವನು ಮುಕ್ತಿಯನ್ನು ಪ್ರಕಾಶಪಡಿಸುವ ಸಾತ್ವತತಂತ್ರಶಾಸ್ತ್ರವನ್ನು ಮಾಡಿದನು. ॥೭೭॥

ಗೋಪ್ಯವೂ ದುರ್ಲಭವೂ ಆದ ಈ ಸಮಸ್ತ ಕಥೆಯನ್ನೂ ಹೇಳಿರುವೆನು. ಗೋಲೋಕದಲ್ಲಿ ರಾಧಾಕೃಷ್ಣರ ಅವಯವಗಳಿಂದ ಹುಟ್ಟಿದ ದ್ರವರೂಪವೇ

ಗಂಗೆಯು. ಆ ಪರಮಾತ್ಮನಾದ ಕೃಷ್ಣನು ಗೊತ್ತುಮಾಡಿರುವಂತೆ ಆ ಗಂಗೆಯು ಭುಕ್ತಿಮುಕ್ತಿರೂಪವಾದ ಫಲವನ್ನು ಕೊಡುವಳು. ಕೃಷ್ಣಸ್ವರೂಪಳಾದ ಗಂಗೆಯು ಶ್ರೇಷ್ಠಳಾಗಿ ಸಮಸ್ತ ತೀರ್ಥಸ್ನಾನಗಳಲ್ಲಿಯೂ, ಬ್ರಹ್ಮಾಂಡಗಳಲ್ಲಿಯೂ ಪೂಜೆಯನ್ನು ಹೊಂದುತ್ತಿರುವಳು. ||೭೮-೭೯||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ತ್ರಯೋದಶೋಽಧ್ಯಾಯಃ ||

### ಹದಿಮೂರನೆಯ ಅಧ್ಯಾಯವು

|| ನಾರದ ಉವಾಚ ||

**ಕಲೇಃ ಪಂಚಸಹಸ್ರಾಬ್ದೇ ಸಮತೀತೇ ಸುರೇಶ್ವರ ।**
**ಕ್ವಗತಾ ಸಾ ಮಹಾಭಾಗೆ ತನ್ಮೇ ವ್ಯಾಖ್ಯಾತುಮರ್ಹಸಿ ||೧||**

|| ನಾರಾಯಣ ಉವಾಚ ||

**ಭಾರತಂ ಭಾರತೀಶಾಪಾತ್ಸಮಾಗತ್ಯೇಶ್ವರೇಚ್ಛಯಾ ।**
**ಜಗಾಮ ತತ್ರ ವೈಕುಂಠೇ ಶಾಪಾಂತೇ ಪುನರೇವ ಸಾ ||೨||**

**ಭಾರತೀ ಭಾರತಂ ತ್ಯಕ್ತ್ವಾ ತಜ್ಜಗಾಮ ಹರೇಃ ಪದಂ ।**
**ಪದ್ಮಾವತೀ ಚ ಶಾಪಾಂತೇ ಗಂಗಾ ಸಾ ಚೈವ ನಾರದ ||೩||**

**ಗಂಗಾ ಸರಸ್ವತೀ ಲಕ್ಷ್ಮೀಶ್ಚೈತಾಸ್ತಿಸ್ರಃ ಪ್ರಿಯಾ ಹರೇಃ ।**
**ತುಲಸೀ ಸಹಿತಾ ಬ್ರಹ್ಮಂಶ್ಚತಸ್ರಃ ಕೀರ್ತಿತಾಃ ಶ್ರುತೌ ||೪||**

---

ಕಲಿಯುಗದಲ್ಲಿ ಐದುಸಾವಿರ ವರ್ಷಗಳು ಕಳೆದ ಮೇಲೆ ಶ್ರೇಷ್ಠಳಾದ ಗಂಗೆಯು ಎಲ್ಲಿಗೆ ಹೋದಳು ? ಅದನ್ನು ವಿಸ್ತಾರವಾಗಿ ನನಗೆ ಹೇಳಬೇಕು ಎಂದು ನಾರದನು ಪ್ರಶ್ನೆಮಾಡಿದನು. ||೧||

ನಾರಾಯಣನು ಹೇಳಿದನು—ಸರಸ್ವತಿಯ ಶಾಪದಿಂದ ಗಂಗೆಯು ಭರತ ಖಂಡಕ್ಕೆ ಬಂದು ಶಾಪವು ಕೊನೆಯಾಗಲು ಮತ್ತೆ ವೈಕುಂಠಕ್ಕೆ ಹೋದಳು. ಪದ್ಮಾವತಿಯೂ ಕೂಡ ಹಾಗೆಯೇ ವೈಕುಂಠಕ್ಕೆ ಹೋದಳು. ಗಂಗಾ, ಸರಸ್ವತೀ, ತುಲಸೀ,

|| ನಾರದ ಉವಾಚ ||

ಕೇನೋಪಾಯೇನ ಸಾ ದೇವೀ ವಿಷ್ಣುಪಾದಾಬ್ಜಸಂಭವಾ ।
ಬ್ರಹ್ಮಕಮಂಡಲುಸ್ಥಾ ಚ ಶ್ರುತಾ ಶಿವಪ್ರಿಯಾ ಚ ಸಾ ||೫||

ಬಭೂವ ಸಾ ಮುನಿಶ್ರೇಷ್ಠ ಗಂಗಾ ನಾರಾಯಣಪ್ರಿಯಾ ।
ಅಹೋ ಕೇನ ಪ್ರಕಾರೇಣ ತನ್ಮೇ ವ್ಯಾಖ್ಯಾತುಮರ್ಹಸಿ ||೬||

|| ಶ್ರೀ ನಾರಾಯಣ ಉವಾಚ ||

ಪುರಾ ಬಭೂವ ಗೋಲೋಕೇ ಸಾ ಗಂಗಾ ದ್ರವರೂಪಿಣೀ ।
ರಾಧಾ ಕೃಷ್ಣಾಂಗಸಂಭೂತಾ ತದಂಶಾ ತತ್ಸ್ವರೂಪಿಣೀ ||೭||

ದ್ರವಾಧಿಷ್ಠಾತೃದೇವೀ ಯಾ ರೂಪೇಣಾಪ್ರತಿಮಾ ಭುವಿ ।
ನವಯೌವನಸಂಪನ್ನಾ ಸರ್ವಾಭರಣಭೂಷಿತಾ ||೮||

ಶರನ್ಮಧ್ಯಾಹ್ನಪದ್ಮಾಸ್ಯಾ ಸಸ್ಮಿತಾ ಸುಮನೋಹರಾ ।
ತಪ್ತಕಾಂಚನವರ್ಣಾಭಾ ಶರಚ್ಚಂದ್ರಸಮಪ್ರಭಾ ||೯||

---

ಲಕ್ಷ್ಮೀ, ಈ ನಾಲ್ವರೂ ಹರಿಗೆ ಪ್ರೀತಿಪಾತ್ರರಾದವರು ಎಂದು ವೇದದಲ್ಲಿ ಹೇಳಿರುವುದು. ||೨-೩-೪||

ನಾರದನು ಹೇಳಿದನು—ನಾರಾಯಣ ಮುನಿಯೇ, ಗಂಗೆಯು ವಿಷ್ಣುವಿನ ಪಾದದಲ್ಲಿ ಹೇಗೆ ಹುಟ್ಟಿದಳು ? ಬ್ರಹ್ಮನ ಕಮಂಡಲುವಿಗೆ ಹೇಗೆ ಬಂದಳು ? ಶಿವನಿಗೂ ನಾರಾಯಣನಿಗೂ ಹೇಗೆ ಪ್ರೀತಿಪಾತ್ರಳಾದಳು ? ಇವೆಲ್ಲವೂ ಆಶ್ಚರ್ಯಕರವಾಗಿರುವುದು. ಇದರ ಕಾರಣವನ್ನು ವಿಸ್ತಾರವಾಗಿ ನನಗೆ ಹೇಳಬೇಕು. ||೫-೬||

ನಾರಾಯಣನು ಹೇಳಿದನು — ಮೊದಲು ಗಂಗೆಯು ಗೋಲೋಕದಲ್ಲಿ ರಾಧಾಕೃಷ್ಣರ ಅಂಗದಿಂದ ದ್ರವರೂಪವಾಗಿ ಹುಟ್ಟಿದಳು. ನೀರಿಗೆ ಅಭಿಮಾನಿದೇವತೆಯಾಗಿ ಭೂಮಿಯಲ್ಲಿ ಅಸಮಾನವಾದ ರೂಪದಿಂದ ಕೂಡಿ ಯೌವನವತಿಯಾಗಿ ಸಮಸ್ತ ಆಭರಣಗಳನ್ನೂ ಧರಿಸಿ ಶರತ್ಕಾಲದ ಮಧ್ಯಾಹ್ನದ ಕಮಲದಂತೆ ಮುಖಕಾಂತಿಯುಳ್ಳವಳಾಗಿ ಪುಟವಿಟ್ಟ ಚಿನ್ನದಂತೆ ಮೈಬಣ್ಣವೂ ಶರತ್ಕಾಲದ ಚಂದ್ರನಂತೆ ಶರೀರ ಕಾಂತಿಯೂ ಮನೋಹರವಾದ ಮುಗುಳುನಗೆಯೂ ಉಳ್ಳವಳಾಗಿ, ||೭-೮-೯||

ಸ್ನಿಗ್ಧಾ ಪ್ರಭಾಽತಿಸುಸ್ನಿಗ್ಧಾ ಶುದ್ಧಸತ್ವಸ್ವರೂಪಿಣೀ ।
ಸುಪೀನಕಠಿನಶ್ರೋಣೀಃ ಸುನಿತಂಬಯುಗಂಬರಾ ॥೧೦॥

ಪೀನೋನ್ನತಂ ಸುಕಠಿನಂ ಸ್ತನಯುಗ್ಮಂ ಸುವರ್ತುಲಂ ।
ಸುಚಾರುನೇತ್ರಯುಗಲಂ ಸಕಟಾಕ್ಷಂ ಸುವಕ್ರಿಮಂ ॥೧೧॥

ವಂಕ್ರಿಮಂ ಕಬರೀಭಾರಂ ಮಾಲತೀಮಾಲ್ಯಸಂಯುತಂ ।
ಸಿಂಧೂರಬಿಂದುಲಲಿತಂ ಸಾರ್ಧಂ ಚಂದನಬಿಂದುಭಿಃ ॥೧೨॥

ಕಸ್ತೂರೀಪತ್ರಿಕಾಯುಕ್ತಂ ಗಂಡಯುಗ್ಮಂ ಮನೋಹರಂ ।
ಬಂಧೂಕಕುಸುಮಾಕಾರಮಧರೋಷ್ಠಂ ಚ ಸುಂದರಂ ॥೧೩॥

ಪಕ್ವದಾಡಿಮಬೀಜಾಭಂ ದಂತಪಂಕ್ತಿಸಮುಜ್ವಲಂ ।
ವಾಸಸೀ ವಹ್ನಿಶುದ್ಧೇ ಚ ನೀವೀಯುಕ್ತೇ ಚ ಬಿಭ್ರತೀ ॥೧೪॥

ಸಾ ಸಕಾಮಾ ಕೃಷ್ಣಪಾರ್ಶ್ವೇ ಸಮುವಾಸ ಸುಲಜ್ಜಿತಾ ।
ವಾಸಸಾ ಮುಖಮಾಚ್ಛಾದ್ಯ ಲೋಚನಾಭ್ಯಾಂ ವಿಭೋರ್ಮುಖಂ ॥೧೫॥

ನಿಮೇಷರಹಿತಾಭ್ಯಾಂ ಚ ಪಿಬಂತೀ ಸತತಂ ಮುದಾ ।
ಪ್ರಫುಲ್ಲವದನಾ ಹರ್ಷಾತ್ ನವಸಂಗಮಲಾಲಸಾ ॥೧೬॥

---

ನಯವಾದ ಕಾಂತಿಯುಳ್ಳವಳು ಶುದ್ಧವಾದ ಸತ್ವಗುಣಸ್ವರೂಪಳು ದಪ್ಪನಾಗಿಯೂ ಗಟ್ಟಿಯಾಗಿಯೂ ಇರುವ ತೊಡೆಗಳೂ ದಪ್ಪವಾಗಿಯೂ ಎತ್ತರವಾಗಿಯೂ ಗಟ್ಟಿಯಾಗಿ ಗುಂಡಾಗಿರುವ ಸ್ತನಗಳೂ ಓರೆನೋಟಗಳಿಂದ ಕೂಡಿದ ಕಣ್ಣುಗಳೂ ಇರುವಂತಿಗೆಯ ಹೂವನ್ನು ಮುಡಿದ ಸುರುಳಿಯಿಂದ ಕೂಡಿದ ಕೂದಲುಗಳೂ ಗಂಧದ ಬೊಟ್ಟನೊಡನೆ ಕೂಡಿದ ಚಂದ್ರದ ಬೊಟ್ಟನ್ನಿಟ್ಟ ಹಣೆಯೂ ಕಸ್ತೂರಿಯಿಂದ ಎಲೆಯ ಚಿತ್ರವನ್ನು ಬರೆದ ಕೆನ್ನೆಯೂ ಕೆಂಪು ದಾಸವಾಳದ ಬಣ್ಣದ ತುಟಿಯೂ ಉಳ್ಳವಳು. ॥೧೦-೧೧-೧೨-೧೩॥

ಹಣ್ಣಾದ ದಾಳಿಂಬದ ಬೀಜಕ್ಕೆ ಸಮಾನವಾದ ಹಲ್ಲುಸಾಲುಳ್ಳ ಪರಿಶುದ್ಧವಾದ ವಸ್ತ್ರಗಳನ್ನು ಉಡಿಯ ಗಂಟಿನೊಡನೆ ಧರಿಸಿರುವ ಗಂಗೆಯು ಕೃಷ್ಣನ ಪಕ್ಕದಲ್ಲಿ ಅವನ ಹೊಸ ಸಂಗವನ್ನಪೇಕ್ಷಿಸುತ್ತಾ ನಾಚಿಕೆಯಿಂದ ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಕಣ್ಣಿನಿಂದ ಕೃಷ್ಣನ ಮುಖವನ್ನು ಪ್ರೀತಿಯಿಂದ ರೆಪ್ಪೆಯನ್ನಿಕ್ಕದೆ

ಮೂರ್ಛಿತಾ ಪ್ರಭುರೂಪೇಣ ಪುಲಕಾಂಕಿತವಿಗ್ರಹಾ ।
ಏತಸ್ಮಿನಂತರೇ ತತ್ರ ವಿದ್ಯಮಾನಾ ಚ ರಾಧಿಕಾ ॥೧೭॥

ಗೋಪೀತ್ರಿಂಶತ್ಕೋಟಿಯುಕ್ತಾ ಕೋಟಿಚಂದ್ರಸಮಪ್ರಭಾ ।
ಕೋಪೇನಾರಕ್ತಪದ್ಮಾಸ್ಯಾ ರಕ್ತಪಂಕಜಲೋಚನಾ ॥೧೮॥

ಪೀತಚಂಪಕವರ್ಣಾಭಾ ಗಜೇಂದ್ರಮಂದಗಾಮಿನೀ ।
ಅಮೂಲ್ಯರತ್ನನಿರ್ಮಾಣನಾನಾಭೂಷಣಭೂಷಿತಾ ॥೧೯॥

ಅಮೂಲ್ಯರತ್ನಖಚಿತಮಮೂಲ್ಯಂ ವಹ್ನಿಶೌಚಕಂ ।
ಪೀತವಸ್ತ್ರಸ್ಯ ಯುಗಳಂ ನೀವೀಯುಕ್ತಂ ಚ ಬಿಭ್ರತೀ ॥೨೦॥

ಸ್ಥಲಪದ್ಮಪ್ರಭಾಮುಷ್ಟಂ ಕೋಮಲಂ ಚ ಸುರಂಜಿತಂ ।
ಕೃಷ್ಣದತ್ತಾರ್ಘ್ಯಸಂಯುಕ್ತಂ ವಿನ್ಯಸಂತೀ ಪದಾಂಬುಜಂ ॥೨೧॥

ರತ್ನೇಂದ್ರಸಾರನಿರ್ಮಾಣವಿಮಾನಾದವರುಹ್ಯ ಸಾ ।
ಸೇವ್ಯಮಾನಾ ಚ ಋಷಿಭಿಃ ಶ್ವೇತಚಾಮರವಾಯುನಾ ॥೨೨॥

---

ನೋಡುತ್ತಾ ಸಂತೋಷದಿಂದ ಅರಳಿದ ಮುಖವುಳ್ಳವಳಾಗಿ ಕೃಷ್ಣನ ಅಂಗಸಂಗದ ಲ್ಲಾಸಕ್ತಳಾಗಿ ಅವನ ರೂಪಕ್ಕೆ ಮರುಳಾಗಿ ಮೈಯಲ್ಲಿ ರೋಮಾಂಚವನ್ನು ಹೊಂದಿ ಪರವಶಳಾಗಿದ್ದಳು. ॥೧೪-೧೫-೧೬॥

ಈ ಸಮಯದಲ್ಲಿ ಅಲ್ಲಿಯೇ ಇದ್ದ ರಾಧೆಯು ಮೂವತ್ತು ಕೋಟಿ ಗೋಪಿಯರಿಂದ ಕೂಡಿ ಕೋಟಿ ಚಂದ್ರರಿಗೆ ಸಮಾನವಾದ ಕಾಂತಿಯಿಂದ ಹೊಳೆಯುತ್ತಾ ಕೋಪದಿಂದ ಕಣ್ಣನ್ನೂ ಮುಖವನ್ನೂ ಕೆಂಪಗೆ ಮಾಡಿಕೊಂಡು ಸಂಪಿಗೆಯ ಬಣ್ಣಕ್ಕೆ ಸಮಾನವಾದ ಮೈಬಣ್ಣವೂ ಆನೆಯ ನಡಿಗೆಯೂ ಬೆಲೆಯುಳ್ಳ ರತ್ನಗಳಿಂದ ಮಾಡಿದ ಒಡೆವೆಗಳನ್ನಿಟ್ಟು ರತ್ನಖಚಿತವಾದ ಪರಿಶುದ್ಧವಾದ ಪೀತಾಂಬರಗಳನ್ನು ಉಡಿಯಗಂಟಿನೊಡನೆ ಧರಿಸಿರುವ, ॥೧೭-೧೮-೧೯-೨೦॥

ನೆಲದಾವರೆಯ ಕಾಂತಿಯನ್ನು ತಿರಸ್ಕರಿಸುವ ಮೃದುವಾದ ಪಾದಗಳಲ್ಲಿ ಕೃಷ್ಣನು ಕೊಟ್ಟ ಅರ್ಘ್ಯದಿಂದ ಕೂಡಿ ಪಾದಗಳನ್ನಿಡುತ್ತಾ ಇಂದ್ರನೀಲರತ್ನಗಳಿಂದಲಂಕರಿಸಿದ ವಿಮಾನದಿಂದ ಇಳಿದು ಋಷಿಗಳು ಬಿಳಿಯ ಚಾಮರಗಳನ್ನು ಬೀಸು

ಕಸ್ತೂರೀಬಿಂದುಭಿರ್ಯುಕ್ತಂ ಚಂದನೇನ ಸಮನ್ವಿತಂ ।
ದೀಪ್ತದೀಪಪ್ರಭಾಃಕಾರಂ ಸಿಂಧೂರಂ ಬಿಂದುಶೋಭಿತಂ ॥೨೩॥

ದಧತೀ ಭಾಲಮಧ್ಯೇ ಚ ಸೀಮಂತಾಧಃ ಸ್ಥಲೋಜ್ವಲೇ ।
ಪಾರಿಜಾತಪ್ರಸೂನಾನಾಂ ಮಾಲಾಯುಕ್ತಂ ಸುವಂಕ್ರಿಮಂ ॥೨೪॥

ಸುಚಾರುಕಬರೀಭಾರಂ ಕಂಪಯಂತೀ ಸುಕಂಪಿತಾ ।
ಸುಚಾರುರಾಗಸಂಯುಕ್ತಮೋಷ್ಠಂ ಕಂಪಯತೀ ರುಷಾ ॥೨೫॥

ಗತ್ವೋವಾಸ ಕೃಷ್ಣಪಾರ್ಶ್ವೇ ರತ್ನಸಿಂಹಾಸನೇ ಶುಭೇ ।
ಸಖೀನಾಂ ಚ ಸಮೂಹೈಶ್ಚ ಪರಿಪೂರ್ಣಾ ವಿಭೋಃ ಪ್ರಿಯಾ ॥೨೬॥

ತಾಂ ದೃಷ್ಟ್ವಾ ಚ ಸಮುತ್ತಸ್ಥೌ ಕೃಷ್ಣಃ ಸಾದರಪೂರ್ವಕಂ ।
ಸಂಭಾಷ್ಯ ಮಧುರಾಲಾಪೈಃ ಸಸ್ಮಿತಶ್ಚ ಸಸಂಭ್ರಮಃ ॥೨೭॥

ಪ್ರಣೇಮುರತಿಸಂತ್ರಸ್ತಾ ಗೋಪಾ ನಮ್ರಾತ್ಮಕಂಧರಾಃ ।
ತುಷ್ಟುವುಸ್ತೇ ಚ ಭಕ್ತ್ಯಾ ಚ ತುಷ್ಟಾವ ಪರಮೇಶ್ವರಃ ॥೨೮॥

---

ತ್ತಿರಲು ಕಸ್ತೂರೀ ಶ್ರೀಗಂಧಗಳ ಬಿಂದುವನ್ನು ಹಣೆಯಲ್ಲಿಟ್ಟು ಬೈತಲೆಯ ಕೆಳ ಭಾಗದಲ್ಲಿ ಚಂದ್ರದ ಬಿಂದುವನ್ನು ಧರಿಸಿ, ॥೨೧-೨೨-೨೩॥

ಪಾರಿಜಾತದ ಹೂಮಾಲೆಯನ್ನು ಮುಡಿದ ವಕ್ರವಾದ ಮನೋಹರವಾದ ಕೂದಲುಗಳನ್ನು ಚಲಿಸುವಂತೆ ಮಾಡುತ್ತಾ ಕೋಪದಿಂದ ಕೆಂಪಾದ ತುಟಿಯನ್ನಲು ಗಿಸುತ್ತಾ ಸೇವಕಿಯರ ಗುಂಪಿನಿಂದ ಕೂಡಿ ಪ್ರಕೃತಿಯ ಪೂರ್ಣಾವತಾರಳಾದ ರಾಧೆಯು ಕೃಷ್ಣನ ಸಮೀಪಕ್ಕೆ ಹೋಗಿ ಆವನ ಪಕ್ಕದಲ್ಲಿ ರತ್ನಖಚಿತವಾದ ಸಿಂಹಾಸನ ದಲ್ಲಿ ಕುಳಿತಳು. ॥೨೫-೨೬॥

ಕೃಷ್ಣನು ಆ ರಾಧೆಯನ್ನು ನೋಡಿ ಪ್ರೀತಿಯಿಂದ ಎದ್ದು ನಗುತ್ತಾ ಮೃದು ವಾದ ಮಾತುಗಳಿಂದ ಮಾತನಾಡಿಸಿದನು. ಗೋಪರೆಲ್ಲರೂ ಭಯದಿಂದ ತಮ್ಮ ಕುತ್ತಿಗೆಗಳನ್ನು ಬಗ್ಗಿಸಿ ನಮಸ್ಕಾರಮಾಡಿ ಭಕ್ತಿಯಿಂದ ಸ್ತೋತ್ರಮಾಡಿದರು. ಪರಮೇಶ್ವರನಾದ ಕೃಷ್ಣನೂ ಸ್ತೋತ್ರಮಾಡಿದನು. ॥೨೭-೨೮॥

ಉತ್ಥಾಯ ಗಂಗಾ ಸಹಸಾ ಸ್ತುತಿಂ ಬಹು ಚಕಾರ ಸಾ ।
ಕುಶಲಂ ಪರಿಪಪ್ರಚ್ಛ ಭೀತಾಽತಿವಿನಯೇನ ಚ ॥೨೯॥

ನಮ್ರಭಾಗಸ್ಥಿತಾ ತ್ರಸ್ತಾ ಶುಷ್ಕಕಂಠೋಷ್ಠತಾಲುಕಾ ।
ಧ್ಯಾನೇನ ಶರಣಾಯತ್ತಾ ಶ್ರೀಕೃಷ್ಣಚರಣಾಂಬುಜೇ ॥೩೦॥

ತಾಂ ಹೃತ್ಪದ್ಮಸ್ಥಿತಾಂ ಕೃಷ್ಣೋ ಭೀತಾಯೈ ಚಾಭಯಂ ದದೌ ।
ಬಭೂವ ಸ್ಥಿರಚಿತ್ತಾ ಸಾ ಸರ್ವೇಶ್ವರವರೇಣ ಚ ॥೩೧॥

ಊರ್ಧ್ವಂ ಸಿಂಹಾಸನಸ್ಥಾಂ ಚ ರಾಧಾಂ ಗಂಗಾ ದದರ್ಶ ಸಾ ।
ಸುಸ್ನಿಗ್ಧಾಂ ಸುಖದೃಶ್ಯಾಂ ಚ ಜ್ವಲಂತೀಂ ಬ್ರಹ್ಮತೇಜಸಾ ॥೩೨॥

ಅಸಂಖ್ಯಬ್ರಹ್ಮಣಃ ಕರ್ತ್ರೀಮಾದಿಸೃಷ್ಟೇಃ ಸನಾತನೀಂ ।
ಸದಾ ದ್ವಾದಶವರ್ಷೀಯಾಂ ಕನ್ಯಾಭಿನವಯೌವನಾಂ ॥೩೩॥

ವಿಶ್ವವೃಂದೇ ನಿರುಪಮಾಂ ರೂಪೇಣ ಚ ಗುಣೇನ ಚ ।
ಶಾಂತಾಂ ಕಾಂತಾಮನಂತಾಂ ತಾಮಾದ್ಯಂತರಹಿತಾಂ ಸತೀಂ ॥೩೪॥

---

ಒಡನೆಯೇ ಗಂಗೆಯು ಎದ್ದುನಿಂತು ಬಹಳವಾಗಿ ರಾಧೆಯನ್ನು ಸ್ತೋತ್ರ ಮಾಡಿ ಭಯದಿಂದಲೂ ವಿನಯದಿಂದಲೂ ಕುಶಲಪ್ರಶ್ನೆಯನ್ನು ಮಾಡಿ ತಗ್ಗಿನಲ್ಲಿ ನಿಂತುಕೊಂಡು ಹೆದರಿಕೆಯಿಂದ ಗಂಟಲು ದವಡೆಗಳು ಒಣಗುತ್ತಿರಲು ಧ್ಯಾನದಿಂದ ಶ್ರೀಕೃಷ್ಣನ ಪಾದಕ್ಕೆ ಶರಣುಹೊಂದಿದಳು. ಕೃಷ್ಣನು ತನ್ನ ಹೃದಯಕಮಲದಲ್ಲಿರುವ ಭಯಪಡುತ್ತಿರುವ ಗಂಗೆಗೆ ಅಭಯವನ್ನು ಕೊಟ್ಟನು. ಸರ್ವೇಶ್ವರನಾದ ಶ್ರೀಕೃಷ್ಣನ ವರದಿಂದ ಆ ಗಂಗೆಯು ಶಾಂತಚಿತ್ತಳಾದಳು. ॥೨೯-೩೦-೩೧॥

ಬಳಿಕ ಗಂಗೆಯು ಎತ್ತರವಾದ ಸಿಂಹಾಸನದಲ್ಲಿ ಕುಳಿತಿರುವ, ನೋಟಕ್ಕೆ ಸುಖಕರಳಾಗಿಯೂ ಬ್ರಹ್ಮತೇಜಸ್ಸಿನಿಂದ ಪ್ರಕಾಶಮಾನಳಾಗಿಯೂ ಅನೇಕ ಬ್ರಹ್ಮರನ್ನು ಸೃಷ್ಟಿಸಿದವಳೂ ಅನಾದಿಯಾದವಳೂ ಯಾವಾಗಲೂ ಹನ್ನೆರಡು ವರ್ಷದ ಕನ್ಯೆಯಂತೆ ಹೊಸದಾದ ಯೌವನವತಿಯೂ ಆದ, ॥೩೨-೩೩॥

ರೂಪದಿಂದಲೂ ಗುಣದಿಂದಲೂ ಪ್ರಪಂಚಗಳ ಸ್ತ್ರೀಸಮೂಹದಲ್ಲಿ ಅಸಮಾನಳಾದ ಶಾಂತಳೂ ಪ್ರಕಾಶಸ್ವರೂಪಳೂ ಅನಂತಸ್ವರೂಪಗಳೂ ಆದ, ಆದಿಯೂ

ಶುಭಾಂ ಸುಭದ್ರಾಂ ಸುಭಗಾಂ ಸ್ವಾಮಿಸೌಭಾಗ್ಯಸಂಯುತಾಂ ।
ಸೌಂದರ್ಯಸುಂದರೀಂ ಶ್ರೇಷ್ಠಾಂ ಸರ್ವಾಸು ಸುಂದರೀಷು ಚ ॥೩೫॥

ಕೃಷ್ಣಾರ್ಧಾಂಗಾಂ ಕೃಷ್ಣಸಮಾಂ ತೇಜಸಾ ವಯಸಾ ತ್ವಿಷಾ ।
ಪೂಜಿತಾಂ ಚ ಮಹಾಲಕ್ಷ್ಮೀಂ ಲಕ್ಷ್ಮ್ಯಾ ಲಕ್ಷ್ಮೀಶ್ವರೇಣ ಚ ॥೩೬॥

ಪ್ರಚ್ಛಾದ್ಯಮಾನಾಂ ಪ್ರಭಯಾ ಸಭಾಮೀಶಸ್ಯ ಸುಪ್ರಭಾಂ ।
ಸಖೀದತ್ತಂ ಚ ತಾಂಬೂಲಂ ಭುಕ್ತವತೀಂ ಚ ದುರ್ಲಭಂ ॥೩೭॥

ಅಜನ್ಯಾಂ ಸರ್ವಜನನೀಂ ಧನ್ಯಾಂ ಮಾನ್ಯಾಂ ಚ ಮಾನಿನೀಂ ।
ಕೃಷ್ಣಪ್ರಾಣಾಧಿದೇವೀಂ ಚ ಪ್ರಾಣಪ್ರಿಯತಮಾಂ ರಮಾಂ ॥೩೮॥

ದೃಷ್ಟ್ವಾ ರಾಕೇಶ್ವರೀಂ ತೃಪ್ತಿಂ ನ ಜಗಾಮ ಸುರೇಶ್ವರೀ ।
ನಿಮೇಷರಹಿತಾಭ್ಯಾಂ ಚ ಲೋಚನಾಭ್ಯಾಂ ಪಪೌ ಚ ತಾಂ ॥೩೯॥

---

ಅಂತ್ಯವೂ ಇಲ್ಲದೆ ಎಂದರೆ ನಿತ್ಯಳಾದ ಮಂಗಳಕರಳೂ ಸೌಭಾಗ್ಯವತಿಯೂ ಪತಿಯ ಸಂಬಂಧದಲ್ಲಿ ಮಂಗಳಕರವಾದ ಲಕ್ಷಣಗಳಿಂದ ಕೂಡಿದವಳೂ ಸಮಸ್ತ ಸುಂದರಿಯರಲ್ಲೂ ಅತ್ಯಂತಶ್ರೇಷ್ಠಳೂ ಸೌಂದರ್ಯಕ್ಕೇ ಸೌಂದರ್ಯವನ್ನು ಕೊಡತಕ್ಕವಳೂ ಕೃಷ್ಣನ ಅರ್ಧಶರೀರಸ್ವರೂಪಳೂ ಮತ್ತು ಕೃಷ್ಣನ ಸಮಾನವಾದ ತೇಜಸ್ಸು ವಯಸ್ಸು ಕಾಂತಿಯುಳ್ಳವಳೂ ಲಕ್ಷ್ಮಿಯಿಂದಲೂ ನಾರಾಯಣನಿಂದಲೂ ಪೂಜೆಯನ್ನು ಪಡೆದವಳೂ ಆಗಿದ್ದಳು. ॥೩೪-೩೫-೩೬॥

ಮತ್ತು ಕೃಷ್ಣನ ಸಭೆಯನ್ನು ತನ್ನ ಕಾಂತಿಯಿಂದ ಮುಚ್ಚುತ್ತಾ ಸಖಿಯು ಕೊಟ್ಟ ಉತ್ತಮವಾದ ತಾಂಬೂಲವನ್ನು ಮೆಲ್ಲುತ್ತಾ ಇರುವ, ಉತ್ಪತ್ತಿಯಿಲ್ಲದ, ಸಮಸ್ತರಿಗೂ ತಾಯಿಯಾದ ಪೂಜ್ಯಳೂ ಗೌರವವುಳ್ಳವಳೂ ಆದ, ಕೃಷ್ಣನಿಗೆ ಪ್ರಾಣಸ್ವರೂಪಳೂ ಪ್ರಾಣಪ್ರಿಯಳೂ ಪೂರ್ಣಿಮಾತಿಥಿಗೆ ಅಭಿಮಾನದೇವತೆಯೂ ಆದ, ರಾಧಾದೇವಿಯನ್ನು ನೋಡಿ ಗಂಗೆಯು ತೃಪ್ತಿಹೊಂದಲಿಲ್ಲ! ರೆಪ್ಪೆಯನ್ನು ಮುಚ್ಚದೆ ನೋಡುತ್ತಿದ್ದಳು. ॥೩೭-೩೮-೩೯॥

ಏತಸ್ಮಿನ್ನಂತರೇ ರಾಧಾ ಜಗದೀಶಮುವಾಚ ಸಾ ।
ವಾಚಾ ಮಧುರಯಾ ಶಾಂತಾ ವಿನೀತಾ ಸಸ್ಮಿತಾ ಮುನೇ ॥೪೦॥

॥ ರಾಧೋವಾಚ ॥

ಕೇಯಂ ಪ್ರಾಣೇಶ ಕಲ್ಯಾಣೀ ಸಸ್ಮಿತಾ ತ್ವನ್ಮುಖಾಂಬುಜಂ ।
ಪಶ್ಯಂತೀ ಸಸ್ಮಿತಂ ಪಾರ್ಶ್ವೇ ಸಕಾಮಾ ವಕ್ರಲೋಚನಾ ॥೪೧॥

ಮೂರ್ಚ್ಛಾಂ ಪ್ರಾಪ್ನೋತಿ ರೂಪೇಣ ಪುಳಕಾಂಕಿತವಿಗ್ರಹಾ ।
ವಸ್ತ್ರೇಣ ಮುಖಮಾಚ್ಛಾದ್ಯ ನಿರೀಕ್ಷಂತೀ ಪುನಃ ಪುನಃ ॥೪೨॥

ತ್ವಂ ಚಾಪಿ ತಾಂ ಸನ್ನಿರೀಕ್ಷ್ಯ ಸಕಾಮಃ ಸಸ್ಮಿತಃ ಸದಾ ।
ಮಯಿ ಜೀವತಿ ಗೋಲೋಕೇ ಭೂತಾ ದುರ್ವೃತ್ತಿರೀದೃಶೀ ॥೪೩॥

ತ್ವಮೇವ ಚೈವ(ಂ) ದುರ್ವೃತ್ತಂ ವಾರಂ ವಾರಂ ಕರೋಷಿ ಚ ।
ಕ್ಷಮಾಂ ಕರೋಮಿ ಪ್ರೇಮ್ಣಾ ಚ ಸ್ತ್ರೀಜಾತಿಃ ಸ್ನಿಗ್ಧಮಾನಸಾ ॥೪೪॥

---

ಈ ಸಮಯದಲ್ಲಿ ಶಾಂತೆಯೂ ನಮ್ರತೆಯುಳ್ಳವಳೂ ಮುಗುಳುನಗೆಯುಳ್ಳವಳೂ ಆದ ರಾಧೆಯು ಇಂಪಾದ ಮಾತಿನಿಂದ ಜಗದೀಶ್ವರನಾದ ಕೃಷ್ಣನನ್ನು ಕುರಿತು ಹೀಗೆ ಹೇಳಿದಳು. ॥೪೦॥

ರಾಧೆಯು—ಪ್ರಾಣಪ್ರಿಯನೇ, ಮಂಗಳಕರಳಾದ ಇವಳಾರು? ನಗುತ್ತಾ ನಿನ್ನ ಮುಖವನ್ನು ನೋಡುತ್ತಾ ನಿನ್ನ ಪಕ್ಕದಲ್ಲಿಯೇ ಓರೆನೋಟದಿಂದ ನೋಡಿ ನಿನ್ನ ರೂಪಿನಿಂದ ಕಾಮವಿಕಾರವಾದ ಮೂರ್ಛೆಯನ್ನು ಹೊಂದಿ ಮೈ ರೋಮಾಂಚವಾಗುತ್ತಿರಲು ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಮತ್ತೆ ಮತ್ತೆ ನೋಡುತ್ತಿರುವಳು. ನೀನೂ ಕೂಡ ಅವಳನ್ನು ನೋಡಿ ನಗುತ್ತಾ ಯಾವಾಗಲೂ ಕಾಮಾಸಕ್ತನಾಗಿರುವೆ. ನಾನು ಗೋಲೋಕದಲ್ಲಿ ಬದುಕಿರುವಾಗಲೂ ನಿನಗೆ ಈ ಕೆಟ್ಟನಡತೆಯುಂಟಾಗಿರುವುದು! ನೀನೇ ಈ ಕೆಟ್ಟನಡತೆಯನ್ನು ಪುನಃ ಪುನಃ ಮಾಡುತ್ತಿರುವೆ. ನಿನ್ನಲ್ಲಿರುವ ಪ್ರೀತಿಯಿಂದ ನಾನು ಕ್ಷಮಿಸುತ್ತಿರುತ್ತೇನೆ. ಹೆಂಗಸಿನ ಜಾತಿಯೇ ಯಾವಾಗಲೂ ಪ್ರೀತಿಯುಕ್ತವಾದ ಮನಸ್ಸುಳ್ಳದು. ॥೪೧-೪೨-೪೩-೪೪॥

**ಸಂಗೃಹ್ಯೇಮಾಂ ಪ್ರಿಯಾಮಿಷ್ಟಾಂ ಗೋಲೋಕಾದ್ಗಚ್ಛ ಲಂಪಟ ।**
**ಅನ್ಯಥಾ ನಹಿ ತೇ ಭದ್ರಂ ಭವಿಷ್ಯತಿ ವ್ರಜೇಶ್ವರ ॥೪೫॥**

**ದೃಷ್ಟಸ್ತ್ವಂ ವಿರಜಾಯುಕ್ತೋ ಮಯಾ ಚಂದನಕಾನನೇ ।**
**ಕ್ಷಮಾ ಕೃತಾ ಮಯಾ ಪೂರ್ವಂ ಸಖೀನಾಂ ವಚನಾದಹೋ ॥೪೬॥**

**ತ್ವಯಾ ಮಚ್ಛಬ್ದಮಾತ್ರೇಣ ತಿರೋಧಾನಂ ಕೃತಂ ಪುರಾ ।**
**ದೇಹಂ ತತ್ಯಾಜ ವಿರಜಾ ನದೀರೂಪಾ ಬಭೂವ ಸಾ ॥೪೭॥**

**ಕೋಟಿಯೋಜನವಿಸ್ತೀರ್ಣಾ ತತೋ ದೈರ್ಘ್ಯೇ ಚತುರ್ಗುಣಾ ।**
**ಅದ್ಯಾಪಿ ವಿದ್ಯಮಾನಾ ಸಾ ತೀವ ಸತ್ಕೀರ್ತಿರೂಪಿಣೀ ॥೪೮॥**

**ಗೃಹಂ ಮಯಿ ಗತಾಯಾಂ ಚ ಪುನರ್ಗತ್ವಾ ತದಂತಿಕೇ ।**
**ಉಚ್ಚೈರುರೋದ ವಿರಜೇ ವಿರಜೇತಿ ಚ ಸಂಸ್ಮರನ್ ॥೪೯॥**

**ತದಾ ತೋಯಾತ್ಸಮುತ್ಥಾಯ ಸಾ ಯೋಗಾತ್ಸಿದ್ಧಯೋಗಿನೀ ।**
**ಸಾಲಂಕಾರಾ ಮೂರ್ತಿಮತೀ ದದೌ ತುಭ್ಯಂ ಚ ದರ್ಶನಂ ॥೫೦॥**

**ತತಸ್ತಾಂ ಚ ಸಮಾಕ್ಷಿಪ್ಯ ವಿರ್ಯಾಧಾನಂ ಕೃತಂ ತ್ವಯಾ ।**
**ತತೋ ಬಭೂವುಸ್ತಸ್ಯಾಂ ಚ ಸಮುದ್ರಾಃ ಸಪ್ತ ಏವ ಚ ॥೫೧॥**

---

ವ್ರಜಕ್ಕೆ ಅಧಿಪತಿಯಾದ ಕಾಮಿಯಾದ ನೀನು ನಿನಗೆ ಪ್ರೀತಿಪಾತ್ರಳಾದ ಇವಳನ್ನು ಕರೆದುಕೊಂಡು ಗೋಲೋಕವನ್ನು ಬಿಟ್ಟು ಎಲ್ಲಿಗಾದರೂ ಹೊರಡು. ಹಾಗೆ ಹೋಗದೆ ಹೋದರೆ ನಿನಗೆ ಒಳ್ಳೆಯದಾಗುವುದಿಲ್ಲ. ॥೪೫॥

ಹಿಂದೆ ನೀನು ಶ್ರೀಗಂಧದ ಮರದ ಕಾಡಿನಲ್ಲಿ ವಿರಜೆ ಎಂಬ ಗೋಪಿಯೊಡನೆ ಇದ್ದುದನ್ನು ನಾನು ನೋಡಿದೆನು. ನನ್ನ ಶಬ್ದವನ್ನು ಕೇಳಿದ ಮಾತ್ರದಿಂದ ನೀನು ಮರೆಯಾಗಿ ನನಗೆ ಕಾಣಿಸಿಕೊಳ್ಳಲಿಲ್ಲ. ವಿರಜೆಯು ತನ್ನ ದೇಹವನ್ನು ಬಿಟ್ಟು ನದಿಯ ರೂಪವಾದಳು. ಆ ವಿರಜಾನದಿಯು ನಿನ್ನ ಒಳ್ಳೆಯ ಕೀರ್ತಿರೂಪದಿಂದ ವಿಶೇಷವಾದ ಅಗಲವೂ ನಾಲ್ಕರಷ್ಟು ಉದ್ದವೂ ಉಳ್ಳದ್ದಾಗಿ ಈಗಲೂ ಇರುವುದು. ॥೪೬-೪೭-೪೮॥

ನಾನು ಮನೆಗೆ ಹೋಗುತ್ತಲೂ ನೀನು ಆ ನದಿಯ ಸಮೀಪಕ್ಕೆ ಹೋಗಿ ವಿರಜೇ! ವಿರಜೇ! ಎಂದು ನೆನಸಿಕೊಂಡು ಗಟ್ಟಿಯಾಗಿ ಅತ್ತೆ. ಆಗ ಸಿದ್ಧಯೋಗಿನಿ

ದೃಷ್ಟಸ್ತ್ವಂ ಶೋಭಯಾ ಗೋಪ್ಯಾ ಯುಕ್ತಶ್ಚಂಪಕಕಾನನೇ ।
ಸದ್ಯೋ ಮಚ್ಛಬ್ದಮಾತ್ರೇಣ ತಿರೋಧಾನಂ ಕೃತಂ ತ್ವಯಾ ॥೫೨॥

ಶೋಭಾ ದೇಹಂ ಪರಿತ್ಯಜ್ಯ ಜಗಾಮ ಚಂದ್ರಮಂಡಲೇ ।
ತತಸ್ತಸ್ಯಾಃ ಶರೀರಂ ಚ ಸ್ನಿಗ್ಧಂ ತೇಜೋ ಬಭೂವ ಹ ॥೫೩॥

ಸಂವಿಭಜ್ಯ ತ್ವಯಾ ದತ್ತಂ ಹೃದಯೇನ ವಿದೂಯತಾ ।
ರತ್ನಾಯ ಕಿಂಚಿತ್ಸ್ವರ್ಣಾಯ ಕಿಂಚಿನ್ಮಣಿವರಾಯ ಚ ॥೫೪॥

ಕಿಂಚಿತ್ಸ್ತ್ರೀಣಾಂ ಮುಖಾಬ್ಜೇಭ್ಯಃ ಕಿಂಚಿದ್ರಾಜ್ಞೇ ಚ ಕಿಂಚನ ।
ಕಿಂಚಿತ್ಫಲೇಭ್ಯಃ ಪಕ್ವೇಭ್ಯಃ ಸಸ್ಯೇಭ್ಯಶ್ಚಾಪಿ ಕಿಂಚನ ॥೫೫॥

ನೃಪದೇವ ಗೃಹೇಭ್ಯಶ್ಚ ಸಂಸ್ಕೃತೇಭ್ಯಶ್ಚ ಕಿಂಚನ ।
ಕಿಂಚಿತ್ಕಿಸಲಯೇಭ್ಯಶ್ಚ ಪುಷ್ಪೇಭ್ಯಶ್ಚಾಪಿ ಕಿಂಚನ ॥೫೬॥
ಕಿಂಚಿನ್ನೂತನಪತ್ರೇಭ್ಯೋ ದುಗ್ಧೇಭ್ಯಶ್ಚಾಪಿ ಕಿಂಚನ ।

---

ಯಾದ ಅವಳು ನೀರಿನಿಂದ ಎದ್ದು ಅಲಂಕಾರಮಾಡಿಕೊಂಡ ಶರೀರದಿಂದ ಕೂಡಿ ನಿನಗೆ ಕಾಣಿಸಿಕೊಂಡಳು. ಆ ಮೇಲೆ ಅವಳನ್ನು ಕೈಹಿಡಿದು ಅವಳೊಡನೆ ಕೂಡಿದೆ. ಬಳಿಕ ಅವಳ ಗರ್ಭದಲ್ಲಿ ಸಪ್ತಸಮುದ್ರಗಳು ಹುಟ್ಟಿದುವು. ॥೪೯-೫೦-೫೧॥

ಮತ್ತೊಂದು ದಿನ ನೀನು ಸಂಪಿಗೆಯ ಕಾಡಿನಲ್ಲಿ ಶೋಭೆ ಎಂಬ ಗೋಪಿಯೊಡನೆ ಕೂಡಿದ್ದುದನ್ನು ಕಂಡೆನು. ನನ್ನ ಶಬ್ದವನ್ನು ಕೇಳಿದೊಡನೆಯೇ ನೀನು ಮರೆಯಾದೆ! ಶೋಭೆಯು ದೇಹವನ್ನು ಬಿಟ್ಟು ಚಂದ್ರಮಂಡಲಕ್ಕೆ ಹೋದಳು. ಬಳಿಕ ಅವಳ ಶರೀರವು ಕೋಮಲವಾದ ತೇಜಸ್ಸಾಯಿತು. ನೀನು ಆ ತೇಜಸ್ಸನ್ನು ದುಃಖದ ಮನಸ್ಸಿನಿಂದ ವಿಭಾಗಮಾಡಿ ರತ್ನಕ್ಕೂ ಚಿನ್ನಕ್ಕೂ ಮಣಿಗಳಿಗೂ ಹಂಚಿಕೊಟ್ಟೆ. ॥೫೨-೫೩-೫೪॥

ಇದಲ್ಲದೆ ಸ್ತ್ರೀಯರ ಮುಖಕಮಲಕ್ಕೂ, ರಾಜರಿಗೂ, ಚಿಗುರಿಗೂ, ಹೂಗಳಿಗೂ, ಸಸ್ಯಗಳಿಗೂ, ಅರಮನೆ, ದೇವಾಲಯಗಳಿಗೂ, ಉಪನಯನಾದಿ ಸಂಸ್ಕಾರವನ್ನು ಹೊಂದಿದವರಿಗೂ, ಹೊಸದಾಗಿ ಹುಟ್ಟಿದ ಎಲೆಗಳಿಗೂ, ಹಾಲಿಗೂ ಸ್ವಲ್ಪ ಸ್ವಲ್ಪವಾಗಿ ಅವಳ ಕಾಂತಿಯನ್ನು ಹಂಚಿಕೊಟ್ಟೆ. ॥೫೫-೫೬॥

ದೃಷ್ಟಸ್ತ್ವಂ ಪ್ರಭಯಾ ಗೋಪ್ಯಾ ಯುಕ್ತೋ ವೃಂದಾವನೇ ವನೇ ॥೫೭॥

ಸದ್ಯೋ ಮಚ್ಛಬ್ದಮಾತ್ರೇಣ ತಿರೋಧಾನಂ ಕೃತಂ ತ್ವಯಾ ।
ಪ್ರಭಾ ದೇಹಂ ಪರಿತ್ಯಜ್ಯ ಜಗಾಮ ಸೂರ್ಯಮಂಡಲೇ ॥೫೮॥

ತತಸ್ತಸ್ಯಾಃ ಶರೀರಂ ಚ ತೀವ್ರಂ ತೇಜೋ ಬಭೂವ ಹ ।
ಸಂವಿಭಜ್ಯ ತ್ವಯಾ ದತ್ತಂ ಪ್ರೇಮ್ಣಾ ಪ್ರರುದತಾ ಪುರಾ ॥೫೯॥

ವಿಸೃಷ್ಟಂ ಚಕ್ಷುಷೋಃ ಕೃಷ್ಣ ಲಜ್ಜಯಾ ಮದ್ಭಯೇನ ಚ ।
ಹುತಾಶನಾಯ ಕಿಂಚಿಚ್ಚ ಯಕ್ಷೇಭ್ಯಶ್ಚಾಪಿ ಕಿಂಚನ ॥೬೦॥

ಕಿಂಚಿತ್ಪುರುಷಸಿಂಹೇಭ್ಯೋ ದೇವೇಭ್ಯಶ್ಚಾಪಿ ಕಿಂಚನ ।
ಕಿಂಚಿದ್ವಿಷ್ಣುಜನೇಭ್ಯಶ್ಚ ನಾಗೇಭ್ಯೋಽಪಿ ಚ ಕಿಂಚನ ॥೬೧॥

ಬ್ರಾಹ್ಮಣೇಭ್ಯೋ ಮುನಿಭ್ಯಶ್ಚ ತಪಸ್ವಿಭ್ಯಶ್ಚ ಕಿಂಚನ ।
ಸ್ತ್ರೀಭ್ಯಃ ಸೌಭಾಗ್ಯಯುಕ್ತಾಭ್ಯೋ ಯಶಸ್ವಿಭ್ಯಶ್ಚ ಕಿಂಚನ ॥೬೨॥
ತತ್ತು ದತ್ವಾ ಚ ಸರ್ವೇಭ್ಯಃ ಪೂರ್ವಂ ಪ್ರರುದಿತಂ ತ್ವಯಾ ।

---

ಮತ್ತೊಂದು ದಿನ ನೀನು ವೃಂದಾವನವೆಂಬ ಕಾಡಿನಲ್ಲಿ ಪ್ರಭಾ ಎಂಬ ಗೋಪಿಯೊಡನೆ ಕೂಡಿದ್ದುದನ್ನು ನೋಡಿದೆನು. ನನ್ನ ಶಬ್ದವನ್ನು ಕೇಳಿದೊಡನೆಯೇ ನೀನು ಮರೆಯಾದೆ. ಪ್ರಭೆಯು ತನ್ನ ದೇಹವನ್ನು ಬಿಟ್ಟು ಸೂರ್ಯಮಂಡಲಕ್ಕೆ ಹೋದಳು. ಆಮೇಲೆ ಅವಳ ಶರೀರವು ಅತಿಶಯವಾದ ತೇಜಸ್ಸಾಗಿ ಪರಿಣಮಿಸಿತು. ॥೫೭-೫೮॥

ಎಲೈ ಕೃಷ್ಣನೇ, ಆ ಪ್ರಭೆಯಲ್ಲಿರುವ ಪ್ರೀತಿಯಿಂದ ನೀನು ನಾಚಿಕೆಯಿಂದಲೂ ನನ್ನ ಭಯದಿಂದಲೂ ಕೂಡಿ ಆ ಪ್ರಭೆಯ ಅಂಶಗಳನ್ನು ಕಣ್ಣಿಗೂ, ಅಗ್ನಿಗೂ, ಯಕ್ಷರಿಗೂ, ಶೂರರಾದ ಪುರುಷರಿಗೂ, ದೇವತೆಗಳಿಗೂ, ವಿಷ್ಣುಭಕ್ತರಿಗೂ, ನಾಗರಿಗೂ, ಬ್ರಾಹ್ಮಣರಿಗೂ, ಋಷಿಗಳಿಗೂ, ತಪಸ್ಸುಮಾಡುವವರಿಗೂ, ಸುಮಂಗಲಿಯರಾದ ಸ್ತ್ರೀಯರಿಗೂ, ಕೀರ್ತಿವಂತರಿಗೂ, ಕೊಟ್ಟು ಆಮೇಲೂ ನೀನು ವಿಶೇಷವಾಗಿ ಅತ್ತೆ. ॥೫೯-೬೦-೬೧-೬೨॥

ಶಾಂತಿಗೋಪ್ಯಾಯುತಸ್ತ್ವಂ ಚ ದೃಷ್ಟೋಽಸಿ ರಾಸಮಂಡಲೇ ॥೬೩॥

ವಸಂತೇ ಪುಷ್ಪಶಯ್ಯಾಯಾಂ ಮಾಲ್ಯವಾಂಶ್ಚಂದನೋಕ್ಷಿತಃ ।
ರತ್ನಪ್ರದೀಪೈರ್ಯುಕ್ತೇ ಚ ರತ್ನನಿರ್ಮಾಣಮಂದಿರೇ ॥೬೪॥

ರತ್ನಭೂಷಣಭೂಷಾಢ್ಯೇ ರತ್ನಭೂಷಿತಯಾ ಸಹ ।
ತಯಾ ದತ್ತಂ ಚ ತಾಂಬೂಲಂ ಭುಕ್ತವಾಂಶ್ಚ ಪುರಾ ವಿಭೋ ॥೬೫॥

ಸದ್ಯೋ ಮಚ್ಛಬ್ದಮಾತ್ರೇಣ ತಿರೋಧಾನಂ ಕೃತಂ ತ್ವಯಾ ।
ಶಾಂತಿರ್ದೇಹಂ ಪರಿತ್ಯಜ್ಯ ಭಿಯಾ ಲೀನಾ ತ್ವಯಿ ಪ್ರಭೋ ॥೬೬॥

ತತಸ್ತಸ್ಯಾಃ ಶರೀರಂ ಚ ಗುಣಶ್ರೇಷ್ಠಃ ಬಭೂವ ಹ ।
ಸಂವಿಭಜ್ಯ ತ್ವಯಾ ದತ್ತಂ ಪ್ರೇಮ್ಣಾ ಪ್ರರುದತಾ ಪುರಾ ॥೬೭॥

ವಿಶ್ವೇ ತು ವಿಪಿನೇ ಕಿಂಚಿದ್ಬ್ರಹ್ಮಣೇ ಚ ಮಯಿ ಪ್ರಭೋ ।
ಶುದ್ಧ-ಸತ್ವಸ್ವರೂಪಾಯೈ ಕಿಂಚಿಲ್ಲಕ್ಷ್ಮ್ಯೈ ಪುರಾ ವಿಭೋ ॥೬೮॥

ತನ್ಮಂತ್ರೋಪಾಸಕೇಭ್ಯಶ್ಚ ಶಾಕ್ತೇಭ್ಯಶ್ಚಾಪಿ ಕಿಂಚನ ।
ತಪಸ್ವಿಭ್ಯಶ್ಚ ಧರ್ಮಾಯ ಧರ್ಮಿಷ್ಠೇಭ್ಯಶ್ಚ ಕಿಂಚನ ॥೬೯॥

---

ಓ ಕೃಷ್ಣನೇ, ಇಷ್ಟೇ ಅಲ್ಲದೆ ಇನ್ನೊಂದು ಆವೃತ್ತಿಯೂ ನೀನು ರಾಸಮಂಡಲದಲ್ಲಿ ವಸಂತರುತುವಿನಲ್ಲಿ ಹೂವಿನ ಹಾಸಿಗೆಯಲ್ಲಿ ಮೈಗೆಲ್ಲ ಕ್ಕೂ ಗಂಧವನ್ನು ಬಳಿದುಕೊಂಡು ಹೂಮುಡಿದುಕೊಂಡು ಶಾಂತಿ ಎಂಬ ಗೋಪಿಯೊಡನೆ ರತ್ನಗಳಿಂದ ಮಾಡಿದ ಮನೆಯಲ್ಲಿ ರತ್ನಗಳ ದೀಪಗಳ ಬೆಳಕಿನಲ್ಲಿ ರತ್ನಾಭರಣಗಳನ್ನು ಧರಿಸಿದ ಗೋಪಿಯು ಕೊಟ್ಟ ತಾಂಬೂಲವನ್ನು ಸೇವಿಸುತ್ತಾ ಇದ್ದುದನ್ನು ನಾನು ನೋಡಿದೆನು. ನನ್ನ ಶಬ್ದವನ್ನು ಕೇಳಿದೊಡನೆಯೇ ನೀನು ಮರೆಯಾದೆ! ಶಾಂತಿಯು ದೇಹವನ್ನು ಬಿಟ್ಟು ಭಯದಿಂದ ನಿನ್ನಲ್ಲಿಯೇ ಅಡಗಿಕೊಂಡಳು. ಆ ಮೇಲೆ ಅವಳ ಶರೀರವು ಶ್ರೇಷ್ಠವಾದ ಶಾಂತಿಗುಣವಾಯಿತು. ನೀನು ದುಃಖಿಸುತ್ತಾ ಆ ಗುಣವನ್ನು ವಿಭಾಗಮಾಡಿ, ॥೬೩-೬೪-೬೫-೬೬-೬೭॥

ಪ್ರಪಂಚಕ್ಕೂ ಕಾಡಿಗೂ ಬ್ರಹ್ಮನಿಗೂ ನನಗೂ ಶುದ್ಧಸತ್ವಗುಣಸ್ವರೂಪಳಾದ ಲಕ್ಷ್ಮಿಗೂ ನಿನ್ನ ಮಂತ್ರೋಪಾಸನೆಯನ್ನು ಮಾಡುವವರಿಗೂ ಶಕ್ತಿಮಂತ್ರೋಪಾಸಕರಿಗೂ, ತಪಸ್ವಿಗಳಿಗೂ, ಧರ್ಮದೇವನಿಗೂ, ಧರ್ಮಾಚರಣೆಯನ್ನು ಮಾಡುವ ಜನರಿಗೂ ಹಂಚಿಕೊಟ್ಟಿರುವೆ. ॥೬೮-೬೯॥

ಮಯಾ ಪೂರ್ವಂ ಚ ತ್ವಂ ದೃಷ್ಟೋ ಗೋಪ್ಯಾ ಚ ಕ್ಷಮಯಾ ಸಹ ।
ಸುವೇಷಯುಕ್ತೋ ಮಾಲಾವಾನ್ ಗಂಧಚಂದನಚರ್ಚಿತಃ ॥೭೦॥

ರತ್ನಭೂಷಿತಯಾ ಗಂಧಚಂದನೋಕ್ಷಿತಯಾ ಸಹ ।
ಸುಖೇನ ಮೂರ್ಛಿತಸ್ತಲ್ಪೇ ಪುಷ್ಪಚಂದನ ಚರ್ಚಿತೇ ॥೭೧॥

ಶ್ಲಿಷ್ಟೋ ನಿದ್ರಿತಯಾ ಸದ್ಯಃ ಸುಖೇನ ನವಸಂಗಮಾತ್ ।
ಮಯಾ ಪ್ರಬೋಧಿತಾ ಸಾ ಚ ಭವಾಂಶ್ಚ ಸ್ಮರಣಂ ಕುರು ॥೭೨॥

ಗೃಹೀತಂ ಪೀತವಸ್ತ್ರಂ ಚ ಮುರಲೀ ಚ ಮನೋಹರಾ ।
ವನಮಾಲಾ ಕೌಸ್ತುಭಶ್ಚಾಽಸ್ಯಮೂಲ್ಯಂ ರತ್ನಕುಂಡಲಂ ॥೭೩॥

ಪಶ್ಚಾತ್ಪ್ರದತ್ತಂ ಪ್ರೇಮ್ಣಾ ಚ ಸಖೀನಾಂ ವಚನಾದಹೋ ।
ಲಜ್ಜಯಾ ಕೃಷ್ಣವರ್ಣೋಽಭೂದ್ಭವಾನ್ಪಾಪೇನ ಯಃ ಪ್ರಭೋ ॥೭೪॥

ಕ್ಷಮಾ ದೇಹಂ ಪರಿತ್ಯಜ್ಯ ಲಜ್ಜಯಾ ಪೃಥಿವೀಂ ಗತಾ ।
ತತಸ್ತಸ್ಯಾಃ ಶರೀರಂ ಚ ಗುಣಶ್ರೇಷ್ಠಂ ಬಭೂವ ಹ ॥೭೫॥

ಸಂವಿಭಜ್ಯ ತ್ವಯಾ ದತ್ತಂ ಪ್ರೇಮ್ಣಾ ಪ್ರರುದತಾ ಪುನಃ ।
ಕಿಂಚಿದ್ದತ್ತಂ ವಿಷ್ಣವೇ ಚ ವೈಷ್ಣವೇಭ್ಯಶ್ಚ ಕಿಂಚನ ॥೭೬॥

---

ನೀನು ಕ್ಷಮೆ ಎಂಬ ಗೋಪಿಯೊಡನೆ ಸುಂದರವಾದ ರೂಪಿನಿಂದ ಕೂಡಿ ಮೈಗೆಲ್ಲಕ್ಕೂ ಸುಗಂಧವನ್ನು ಬಳಿದುಕೊಂಡು ಹೂ ಮತ್ತು ಸುಗಂಧಗಳಿಂದ ಕೂಡಿದ ಹಾಸಿಗೆಯಲ್ಲಿ ಹೊಸದಾದ ರತಿಸಂಬಂಧದಿಂದುಂಟಾದ ಸುಖದಿಂದ ನಿದ್ರಿಸುತ್ತಿದ್ದ ಕ್ಷಮೆಯನ್ನು ತಬ್ಬಿಕೊಂಡು ನಿದ್ರಿಸುತ್ತಿದ್ದೆ! ನಾನು ನಿನ್ನನ್ನೂ ಆ ಕ್ಷಮೆಯನ್ನೂ ಎಚ್ಚರಗೊಳಿಸಿದೆನು. ನೀನೇ ಜ್ಞಾಪಿಸಿಕೋ. ॥೭೦-೭೧-೭೨॥

ನಾನು ನಿನ್ನ ಪೀತಾಂಬರವನ್ನೂ, ಕೊಳಲನ್ನೂ, ವನಮಾಲೆಯನ್ನೂ, ಕೌಸ್ತುಭರತ್ನ ಮತ್ತು ವಿಶೇಷ ಬೆಲೆಯುಳ್ಳ ರತ್ನಕುಂಡಲ ಇವುಗಳನ್ನು ತೆಗೆದುಕೊಂಡಿದ್ದು ಆಮೇಲೆ ಪ್ರೀತಿಯಿಂದಲೂ ಸಖಿಯರ ಮಾತಿನಿಂದಲೂ ನಿನಗೆ ಹಿಂದಕ್ಕೆ ಕೊಟ್ಟೆನು. ನಾಚಿಕೆಯಿಂದುಂಟಾದ ಪಾಪದಿಂದ ನೀನು ಕಪ್ಪುಬಣ್ಣದವನಾದೆ! ಕ್ಷಮೆಯು ದೇಹವನ್ನು ಬಿಟ್ಟು ಭೂಮಿಗೆ ಹೋದಳು. ಆಮೇಲೆ ಅವಳ ಶರೀರವು ಶ್ರೇಷ್ಠವಾದ ಕ್ಷಮಾಗುಣವಾಯ್ತು. ನೀನು ಆ ಗುಣವನ್ನು ವಿಭಾಗಮಾಡಿ ವಿಷ್ಣುವಿಗೂ

ಧಾರ್ಮಿಕೇಭ್ಯಶ್ಚ ಧರ್ಮಾಯ ದುರ್ಬಲೇಭ್ಯಶ್ಚ ಕಿಂಚನ ।
ತಪಸ್ವಿಭ್ಯೋಽಪಿ ದೇವೇಭ್ಯಃ ಪಂಡಿತೇಭ್ಯಶ್ಚ ಕಿಂಚನ ॥೭೭॥

ಏತತ್ತೇ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ।
ತ್ವದ್ಗುಣಂ ಚೈವ ಬಹುಶೋ ನ ಜಾನಾಮಿ ಪರಂ ಪ್ರಭೋ ॥೭೮॥

ಇತ್ಯೇವಮುಕ್ತ್ವಾ ಸಾ ರಾಧಾ ರಕ್ತಪಂಕಜಲೋಚನಾ ।
ಗಂಗಾಂ ವಕ್ತುಂ ಸಮಾರೇಭೇ ನಮ್ರಾಸ್ಯಾಂ ಲಜ್ಜಿತಾಂ ಸತೀಂ ॥೭೯॥

ಗಂಗಾ ರಹಸ್ಯಂ ವಿಜ್ಞಾಯ ಯೋಗೇನ ಸಿದ್ಧಿಯೋಗಿನೀ ।
ತಿರೋಭೂಯ ಸಭಾಮಧ್ಯೇ ಸ್ವಜಲಂ ಪ್ರವಿವೇಶ ಸಾ ॥೮೦॥

ರಾಧಾ ಯೋಗೇನ ವಿಜ್ಞಾಯ ಸರ್ವತ್ರಾವಸ್ಥಿತಾಂ ಚ ತಾಂ ।
ಪಾನಂ ಕರ್ತುಂ ಸಮಾರೇಭೇ ಗಂಡೂಷಾತ್ಸಿದ್ಧಯೋಗಿನೀ ॥೮೧॥

ಗಂಗಾ ರಹಸ್ಯಂ ವಿಜ್ಞಾಯ ಯೋಗೇನ ಸಿದ್ಧಿಯೋಗಿನೀ ।
ಶ್ರೀಕೃಷ್ಣಚರಣಾಂಭೋಜೇ ವಿವೇಶ ಶರಣಂ ಯಯೌ ॥೮೨॥

---

ವಿಷ್ಣುಭಕ್ತರಿಗೂ ಧಾರ್ಮಿಕರಿಗೂ ಧರ್ಮದೇವನಿಗೂ ದುರ್ಬಲರಿಗೂ ತಪಸ್ವಿಗಳಿಗೂ ದೇವತೆಗಳಿಗೂ ಜ್ಞಾನಿಗಳಿಗೂ ದುಃಖಿಸಿ ಹಂಚಿದೆ. ॥೭೩-೭೪-೭೫-೭೬-೭೭॥

ಇವೆಲ್ಲವನ್ನೂ ನಿನಗೆ ಹೇಳಿರುವೆನು. ಇನ್ನೇನನ್ನು ಕೇಳಬೇಕೆಂದಿರುವೆ? ಶ್ರೇಷ್ಠವಾದ ನಿನ್ನ ಗುಣಗಳೆಲ್ಲವನ್ನೂ ನಾನರಿಯೆನು. ಎಂದು ರಾಧೆಯು ಹೇಳಿ ತಲೆಯನ್ನು ಬಗ್ಗಿಸಿಕೊಂಡು ನಾಚಿಕೆಯಿಂದಿರುವ ಗಂಗೆಯನ್ನು ಕುರಿತು ಮಾತನಾಡುವುದಕ್ಕೆ ಪ್ರಾರಂಭಿಸಿದಳು. ॥೭೮-೭೯॥

ಗಂಗೆಯು ರಾಧೆಯ ಗುಟ್ಟನ್ನು ತಿಳಿದು ಸಿದ್ಧಯೋಗಿನಿಯಾದುದರಿಂದ ಯೋಗಶಕ್ತಿಯಿಂದ ಸಭಾಮಧ್ಯದಲ್ಲಿ ಕಾಣಿಸಿಕೊಳ್ಳದೆ ತನ್ನ ನೀರನ್ನು ಪ್ರವೇಶಿಸಿದಳು. ರಾಧೆಯು ಯೋಗಶಕ್ತಿಯಿಂದ ಎಲ್ಲ ಕಡೆಗಳಲ್ಲೂ ಇರುವ ಆ ಗಂಗೆಯನ್ನು ತಿಳಿದು ಸಿದ್ಧಯೋಗಿನಿಯಾದುದರಿಂದ ಕೈಗಳಿಂದ ತೆಗೆದು ಕುಡಿಯಲು ಆರಂಭಿಸಿದಳು. ಗಂಗೆಯು ಈ ಗುಟ್ಟನ್ನು ತಿಳಿದು ಯೋಗಶಕ್ತಿಯಿಂದ ಶ್ರೀಕೃಷ್ಣನ ಪಾದದಲ್ಲಿ ಪ್ರವೇಶಿಸಿ ಅವನನ್ನೇ ಶರಣುಹೊಂದಿದಳು. ॥೮೦-೮೧-೮೨॥

ಗೋಲೋಕೇ ಸಾ ಚ ವೈಕುಂಠೇ ಬ್ರಹ್ಮಲೋಕಾದಿಕೇ ತಥಾ ।
ದದರ್ಶ ರಾಧಾ ಸರ್ವತ್ರ ನೈವ ಗಂಗಾಂ ದದರ್ಶ ಸಾ ॥೪೩॥

ಸರ್ವತ್ರ ಜಲಶೂನ್ಯಂ ಚ ಶುಷ್ಕಪಂಕಂ ಚ ಗೋಲಕಂ ।
ಜಲಜಂತುಸಮೂಹೈಶ್ಚ ಮೃತದೇಹೈಃ ಸಮನ್ವಿತಂ ॥೪೪॥

ಬ್ರಹ್ಮವಿಷ್ಣುಶಿವಾನಂತ ಧರ್ಮೇಂದ್ರೇಂದುದಿವಾಕರಾಃ ।
ಮನವೋ ಮುನಯಃ ಸರ್ವೇ ದೇವಸಿದ್ಧತಪಸ್ವಿನಃ ॥೪೫॥

ಗೋಲೋಕಂ ಚ ಸಮಾಜಗ್ಮುಃ ಶುಷ್ಕಕಂಠೋಷ್ಠತಾಲುಕಾಃ ।
ಸರ್ವೇ ಪ್ರಣೇಮುರ್ಗೋವಿಂದಂ ಸರ್ವೇಶಂ ಪ್ರಕೃತೇಃ ಪರಂ ॥೪೬॥

ವರಂ ವರೇಣ್ಯಂ ವರದಂ ವರಿಷ್ಠಂ ವರಕಾರಣಂ ।
ಗೋಪಿಕಾ ಗೋಪವೃಂದಾನಾಂ ಸರ್ವೇಷಾಂ ಪ್ರವರಂ ಪ್ರಭುಂ ॥೪೭॥

ನಿರೀಹಂ ಚ ನಿರಾಕಾರಂ ನಿರ್ಲಿಪ್ತಂ ಚ ನಿರಾಶ್ರಯಂ ।
ನಿರ್ಗುಣಂ ಚ ನಿರುತ್ಸಾಹಂ ನಿರ್ವಿಕಾರಂ ನಿರಂಜನಂ ॥೪೮॥

---

ಗೋಲೋಕದಲ್ಲಿಯೂ ವೈಕುಂಠಲೋಕದಲ್ಲಿಯೂ ಬ್ರಹ್ಮಲೋಕವೇ ಮೊದಲಾದ ಸಮಸ್ತ ಲೋಕಗಳಲ್ಲೂ ರಾಧೆಯು ಹುಡುಕಿದಳು. ಗಂಗೆಯನ್ನು ಕಾಣಲಿಲ್ಲ. ಎಲ್ಲೆಡೆಯಲ್ಲಿಯೂ ನೀರಿಲ್ಲದೆ ಹೋಯಿತು. ಭೂಗೋಲವು ಒಣಗಿದ ಕೆಸರಾದಂತಾಯಿತು. ಸತ್ತುಹೋದ ನೀರಿನ ಪ್ರಾಣಿಗಳ ಶರೀರದಿಂದ ಕೂಡಿದ್ದಿತು ! ॥೪೩-೪೪॥

ಬ್ರಹ್ಮಾ, ವಿಷ್ಣು, ಶಿವ, ಆದಿಶೇಷ, ಧರ್ಮ, ದೇವೇಂದ್ರ, ಚಂದ್ರ, ಸೂರ್ಯ, ಮನುಗಳು, ಋಷಿಗಳು, ಸಮಸ್ತಸಿದ್ಧರು, ದೇವತೆಗಳು, ತಪಸ್ವಿಗಳು, ಇವರೆಲ್ಲರೂ ಗೋಲೋಕಕ್ಕೆ ಬಂದು, ಗಂಟಲು ತುಟಿ ದವಡೆಗಳಲ್ಲಿ ನೀರಿಲ್ಲದೆ ಒಣಗಿಹೋಗಿರಲು ಪ್ರಕೃತಿಗಿಂತಲೂ ಶ್ರೇಷ್ಠನಾದ, ಗೋಪಿಯರಿಗೂ, ಗೋಪರಿಗೂ, ಸಮಸ್ತರಿಗೂ, ಒಡೆಯನಾಗಿರುವ ವರವನ್ನು ಕೊಡುವವನಾದ ಗೋವಿಂದನಿಗೆ ನಮಸ್ಕಾರಮಾಡಿದರು. ॥೪೫-೪೬-೪೭॥

ಯಾವ ಇಚ್ಛೆಯೂ ಯಾವ ಆಕಾರವೂ ಇಲ್ಲದುದರಿಂದ ಯಾವ ಪದಾರ್ಥಗಳ ಗುಣದೋಷಗಳ ಸೋಂಕಿಲ್ಲದೆ ಆಶ್ರಯಶೂನ್ಯನಾದ ಯಾವ ಗುಣಗಳೂ ಇಲ್ಲದೆ ಕಾರ್ಯಾಸಕ್ತಿಯಿಲ್ಲದೆ ಷಡ್ಭಾವವಿಕಾರವಿಲ್ಲದೆ ದೋಷಶೂನ್ಯನಾದ ಇಚ್ಛಾಸ್ವರೂಪ

ಸ್ವೇಚ್ಛಾಮಯಂ ಚ ಸಾಕಾರಂ ಭಕ್ತಾನುಗ್ರಹಕಾರಕಂ ।
ಸತ್ವಸ್ವರೂಪಂ ಸತ್ಯೇಶಂ ಸಾಕ್ಷಿರೂಪಂ ಸನಾತನಂ ॥೮೯॥

ಪರಂ ಪರೇಶಂ ಪರಮಂ ಪರಮಾತ್ಮಾನಮೀಶ್ವರಂ ।
ಪ್ರಣಮ್ಯ ತುಷ್ಟುವುಃ ಸರ್ವೇ ಭಕ್ತಿನಮ್ರಾತ್ಮಕಂಧರಾಃ ॥೯೦॥

ಸಗದ್ಗದಾಃ ಸಾಶ್ರುನೇತ್ರಾಃ ಪುಲಕಾಂಕಿತವಿಗ್ರಹಾಃ ।
ಸರ್ವೇ ಸಂಸ್ತೂಯ ಸರ್ವೇಶಂ ಭಗವಂತಂ ಪರಾತ್ಪರಂ ॥೯೧॥

ಜ್ಯೋತಿರ್ಮಯಂ ಪರಂ ಬ್ರಹ್ಮ ಸರ್ವಕಾರಣಕಾರಣಂ ।
ಅಮೂಲ್ಯರತ್ನನಿರ್ಮಾಣ ಚಿತ್ರಸಿಂಹಾಸನಸ್ಥಿತಂ ॥೯೨॥

ಸೇವ್ಯಮಾನಂ ಚ ಗೋಪಾಲೈಃ ಶ್ವೇತಚಾಮರವಾಯುನಾ ।
ಗೋಪಾಲಿಕಾ ನೃತ್ಯಗೀತಂ ಪಶ್ಯಂತಂ ಸಸ್ಮಿತಂ ಮುದಾ ॥೯೩॥

ಪ್ರಾಣಾಧಿಕಪ್ರಿಯತಮಂ ರಾಧಾವಕ್ಷಸ್ಸ್ಥಲಸ್ಥಿತಂ ।
ತಯಾ ಪ್ರದತ್ತಂ ತಾಂಬೂಲಂ ಭುಕ್ತವಂತಂ ಸುವಾಸಿತಂ ॥೯೪॥

ಪರಿಪೂರ್ಣತಮಂ ರಾಸೇ ದದೃಶುಶ್ಚ ಸುರೇಶ್ವರಂ ।

---

ನಾಗಿ ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಸಾಕಾರನಾದ, ಸತ್ವಸ್ವರೂಪನಾಗಿ ಸತ್ಯಕ್ಕೆ ಒಡೆಯನಾದ, ಸುಖದುಃಖಾನುಭವಗಳಿಗೆ ಸಾಕ್ಷಿಸ್ವರೂಪನಾಗಿ ಅನಾದಿಯಾಗಿರುವ, ಪ್ರಕೃತಿಗಿಂತಲೂ ಶ್ರೇಷ್ಠನಾಗಿ ಮೋಕ್ಷಕ್ಕೊಡೆಯನಾದ ಪರಮಾತ್ಮನನ್ನು ನಮಸ್ಕರಿಸಿ ಭಕ್ತಿಯಿಂದ ತಮ್ಮ ಕುತ್ತಿಗೆಯನ್ನು ಬಗ್ಗಿಸಿಕೊಂಡು ಸ್ತೋತ್ರಮಾಡಿದರು. ॥೮೮-೮೯-೯೦॥

ಪ್ರಕಾಶಸ್ವರೂಪನೂ ಸಮಸ್ತ ಕಾರಣವಸ್ತುಗಳಿಗೂ ಕಾರಣಸ್ವರೂಪನೂ ಬಹಳ ಬೆಲೆಯುಳ್ಳ ರತ್ನಗಳಿಂದ ಮಾಡಿದ ವಿಚಿತ್ರವಾದ ಸಿಂಹಾಸನದಲ್ಲಿ ಕುಳಿತು ಗೋಪಾಲರು ಬಿಳಿಯ ಚಾಮರಗಳಿಂದ ಬೀಸುತ್ತಿರಲು ಗೋಪಾಲ ಬಾಲಕಿಯರ ನೃತ್ಯವನ್ನು ಸಂತೋಷದಿಂದ ನೋಡುತ್ತಾ ಪ್ರಾಣಪ್ರಿಯಳಾದ ರಾಧೆಯ ವಕ್ಷಸ್ಥಲ ದಲ್ಲಿದ್ದು ಅವಳು ಕೊಟ್ಟ ತಾಂಬೂಲವನ್ನು ಸವಿಯುತ್ತಿರುವವನೂ ಆದ ಪರಿಪೂರ್ಣ ಬ್ರಹ್ಮಸ್ವರೂಪನಾದ ಶ್ರೀಕೃಷ್ಣನನ್ನು ರಾಸಮಂಡಲದಲ್ಲಿ ನೋಡಿ ಸಮಸ್ತ ದೇವತೆ

ಮುನಯೋ ಮಾನವಾ ಸಿದ್ಧಾಸ್ತಪಸಾ ಚ ತಪಸ್ವಿನಃ ॥೯೫॥

ಪ್ರಹೃಷ್ಟಮನಸಃ ಸರ್ವೇ ಜಗ್ಮುಃ ಪರಮವಿಸ್ಮಯಂ ।
ಪರಸ್ಪರಂ ಸಮಾಲೋಕ್ಯ ಪ್ರೋಚುಸ್ತೇ ಚ ಚತುರ್ಮುಖಂ ॥೯೬॥

ನಿವೇದಿತುಂ ಜಗನ್ನಾಥಂ ಸ್ವಾಭಿಪ್ರಾಯಮಭೀಪ್ಸಿತಂ ।
ಬ್ರಹ್ಮಾ ತದ್ವಚನಂ ಶ್ರುತ್ವಾ ವಿಷ್ಣುಂ ಕೃತ್ವಾ ಸ್ವದಕ್ಷಿಣೇ ॥೯೭॥

ವಾಮತೋ ವಾಮದೇವಂ ಚ ಜಗಾಮ ಕೃಷ್ಣಸನ್ನಿಧಿಂ ।
ಪರಮಾನಂದಯುಕ್ತಂ ಚ ಪರಮಾನಂದರೂಪಿಣಂ ॥೯೮॥

ಸರ್ವಂ ಕೃಷ್ಣಮಯಂ ಧಾತಾ ದದರ್ಶ ರಾಸಮಂಡಲೇ ।
ಸರ್ವಂ ಸಮಾನವೇಷಂ ಚ ಸಮಾನಾಸನಸಂಸ್ಥಿತಂ ॥೯೯॥

ದ್ವಿಭುಜಂ ಮುರಲೀಹಸ್ತಂ ವನಮಾಲಾವಿಭೂಷಿತಂ ।
ಮಯೂರಪಿಚ್ಛಚೂಡಂ ಚ ಕೌಸ್ತುಭೇನ ವಿರಾಜಿತಂ ॥೧೦೦॥

---

ಗಳೂ ಆನಂದಬಾಷ್ಪವನ್ನು ಸುರಿಸುತ್ತಾ ಮೈಯೆಲ್ಲವೂ ರೋಮಾಂಚಿತವಾಗಿರಲು ಎಲ್ಲರೂ ಸ್ತೋತ್ರಮಾಡಿದರು, ॥೯೧-೯೨-೯೩-೯೪॥

ಮುನಿಗಳೂ, ಮನುಷ್ಯರೂ, ಸಿದ್ಧರೂ. ತಪಸ್ವಿಗಳೂ, ಎಲ್ಲರೂ ಸಂತೋಷದಿಂದ ಆಶ್ಚರ್ಯವನ್ನು ಹೊಂದಿ ತಮ್ಮ ತಮ್ಮಲ್ಲಿಯೇ ಆಲೋಚಿಸಿ ಚತುರ್ಮುಖನನ್ನು ಕುರಿತು ಜಗದೊಡೆಯನಾದ ಶ್ರೀಕೃಷ್ಣನಿಗೆ ನಮ್ಮ ಅಭಿಪ್ರಾಯವನ್ನು ವಿಜ್ಞಾಪನೆ ಮಾಡು ಎಂದು ಹೇಳಿದರು. ॥೯೫-೯೬॥

ಬ್ರಹ್ಮನು ಅವರ ಮಾತನ್ನು ಕೇಳಿ ತನ್ನ ಬಲಗಡೆಯಲ್ಲಿ ವಿಷ್ಣುವನ್ನೂ ಎಡಗಡೆಯಲ್ಲಿ ಶಿವನನ್ನೂ ಕರೆದುಕೊಂಡು ಪರಮಾನಂದಸ್ವರೂಪನಾದ ಕೃಷ್ಣನ ಸಮೀಪಕ್ಕೆ ಹೋದನು. ಆ ರಾಸಮಂಡಲದಲ್ಲಿ ಎಲ್ಲರೂ ಕೃಷ್ಣಸ್ವರೂಪರಾಗಿ ಒಂದೇ ಸಮನಾದ ವೇಷದಿಂದ ಸಮಾನವಾದ ಪೀಠದಲ್ಲಿ ಕುಳಿತಿರುವುದನ್ನು ನೋಡಿದನು. ॥೯೭-೯೮-೯೯॥

ಆ ಕೃಷ್ಣನು ಎರಡು ತೋಳುಗಳುಳ್ಳವನಾಗಿ ಕೈಯಲ್ಲಿ ಕೊಳಲನ್ನು ಹಿಡಿದು ಕೊಂಡವನಾಗಿ ತುಲಸೀಮಾಲೆಯನ್ನು ಧರಿಸಿ ನವಿಲು ಗರಿಯನ್ನು ತಲೆಯಲ್ಲಿ ಧರಿಸಿ ಕೌಸ್ತುಭರತ್ನದಿಂದ ಪ್ರಕಾಶಿಸುತ್ತಾ ಅತ್ಯಂತ ಸುಂದರನೂ ಶಾಂತಮೂರ್ತಿಯೂ

ಅತೀವ ಕಮನೀಯಂ ಚ ಸುಂದರಂ ಶಾಂತವಿಗ್ರಹಂ ।
ಗುಣಭೂಷಣರೂಪೇಣ ತೇಜಸಾ ವಯಸಾ ತ್ವಿಷಾ ॥೧೦೧॥

ಪರಿಪೂರ್ಣತಮಂ ಸರ್ವಂ ಸರ್ವೈಶ್ವರ್ಯಸಮನ್ವಿತಂ ।
ಕಿಂ ಸೇವ್ಯಂ ಸೇವಕಂ ಕಿಂ ವಾ ದೃಷ್ಟ್ವಾ ನಿರ್ವಕ್ತುಮಕ್ಷಮಃ॥೧೦೨॥

ಕ್ಷಣಂ ತೇಜಃ ಸ್ವರೂಪಂ ಚ ರೂಪಂ ತತ್ರ ಸ್ಥಿತಂ ಕ್ಷಣಂ ।
ನಿರಾಕಾರಂ ಚ ಸಾಕಾರಂ ದದರ್ಶ ದ್ವಿವಿಧಂ ಕ್ಷಣಂ ॥೧೦೩॥

ಏಕಮೇವ ಕ್ಷಣಂ ಕೃಷ್ಣಂ ರಾಧಯಾ ರಹಿತಂ ಪರಂ ।
ಪ್ರತ್ಯೇಕಾಸನಸಂಸ್ಥಂ ಚ ತಯಾ ಸಾರ್ಧಂ ಚ ತತ್ಕ್ಷಣಂ ॥೧೦೪॥

ರಾಧಾರೂಪಧರಂ ಕೃಷ್ಣಂ ಕೃಷ್ಣರೂಪಂ ಕಳತ್ರಕಂ ।
ಕಿಂ ಸ್ತ್ರೀರೂಪಂ ಚ ಪುರುಷಂ ವಿಧಾತಾ ಧ್ಯಾತುಮಕ್ಷಮಃ ॥೧೦೫॥

ಹೃತ್ಪದ್ಮಸ್ಥಂ ಚ ಶ್ರೀಕೃಷ್ಣಂ ಧ್ಯಾತ್ವಾ ಧ್ಯಾನೇನ ಚಕ್ಷುಷಾ ।
ಚಕಾರ ಸ್ತವನಂ ಭಕ್ತ್ಯಾ ಪರಿಹಾರಮನೇಕಧಾ ॥೧೦೬॥

---

ಆಗಿ ಗುಣ, ಅಲಂಕಾರ, ರೂಪ, ತೇಜಸ್ಸು, ವಯಸ್ಸು, ಕಾಂತಿ ಇವುಗಳಲ್ಲಿ ಪರಿಪೂರ್ಣನಾಗಿ ಸಮಸ್ತಸಂಪತ್ತುಗಳಿಂದ ಕೂಡಿದ್ದನು. ॥೧೦೦-೧೦೧॥

ಬ್ರಹ್ಮನು ಅಲ್ಲಿದ್ದವರನ್ನು ನೋಡಿ ಪ್ರಭುವಾರು? ಸೇವಕರಾರು? ಎಂದು ವಿವೇಚಿಸಲು ಶಕ್ತನಾಗಲಿಲ್ಲ. ಒಂದು ಕ್ಷಣದಲ್ಲಿ ಪ್ರಕಾಶರೂಪನಾಗಿಯೂ ಮತ್ತೊಂದು ಕ್ಷಣದಲ್ಲಿ ಮೂರ್ತಿರೂಪನಾಗಿಯೂ, ಹಾಗೆಯೇ ನಿರಾಕಾರನಾಗಿಯೂ ಸಾಕಾರನಾಗಿಯೂ, ಒಬ್ಬನೇ ಕೃಷ್ಣನನ್ನು ನೋಡಿದನು. ಹಾಗೆಯೇ ಬೇರೆ ಸಿಂಹಾಸನದಲ್ಲಿ ಒಬ್ಬನೇ ಕುಳಿತಿರುವುದನ್ನೂ ಉತ್ತರ ಕ್ಷಣದಲ್ಲಿಯೇ ರಾಧೆಯೊಡನೆ ಕುಳಿತಿರುವುದನ್ನೂ ರಾಧಾರೂಪದ ಕೃಷ್ಣನೂ ಕೃಷ್ಣಸ್ವರೂಪಳಾದ ರಾಧೆಯೂ ಕಂಡುಬಂದುದರಿಂದ ಸ್ತ್ರೀರೂಪನಾದ ಪುರುಷನನ್ನೂ ಪುರುಷರೂಪಳಾದ ಸ್ತ್ರೀಯನ್ನೂ ನೋಡಿ ವಾಸ್ತವಸ್ವರೂಪವನ್ನು ನಿಶ್ಚಯಿಸಲಾರದೇ ಹೋದನು.॥೧೦೨-೧೦೩-೧೦೪-೧೦೫॥

ಬಳಿಕ ತನ್ನ ಮನಸ್ಸಿನಲ್ಲಿಯೇ ಶ್ರೀಕೃಷ್ಣನನ್ನು ಧ್ಯಾನಮಾಡಿ ಭಕ್ತಿಯಿಂದ ಅನೇಕ ಸ್ತೋತ್ರಗಳನ್ನು ಮಾಡಿ ಅಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಂಡನು. ॥೧೦೬॥

ತತಸ್ಸ್ವಚಕ್ಷೂರುನ್ಮೀಲ್ಯ ಪುನಶ್ಚ ತದನುಜ್ಞಯಾ ।
ದದರ್ಶ ಕೃಷ್ಣಮೇಕಂ ಚ ರಾಧಾವಕ್ಷಸ್ಸ್ಥಲಸ್ಥಿತಂ ॥೧೦೭॥

ಸ್ವಪಾರ್ಷದೈಃ ಪರಿವೃತಂ ಗೋಪಮಂಡಲಮಂಡಿತಂ ।
ಪುನಃ ಪ್ರಣೇಮುಃ ತಂ ದೃಷ್ಟ್ವಾ ತುಷ್ಟುವುಃ ಪರಮೇಶ್ವರಂ ॥೧೦೮॥

ತದಭಿಪ್ರಾಯಮಾಜ್ಞಾಯ ತಾನುವಾಚ ರಮೇಶ್ವರಃ ।
ಸರ್ವಾತ್ಮಾ ಸ ಚ ಸರ್ವಜ್ಞಃ ಸರ್ವೇಶಃ ಸರ್ವಭಾವನಃ ॥೧೦೯॥

॥ ಶ್ರೀಭಗವಾನುವಾಚ ॥

ಆಗಚ್ಛ ಕುಶಲಂ ಬ್ರಹ್ಮನ್ನಾಗಚ್ಛ ಕಮಲಾಪತೇ ।
ಇಹಾಗಚ್ಛ ಮಹಾದೇವ ಶಶ್ವತ್ಕುಶಲಮಸ್ತು ವಃ ॥೧೧೦॥

ಆಗತಾ ಹಿ ಮಹಾಭಾಗಾ ಗಂಗಾನಯನಕಾರಣಾತ್ ।
ಗಂಗಾ ಚ ಚರಣಾಂಭೋಜೇ ಭಯೇನ ಶರಣಂ ಗತಾ ॥೧೧೧॥

ರಾಧೇಮಾಂ ಪಾತುಮಿಚ್ಛಂತೀ ದೃಷ್ಟ್ವಾ ಮತ್ಸನ್ನಿಧಾನತಃ ।
ದಾಸ್ಯಾಮೀಮಾಂ ಚ ಭವತಾಂ ಯೂಯಂ ಕುರುತ ನಿರ್ಭಯಾಂ ॥೧೧೨॥

---

ಆ ಮೇಲೆ ತನ್ನ ಕಣ್ಣನ್ನು ಬಿಟ್ಟು ಆ ಕೃಷ್ಣನ ಅಪ್ಪಣೆಯಿಂದ ರಾಧಾದೇವಿಯ ವಕ್ಷಸ್ಥಲದಲ್ಲಿರುವ ಕೃಷ್ಣನೊಬ್ಬನನ್ನೇ ನೋಡಿದನು. ಆ ಕೃಷ್ಣನು ಗೋಪಿಯರ ಗುಂಪಿನಿಂದಲೂ ಸೇವಕರ ಗುಂಪಿನಿಂದಲೂ ಕೂಡಿದ್ದನು. ಮತ್ತೆ ಅವರೆಲ್ಲರೂ ಅವನನ್ನು ನೋಡಿ ನಮಸ್ಕರಿಸಿ ಸ್ತೋತ್ರಮಾಡಿದರು. ಅವರ ಅಭಿಪ್ರಾಯವನ್ನು ತಿಳಿದು ಸಮಸ್ತರಿಗೂ ಆತ್ಮಸ್ವರೂಪನೂ ಸರ್ವಜ್ಞನೂ ಸಮಸ್ತಪ್ರಪಂಚಕ್ಕೂ ಒಡೆಯನೂ ಸರ್ವಧ್ಯಾನಕ್ಕೂ ಗೋಚರನೂ ಆದ ಲಕ್ಷ್ಮೀಪತಿಯಾದ ಕೃಷ್ಣನು ಅವರನ್ನು ಕುರಿತು ಹೇಳಿದನು. ॥೧೦೭-೧೦೮-೧೦೯॥

ಬ್ರಹ್ಮನೇ! ಲಕ್ಷ್ಮೀಪತಿಯಾದ ವಿಷ್ಣುವೇ! ಶಿವನೇ! ನೀವೆಲ್ಲರೂ ಬನ್ನಿರಿ. ನಿಮಗೆ ಮಂಗಳವಾಗಲಿ. ನೀವೆಲ್ಲರೂ ಗಂಗೆಯನ್ನು ತರುವುದಕ್ಕಾಗಿ ಬಂದಿರುವಿರಿ. ಗಂಗೆಯು ಭಯದಿಂದ ನನ್ನ ಪಾದಕಮಲದಲ್ಲಿ ಮರೆಯಾಗಿರುವಳು. ॥೧೧೦-೧೧೧॥

ಗಂಗೆಯು ನನ್ನ ಸಮೀಪದಲ್ಲಿದ್ದುದನ್ನು ನೋಡಿ ರಾಧೆಯು ಈ ಗಂಗೆಯನ್ನು ಕುಡಿಯಬೇಕೆಂದು ಅಪೇಕ್ಷಿಸಿದಳು. ಈ ಗಂಗೆಯನ್ನು ನಿಮಗೆ ಕೊಡುವೆನು. ನೀವು ರಾಧೆಯನ್ನು ಪ್ರಾರ್ಥನೆಮಾಡಿ ಗಂಗೆಗೆ ಭಯವಿಲ್ಲದಂತೆ ಮಾಡಿ. ॥೧೧೨॥

ಶ್ರೀಕೃಷ್ಣಸ್ಯ ವಚಃ ಶ್ರುತ್ವಾ ಸಸ್ಮಿತಃ ಕಮಲೋದ್ಭವಃ ।
ತುಷ್ಟಾವ ರಾಧಾಮಾರಾಧ್ಯಾಂ ಶ್ರೀಕೃಷ್ಣಪರಿಪೂಜಿತಾಂ ॥೧೧೩॥

ವಕ್ತ್ರೈಶ್ಚತುರ್ಭಿಃ ಸಂಸ್ತೂಯ ಭಕ್ತಿನಮ್ರಾತ್ಮಕಂಧರಃ ।
ಧಾತಾ ಚತುರ್ಣಾಂ ವೇದಾನಾಮುವಾಚ ಚತುರಾನನಃ ॥೧೧೪॥

॥ ಚತುರಾನನ ಉವಾಚ ॥

ಗಂಗಾ ತ್ವದಂಗಸಂಭೂತಾ ಪ್ರಭೋಶ್ಚ ರಾಸಮಂಡಲೇ ।
ಯುವಯೋರ್ದ್ರವರೂಪಾ ಸಾ ಮುಗ್ಧಯೋಃ ಶಂಕರಸ್ವನಾತ್ ॥೧೧೫॥

ಕೃಷ್ಣಾಂಶಾ ಚ ತ್ವದಂಶಾ ಚ ತತ್ಕನ್ಯಾಸದೃಶೀ ಪ್ರಿಯಾ ।
ತ್ವನ್ಮಂತ್ರಗ್ರಹಣಂ ಕೃತ್ವಾ ಕರೋತು ತವ ಪೂಜನಂ ॥೧೧೬॥

ಭವಿಷ್ಯತಿ ಪತಿಸ್ತಸ್ಯಾ ವೈಕುಂಠೇಶಶ್ಚತುರ್ಭುಜಃ ।
ಭೂಸ್ಥಾಯಾಃ ಕಲಯಾ ತಸ್ಯಾಃ ಪತಿರ್ಲವಣವಾರಿಧಿಃ ॥೧೧೭॥

ಗೋಲೋಕಸ್ಥಾ ಚ ಯಾ ಗಂಗಾ ಸರ್ವತ್ರಸ್ಥಾ ತಥಾಽಂಬಿಕೇ ।
ತದಂಬಿಕಾ ತ್ವಂ ದೇವೇಶೀ ಸರ್ವದಾ ಸಾ ತ್ವದಾತ್ಮಜಾ ॥೧೧೮॥

---

ಶ್ರೀಕೃಷ್ಣನ ಮಾತನ್ನು ಕೇಳಿ ಬ್ರಹ್ಮನು ನಗುತ್ತಾ ಶ್ರೀಕೃಷ್ಣನು ಪೂಜಿಸಿದುದರಿಂದ ಪೂಜ್ಯಳಾದ ರಾಧೆಯನ್ನು ಸ್ತೋತ್ರಮಾಡಿದನು. ತನ್ನ ನಾಲ್ಕು ಮುಖಗಳಿಂದ ನಾಲ್ಕು ವೇದಗಳನ್ನು ಹೇಳಿ ಭಕ್ತಿಯಿಂದ ತನ್ನ ಕುತ್ತಿಗೆಯನ್ನು ಬಗ್ಗಿಸಿಕೊಂಡು ಸ್ತೋತ್ರಮಾಡಿದನು. ॥೧೧೩-೧೧೪॥

ರಾಧಾದೇವಿಯೇ! ಗಂಗೆಯು ರಾಸಮಂಡಲದಲ್ಲಿ ನಿನ್ನ ಮತ್ತು ಕೃಷ್ಣನ ಅಂಗಗಳಿಂದ ದ್ರವರೂಪವಾಗಿ ಹುಟ್ಟಿದಳು. ಅದುದರಿಂದ ಅವಳು ನಿನಗೆ ಪ್ರೀತಿಪಾತ್ರಳಾದ ಮಗಳಿಗೆ ಸಮಾನಳು. ಅವಳು ನಿನ್ನ ಮಂತ್ರವನ್ನು ಉಪದೇಶ ತೆಗೆದುಕೊಂಡು ನಿನ್ನ ಪೂಜೆಯನ್ನು ಮಾಡಲಿ. ॥೧೧೫-೧೧೬॥

ಆ ಗಂಗೆಗೆ ವೈಕುಂಠಲೋಕದಲ್ಲಿ ನಾಲ್ಕು ತೋಳುಗಳುಳ್ಳ ನಾರಾಯಣನು ಪತಿಯಾಗುವನು. ಕಲಾಂಶದಿಂದ ಭೂಮಿಯಲ್ಲಿರುವ ಗಂಗೆಗೆ ಲವಣಸಮುದ್ರನು ಪತಿಯಾಗುವನು. ಗೋಲೋಕದಲ್ಲಿರುವ ಗಂಗೆಯು ಎಲ್ಲ ಕಡೆಯಲ್ಲಿಯೂ ಇರು

**ಬ್ರಹ್ಮಣೋ ವಚನಂ ಶ್ರುತ್ವಾ ಸ್ವೀಚಕಾರ ಚ ಸಸ್ಮಿತಾ ।**
**ಬಹಿರ್ಬಭೂವ ಸಾ ಕೃಷ್ಣಪಾದಾಂಗುಷ್ಠನಖಾಗ್ರತಃ ॥೧೧೯॥**

**ತತ್ರೈವ ಸತ್ಕೃತಾ ಶಾಂತಾ ತಸ್ಥೌ ತೇಷಾಂ ಚ ಮಧ್ಯತಃ ।**
**ಉವಾಸ ತೋಯರಾದುತ್ಥಾಯ ತದಧಿಷ್ಠಾತೃದೇವತಾ ॥೧೨೦॥**

**ತತ್ತೋಯಂ ಬ್ರಹ್ಮಣಾ ಕಿಂಚಿತ್ಸ್ಥಾಪಿತಂ ಚ ಕಮಂಡಲೌ ।**
**ಕಿಂಚಿದ್ದಧಾರ ಶಿರಸಿ ಚಂದ್ರಾರ್ಧಕೃತಶೇಖರಃ ॥೧೨೧॥**

**ಗಂಗಾಯೈ ರಾಧಿಕಾಮಂತ್ರಂ ಪ್ರದದೌ ಕಮಲೋದ್ಭವಃ ।**
**ತತ್ಸ್ತೋತ್ರಂ ಕವಚಂ ಪೂಜಾಂ ವಿಧಾನಂ ಧ್ಯಾನಮೇವ ಚ ॥೧೨೨॥**

**ಸರ್ವಂ ತತ್ಸಾಮವೇದೋಕ್ತಂ ಪುರಶ್ಚರ್ಯಾಕ್ರಮಂ ತಥಾ ।**
**ಗಂಗಾ ತಾಮೇವ ಸಂಪೂಜ್ಯ ವೈಕುಂಠಂ ಪ್ರಯಯೌ ಸಹ ॥೧೨೩॥**

**ಲಕ್ಷ್ಮೀಃ ಸರಸ್ವತೀ ಗಂಗಾ ತುಲಸೀ ವಿಶ್ವಪಾವನೀ ।**
**ಏತಾ ನಾರಾಯಣಸ್ಯೈವ ಚತಸ್ರೋ ಯೋಷಿತೋ ಮುನೇ ॥೧೨೪॥**

ವಳು. ಆ ಗಂಗೆಗೆ ನೀನೇ ತಾಯಿಯು. ನಿನಗೆ ಯಾವಾಗಲೂ ಅವಳು ಮಗಳೇ ಆಗಿರುವಳು. ॥೧೧೭-೧೧೮॥

ಬ್ರಹ್ಮನ ಮಾತನ್ನು ಕೇಳಿ ನಗುತ್ತಾ ರಾಧೆಯು ಅವನ ಸ್ತೋತ್ರವನ್ನು ಒಪ್ಪಿದಳು. ಗಂಗೆಯು ಕೃಷ್ಣನ ಪಾದದ ಹೆಬ್ಬೆರಳಿನ ಉಗುರಿನ ತುದಿಯಿಂದ ಹೊರಗೆ ಕಾಣಿಸಿಕೊಂಡಳು. ಅಲ್ಲಿಯೇ ಪೂಜಿಸಲ್ಪಟ್ಟವಳಾಗಿ ಶಾಂತಳಾಗಿ ಅವರ ಮಧ್ಯದಲ್ಲಿಯೇ ನೀರಿನಿಂದ ಎದ್ದು ನೀರಿಗೆ ಅಭಿಮಾನದೇವತೆಯಾಗಿ ವಾಸವಾಗಿದ್ದಳು. ॥೧೧೯-೧೨೦॥

ಬ್ರಹ್ಮನು ಆ ನೀರನ್ನು ತನ್ನ ಕಮಂಡಲುವಿನಲ್ಲಿ ಸ್ವಲ್ಪ ಇಟ್ಟುಕೊಂಡನು. ಚಂದ್ರಕಲೆಯನ್ನು ಶಿರಸ್ಸಿನಲ್ಲಿ ಧರಿಸಿರುವ ಈಶ್ವರನೂ ಆ ಗಂಗಾಜಲವನ್ನು ತನ್ನ ತಲೆಯಲ್ಲಿ ಧರಿಸಿದನು. ಗಂಗೆಗೆ ಬ್ರಹ್ಮನು ರಾಧಿಕಾಮಂತ್ರವನ್ನು ಉಪದೇಶಿಸಿದನು. ಆ ರಾಧಾಸ್ತೋತ್ರ, ಕವಚ, ಪೂಜಾವಿಧಾನ, ಮಂತ್ರಪುರಶ್ಚರಣಕ್ರಮ ಇವೆಲ್ಲವೂ ಸಾಮವೇದದಲ್ಲಿ ಹೇಳಿರುವುದು. ॥೧೨೧-೧೨೩॥

ನಾರದಮುನಿಯೆ, ಒಡನೆಯೇ ಗಂಗೆಯು ರಾಧೆಯ ಪೂಜೆಯನ್ನು ಮಾಡಿ ವೈಕುಂಠಕ್ಕೆ ಹೋದಳು. ಲಕ್ಷ್ಮೀ, ಸರಸ್ವತೀ, ಗಂಗೆ, ತುಲಸೀ, ಈ ನಾಲ್ವರೂ

**ಅಥ ತಾಂ ಸಸ್ಮಿತಃ ಕೃಷ್ಣೋ ಬ್ರಹ್ಮಾಣಂ ಸಮುವಾಚ ಸಃ ।**
**ಸರ್ವಕಾಲಸ್ಯ ವೃತ್ತಾಂತಂ ದುರ್ಬೋಧಮವಿಪಶ್ಚಿತಾಂ ॥೧೨೫॥**

**॥ ಶ್ರೀಕೃಷ್ಣ ಉವಾಚ ॥**

**ಗೃಹಾಣ ಗಂಗಾಂ ಹೇ ಬ್ರಹ್ಮನ್ ಹೇ ವಿಷ್ಣೋ ಹೇ ಮಹೇಶ್ವರ ।**
**ಶ್ರುಣು ಕಾಲಸ್ಯ ವೃತ್ತಾಂತಂ ಮತ್ತೋ ಬ್ರಹ್ಮನ್ನಿಶಾಮಯ ॥೧೨೬॥**

**ಯೂಯಂ ಚ ಯೇಽನ್ಯೇ ದೇವಾಶ್ಚ ಮುನಯೋ ಮನವಸ್ತಥಾ ।**
**ಸಿದ್ಧಾ ಯಶಸ್ವಿನಶ್ಚೈವ ಯೆ ಯೇಽತ್ರೈವ ಸಮಾಗತಾಃ ॥೧೨೭॥**

**ಏತೇ ಜೀವಂತಿ ಗೋಲೋಕೇ ಕಾಲಚಕ್ರವಿವರ್ಜಿತೇ ।**
**ಜಲಪ್ಲುತಂ ಸರ್ವವಿಶ್ವಂ ಜಾತಂ ಕಲ್ಪಕ್ಷಯೇಽಧುನಾ ॥೧೨೮॥**

**ಬ್ರಹ್ಮಾದ್ಯಾ ಯೇಽನ್ಯ ವಿಶ್ವಸ್ಥಾಸ್ತೇ ವಿಲೀನಾಽಧುನಾ ಮಯಿ ।**
**ವೈಕುಂಠಂ ಚ ವಿನಾ ಸರ್ವಂ ಜಲಮಗ್ನಂ ಚ ಪದ್ಮಜ ॥೧೨೯॥**

---

ನಾರಾಯಣನಿಗೆ ಪತ್ನಿಯರಾದರು. ಆ ಮೇಲೆ ನಗುತ್ತಿರುವ ಕೃಷ್ಣನು ಬ್ರಹ್ಮನನ್ನು ಕುರಿತು ಬುದ್ಧಿಹೀನರಿಗೆ ತಿಳಿಯಲಸಾಧ್ಯವಾದ ಸಮಸ್ತಕಾಲದ ವೃತ್ತಾಂತವನ್ನೂ ಹೇಳಿದನು. ॥೧೨೩-೧೨೪-೧೨೫॥

ಶ್ರೀಕೃಷ್ಣನು ಹೇಳಿದನು—ಎಲೈ ಬ್ರಹ್ಮ ವಿಷ್ಣು ಮಹೇಶ್ವರರೇ, ಗಂಗೆಯನ್ನು ನೀವು ತೆಗೆದುಕೊಳ್ಳಿ. ಎಲೈ ಬ್ರಹ್ಮನೇ, ನೀವೂ ಇತರ ದೇವತೆಗಳೂ ಮುನಿಗಳೂ ಮನುಗಳೂ ಸಿದ್ಧರೂ ಯಶಸ್ಸನ್ನು ಸಂಪಾದಿಸಿದವರೂ ಮತ್ತು ಇಲ್ಲಿಗೆ ಯಾರು ಯಾರು ಬಂದಿರುವರೋ ಅವರೆಲ್ಲರೂ ನಾನು ಹೇಳುವ ಕಾಲದ ವೃತ್ತಾಂತವನ್ನು ಕೇಳಿ. ॥೧೨೬-೧೨೭॥

ಈ ಗೋಲೋಕಕ್ಕೆ ಬಂದಿರುವ ನೀವೆಲ್ಲರೂ ಕಾಲಚಕ್ರಕ್ಕೆ ಸಿಕ್ಕದೆ ಇರುವ ಕಾರಣದಿಂದ ಬದುಕಿರುವಿರಿ. ಈಗ ಕಲ್ಪಕ್ಷಯಕಾಲವಾದುದರಿಂದ ಸಮಸ್ತ ಬ್ರಹ್ಮಾಂಡಗಳೂ ನೀರಿನಲ್ಲಿ ಮುಳುಗಿರುವುವು. ॥೧೨೮॥

ಬ್ರಹ್ಮನೇ, ಕೇಳು ಇತರ ಪ್ರಪಂಚಗಳಲ್ಲಿರುವ ಬ್ರಹ್ಮಾದಿಗಳೂ ನನ್ನಲ್ಲಿ ಈಗ ವಿಲೀನವಾಗಿರುವರು. ವೈಕುಂಠಲೋಕವನ್ನು ಬಿಟ್ಟು ಮಿಕ್ಕ ಬ್ರಹ್ಮಾಂಡವೆಲ್ಲವೂ ನೀರಿನಲ್ಲಿ ಮುಳುಗಿರುವುದು. ಈಗ ನೀನು ಹೋಗಿ ನಿನ್ನದೊಂದು ಬ್ರಹ್ಮಾಂಡವನ್ನೂ

ಗತ್ವಾ ಸೃಷ್ಟಿಂ ಕುರು ಪುನರ್ಬ್ರಹ್ಮಲೋಕಾದಿಕಂ ಭವಂ ।
ಸ್ವಂ ಬ್ರಹ್ಮಾಂಡಂ ವಿರಚಯ ಪಶ್ಚಾದ್ಗಂಗಾ ಪ್ರಯಾಸ್ಯತಿ ॥೧೩೦॥

ಏವಮನ್ಯೇಷು ವಿಶ್ವೇಷು ಸೃಷ್ಟ್ವಾ ಬ್ರಹ್ಮಾದಿಕಂ ಪುನಃ ।
ಕರೋಮ್ಯಹಂ ಪುನಃ ಸೃಷ್ಟಿಂ ಗಚ್ಛ ಶೀಘ್ರಂ ಸುರೈಃ ಸಹ ॥೧೩೧॥

ಗತೋ ಬಹುತರಃ ಕಾಲಃ ಯುಷ್ಮಾಕಂ ಚ ಚತುರ್ಮುಖಾಃ ।
ಗತಾಃ ಕತಿವಿಧಾಸ್ತ್ರೇ ಚ ಭವಿಷ್ಯಂತಿ ಚ ವೇಧಸಃ ॥೧೩೨॥

ಇತ್ಯುಕ್ತ್ವಾ ರಾಧಿಕಾನಾಥೋ ಜಗಾಮಾಂತಃಪುರೇ ಮುನೇ ।
ದೇವಾ ಗತ್ವಾ ಪುನಃ ಸೃಷ್ಟಿಂ ಚಕ್ರುರೇವ ಪ್ರಯತ್ನತಃ ॥೧೩೩॥

ಗೋಲೋಕೇ ಚ ಸ್ಥಿತಾ ಗಂಗಾ ವೈಕುಂಠೇ ಶಿವಲೋಕಕೇ ।
ಬ್ರಹ್ಮಲೋಕೇ ಸ್ಥಿತಾಽನ್ಯತ್ರ ಯತ್ರ ಯತ್ರ ಪುರಃ ಸ್ಥಿತಾ ॥೧೩೪॥

ತತ್ರೈವ ಸಾ ಗತಾ ಗಂಗಾ ಚಾಽಽಜ್ಞಯಾ ಪರಮಾತ್ಮನಃ ।
ನಿರ್ಗತಾ ವಿಷ್ಣುಪಾದಾಬ್ಜಾತ್ತೇನ ವಿಷ್ಣುಪದೀ ಸ್ಮೃತಾ ॥೧೩೫॥

---

ಬ್ರಹ್ಮಲೋಕಾದಿಗಳನ್ನೂ ಪುನಃ ಸೃಷ್ಟಿಮಾಡು. ಆ ಮೇಲೆ ಗಂಗೆಯು ಅಲ್ಲಿಗೆ ಬರುವಳು. ||೧೨೯-೧೩೦||

ಈ ರೀತಿಯಾಗಿಯೇ ಬೇರೆ ಬೇರೆ ಪ್ರಪಂಚಗಳಲ್ಲಿ ಸೃಷ್ಟಿಕಾಲದಲ್ಲಿ ಬ್ರಹ್ಮಾದಿಗಳನ್ನು ಮತ್ತೆ ಸೃಷ್ಟಿಮಾಡುವೆನು. ನೀನು ಬೇಗನೆ ದೇವತೆಗಳೊಡನೆ ಹೊರಡು. ನೀವು ಬಂದು ಬಹಳ ಕಾಲವಾಯಿತು. ಎಷ್ಟು ಜನ ಬ್ರಹ್ಮರು ಕಳೆದರೋ ಮುಂದೆ ಎಷ್ಟು ಜನ ಬ್ರಹ್ಮರು ಬರುವರೋ ಅದನ್ನು ಹೇಳುವರಾರು? ||೧೩೧ ೩೨||

ನಾರದನೇ, ರಾಧಾಪತಿಯಾದ ಶ್ರೀಕೃಷ್ಣನು ಹೀಗೆ ಹೇಳಿ ರಾಣೀವಾಸಕ್ಕೆ ಹೋದನು. ದೇವತೆಗಳು ಹೋಗಿ ಮತ್ತೆ ಪ್ರಯತ್ನಪೂರ್ವಕವಾಗಿ ಸೃಷ್ಟಿಕಾರ್ಯವನ್ನು ಮಾಡಿದರು. ಗಂಗೆಯು ಗೋಲೋಕದಲ್ಲಿಯೂ ವೈಕುಂಠ ಶಿವಲೋಕಗಳಲ್ಲಿಯೂ ಬ್ರಹ್ಮಲೋಕದಲ್ಲಿಯೂ ಮತ್ತು ಹಿಂದೆ ಎಲ್ಲೆಲ್ಲಿ ಇದ್ದಳೋ ಅಲ್ಲಿಯೂ ಬಂದು ನೆಲೆಸಿದಳು. ||೧೩೩-೧೩೪||

ಪರಮಾತ್ಮನ ಆಜ್ಞೆಯಿಂದ ಎಲ್ಲಿಗೆ ಹೋಗಿ ಇರಬೇಕೆಂದು ಹೇಳಿದ್ದನೋ ಅಲ್ಲಿಗೆ ಗಂಗೆಯು ಹೋದಳು. ವಿಷ್ಣುವಿನ ಪಾದದ ದೆಸೆಯಿಂದ ಹೊರಟಳಾದುದ

**ಇತ್ಯೇವಂ ಕಥಿತಂ ಬ್ರಹನ್ಗಂಗೋಪಾಖ್ಯಾನಮುತ್ತಮಂ ।**
**ಸುಖದಂ ಮೋಕ್ಷದಂ ಸಾರಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೧೩೬॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ**
**ತ್ರಯೋದಶೋಽಧ್ಯಾಯಃ**

---

ರಿಂದ ಅವಳಿಗೆ ವಿಷ್ಣುಪದೀ ಎಂದು ಹೆಸರಾಯಿತು. ಎಲೈ ನಾರದಮುನಿಯೇ, ಶ್ರೇಷ್ಠವಾದ ಸುಖವನ್ನೂ ಮೋಕ್ಷವನ್ನೂ ಕೊಡುವ ಉತ್ತಮವಾದ ಮತ್ತು ರಸವತ್ತಾದ ಗಂಗೋಪಾಖ್ಯಾನವನ್ನು ಹೇಳಿರುವೆನು. ಇನ್ನೇನನ್ನು ಕೇಳಬೇಕೆಂದಿರುವೆ ? ||೧೩೫-೧೩೬||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಚತುರ್ದಶೋಽಧ್ಯಾಯಃ ॥

### ಹದಿನಾಲ್ಕನೆಯ ಅಧ್ಯಾಯವು

॥ ನಾರದ ಉವಾಚ ॥

**ಲಕ್ಷ್ಮೀಃ ಸರಸ್ವತೀ ಗಂಗಾ ತುಲಸೀ ವಿಶ್ವಪಾವನೀ ।**
**ಏತಾ ನಾರಾಯಣಸ್ಯೈವ ಚತಸ್ರಶ್ಚ ಪ್ರಿಯಾ ಇತಿ ॥೧॥**

**ಗಂಗಾ ಜಗಾಮ ವೈಕುಂಠಮಿದಮೇವ ಶ್ರುತಂ ಮಯಾ ।**
**ಕಥಂ ಸಾ ತಸ್ಯ ಪತ್ನೀ ಚ ಬಭೂವೇತಿ ಚ ನಃ ಶ್ರುತಂ ॥೨॥**

॥ ಶ್ರೀನಾರಾಯಣ ಉವಾಚ ॥

**ಗಂಗಾ ಜಗಾಮ ವೈಕುಂಠಂ ತತ್ಪಶ್ಚಾಜ್ಜಗತಾಂ ವಿಧಿಃ ।**
**ಗತ್ವೋವಾಚ ತಯಾ ಸಾರ್ಧಂ ಪ್ರಣಮ್ಯ ಜಗದೀಶ್ವರಂ ॥೩॥**

---

ಲಕ್ಷ್ಮೀ, ಸರಸ್ವತೀ, ಗಂಗಾ, ತುಲಸೀ, ಈ ನಾಲ್ವರು ನಾರಾಯಣನ ಪತ್ನಿಯರೆಂಬುದನ್ನು ಕೇಳಿದೆನು. ಗಂಗೆಯು ವೈಕುಂಠಕ್ಕೆ ಹೋದಳೆಂಬುದನ್ನು ಕೇಳಿದೆನು. ಆವಳು ನಾರಾಯಣನ ಪತ್ನಿಯು ಹೇಗೆ ಆದಳು? ಎಂದು ನಾರದನು ಪ್ರಶ್ನೆ ಮಾಡಿದನು. ||೧-೨||

ಗಂಗೆಯು ವೈಕುಂಠಕ್ಕೆ ಹೋದಳು. ಅವಳ ಹಿಂದೆಯೇ ಬ್ರಹ್ಮನೂ ಹೋಗಿ ಗಂಗೆಯೊಡನೆ ನಾರಾಯಣನಿಗೆ ನಮಸ್ಕರಿಸಿ ಹೇಳಿದನು. ||೩||

॥ ಬ್ರಹ್ಮೋವಾಚ ॥

ರಾಧಾ ಕೃಷ್ಣಾಂಗಸಂಭೂತಾ ಯಾ ದೇವೀ ದೇವರೂಪಿಣೀ ।
ನವಯೌವನಸಂಪನ್ನಾ ಸುಶೀಲಾ ಸುಂದರೀ ವರಾ ॥೪॥

ಶುದ್ಧಸತ್ವಸ್ವರೂಪಾ ಚ ಕ್ರೋಧಾಹಂಕಾರವರ್ಜಿತಾ ।
ತದಂಗಸಂಭವಾ ನಾಽನ್ಯಂ ವೃಣೋತೀಽಸುಂ ಚ ತಂ ವಿನಾ ॥೫॥

ತತ್ರಾತಿಮಾನಿನೀ ರಾಧಾ ಸಾ ಚ ತೇಜಸ್ವಿನೀ ವರಾ ।
ಸಮುದ್ಯುಕ್ತಾ ಪಾತುಮಿಮಾಂ ಭೀತೇಽಯಂ ಬುದ್ಧಿಪೂರ್ವಕಂ ॥೬॥

ವಿವೇಶ ಚರಣಾಂಭೋಜೇ ಕೃಷ್ಣಸ್ಯ ಪರಮಾತ್ಮನಃ ।
ಸರ್ವತ್ರ ಗೋಲಕಂ ಶುಷ್ಕಂ ದೃಷ್ಟ್ವಾಽಪಮಗಮಂ ತದಾ ॥೭॥

ಗೋಲೋಕೇ ಯತ್ರ ಕೃಷ್ಣಶ್ಚ ಸರ್ವವೃತ್ತಾಂತಪ್ರಾಪ್ತಯೇ ।
ಸರ್ವಾಂತರಾತ್ಮಾ ಸರ್ವೇಷಾಂ ಜ್ಞಾತ್ವಾಽಭಿಪ್ರಾಯಮೇವ ಚ ॥೮॥

---

ರಾಧಾಕೃಷ್ಣರ ಅವಯವಗಳಿಂದ ಹುಟ್ಟಿದ ದ್ರವರೂಪಿಣಿಯಾದ ಗಂಗೆಯು ಹೊಸದಾದ ಪ್ರಾಯದಿಂದ ಕೂಡಿ ಸುಂದರಿಯೂ ಒಳ್ಳೆಯ ನಡತೆಯುಳ್ಳವಳೂ ಆಗಿ ಶುದ್ಧಸತ್ವಸ್ವರೂಪಳೂ ಕೋಪ ಮತ್ತು ಅಹಂಕಾರವಿಲ್ಲದವಳೂ ಆಗಿರುವಳು. ಆ ಕೃಷ್ಣನ ಅಂಗದಿಂದ ಹುಟ್ಟಿದ ಗಂಗೆಯು ಕೃಷ್ಣನಲ್ಲದೆ ಮತ್ತೊಬ್ಬನನ್ನು ವರಿಸುವುದಿಲ್ಲ. ॥೪-೫॥

ಹೀಗಿರಲಾಗಿ ಶ್ರೇಷ್ಠಳೂ ತೇಜಸ್ಸುಳ್ಳವಳೂ ಮಹಾಕೋಪವುಳ್ಳವಳೂ ಆದ ರಾಧೆಯು ಈ ಗಂಗೆಯನ್ನು ಕುಡಿಯುವುದಕ್ಕಾಗಿ ಪ್ರಯತ್ನಿಸಿದಳು. ಗಂಗೆಯು ಹೆದರಿ ಆ ಪರಮಾತ್ಮನಾದ ಕೃಷ್ಣನ ಪಾದಕಮಲದಲ್ಲಿ ಪ್ರವೇಶಮಾಡಿದಳು. ನೀರಿಲ್ಲದ ಸಮಸ್ತ ಬ್ರಹ್ಮಾಂಡಗಳೂ ಇಂದ್ರಿಯಸ್ಥಾನಗಳೂ ಒಣಗಿ ಹೋಗುತ್ತಿರಲಾಗಿ ಅದನ್ನು ನೋಡಿ ನಾನು ಈ ಸ್ಥಿತಿಯ ಕಾರಣವನ್ನು ತಿಳಿಯಬೇಕೆಂದು ಗೋಲೋಕದಲ್ಲಿ ಕೃಷ್ಣನಿದ್ದೆಡೆಗೆ ಹೋದೆನು. ॥೬-೭॥

ಎಲ್ಲರಿಗೂ ಅಂತರಾತ್ಮಸ್ವರೂಪನಾದ ಶ್ರೀಕೃಷ್ಣನು ನಮ್ಮ ಅಭಿಪ್ರಾಯವನ್ನು ತಿಳಿದು ತನ್ನ ಪಾದದ ಹೆಬ್ಬೆರಳಿನ ಉಗುರಿನಿಂದ ಗಂಗೆಯನ್ನು ಹೊರಪಡಿಸಿ ಅವಳಿಗೆ

ಬಹಿಶ್ಚಕಾರ ಗಂಗಾಂ ಚ ಪಾದಾಂಗುಷ್ಠನಖಾಗ್ರತಃ ।
ದತ್ವಾಽಸ್ಯೈ ರಾಧಿಕಾಮಂತ್ರಂ ಪೂರಯಿತ್ವಾ ಚ ಗೋಲಕಾನ್ ॥೯॥

ಪ್ರಣಮ್ಯ ತಾಂ ಚ ರಾಧೇಶಂ ಗೃಹೀತ್ವಾಽತ್ರಾಗಮಂ ಪ್ರಭೋ ।
ಗಾಂಧರ್ವೇಣ ವಿವಾಹೇನ ಗೃಹಾಣೇಮಾಂ ಸುರೇಶ್ವರೀಂ ॥೧೦॥

ಸುರೇಶ್ವರೇಷು ರಸಿಕೇ ರಸಿಕೇಯಂ ಸಮಾಗತಾ ।
ತ್ವಂ ರತ್ನಂ ಪುಂಸು ದೇವೇಶ ಸ್ತ್ರೀರತ್ನಂ ಸ್ತ್ರೀಷ್ವಿಯಂ ಸತೀ ॥೧೧॥

ವಿದಗ್ಧಾಯಾ ವಿದಗ್ಧೇನ ಸಂಗಮೋ ಗುಣವಾನ್ಭವೇತ್ ।
ಉಪಸ್ಥಿತಾಂ ಸ್ವಯಂ ಕನ್ಯಾಂ ನ ಗೃಹ್ಣಾತೀಹ ಯಃ ಪುಮಾನ್ ॥೧೨॥

ತಂ ವಿಹಾಯ ಮಹಾಲಕ್ಷ್ಮೀ ರುಷ್ಟಾ ಯಾತಿ ನ ಸಂಶಯಃ ।
ಯೋ ಭವೇತ್ಪಂಡಿತಃ ಸೋಽಪಿ ಪ್ರಕೃತಿಂ ನಾವಮನ್ಯತೇ ॥೧೩॥

ಸರ್ವೇ ಪ್ರಾಕೃತಿಕಾಃ ಪುಂಸಃ ಕಾಮಿನ್ಯಃ ಪ್ರಕೃತೇಃ ಕಲಾಃ ।
ತ್ವಮೇವ ಭಗವಾನ್ನಾಥೋ ನಿರ್ಗುಣಃ ಪ್ರಕೃತೇಃ ಪರಃ ॥೧೪॥

---

ರಾಧಿಕಾಮಂತ್ರವನ್ನುಪದೇಶಿಸಿ ಸಮಸ್ತ ಬ್ರಹ್ಮಾಂಡಗಳಿಗೂ ನೀರನ್ನು ಕೊಟ್ಟನು. ನಾನು ರಾಧಾಪತಿಯಾದ ಕೃಷ್ಣನಿಗೆ ನಮಸ್ಕರಿಸಿ ಗಂಗೆಯನ್ನು ಕರೆದುಕೊಂಡು ಇಲ್ಲಿಗೆ ಬಂದೆನು. ಓ ಸ್ವಾಮಿಯೇ, ಈ ಗಂಗಾದೇವಿಯನ್ನು ಗಾಂಧರ್ವವಿವಾಹವಿಧಿಯಿಂದ ಪರಿಗ್ರಹಿಸು. ॥೮-೯-೧೦॥

ದೇವಾಧಿಪತಿಗಳಲ್ಲೆಲ್ಲಾ ರಸಿಕನಾದ ನಿನ್ನ ಸಮೀಪಕ್ಕೆ ರಸಿಕಳಾದ ಈ ಗಂಗೆಯು ಬಂದಿರುವಳು. ನೀನು ಪುರುಷಶ್ರೇಷ್ಠನು. ಈಕೆಯು ಸ್ತ್ರೀಯರಲ್ಲಿ ರತ್ನಪ್ರಾಯಳು. ಪ್ರೌಢನಿಗೂ ಪ್ರೌಢೆಗೂ ಸಂಬಂಧವುಂಟಾದರೆ ಅದು ಅನೇಕ ಗುಣಗಳುಳ್ಳದ್ದಾಗುವುದು. ತಾನಾಗಿಯೇ ಬಂದ ಕನ್ಯೆಯನ್ನು ಯಾವನು ಪರಿಗ್ರಹಿಸುವುದಿಲ್ಲವೋ ಅವನನ್ನು ಮಹಾಲಕ್ಷ್ಮಿಯು ಕೋಪದಿಂದ ಬಿಟ್ಟುಹೋಗುವಳು. ಈ ವಿಷಯದಲ್ಲಿ ಸಂದೇಹವಿಲ್ಲ. ॥೧೧-೧೨॥

ಪಂಡಿತನಾದವನೂ ಕೂಡ ಪ್ರಕೃತಿಯನ್ನು ಅವಮಾನಪಡಿಸುವುದಿಲ್ಲ. ಸಮಸ್ತ ಪುರುಷರೂ ಮೂಲಪ್ರಕೃತಿಯಿಂದಲೇ ಹುಟ್ಟಿದವರು. ಸ್ತ್ರೀಯರೂ ಮೂಲ ಪ್ರಕೃತಿಯಿಂದಲೇ ಹುಟ್ಟಿದವರು. ಆದುದರಿಂದ ಸ್ತ್ರೀಯರನ್ನು ಅಪಮಾನಪಡಿಸ

**ಅರ್ಧಾಂಗಂ ದ್ವಿಭುಜಃ ಕೃಷ್ಣೋ ಯೋಽರ್ಧಾಂಗೇನ ಚತುರ್ಭುಜಃ ।**
**ಕೃಷ್ಣವಾಮಾಂಗಸಂಭೂತಾ ಬಭೂವ ರಾಧಿಕಾ ಪುರಾ ॥೧೫॥**

**ದಕ್ಷಿಣಾಂಶಃ ಸ್ವಯಂ ಸಾ ಚ ವಾಮಾಂಶಃ ಕಮಲಾ ತಥಾ ।**
**ತೇನೇಯಂ ತ್ವಾಂ ವೃಣೋತ್ಯೇವ ಯತಸ್ತ್ವದ್ದೇಹಸಂಭವಾ ॥೧೬॥**

**ಏಕಾಂಗಂ ಚೈವ ಸ್ತ್ರೀಪುಂಸೋರ್ಯಥಾ ಪ್ರಕೃತಿಪೂರುಷೌ ।**
**ಇತ್ಯೇವಮುಕ್ತ್ವಾ ಧಾತಾ ತಾಂ ತಂ ಸಮರ್ಪ್ಯ ಜಗಾಮ ಸಃ ॥೧೭॥**

**ಗಾಂಧರ್ವೇಣ ವಿವಾಹೇನ ತಾಂ ಜಗ್ರಾಹ ಹರಿಃ ಸ್ವಯಂ ।**
**ನಾರಾಯಣಃ ಕರಂ ಧೃತ್ವಾ ಪುಷ್ಪಚಂದನ ಚರ್ಚಿತಂ ॥೧೮॥**

**ರೇಮೇ ರಮಾಪತಿಸ್ತತ್ರ ಗಂಗಯಾ ಸಹಿತೋ ಮುದಾ ।**
**ಗಂಗಾ ಪೃಥ್ವೀಂ ಗತಾ ಯಾ ಸಾ ಸ್ವಸ್ಥಾನಂ ಪುನರಾಗತಾ ॥೧೯॥**

---

ಬಾರದು. ಓ ನಾರಾಯಣನೇ! ನೀನೊಬ್ಬನೇ ಪ್ರಕೃತಿಗಿಂತ ಶ್ರೇಷ್ಠನಾಗಿ ಗುಣ ಸಂಬಂಧವಿಲ್ಲದವನಾಗಿರುವೆ. ॥೧೩-೧೪॥

ಕೃಷ್ಣನ ಅರ್ಧಶರೀರವು ದ್ವಿಭುಜಕೃಷ್ಣಸ್ವರೂಪವಾದುದು. ಮಿಕ್ಕ ಅರ್ಧ ಶರೀರವು ಚತುರ್ಭುಜನಾರಾಯಣನ ಸ್ವರೂಪವಾದುದು. ಕೃಷ್ಣನ ಎಡಭಾಗದಲ್ಲಿ ಮೊದಲು ರಾಧೆಯು ಹುಟ್ಟಿದಳು. ಬಳಿಕ ರಾಧೆಯು ಬಲಭಾಗದಲ್ಲಿಯೂ ಲಕ್ಷ್ಮಿಯು ಎಡಭಾಗದಲ್ಲಿಯೂ ಹುಟ್ಟಿದರು. ಕೃಷ್ಣನಾರಾಯಣರಿಗೆ ಅಭೇದವಾದುದರಿಂದ ಇವಳು ನಿನ್ನ ದೇಹದಲ್ಲಿಯೇ ಹುಟ್ಟಿದವಳಾದುದರಿಂದ ನಿನ್ನನ್ನೇ ವರಿಸುವಳು. ॥೧೫-೧೬॥

ಪ್ರಕೃತಿಪುರುಷರು ಹೇಗೆ ಒಂದೇ ಶರೀರವೋ ಹಾಗೆಯೇ ಸ್ತ್ರೀಪುರುಷರು ಒಂದೇ ಶರೀರವು. ಹೀಗೆಂದು ಹೇಳಿ ಬ್ರಹ್ಮನು ಗಂಗೆಯನ್ನು ನಾರಾಯಣನಿಗೆ ಒಪ್ಪಿಸಿ ಹೊರಟು ಹೋದನು. ನಾರಾಯಣನು ಗಾಂಧರ್ವವಿಧಿಯಿಂದ ಗಂಗೆಯನ್ನು ಪರಿಗ್ರಹಿಸಿ ಹೂಗಂಧಗಳಿಂದ ಕೂಡಿದ ಆಕೆಯ ಕೈಯನ್ನು ಹಿಡಿದು ಸಂತೋಷದಿಂದ ಅವಳೊಡನೆ ಕ್ರೀಡಿಸಿದನು. ॥೧೭-೧೮॥

ಭೂಮಿಗೆ ಹೋಗಿದ್ದ ಗಂಗೆಯು ಹೀಗೆ ಮತ್ತೆ ತನ್ನ ಸ್ಥಾನಕ್ಕೆ ಬಂದು ಸೇರಿದಳು.ವಿಷ್ಣುವಿನ ಪಾದದಿಂದ ಹೊರಟವಳಾದುದರಿಂದ ವಿಷ್ಣುಪದೀ ಎಂದು ಗಂಗೆಗೆ

ನಿರ್ಗತಾ ವಿಷ್ಣುಪಾದಾಬ್ಜಾತ್ತೇನ ವಿಷ್ಣುಪದೀತಿ ಚ ।
ಮೂರ್ಚ್ಛಾಂ ಸಂಪ್ರಾಪ ಸಾ ದೇವೀ ನವಸಂಗಮಲೀಲಯಾ ॥೨೦॥

ರಸಿಕಾ ಸುಖಸಂಭೋಗಾದ್ರಸಿಕೇಶ್ವರ ಸಂಯುತಾ ।
ತಾಂ ದೃಷ್ಟ್ವಾ ದುಃಖಿತಾ ವಾಣೀ ಪದ್ಮಯಾ ವರ್ಜಿತಾಽಪಿ ಚ ॥೨೧॥

ನಿತ್ಯಮೀರ್ಷ್ಯತಿ ತಾಂ ವಾಣೀ ನ ಚ ಗಂಗಾ ಸರಸ್ವತೀಂ ।
ಗಂಗಾ ಶಶಾಪ ಕೋಪೇನ ಭಾರತೀ ಚ ಹರಿಪ್ರಿಯಾ ॥೨೨॥

ಗಂಗಯಾ ಸಹ ತಸ್ಯೈವ ತಿಸ್ರೋ ಭಾರ್ಯಾ ರಮಾಪತೇಃ ।
ಸಾರ್ಧಂ ತುಲಸ್ಯಾ ಪಶ್ಚಾಚ್ಚ ಚತಸ್ರಶ್ಚಾ ಭವನ್ಮುನೇ ॥೨೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಚತುರ್ದಶೋಽಧ್ಯಾಯಃ

---

ಹೆಸರಾಯಿತು. ರಸಿಕಳಾದ ಗಂಗೆಯು ರಸಿಕನಾದ ನಾರಾಯಣನ ನವೀನವಾದ ಸಂಭೋಗಸುಖದಿಂದ ಪರವಶಳಾಗಿ ಮೂರ್ಛೆಯನ್ನು ಹೊಂದಿದಳು. ||೧೯-೨೦||

ಆ ಗಂಗೆಯನ್ನು ನೋಡಿ ಸರಸ್ವತಿಯು ದುಃಖವನ್ನು ಹೊಂದಿ, ಲಕ್ಷ್ಮಿಯು ದ್ವೇಷಿಸಬೇಡವೆಂದು ಪ್ರತಿದಿನವೂ ಹೇಳುತ್ತಿದ್ದರೂ, ಗಂಗೆಯನ್ನು ದ್ವೇಷಿಸುತ್ತಿದ್ದಳು. ಗಂಗೆಯು ಸರಸ್ವತಿಯನ್ನು ದ್ವೇಷಿಸುತ್ತಿರಲಿಲ್ಲ. ಕೊನೆಗೆ ಗಂಗೆಯು ಕೋಪದಿಂದ ಸರಸ್ವತಿಯನ್ನು ಭರತಖಂಡಕ್ಕೆ ಹೋಗುವಂತೆ ಶಪಿಸಿದಳು. ||೨೧-೨೨||

ನಾರಾಯಣನಿಗೆ ಗಂಗಾ ಸರಸ್ವತೀ ಲಕ್ಷ್ಮೀ ಈ ಮೂವರು ಪತ್ನಿಯರು. ಆಮೇಲೆ ತುಲಸಿಯೊಡನೆ ನಾಲ್ವರು ಪತ್ನಿಯರು ಆದರು. ||೨೩||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಪಂಚದಶೋಽಧ್ಯಾಯಃ ||

### ಹದಿನೈದನೆಯ ಅಧ್ಯಾಯವು

|| ನಾರದ ಉವಾಚ ||

**ನಾರಾಯಣಪ್ರಿಯಾ ಸಾಧ್ವೀ ಕಥಂ ಸಾ ಚ ಬಭೂವ ಹ ।**
**ತುಲಸೀ ಕುತ್ರ ಸಂಭೂತಾ ಕಾ ವಾ ಸಾ ಪೂರ್ವಜನ್ಮನಿ ||೧||**

**ಕಸ್ಯ ವಾ ಸಾ ಕುಲೇ ಜಾತಾ ಕಸ್ಯ ಕನ್ಯಾ ಕುಲೇ ಸತೀ ।**
**ಕೇನ ವಾ ತಪಸಾ ಸಾ ಚ ಸಂಪ್ರಾಪ್ತಾ ಪ್ರಕೃತೇಃ ಪರಂ ||೨||**

**ಸರ್ವಾರಾಧ್ಯಂ ಚ ಸರ್ವೇಶಂ ಸರ್ವಜ್ಞಂ ಸರ್ವಕಾರಣಂ ।**
**ಸರ್ವಾಧಾರಂ ಸರ್ವರೂಪಂ ಸರ್ವೇಷಾಂ ಪರಿಪಾಲಕಂ ||೩||**

**ನಿರ್ವಿಕಾರಂ ನಿರೀಹಂ ಚ ಸರ್ವವಿಶ್ವಸ್ವರೂಪಕಂ ।**
**ನಾರಾಯಣಂ ಪರಂ ಬ್ರಹ್ಮ ಪರಮೇಶ್ವರಮೀಶ್ವರಂ ||೪||**

---

ನಾರದನು ಹೇಳಿದನು—ನಾರಯಣನಿಗೆ ಪ್ರೀತಿಪಾತ್ರಳಾದ ಪತಿವ್ರತೆಯಾದ ಲಕ್ಷ್ಮೀದೇವಿಯು ಎಲ್ಲಿ ಯಾರ ವಂಶದಲ್ಲಿ ಯಾರ ಮಗಳಾಗಿ ತುಲಸೀ ಎಂಬ ಹೆಸರಿನಿಂದ ಹುಟ್ಟಿದಳು ? ಅವಳ ಹಿಂದಿನ ಜನ್ಮದ ವೃತ್ತಾಂತವೇನು ? ಯಾವ ತಪಸ್ಸಿನಿಂದ ಸರ್ವರಿಗೂ ಪೂಜ್ಯನೂ ಸಮಸ್ತ ಪ್ರಪಂಚಕ್ಕೂ ಒಡೆಯನೂ ಎಲ್ಲವನ್ನೂ ತಿಳಿದವನೂ ಎಲ್ಲ ವಸ್ತುಗಳಿಗೂ ಕಾರಣರೂಪನೂ ಆಶ್ರಯರೂಪನೂ ಎಲ್ಲವನ್ನೂ ಕಾಪಾಡತಕ್ಕವನೂ ವಿಕಾರವೂ ಆಸೆಯೂ ಇಲ್ಲದೆ ಸಮಸ್ತ ಪ್ರಪಂಚಸ್ವರೂಪನಾದ ಪ್ರಕೃತಿಗಿಂತ ಶ್ರೇಷ್ಠನಾಗಿರುವ ಪರಬ್ರಹ್ಮಸ್ವರೂಪನಾದ ನಾರಾಯಣನ್ನು ಪತಿಯನ್ನಾಗಿ ಹೊಂದಿದಳು ? ||೧-೨-೩-೪||

ಕಥಮೇತಾದೃಶೀ ದೇವೀ ವೃಕ್ಷತ್ವಂ ಸಮವಾಪ ಹ ।
ಕಥಂ ಸಾಽಪ್ಯಸುರಗ್ರಸ್ತಾ ಸಂಬಭೂವ ತಪಸ್ವಿನೀ ॥೫॥

ಸುಸ್ನಿಗ್ಧಂ ಮೇ ಮನೋ ಲೋಲಂ ಪ್ರೇರಯನ್ಮಾಂ ಮುಹುರ್ಮುಹುಃ ।
ಛೇತ್ತುಮರ್ಹಸಿ ಸಂದೇಹಂ ಸರ್ವಸಂದೇಹ ಭಂಜನ ॥೬॥

॥ ನಾರಾಯಣ ಉವಾಚ ॥

ಮನುಶ್ಚ ದಕ್ಷಸಾವರ್ಣಿಃ ಪುಣ್ಯವಾನ್ವೈಷ್ಣವಃ ಶುಚಿಃ ।
ಯಶಸ್ವೀ ಕೀರ್ತಿಮಾಂಶ್ಚೈವ ವಿಷ್ಣೋರಂಶಸಮುದ್ಭವಃ ॥೭॥

ತತ್ಪುತ್ರೋ ಬ್ರಹ್ಮಸಾವರ್ಣಿರ್ಧರ್ಮಿಷ್ಠೋ ವೈಷ್ಣವಃ ಶುಚಿಃ ।
ತತ್ಪುತ್ರೋ ಧರ್ಮಸಾವರ್ಣಿಃ ವೈಷ್ಣವಶ್ಚ ಜಿತೇಂದ್ರಿಯಃ ॥೮॥

ತತ್ಪುತ್ರೋ ರುದ್ರಸಾವರ್ಣಿರ್ಭಕ್ತಿಮಾನ್ಸಿಜಿತೇಂದ್ರಿಯಃ ।
ತತ್ಪುತ್ರೋ ದೇವಸಾವರ್ಣಿರ್ವಿಷ್ಣುವ್ರತಪರಾಯಣಃ ॥೯॥

ತತ್ಪುತ್ರ ಇಂದ್ರಸಾವರ್ಣಿರ್ಮಹಾವಿಷ್ಣುಪರಾಯಣಃ ।
ವೃಷಧ್ವಜಶ್ಚ ತತ್ಪುತ್ರೋ ವೃಷಧ್ವಜಪರಾಯಣಃ ॥೧೦॥

---

ಇಂತಹ ಲಕ್ಷ್ಮೀದೇವಿಯು ಹೇಗೆ ವೃಕ್ಷಸ್ವರೂಪಳಾದಳು? ರಾಕ್ಷಸನಿಗೆ ಹೇಗೆ ಸಿಕ್ಕಿದಳು? ಮೃದುವಾದ ನನ್ನ ಮನಸ್ಸು ಸಂದೇಹದಿಂದ ಕೂಡಿರುವುದು. ಸಮಸ್ತ ಸಂಶಯಗಳನ್ನೂ ನಾಶಮಾಡುವ ನೀನು ನನ್ನ ಸಂದೇಹವನ್ನು ಪರಿಹರಿಸು. ಎಂದು ನಾರದನು ನಾರಾಯಣಮುನಿಯನ್ನು ಕೇಳಿದನು. ॥೫-೬॥

ನಾರಾಯಣನು ಹೇಳಿದನು—ದಕ್ಷಸಾವರ್ಣಿ ಎಂಬ ಮನುವು ಪುಣ್ಯವಂತನಾಗಿ ವಿಷ್ಣುಭಕ್ತನಾಗಿದ್ದನು. ಅವನು ವಿಷ್ಣುವಿನ ಅಂಶದಿಂದ ಹುಟ್ಟಿ ಕೀರ್ತಿವಂತನಾಗಿದ್ದನು. ಅವನ ವಂಶದಲ್ಲಿ ಕ್ರಮವಾಗಿ ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ ಎಂಬುವರು ಹುಟ್ಟಿದರು. ಇವರೆಲ್ಲರೂ ಧರ್ಮಿಷ್ಠರೂ, ಜಿತೇಂದ್ರಿಯರೂ, ವಿಷ್ಣುಭಕ್ತರೂ ಆಗಿದ್ದರು. ಇಂದ್ರಸಾವರ್ಣಿಯ ಮಗನೇ ವೃಷಧ್ವಜನು. ಇವನು ಈಶ್ವರನ ಭಕ್ತನು. ॥೭-೮-೯-೧೦॥

ಯಸ್ಯಾಶ್ರಮೇ ಸ್ವಯಂ ಶಂಭುರಾಸೀದ್ದೇವಯುಗತ್ರಯಂ ।
ಪುತ್ರಾದಪಿ ಪರಸ್ನೇಹೋ ನೃಪೇ ತಸ್ಮಿನ್ ಶಿವಸ್ಯ ಚ ॥೧೧॥

ನ ಚ ನಾರಾಯಣಂ ಮೇನೇ ನ ಲಕ್ಷ್ಮೀಂ ನ ಸರಸ್ವತೀಂ ।
ಪೂಜಾಂ ಚ ಸರ್ವದೇವಾನಾಂ ದೂರೀಭೂತಾಂ ಚಕಾರ ಸಃ ॥೧೨॥

ಭಾದ್ರೇ ಮಾಸಿ ಮಹಾಲಕ್ಷ್ಮೀ ಪೂಜಾಂ ಮತ್ತೋ ಬಭಂಜ ಹ ।
ತಥಾ ಮಾಘೀಯ ಪಂಚಮ್ಯಾಂ ವಿಸ್ತೃತಾಂ ಸರ್ವದೈವತೈಃ ॥೧೩॥

ಸಾಪಃ ಸರಸ್ವತೀಪೂಜಾಂ ದೂರೀಭೂತಾಂ ಚಕಾರ ಸಃ ।
ಯಜ್ಞಂ ಚ ವಿಷ್ಣುಪೂಜಾಂ ಚ ನಿಂದಂತಂ ತಂ ದಿವಾಕರಃ ॥೧೪॥

ಚುಕೋಪ ದೇವೋ ಭೂಪೇಂದ್ರಂ ಶಶಾಪ ಶಿವಕಾರಣಾತ್ ।
ಭ್ರಷ್ಟಶ್ರೀಸ್ತ್ವಂ ಚ ಭವೇತಿ ತಂ ಶಶಾಪ ದಿವಾಕರಃ ॥೧೫॥

ಶೂಲಂ ಗೃಹೀತ್ವಾ ತಂ ಸೂರ್ಯಮಧಾವಚ್ಛಂಕರಃ ಸ್ವಯಂ ।
ಪಿತ್ರಾ ಸಾರ್ಧಂ ದಿನೇಶಶ್ಚ ಬ್ರಹ್ಮಾಣಂ ಶರಣಂ ಯಯೌ ॥೧೬॥

---

ಆ ವೃಷಭಧ್ವಜನ ಆಶ್ರಮದಲ್ಲಿ ಶಿವನು ದೇವಮಾನದ ಮೂರು ಯುಗಗಳ ವರೆಗೆ ವಾಸವಾಗಿದ್ದನು. ಶಿವನಿಗೆ ಆ ರಾಜನಲ್ಲಿ ಮಗನಿಗಿಂತಲೂ ಹೆಚ್ಚಾದ ಪ್ರೀತಿ ಇದ್ದಿತು. ಆ ರಾಜನು ನಾರಾಯಣನನ್ನೂ ಲಕ್ಷ್ಮಿಯನ್ನೂ ಸರಸ್ವತಿಯನ್ನೂ ಲೆಕ್ಕಿಸದೆ ಶಿವನನ್ನು ಬಿಟ್ಟು ಮಿಕ್ಕ ದೇವತೆಗಳ ಪೂಜೆಯನ್ನು ದೂರಮಾಡಿದನು. ॥೧೧-೧೨॥

ಭಾದ್ರಪದಮಾಸದಲ್ಲಿ ಮಹಾಲಕ್ಷ್ಮಿಯ ಪೂಜೆಯನ್ನೂ ಮಾಘ ಶುದ್ಧ ಪಂಚಮಿಯ ದಿನ ಸಮಸ್ತ ದೇವತೆಗಳೂ ಪೂಜೆಮಾಡುವ ಸರಸ್ವತಿಯ ಪೂಜೆಯನ್ನೂ ಆ ಪಾಪಿಯು ಮಾಡಲಿಲ್ಲ. ಯಜ್ಞವನ್ನೂ ವಿಷ್ಣುಪೂಜೆಯನ್ನೂ ನಿಂದಿಸುತ್ತಿದ್ದ ಅವನ ಮೇಲೆ ಸೂರ್ಯನು ಕೋಪಿಸಿಕೊಂಡು ನಿನ್ನ ಸಂಪತ್ತು ನಾಶವಾಗಲೆಂದು ಶಪಿಸಿದನು. ॥೧೩-೧೪-೧೫॥

ಶಿವನು ಶೂಲಾಯುಧವನ್ನು ಧರಿಸಿ ಸೂರ್ಯನ ಹಿಂದೆ ಓಡಿದನು. ಸೂರ್ಯನು ತನ್ನ ತಂದೆಯಾದ ಕಶ್ಯಪನೊಡನೆ ಬ್ರಹ್ಮನ ಸಮೀಪಕ್ಕೆ ಹೋಗಿ ಅವನ ಮರೆಹೊಕ್ಕನು. ॥೧೬॥

ಶಿವಸ್ತ್ರಿಶೂಲಹಸ್ತಶ್ಚ ಬ್ರಹ್ಮಲೋಕಂ ಯಯೌ ಕ್ರುಧಾ ।
ಬ್ರಹ್ಮಾ ಸೂರ್ಯಂ ಪುರಸ್ಕೃತ್ಯ ವೈಕುಂಠಂ ಚ ಯಯೌ ಭಿಯಾ ॥೧೭॥

ಬ್ರಹ್ಮಕಶ್ಯಪಮಾರ್ತಾಂಡಾಃ ಸಂತ್ರಸ್ತಾಃ ಶುಷ್ಕತಾಲುಕಾಃ ।
ನಾರಾಯಣಂ ಚ ಸರ್ವೇಶಂ ತೇ ಯಯುಃ ಶರಣಂ ಭಿಯಾ ॥೧೮॥

ಮೂರ್ಧ್ನಾ ಪ್ರಣೇಮುಸ್ತೇ ಗತ್ವಾ ತುಷ್ಟುವುಶ್ಚ ಪುನಃ ಪುನಃ ।
ಸರ್ವಂ ನಿವೇದನಂ ಚಕ್ರುರ್ಭಯಸ್ಯ ಕಾರಣಂ ಹರೌ ॥೧೯॥

ನಾರಾಯಣಶ್ಚ ಕೃಪಯಾ ತೇಭ್ಯಶ್ಚ ಹ್ಯಭಯಂ ದದೌ ।
ಸ್ಥಿರಾ ಭವತ ಹೇ ಭೀತಾ ಭಯಂ ಕಿಂ ಚ ಮಯಿ ಸ್ಥಿತೇ ॥೨೦॥

ಸ್ಮರಂತಿ ಯೇ ಯತ್ರ ತತ್ರ ಮಾಂ ವಿಪತ್ತೌ ಭಯಾನ್ವಿತಾಃ ।
ತಾಂಸ್ತತ್ರ ಗತ್ವಾ ರಕ್ಷಾಮಿ ಚಕ್ರಹಸ್ತಸ್ತ್ವರಾನ್ವಿತಃ ॥೨೧॥

ಪಾತಾಽಹಂ ಜಗತಾಂ ದೇವಾಃ ಕರ್ತಾ ಚ ಸತತಂ ಸದಾ ।
ಸ್ರಷ್ಟಾ ಚ ಬ್ರಹ್ಮರೂಪೇಣ ಸಂಹರ್ತಾ ಶಿವರೂಪತಃ ॥೨೨॥

ಶಿವೋಽಹಂ ತ್ವಮಹಂ ಚಾಪಿ ಸೂರ್ಯೋಽಹಂ ತ್ರಿಗುಣಾತ್ಮಕಃ ।
ವಿಧಾಯ ನಾನಾರೂಪಂ ಚ ಕರೋಮಿ ಸೃಷ್ಟಿಪಾಲನಂ ॥೨೩॥

---

ಶಿವನು ಕೋಪದಿಂದ ತ್ರಿಶೂಲವನ್ನು ಹಿಡಿದು ಬ್ರಹ್ಮಲೋಕಕ್ಕೆ ಹೋದನು. ಬ್ರಹ್ಮನು ಭಯದಿಂದ ಗಂಟಲೊಣಗಿದವನಾಗಿ ಸೂರ್ಯನನ್ನೂ ಮುಂದುಮಾಡಿ ಕೊಂಡು ಹೋಗಿ ಸರ್ವೇಶ್ವರನಾದ ನಾರಾಯಣನನ್ನು ಮರೆಹೊಕ್ಕನು. ||೧೭-೧೮||

ಅವರೆಲ್ಲರೂ ನಾರಾಯಣನಿಗೆ ನಮಸ್ಕರಿಸಿ ಮತ್ತೆ ಮತ್ತೆ ಸ್ತೋತ್ರಮಾಡಿ ಭಯಕ್ಕೆ ಕಾರಣವನ್ನು ವಿಜ್ಞಾಪನೆಮಾಡಿಕೊಂಡರು. ||೧೯||

ನಾರಾಯಣನು ದಯೆಯಿಂದ ಅವರಿಗೆ ಅಭಯವನ್ನು ಕೊಟ್ಟು ನಾನಿರುವಲ್ಲಿ ನಿಮಗೆ ಭಯವೇನು ? ಶಾಂತಚಿತ್ತರಾಗಿರಿ. ವಿಪತ್ತಿನಲ್ಲಿ ಭಯದಿಂದ ನನ್ನನ್ನು ಯಾರು ಸ್ಮರಿಸುತ್ತಾರೆಯೋ ಅವರಿದ್ದಲ್ಲಿಗೆ ಚಕ್ರಹಸ್ತನಾಗಿ ಹೋಗಿ ಅವರನ್ನು ಕಾಪಾಡುವೆನು. ಎಂದನು. ||೨೦-೨೧||

ಎಲೈ ದೇವತೆಗಳೇ, ನಾನು ಸಮಸ್ತ ಜಗತ್ತನ್ನೂ ಪಾಲಿಸುವೆನು. ಬ್ರಹ್ಮ ರೂಪದಿಂದ ಸೃಷ್ಟಿಸುವೆನು. ಶಿವರೂಪದಿಂದ ಸಂಹರಿಸುವೆನು. ನಾನೇ ಶಿವನು

ಯೂಯಂ ಗಚ್ಛತ ಭದ್ರಂ ವೋ ಭವಿಷ್ಯತಿ ಭಯಂ ಕುತಃ ।
ಅದ್ಯ ಪ್ರಭೃತಿ ಮದ್ವರೇಣ ಭಯಂ ವೋ ನಾಸ್ತಿ ಶಂಕರಾತ್ ॥೨೪॥

ಸರ್ವೇಶೋ ವೈ ಸ ಭಗವಾನ್ ಶಂಕರಶ್ಚ ಸತಾಂ ಪತಿಃ ।
ಭಕ್ತಾಧೀನಶ್ಚ ಭಕ್ತಾನಾಂ ಭಕ್ತಾತ್ಮಾ ಭಕ್ತವತ್ಸಲಃ ॥೨೫॥

ಸುದರ್ಶನಃ ಶಿವಶ್ಚೈವ ಮಮ ಪ್ರಾಣಾಧಿಕಃ ಪ್ರಿಯಃ ।
ಬ್ರಹ್ಮಾಂಡೇಷು ನ ತೇಜಸ್ವೀ ಹೇ ಬ್ರಹ್ಮನ್ನನಯೋಃ ಪರಃ ॥೨೬॥

ಶಕ್ತಃ ಸ್ರಷ್ಟುಂ ಮಹಾದೇವಃ ಸೂರ್ಯಕೋಟಿಂ ಚ ಲೀಲಯಾ ।
ಕೋಟಿಂ ಚ ಬ್ರಹ್ಮಣಾಮೇವಂ ನಾಸಾಧ್ಯಂ ಶೂಲಿನಃ ಪ್ರಭೋಃ ॥೨೭॥

ಬಾಹ್ಯಜ್ಞಾನಂ ನೈವ ಕಿಂಚಿದ್ಧ್ಯಾಯತೇ ಮಾ ದಿವಾನಿಶಂ ।
ಮನ್ಮಂತ್ರಾನ್ಮದ್ಗುಣಾನ್ಭಕ್ತ್ಯಾ ಪಂಚವಕ್ತ್ರೇಣ ಗಾಯತಿ ॥೨೮॥

ಅಹಮೇವ ಚಿಂತಯಾಮಿ ತತ್ಕಲ್ಯಾಣಂ ದಿವಾನಿಶಂ ।
ಯಥಾ ಚ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ॥೨೯॥

---

ಮತ್ತು ಬ್ರಹ್ಮನು. ನಾನೇ ಸೂರ್ಯನು. ಸತ್ವರಜಸ್ತಮೋಗುಣರೂಪನಾಗಿ ಬಗೆ ಬಗೆಯ ವೇಷದಿಂದ ಸೃಷ್ಟಿಯನ್ನು ಪಾಲನೆಯನ್ನೂ ಮಾಡುವೆನು. ॥೨೨-೨೩॥

ನೀವು ಹೋಗಿರಿ. ನಿಮಗೆ ಮಂಗಳ ಉಂಟಾಗುವುದು. ಈ ದಿನ ಮೊದಲು ನನ್ನ ವರದಿಂದ ಶಿವನ ಭಯವು ನಿಮಗಿಲ್ಲ. ಸಜ್ಜನರಿಗೆ ಒಡೆಯನೂ ಸರ್ವೇಶ್ವರನೂ ಆದ ಶಂಕರನು ಭಕ್ತರ ಅಧೀನನೂ ಅವರಲ್ಲಿ ಪ್ರೀತಿಯುಳ್ಳವನೂ ಆಗಿರುವನು. ಸೂರ್ಯನೂ ಶಿವನೂ ನನ್ನ ಪ್ರಾಣಕ್ಕಿಂತಲೂ ಪ್ರೀತಿಪಾತ್ರರಾದವರು. ಎಲೈ ಬ್ರಹ್ಮನೇ, ಬ್ರಹ್ಮಾಂಡದಲ್ಲಿ ಇವರಿಬ್ಬರಿಗೂ ಹೆಚ್ಚಾದ ತೇಜಸ್ಸುಳ್ಳವರಾರೂ ಇರುವುದಿಲ್ಲ. ॥೨೪.೨೫-೨೬॥

ಶಿವನು ಆಟವಾಡುತ್ತಾ ಕೋಟಿಸೂರ್ಯರನ್ನು ಸೃಷ್ಟಿಸಬಲ್ಲನು. ಹೀಗೆಯೇ ಕೋಟಿಬ್ರಹ್ಮರನ್ನೂ ಸೃಷ್ಟಿಸಬಲ್ಲನು. ಆ ದೇವನಿಗೆ ಅಸಾಧ್ಯವಾದುದಾವುದೂ ಇರುವುದಿಲ್ಲ. ॥೨೭॥

ಆ ಶಿವನು ಹೊರಗಿನ ವ್ಯವಹಾರಜ್ಞಾನವು ಸ್ವಲ್ಪವೂ ಇಲ್ಲದೆ ಯಾವಾಗಲೂ ನನ್ನನ್ನು ಧ್ಯಾನಮಾಡುತ್ತಾ ನನ್ನ ಮಂತ್ರಗಳನ್ನೂ ನನ್ನ ಗುಣಗಳನ್ನೂ ತನ್ನ

ಶಿವಸ್ವರೂಪೋ ಭಗವಾನ್ ಶಿವಾಧಿಷ್ಠಾತೃದೇವತಾ ।
ಶಿವಂ ಭವತಿ ತಸ್ಮಾಚ್ಚ ಶಿವಂ ತೇನ ವಿದುರ್ಬುಧಾಃ ॥೩೦॥

ಏತಸ್ಮಿನ್ನಂತರೇ ತತ್ರ ಜಗಾಮ ಶಂಕರಃ ಸ್ಥಿತಃ ।
ಶೂಲಹಸ್ತೋ ವೃಷಾರೂಢೋ ರಕ್ತಪಂಕಜಲೋಚನಃ ॥೩೧॥

ಅವರುಹ್ಯ (ಚ) ವೃಷಾತ್ತೂರ್ಣಂ ಭಕ್ತಿನಮ್ರಾತ್ಮಕಂಧರಃ ।
ನನಾಮ ಭಕ್ತ್ಯಾ ತಂ ಶಾಂತಂ ಲಕ್ಷ್ಮೀಕಾಂತಂ ಪರಾತ್ಪರಂ ॥೩೨॥

ರತ್ನಸಿಂಹಾಸನಸ್ಥಂ ಚ ರತ್ನಾಲಂಕಾರಭೂಷಿತಂ ।
ಕಿರೀಟಿನಂ ಕುಂಡಲಿನಂ ಚಕ್ರಿಣಂ ವನಮಾಲಿನಂ ॥೩೩॥

ನವೀನನೀರದಶ್ಯಾಮಂ ಸುಂದರಂ ಚ ಚತುರ್ಭುಜಂ ।
ಚತುರ್ಭುಜೈಃ ಸೇವಿತಂ ಚ ಶ್ವೇತಚಾಮರವಾಯುನಾ ॥೩೪॥

---

ಐದು ಮುಖಗಳಿಂದಲೂ ಗಾನಮಾಡುತ್ತಿರುವನು. ನಾನೇ ಹಗಲೂ ರಾತ್ರಿಯೂ ಅವನಿಗೆ ಮಂಗಳವನ್ನು ಚಿಂತಿಸುತ್ತಿರುವೆನು. ಯಾರು ಹೇಗೆ ನನ್ನನ್ನು ಮರೆ ಹೋಗುವರೋ ಹಾಗೆಯೇ ಅವರನ್ನು ನಾನು ಕಾಪಾಡುವೆನು. ॥೨೮-೨೯॥

ಭಗವಂತನಾದ ಶಿವನು ಮಂಗಳಸ್ವರೂಪನು. ಮೋಕ್ಷಕ್ಕೆ ಆಶ್ರಯನಾದ ದೇವನು ಮಹಾಮಹಿಮನು. ಅವನಿಂದ ಮಂಗಳವಾಗುವುದರಿಂದ ಅವನನ್ನು ಶಿವನೆಂದು ಕರೆಯುವರು. ॥೩೦॥

ಈ ಸಮಯದಲ್ಲಿ ಶಿವನು ಕೈಯಲ್ಲಿ ತ್ರಿಶೂಲವನ್ನು ಹಿಡಿದು ಎತ್ತಿನ ಮೇಲೆ ಕೂತುಕೊಂಡು ರಕ್ತ ಕಮಲದಂತೆ ಕಣ್ಣನ್ನು ಕೆಂಪಗೆ ಮಾಡಿಕೊಂಡು ಅಲ್ಲಿಗೆ ಬಂದನು. ॥೩೧॥

ಶಿವನು ಬೇಗನೆ ಎತ್ತಿನಮೇಲಿನಿಂದ ಇಳಿದು ಭಕ್ತಿಯಿಂದ ತನ್ನ ಕುತ್ತಿಗೆ ಯನ್ನು ಬಗ್ಗಿಸಿಕೊಂಡು, ರತ್ನಗಳ ಆಭರಣಗಳನ್ನು ಧರಿಸಿ ರತ್ನಖಚಿತವಾದ ಸಿಂಹಾಸನದ ಮೇಲೆ ಕುಳಿತು, ಕಿರೀಟ, ಕುಂಡಲ, ಚಕ್ರ ವನಮಾಲೆ ಇವುಗಳಿಂದ ಶೋಭಿಸುತ್ತಾ ನಾಲ್ಕು ತೋಳುಗಳುಳ್ಳ ಸೇವಕರು ಬಿಳಿಯ ಚಾಮರಗಳನ್ನು ಬೀಸು ತ್ತಿರಲು ಹೊಸದಾದ ಮೇಘದ ಬಣ್ಣದಂತೆ ಮೈಬಣ್ಣವುಳ್ಳವನಾಗಿ ಸುಂಧರನೂ

ಚಂದನೋಕ್ಷಿತಸರ್ವಾಂಗಂ ಭೂಷಿತಂ ಪೀತವಾಸಸಂ ।
ಲಕ್ಷ್ಮೀಪ್ರದತ್ತತಾಂಬೂಲಂ ಭುಕ್ತವಂತಂ ಚ ನಾರದ ॥೩೫॥

ವಿದ್ಯಾಧರೀನೃತ್ಯಗೀತಂ ಪಶ್ಯಂತಂ ಸಸ್ಮಿತಂ ಸದಾ ।
ಈಶ್ವರಂ ಪರಮಾತ್ಮಾನಂ ಭಕ್ತಾನುಗ್ರಹವಿಗ್ರಹಂ ॥೩೬॥

ತಂ ನನಾಮ ಮಹಾದೇವೋ ಬ್ರಹ್ಮಣಾ ನಮಿತಶ್ಚ ಸಃ ।
ನನಾಮ ಸೂರ್ಯೋ ಭಕ್ತ್ಯಾ ಚ ಸಂತ್ರಸ್ತಶ್ಚಂದ್ರಶೇಖರಂ ॥೩೭॥

ಕಶ್ಯಪಶ್ಚ ಮಹಾಭಕ್ತ್ಯಾ ತುಷ್ಟಾವ ಚ ನನಾಮ ಚ ।
ಶಿವಸ್ಸಂಸ್ತೂಯ ಸರ್ವೇಶಂ ಸಮುವಾಸ ಸುಖಾಸನೇ ॥೩೮॥

ಸುಖಾಸನೇ ಸುಖಾಸೀನಂ ವಿಶ್ರಾಂತಂ ಚಂದ್ರಶೇಖರಂ ।
ಶ್ವೇತಚಾಮರವಾತೇನ ಸೇವಿತಂ ವಿಷ್ಣುಪಾರ್ಷದೈಃ ॥೩೯॥

ಪೀಯೂಷತುಲ್ಯಂ ಮಧುರಂ ವಚನಂ ಸುಮನೋಹರಂ ।

॥ ವಿಷ್ಣುರುವಾಚ ॥

ಆಗತೋಽಸಿ ಕಥಂ ಚಾತ್ರ ವದ ಕೋಪಸ್ಯ ಕಾರಣಂ ॥೪೦॥

---

ನಾಲ್ಕು ತೋಳುಗಳುಳ್ಳವನೂ ಮೈಗೆಲ್ಲಾ ಶ್ರೀಗಂಧವನ್ನು ಬಳಿದುಕೊಂಡು ಪೀತಾಂಬರವನ್ನು ಉಟ್ಟು ಲಕ್ಷ್ಮಿಯು ಕೊಟ್ಟ ತಾಂಬೂಲವನ್ನು ಸೇವಿಸುತ್ತಾ ವಿದ್ಯಾಧರಸ್ತ್ರೀಯರ ನೃತ್ಯವನ್ನೂ ಸಂಗೀತವನ್ನೂ ನೋಡುತ್ತಾ ಭಕ್ತರಿಗೆ ಅನುಗ್ರಹವನ್ನು ಮಾಡುವ ಶ್ರೇಷ್ಠನಾದ ಲಕ್ಷ್ಮೀಪತಿಯಾದ ನಾರಾಯಣನಿಗೆ ನಮಸ್ಕಾರಮಾಡಿದನು. ॥೩೨-೩೩-೩೪-೩೫-೩೬॥

ಶಿವನು ವಿಷ್ಣುವಿಗೆ ನಮಸ್ಕರಿಸಿದನು. ಭಯಪಟ್ಟ ಬ್ರಹ್ಮನೂ, ಸೂರ್ಯನೂ ಭಕ್ತಿಯಿಂದ ಶಿವನಿಗೆ ನಮಸ್ಕರಿಸಿದರು. ॥೩೭॥

ಕಶ್ಯಪನೂ ಭಕ್ತಿಯಿಂದ ನಮಸ್ಕರಿಸಿ ಸ್ತೋತ್ರಮಾಡಿದನು. ಶಿವನು ಎಲ್ಲರಿಗೂ ಒಡೆಯನಾದ ನಾರಾಯಣನನ್ನು ಸ್ತೋತ್ರಮಾಡಿದನು. ಆಮೇಲೆ ಸುಖಕರವಾದ ಪೀಠದಲ್ಲಿ ಕುಳಿತನು. ॥೩೮॥

ಸುಖಾಸನದಲ್ಲಿ ಕುಳಿತು ವಿಶ್ರಾಂತಿಯನ್ನು ಹೊಂದಿದ ಶಿವನಿಗೆ ವಿಷ್ಣುದೂತರು ಬಿಳಿಯ ಚಾಮರದಿಂದ ಬೀಸುತ್ತಿರಲು ವಿಷ್ಣುವು ಅಮೃತಕ್ಕೆ ಸಮಾನವಾದ ಮಧುರ

॥ ಮಹಾದೇವ ಉವಾಚ ॥

ವೃಷಧ್ವಜಂ ಚ ಮದ್ಭಕ್ತಂ ಮಮ ಪ್ರಾಣಾಧಿಕಂ ಪ್ರಿಯಂ ।
ಸೂರ್ಯಃ ಶಶಾಪ ಇತಿ ಮೇ ಪ್ರಕೋಪಸ್ಯ ತು ಕಾರಣಂ ॥೪೧॥

ಪುತ್ರವತ್ಸಲಶೋಕೇನ ಸೂರ್ಯಂ ಹಂತುಂ ಸಮುದ್ಯತಃ ।
ಸಬ್ರಹ್ಮಾಣಂ ಪ್ರಪನ್ನಶ್ಚ ಸೂರ್ಯಶ್ಚ ಸವಿಧಿಸ್ತ್ವಯಿ ॥೪೨॥

ತ್ವಯಿ ಯೇ ಶರಣಾಪನ್ನಾ ಧ್ಯಾನೇನ ವಚಸಾಽಪಿ ವಾ ।
ನಿರಾಪದೋ ವಿಶಂಕಾಸ್ತೇ ಜರಾ ಮೃತ್ಯುಶ್ಚ ತೈರ್ಜಿತಃ ॥೪೩॥

ಪ್ರತ್ಯಕ್ಷಂ ಶರಣಾಪನ್ನಾಸ್ತತ್ಫಲಂ ಕಿಂ ವದಾಮಿ ಭೋ ।
ಹರಿಸ್ಮೃತಿಶ್ಚಾಭಯದಾ ಸರ್ವಮಂಗಲದಾ ಸದಾ ॥೪೪॥

ಕಿಂ ಮೇ ಭಕ್ತಸ್ಯ ಭವಿತಾ ತನ್ಮೇ ಬ್ರೂಹಿ ಜಗತ್ಪ್ರಭೋ ।
ಶ್ರೀಹತಸ್ಯಾಽಸ್ಯ ಮೂಢಸ್ಯ ಸೂರ್ಯಶಾಪೇನ ಹೇತುನಾ ॥೪೫॥

---

ವಾದ ಮಾತಿನಿಂದ ಶಿವನನ್ನು ಕುರಿತು ಓ ಶಿವನೇ, ಇಲ್ಲಿಗೆ ಏಕೆ ಬಂದೆ? ಕೋಪಕ್ಕೆ ಕಾರಣವೇನು? ಎಂದು ಪ್ರಶ್ನೆ ಮಾಡಿದನು. ॥೩೯-೪೦॥

ಮಹಾದೇವನು ಹೇಳಿದನು--- ಓ ವಿಷ್ಣುವೇ, ನನ್ನ ಪ್ರಾಣಕ್ಕಿಂತಲೂ ಪ್ರೀತಿ ಪಾತ್ರನೂ ನನ್ನ ಭಕ್ತನೂ ಆದ ವೃಷಧ್ವಜನನ್ನು ಸೂರ್ಯನು ಶಪಿಸಿದನು. ಇದೇ ನನ್ನ ಕೋಪಕ್ಕೆ ಕಾರಣವು. ಸೂರ್ಯನನ್ನು ಕೊಲ್ಲುವುದಕ್ಕೆ ಬಂದ ನನ್ನನ್ನು ನೋಡಿ ಮಗನ ಮೇಲಿನ ಪ್ರೀತಿಯಿಂದ ದುಃಖವನ್ನು ಹೊಂದಿದ ಕಶ್ಯಪನೂ ಬ್ರಹ್ಮನೂ ನಿನ್ನಲ್ಲಿ ಶರಣಾಗತರಾದರು. ॥೪೧-೪೨॥

ಧ್ಯಾನದಿಂದಲಾಗಲೀ ಮಾತಿನಿಂದಲಾಗಲೀ ನಿನ್ನನ್ನು ಯಾರು ಶರಣು ಹೊಂದುವರೋ ಅವರು ಆಪತ್ತಿಲ್ಲದವರಾಗಿ ಸಂದೇಹವಿಲ್ಲದೆ ಮುಪ್ಪನ್ನೂ ಮರಣ ವನ್ನೂ ಜಯಿಸುವರು! ಇನ್ನು ಪ್ರತ್ಯಕ್ಷವಾಗಿ ಶರಣು ಹೊಂದಿದವರಿಗೆ ಉಂಟಾಗುವ ಫಲವನ್ನು ಏನೆಂದು ಹೇಳಲಿ. ವಿಷ್ಣುಸ್ಮರಣೆಯು ಅಭಯವನ್ನೂ ಸಮಸ್ತ ಮಂಗಳ ವನ್ನೂ ಕೊಡುವುದು! ಓ ಜಗದೊಡೆಯನೇ, ಸೂರ್ಯನ ಶಾಪದಿಂದ ಸಂಪತ್ತಿಲ್ಲದೆ ಮೂಢನಾಗಿರುವ ನನ್ನ ಭಕ್ತನಿಗೆ ಏನಾಗುವುದು? ಅದನ್ನು ಹೇಳು. ಎಂದನು. ವಿಷ್ಣು ಶಿವರ ನಡೆವಳಿಯಲ್ಲಿ ಹೃದಯಸಾಮರಸ್ಯವಿದೆ! ॥೪೩-೪೪-೪೫॥

|| ವಿಷ್ಣುರುವಾಚ ||

ಕಾಲೋಽತಿಯಾತೋ ದೈವೇನ ಯುಗಾನಾಮೇಕವಿಂಶತಿಃ ।
ವೈಕುಂಠೇ ಘಟಿಕಾರ್ಧೇನ ಶೀಘ್ರಂ ಗಚ್ಛ ತ್ವಮಾಲಯಂ ॥೪೬॥

ವೃಷಧ್ವಜೋ ಮೃತಃ ಕಾಲಾದ್ದುರ್ನಿವಾರ್ಯಾತ್ಸುದಾರುಣಾತ್ ।
ರಥಧ್ವಜಶ್ಚ ತತ್ಪುತ್ರೋ ಮೃತಃ ಸೋಽಪಿ ಶ್ರಿಯಾ ಹತಃ ॥೪೭॥

ತತ್ಪುತ್ರೌ ಚ ಮಹಾಭಾಗೌ ಧರ್ಮಧ್ವಜಕುಶಧ್ವಜೌ ।
ಹೃತಶ್ರಿಯೌ ಸೂರ್ಯಶಾಪಾತ್ಸ್ಮೃತೌ ಪರಮವೈಷ್ಣವೌ ॥೪೮॥

ರಾಜ್ಯಭ್ರಷ್ಟೌ ಶ್ರಿಯಾ ಭ್ರಷ್ಟೌ ಕಮಲಾತಪಸಾ ರತೌ ।
ತಯೋಶ್ಚ ಭಾರ್ಯಯೋರ್ಲಕ್ಷ್ಮೀಃ ಕಲಯಾ ಚ ಭವಿಷ್ಯತಿ ॥೪೯॥

ಸಂಪದ್ಯುಕ್ತೌ ತದಾ ತೌ ಚ ನೃಪಶ್ರೇಷ್ಠೌ ಭವಿಷ್ಯತಃ ।
ಮೃತಸ್ತೇ ಸೇವಕಃ ಶಂಭೋ ಗಚ್ಛ ಯೂಯಂ ಚ ಗಚ್ಛತ ॥೫೦॥

---

ವಿಷ್ಣುವು, ನೀವು ಈ ವೈಕುಂಠದಲ್ಲಿ ಅರ್ಧಗಳಿಗೆಯಿಂದ ಇರುವಿರಿ. ಈ ಹೊತ್ತಿನಲ್ಲಿ ದೇವಮಾನದ ಇಪ್ಪತ್ತೊಂದು ಯುಗಗಳು ಕಳೆದುಹೋದುವು. ನಿವಾರಿಸುವುದಕ್ಕಾಗದ ಭಯಂಕರವಾದ ಕಾಲದಿಂದ ವೃಷಧ್ವಜನು ಮರಣ ಹೊಂದಿದನು. ಅವನ ಮಗನೂ ಸಂಪತ್ತಿಲ್ಲದವನೂ ಆದ ರಥಧ್ವಜನೂ ಸತ್ತನು. ಅವನ ಮಕ್ಕಳಾದ ಧರ್ಮಧ್ವಜ ಕುಶಧ್ವಜರೆಂಬ ಇಬ್ಬರು ಸೂರ್ಯ ಶಾಪದಿಂದ ಸಂಪತ್ತಿಲ್ಲದವರಾದರೂ, ವಿಷ್ಣುಭಕ್ತರಾಗಿ ಪ್ರಸಿದ್ಧರಾಗಿರುವರು. ||೪೬-೪೭-೪೮||

ಅವರು ರಾಜ್ಯವೂ ಸಂಪತ್ತೂ ಇಲ್ಲದವರಾಗಿ ಲಕ್ಷ್ಮಿಯನ್ನು ಕುರಿತು ತಪಸ್ಸು ಮಾಡುವರು. ಅವರಿಬ್ಬರ ಹೆಂಡತಿಯರಿಗೆ ಲಕ್ಷ್ಮಿಯು ಕಲಾಂಶದಿಂದ ಮಗಳಾಗಿ ಅವತರಿಸುವಳು. ಆಗ ಅವರಿಬ್ಬರೂ ಸಂಪತ್ತಿನಿಂದ ಕೂಡಿ ರಾಜರಾಗುವರು. ಓ ಶಿವನೇ, ನಿನ್ನ ಭಕ್ತನಾದ ವೃಷಧ್ವಜನು ಕಾಲವಶದಿಂದ ಸತ್ತನು. ನೀವೂ ಹೊರಡಿ. ಎಂದನು. ||೪೯-೫೦||

ಇತ್ಯುಕ್ತ್ವಾ ಚ ಸಲಕ್ಷ್ಮೀಕಃ ಸಭಾತೋಽಭ್ಯಂತರಂ ಗತಃ ।
ದೇವಾ ಜಗ್ಮುಃ ಸಂಪ್ರಹೃಷ್ಟಾಃ ಸ್ವಾಶ್ರಮಂ ಪರಮಂ ಮುದಾ ॥೫೧॥
ಶಿವಶ್ಚ ತಪಸೇ ಶೀಘ್ರಂ ಪರಿಪೂರ್ಣತಮೋ ಯಯೌ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಪಂಚದಶೋಽಧ್ಯಾಯಃ

---

ಹೀಗೆ ಹೇಳಿ ನಾರಾಯಣನು ಲಕ್ಷ್ಮಿಯೊಡನೆ ಸಭೆಯಿಂದ ಒಳಕ್ಕೆ ಹೋದನು. ದೇವತೆಗಳು ಸಂತೋಷದಿಂದ ತಮ್ಮಾಶ್ರಮಕ್ಕೆ ಹೋದರು. ಪರಿಪೂರ್ಣ ಬ್ರಹ್ಮಸ್ವರೂಪನಾದ ಶಿವನೂ ತಪಸ್ಸಿಗಾಗಿ ಪ್ರಯಾಣ ಮಾಡಿದನು. ||೫೧||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹದಿನೈದಿನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಷೋಡಶೋಽಧ್ಯಾಯಃ ||

### ಹದಿನಾರನೆಯ ಅಧ್ಯಾಯವು

|| ನಾರದ ಉವಾಚ ||

ಲಕ್ಷ್ಮೀಂ ತೌ ಚ ಸಮಾರಾಧ್ಯ ಚೋಗ್ರೇಣ ತಪಸಾ ಮುನೇ ।
ವರಮಿಷ್ಟಂ ಚ ಪ್ರತ್ಯೇಕಂ ಸಂಪ್ರಾಪತುರಭೀಪ್ಸಿತಂ ॥೧॥

ಮಹಾಲಕ್ಷ್ಮೀವರೇಣೈವ ತೌ ಪೃಥ್ವೀಶೌ ಬಭೂವತುಃ ।
ಪುಣ್ಯವಂತೌ ಪುತ್ರವಂತೌ ಧರ್ಮಧ್ವಜಕುಶಧ್ವಜೌ ॥೨॥

ಕುಶಧ್ವಜಸ್ಯ ಪತ್ನೀ ಚ ದೇವೀ ಮಾಲಾವತೀ ಸತೀ ।
ಸಾ ಸುಷಾವ ಚ ಕಾಲೇನ ಕಮಲಾಂಶಾಂ ಸುತಾಂ ಸತೀಂ ॥೩॥

ಸಾ ಚ ಭೂಮಿಷ್ಠಕಾಲೇನ ಜ್ಞಾನಯುಕ್ತಾ ಬಭೂವ ಹ ।
ಕೃತ್ವಾ ವೇದಧ್ವನಿಂ ಸ್ಪಷ್ಟಮುತ್ತಸ್ಥೌ ಸೂತಿಕಾಗೃಹಾತ್ ॥೪॥

---

ಆ ಧರ್ಮಧ್ವಜ ಕುಶಧ್ವಜರು ಕ್ರೂರವಾದ ತಪಸ್ಸಿನಿಂದ ಲಕ್ಷ್ಮೀದೇವಿಯನ್ನು ಒಲಿಸಿಕೊಂಡು ತಮಗಿಷ್ಟವಾದ ವರವನ್ನು ಬೇರೆ ಬೇರೆಯಾಗಿ ಪಡೆದರು. ಆ ಮಹಾಲಕ್ಷ್ಮಿಯ ವರದಿಂದಲೇ ಅವರಿಬ್ಬರೂ ರಾಜರಾದರು. ಪುಣ್ಯವಂತರೂ ಮತ್ತು ಪುತ್ರವಂತರೂ ಆದರು. ||೧-೨||

ಕುಶಧ್ವಜನ ಹೆಂಡತಿಯಾದ ಕಮಲಾವತಿಯು ಕೆಲವು ಕಾಲದ ಮೇಲೆ ಲಕ್ಷ್ಮಿಯ ಅಂಶದ ಮಗಳನ್ನು ಹೆತ್ತಳು. ಆ ಕನ್ಯೆಯು ಹುಟ್ಟಿದೊಡನೆಯೇ ಜ್ಞಾನದಿಂದ ಕೂಡಿದವಳಾಗಿ ಸ್ಪಷ್ಟವಾಗಿ ವೇದಧ್ವನಿಯನ್ನು ಮಾಡುತ್ತಾ ಹೆರಿಗೆಯ ಮನೆ

ವೇದಧ್ವನಿಂ ಸಾ ಚಕಾರ ಜಾತಮಾತ್ರೇಣ ಕನ್ಯಕಾ ।
ತಸ್ಮಾತ್ತಾಂ ಚ ವೇದವತೀಂ ಪ್ರವದಂತಿ ಮನೀಷಿಣಃ ॥೫॥

ಜಾತಮಾತ್ರೇಣ ಸುಸ್ನಾತಾ ಜಗಾಮ ತಪಸೇ ವನಂ ।
ಸರ್ವೈರ್ನಿಷಿದ್ಧಾ ಯತ್ನೇನ ನಾರಾಯಣಪರಾಯಣಾ ॥೬॥

ಏಕಮನ್ವಂತರಂ ಚೈವ ಪುಷ್ಕರೇ ಚ ತಪಸ್ವಿನೀ ।
ಅತ್ಯುಗ್ರಾಂ ಚ ತಪಸ್ಯಾಂ ಚ ಲೀಲಯಾ ಹಿ ಚಕಾರ ಸಾ ॥೭॥

ತಥಾಪಿ ಪುಷ್ಟಾ ನ ಕ್ಲಿಷ್ಟಾ ನವಯೌವನಸಂಯುತಾ ।
ಶುಶ್ರಾವ ಸಾ ಚ ಸಹಸಾ ಸುವಾಚಮಶರೀರಿಣೀಂ ॥೮॥

ಜನ್ಮಾಂತರೇ ಚ ತೇ ಭರ್ತಾ ಭವಿಷ್ಯತಿ ಹರಿಃ ಸ್ವಯಂ ।
ಬ್ರಹ್ಮಾದಿಭಿರ್ದುರಾರಾಧ್ಯಂ ಪತಿಂ ಲಪ್ಸ್ಯಸಿ ಸುಂದರಿ ॥೯॥

ಇತಿ ಶ್ರುತ್ವಾ ಚ ಸಾ ಹೃಷ್ಟಾ ಚಕಾರ ಹ ಪುನಸ್ತಪಃ ।
ಅತೀವ ನಿರ್ಜನಸ್ಥಾನೇ ಪರ್ವತೇ ಗಂಧಮಾದನೇ ॥೧೦॥

---

ಯಿಂದ ಎದ್ದು ಬಂದಳು. ಹುಟ್ಟಿದೊಡನೆಯೇ ವೇದಧ್ವನಿಯನ್ನು ಮಾಡಿದುದರಿಂದ ಅವಳಿಗೆ ವೇದವತೀ ಎಂದು ಹೆಸರಾಯಿತು. ॥೩-೪-೫॥

ಆ ಕನ್ಯೆಯು ಹುಟ್ಟಿದೊಡನೆಯೇ ಸ್ನಾನಮಾಡಿ ನಾರಾಯಣನ ಭಕ್ತಿಯಿಂದ ಎಲ್ಲರೂ ಬೇಡವೆಂದು ತಡೆದರೂ ಕೇಳದೆ ತಪಸ್ಸಿಗಾಗಿ ಕಾಡಿಗೆ ಹೋದಳು. ಒಂದು ಮನ್ವಂತರಕಾಲದ ವರೆಗೆ ಪುಷ್ಕರಕ್ಷೇತ್ರದಲ್ಲಿ ಕ್ರೂರವಾದ ತಪಸ್ಸನ್ನು ಸುಲಭವಾಗಿ ಮಾಡಿದಳು. ॥೬-೭॥

ಇಷ್ಟು ಕ್ರೂರವಾಗಿ ನಿಯಮದಿಂದ ತಪಸ್ಸುಮಾಡುತ್ತಿದ್ದರೂ ಆಕೆಯ ಶರೀರವು ಕೃಶವಾಗದೆ ಪುಷ್ಟವಾಗಿ ಪ್ರಾಯದಿಂದ ಕೂಡಿದ್ದಿತು. ಆಕೆಯು ಒಡನೆಯೇ ಒಂದು ಆಕಾಶವಾಣಿಯನ್ನು ಕೇಳಿದಳು. ಮತ್ತೊಂದು ಜನ್ಮದಲ್ಲಿ ನಿನಗೆ ನಾರಾಯಣನೇ ಪತಿಯಾಗುವನು. ಸುಂದರಿಯಾದ ನೀನು ಬ್ರಹ್ಮಾದಿಗಳಿಂದಲೂ ಜಯಿಸಲು ಅಸಾಧ್ಯನಾದ ಪತಿಯನ್ನು ಹೊಂದು ಎಂಬುದೇ ಆ ಆಕಾಶವಾಣಿಯು. ॥೮-೯॥

ಈ ಆಕಾಶವಾಣಿಯನ್ನು ಕೇಳಿ ವೇದವತಿಯು ಸಂತೋಷದಿಂದ ಜನಸಂಚಾರವಿಲ್ಲದ ಗಂಧಮಾದನ ಪರ್ವತದಲ್ಲಿ ಮತ್ತೆ ತಪಸ್ಸನ್ನು ಮಾಡುತ್ತಿದ್ದಳು. ॥೧೦॥

ತತ್ರೈವ ಸುಚಿರಂ ತಪ್ತ್ವಾ ವಿಶ್ವಸ್ಯ ಸಮುವಾಸ ಸಾ ।
ದದರ್ಶ ಪುರತಸ್ತತ್ರ ರಾವಣಂ ದುರ್ನಿವಾರಣಂ ॥೧೧॥

ದೃಷ್ಟ್ವಾ ಸಾಽತಿಥಿಭಕ್ತ್ಯಾ ಚ ಪಾದ್ಯಂ ತಸ್ಮೈ ದದೌ ಕಿಲ ।
ಸುಸ್ವಾದಭೂತಂ ಚ ಫಲಂ ಜಲಂ ಚಾಪಿ ಸುಶೀತಲಂ ॥೧೨॥

ತಚ್ಚ ಭುಕ್ತ್ವಾ ಸ ಪಾಪಿಷ್ಠಶ್ಚೋವಾಸ ತತ್ಸಮೀಪತಃ ।
ಚಕಾರ ಪ್ರಶ್ನಮಿತಿ ತಾಂ ಕಾ ತ್ವಂ ಕಲ್ಯಾಣಿ ವರ್ತಸೇ ॥೧೩॥

ತಾಂ ದೃಷ್ಟ್ವಾ ಸ ವರಾರೋಹಾಂ ಪೀನಶ್ರೋಣಿಪಯೋಧರಾಂ ।
ಶರತ್ಪದ್ಮೋತ್ಸವಾಸ್ಯಾಂ ಚ ಸಸ್ಮಿತಾಂ ಸುದತೀಂ ಸತೀಂ ॥೧೪॥

ಮೂರ್ಛಾಮವಾಪ ಕೃಪಣಃ ಕಾಮಬಾಣಪ್ರಪೀಡಿತಃ ।
ಸ ಕರೇಣ ಸಮಾಕೃಷ್ಯ ಶೃಂಗಾರಂ ಕರ್ತುಮುದ್ಯತಃ ॥೧೫॥

ಸತೀ ಚುಕೋಪ ದೃಷ್ಟ್ವಾ ತಂ ಸ್ತಂಭಿತಂ ಚ ಚಕಾರ ಹ ।
ಸ ಜಡೋ ಹಸ್ತಪಾದೈಶ್ಚ ಕಿಂಚಿದ್ವಕ್ತುಂ ನ ಚ ಕ್ಷಮಃ ॥೧೬॥

---

ಆ ವೇದವತಿಯು ಅಲ್ಲಿಯೇ ಬಹಳಕಾಲ ತಪಸ್ಸುಮಾಡುತ್ತಾ ಆಕಾಶವಾಣಿಯನ್ನು ನಂಬಿಕೊಂಡು ಇರುತ್ತಿರುವಲ್ಲಿ ರಾವಣನು ಆಕೆಯ ಎದುರಿಗೆ ಬಂದು ನಿಂತನು. ಆಕೆಯು ಅತಿಥಿ ಎಂಬ ಭಕ್ತಿಯಿಂದ ಕಾಲಿಗೆ ನೀರನ್ನು ಕೊಟ್ಟು ರುಚಿಯಾದ ಹಣ್ಣನ್ನೂ ತಣ್ಣಗಿರುವ ನೀರನ್ನೂ ಕೊಟ್ಟಳು. ॥೧೧-೧೨॥

ಪಾಪಿಯಾದ ರಾವಣನು ಆ ಹಣ್ಣನ್ನು ತಿಂದು ಆಕೆಯನ್ನು ಕುರಿತು ಎಲೌ ಮಂಗಳಕರಳೇ, ನೀನು ಯಾರು ? ಎಂದು ಕೇಳಿದನು. ಮತ್ತೆ ಅವಳ ಅವಯವಗಳನ್ನು ನೋಡಿ ಕಾಮಬಾಣದಿಂದ ಬಾಧೆಯನ್ನು ಹೊಂದಿ ಮೂರ್ಛೆಯನ್ನು ಹೊಂದಿದನು. ಬಳಿಕ ಜ್ಞಾನತಪ್ಪಿದ ಅವನು ಕೈಹಿಡಿದು ವೇದವತಿಯನ್ನು ಎಳೆದು ಶೃಂಗಾರಭಾವವನ್ನು ತೋರಿಸಲು ಯತ್ನಿಸಿದನು. ॥೧೩-೧೪-೧೫॥

ಪತಿವ್ರತೆಯಾದ ವೇದವತಿಯು ಕೋಪಗೊಂಡು ಅವನ ಅವಯವಗಳು ಚಲಿಸದಂತೆ ಮಾಡಿದಳು. ಕೈಕಾಲುಗಳು ಅಲುಗಾಡದಂತೆ ಆಗಲು ಜಡನಾದ ಅವನು ಒಂದು ಮಾತನ್ನೂ ಆಡಲು ಶಕ್ತನಾಗಲಿಲ್ಲ. ॥೧೬॥

**ತುಷ್ಟಾವ ಮನಸಾ ದೇವೀಂ ಪ್ರಯಯೌ ಪದ್ಮಲೋಚನಾಂ ।**
**ಸಾ ತುಷ್ಟಾ ತಸ್ಯ ಸ್ತವನಂ ಸುಕೃತಂ ಚ ಚಕಾರ ಹ ॥೧೭॥**

**ಸಾ ಶಶಾಪ ಮದರ್ಥೇ ತ್ವಂ ವಿನಂಕ್ಷ್ಯಸಿ ಸಬಾಂಧವಃ ।**
**ಸ್ಪೃಷ್ಟಾಽಹಂ ಚ ತ್ವಯಾ ಕಾಮಾದ್ವಲಂ ಚಾಪ್ಯವಲೋಕಯ ॥೧೮॥**

**ಇತ್ಯುಕ್ತ್ವಾ ಸಾ ಚ ಯೋಗೇನ ದೇಹತ್ಯಾಗಂ ಚಕಾರ ಸಾ ।**
**ಗಂಗಾಯಾಂ ತಾಂ ಚ ಸಂನ್ಯಸ್ಯ ಸ್ವಗೃಹಂ ರಾವಣೋ ಯಯೌ ॥೧೯॥**

**ಅಹೋ ಕಿಮದ್ಭುತಂ ದೃಷ್ಟಂ ಕಿಂ ಕೃತಂ ವಾಽನಯಾಽಧುನಾ ।**
**ಇತಿ ಸಂಚಿಂತ್ಯ ಸಂಚಿಂತ್ಯ ವಿಲಲಾಪ ಪುನಃ ಪುನಃ ॥೨೦॥**

**ಸಾ ಚ ಕಾಲಾಂತರೇ ಸಾಧ್ವೀ ಬಭೂವ ಜನಕಾತ್ಮಜಾ ।**
**ಸೀತಾದೇವೀತಿ ವಿಖ್ಯಾತಾ ಯದರ್ಥೇ ರಾವಣೋ ಹತಃ ॥೨೧॥**

---

ರಾವಣನು ಮನಸ್ಸಿಂದಲೇ ದೇವಿಯ ಸ್ತೋತ್ರವನ್ನು ಮಾಡಿದನು. ಆ ದೇವಿಯು ಅವನ ಸ್ತೋತ್ರಕ್ಕೆ ಫಲವನ್ನು ಕೊಟ್ಟಳು. ವೇದವತಿಯು ರಾವಣನನ್ನು ಕುರಿತು ನೀನು ಕಾಮದಿಂದ ನನ್ನನ್ನು ಮುಟ್ಟಿದೆ. ನನ್ನ ಶಕ್ತಿಯನ್ನು ನೋಡು. ನೀನು ನನಗೋಸ್ಕರವಾಗಿ ಪ್ರಯತ್ನಮಾಡಿ ನಿನ್ನ ಸಮಸ್ತ ಬಂಧುಗಳೊಡನೆ ನಾಶ ಹೊಂದುವೆ ! ಎಂದು ಶಾಪವನ್ನು ಕೊಟ್ಟಳು. ಆ ಮೇಲೆ ಅವಳು ಯೋಗದಿಂದ ತನ್ನ ಶರೀರವನ್ನು ಬಿಟ್ಟಳು. ರಾವಣನು ಗಂಗೆಯಲ್ಲಿ ಆ ಶರೀರವನ್ನು ಹಾಕಿ ತನ್ನ ಮನೆಗೆ ಹೋದನು. ॥೧೭-೧೮-೧೯॥

ರಾವಣನು, ಆಹಾ ವೇದವತಿಯು ಎಂಥ ಕೆಲಸವನ್ನು ಮಾಡಿದಳು. ಎಂತಹ ಆಶ್ಚರ್ಯವನ್ನು ನಾನು ಕಂಡೆನು ! ಎಂದು ಚಿಂತಿಸಿ ಪುನಃ ಪುನಃ ದುಃಖಪಟ್ಟನು. ॥೨೦॥

ಆ ವೇದವತಿಯೇ ಬೇರೆ ಜನ್ಮದಲ್ಲಿ ಜನಕರಾಜನ ಮಗಳಾದಳು. ಸೀತೆ ಯೆಂದು ಪ್ರಸಿದ್ಧಳಾದ ಅವಳಿಗೋಸ್ಕರವಾಗಿ ರಾವಣನು ನಾಶವಾದನು. ॥೨೧॥

ಮಹಾತಪಸ್ವಿನೀ ಸಾ ಚ ತಪಸಾ ಪೂರ್ವಜನ್ಮತಃ ।
ಲೇಭೇ ರಾಮಂ ಚ ಭರ್ತಾರಂ ಪರಿಪೂರ್ಣತಮಂ ಹರಿಂ ॥೨೨॥

ಸಂಪ್ರಾಪ ತಪಸಾಽಽರಾಧ್ಯಂ ದುರಾರಾಧ್ಯಂ ಜಗತ್ಪತಿಂ ।
ಸಾ ರಮಾ ಸುಚಿರಂ ರೇಮೇ ರಾಮೇಣ ಸಹ ಸುಂದರೀ ॥೨೩॥

ಜಾತಿಸ್ಮರಾ ನ ಸ್ಮರತಿ ತಪಸಶ್ಚ ಕ್ಲೇಮಂ ಪುರಾ ।
ಸುಖೇನ ತಜ್ಜಹೌ ಸರ್ವಂ ದುಃಖಂ ಚಾಪಿ ಸುಖಂ ಫಲೇ ॥೨೪॥

ನಾನಾಪ್ರಕಾರವಿಭವಂ ಚಕಾರ ಸುಚಿರಂ ಸತೀ ।
ಸಂಪ್ರಾಪ್ಯ ಸುಕುಮಾರಂ ತಮತೀವ ನವಯೌವನಾ ॥೨೫॥

ಗುಣಿನಂ ರಸಿಕಂ ಶಾಂತಂ ಕಾಂತಂ ದೇವಮನುತ್ತಮಂ ।
ಸ್ತ್ರೀಣಾಂ ಮನೋಜ್ಞಂ ರುಚಿರಂ ತಥಾ ಲೇಭೇ ಯಥೇಪ್ಸಿತಂ ॥೨೬॥

ಪಿತುಃ ಸತ್ಯಪಾಲನಾರ್ಥಂ ಸತ್ಯಸಂಧೋ ರಘೂದ್ವಹಃ ।
ಜಗಾಮ ಕಾನನಂ ಪಶ್ಚಾತ್ಕಾಲೇನ ಚ ಬಲೀಯಸಾ ॥೨೭॥

---

ಮಹಾ ತಪಸ್ಸಿನ ಫಲವುಳ್ಳ ಸೀತೆಯು ಪೂರ್ವಜನ್ಮದಲ್ಲಿ ತಾನು ಮಾಡಿದ ತಪಸ್ಸಿನ ಮಹಿಮೆಯಿಂದ ನಾರಾಯಣನ ಪರಿಪೂರ್ಣವಾದ ಅಂಶದಿಂದ ಹುಟ್ಟಿದ ರಾಮನನ್ನು ಪತಿಯಾಗಿ ಪಡೆದಳು. ಲಕ್ಷ್ಮೀರೂಪಳಾದ ಸೀತೆಯು ರಾಮನೊಡನೆ ಬಹುಕಾಲ ಕ್ರೀಡಿಸಿದಳು. ಅವಳಿಗೆ ಪೂರ್ವಜನ್ಮದ ಸ್ಮರಣೆಯಿದ್ದರೂ ತಾನು ಮಾಡಿದ ತಪಸ್ಸಿನ ಕಷ್ಟವನ್ನು ಜ್ಞಾಪಕಕ್ಕೆ ತರಲಿಲ್ಲ, ಈಗ ಅನುಭವಿಸುವ ಸುಖ ದಿಂದ ಆ ಕಷ್ಟಗಳನ್ನು ಮರೆತುಬಿಟ್ಟಳು. ಉತ್ತಮ ಫಲವು ಬಂದಾಗ ಅದಕ್ಕಾಗಿ ತಾನನುಭವಿಸಿದ ಕಷ್ಟವು ಜ್ಞಾಪಕಕ್ಕೆ ಬದಿರುವುದು ಸ್ವಭಾವವು. ॥೨೨-೨೩-೨೪॥

ಪ್ರಾಯದವಳಾದ ಸೀತೆಯು ಸುಕುಮಾರನೂ ಗುಣವಂತನೂ ರಸಿಕನೂ ಶಾಂತನೂ, ಸುಂದರನೂ, ಸ್ತ್ರೀಯರಿಗೆ ಮನೋಹರನೂ, ಆದ ರಾಮನನ್ನು ಪತಿಯಾಗಿ ಹೊಂದಿ ಬಹಳಕಾಲ ಅನೇಕ ಸುಖಗಳನ್ನು ಅನುಭವಿಸಿದಳು. ॥೨೫-೨೬॥

ತಂದೆಯ ಮಾತನ್ನು ನಿಜವಾಗಿ ಮಾಡುವುದಕ್ಕೆ ಶ್ರೀರಾಮನು ಕಾಲಕ್ಕಧೀನ ನಾಗಿ ಕಾಡಿಗೆ ಹೋದನು. ಸೀತಾಲಕ್ಷ್ಮಣರೊಡನೆ ಸಮುದ್ರದ ದಡದಲ್ಲಿದ್ದಾಗ

**ತಸ್ಮಾ ಸಮುದ್ರನಿಕಟೇ ಸೀತಯಾ ಲಕ್ಷ್ಮಣೇನ ಚ ।**
**ದದರ್ಶ ತತ್ರ ವಹ್ನಿಂ ಚ ವಿಪ್ರರೂಪಧರಂ ಹರಿಃ ॥೨೮॥**

**ರಾಮಂ ಚ ದುಃಖಿತಂ ದೃಷ್ಟ್ವಾ ಸ ಚ ದುಃಖೀ ಬಭೂವ ಹ ।**
**ಉವಾಚ ಕಿಂಚಿತ್ಸತ್ಯೇಷ್ಟಂ ಸತ್ಯಂ ಸತ್ಯಪರಾಯಣಃ ॥೨೯॥**

॥ ದ್ವಿಜ ಉವಾಚ ॥

**ಭಗವಾನ್ ಶ್ರೂಯತಾಂ ರಾಮ ಕಾಲೋಽಯಂ ಯದುಪಸ್ಥಿತಃ ।**
**ಸೀತಾಹರಣಕಾಲೋಽಯಂ ತವೈವ ಸಮುಪಸ್ಥಿತಃ ॥೩೦॥**

**ದೈವಂ ಚ ದುರ್ನಿವಾರ್ಯಂ ಚ ನ ಚ ದೈವಾತ್ಪರೋ ಬಲೀ ।**
**ಜಗತ್ಪ್ರಸೂಂ ಮಯಿ ನ್ಯಸ್ಯ ಛಾಯಾಂ ರಕ್ಷಾಂತಿಕೇಽಧುನಾ ॥೩೧॥**

**ದಾಸ್ಯಾಮಿ ಸೀತಾಂ ತುಭ್ಯಂ ಚ ಪರೀಕ್ಷಾಸಮಯೇ ಪುನಃ ।**
**ದೇವೈಃ ಪ್ರಸ್ಥಾಪಿತೋಽಹಂ ಚ ನ ಚ ವಿಪ್ರೋ ಹುತಾಶನಃ ॥೩೨॥**

**ರಾಮಸ್ತದ್ವಚನಂ ಶ್ರುತ್ವಾ ನ ಪ್ರಕಾಶ್ಯ ಚ ಲಕ್ಷ್ಮಣಂ ।**
**ಸ್ವೀಕಾರಂ ವಚಸಶ್ಚಕ್ರೇ ಹೃದಯೇನ ವಿದೂಯತಾ ॥೩೩॥**

---

ರಾಮನು ಬ್ರಾಹ್ಮಣರೂಪದಲ್ಲಿದ್ದ ಅಗ್ನಿಯನ್ನು ನೋಡಿದನು. ರಾಮನು ದುಃಖಿತನಾಗಿರುವುದನ್ನು ನೋಡಿ ತಾನೂ ದುಃಖಪಡುತ್ತಾ ಸತ್ಯದಲ್ಲೇ ಆಸಕ್ತನಾದ ರಾಮನನ್ನು ಕುರಿತು ಬ್ರಾಹ್ಮಣರೂಪನಾದ ಅಗ್ನಿಯು ನಿಜವಾದ ಮಾತನ್ನು ಹೀಗೆ ಹೇಳಿದನು. ॥೨೭-೨೮-೨೯॥

ಮಹಾತ್ಮನಾದ ರಾಮನೇ, ಸೀತಾಹರಣ ಕಾಲವು ಪ್ರಾಪ್ತವಾಗಿರುವುದು. ಅದೃಷ್ಟವನ್ನು ಮೀರುವುದಕ್ಕಾಗುವುದಿಲ್ಲ. ಆದುದರಿಂದ ಲೋಕಕ್ಕೆ ತಾಯಿಯಾದ ಸೀತಾದೇವಿಯನ್ನು ನನ್ನಲ್ಲಿಟ್ಟು ಛಾಯಾ ರೂಪಳಾದ ಸೀತೆಯನ್ನು ನಿನ್ನ ಸಮೀಪದಲ್ಲಿ ಇಟ್ಟುಕೊಂಡಿರು. ಮತ್ತೆ ಪರೀಕ್ಷಾ ಸಮಯದಲ್ಲಿ ನಿನಗೆ ಸೀತೆಯನ್ನು ಒಪ್ಪಿಸುವೆನು. ದೇವತೆಗಳು ನನ್ನನ್ನು ಕಳುಹಿಸಿರುವರು. ನಾನು ಬ್ರಾಹ್ಮಣನಲ್ಲವು. ಅಗ್ನಿಯು. ಎಂದನು. ॥೩೦-೩೧-೩೨॥

ರಾಮನು ಆ ಮಾತನ್ನು ಕೇಳಿ ಲಕ್ಷ್ಮಣನಿಗೂ ಈ ವಿಚಾರವನ್ನು ತಿಳಿಸದೆ ದುಃಖದಿಂದ ಕೂಡಿದ ಮನಸ್ಸಿನಿಂದ ಒಪ್ಪಿಕೊಂಡನು. ಅಗ್ನಿಯು ಯೋಗಶಕ್ತಿಯಿಂದ

ವಹ್ನಿಯೋರ್ೀಗೇನ ಸೀತಾಯಾ ಮಾಯಾಸೀತಾಂ ಚಕಾರ ಹ ।
ತತ್ತುಲ್ಯಗುಣಸರ್ವಾಂಗಾಂ ದದೌ ರಾಮಾಯ ನಾರದ ॥೩೪॥

ಸೀತಾಂ ಗೃಹೀತ್ವಾ ಸ ಯಯೌ ಗೋಪ್ಯಂ ವಕ್ತುಂ ನಿಷಿಧ್ಯ ಚ ।
ಲಕ್ಷ್ಮಣೋ ನೈವ ಬುಬುಧೇ ಗೋಪ್ಯಮನ್ಯಸ್ಯ ಕಾ ಕಥಾ ॥೩೫॥

ಏತಸ್ಮಿನ್ನಂತರೇ ರಾಮೋ ದದರ್ಶ ಕನಕಂ ಮೃಗಂ ।
ಸೀತಾ ತಂ ಪ್ರೇರಯಾಮಾಸ ತದರ್ಥೇ ಯತ್ನಪೂರ್ವಕಂ ॥೩೬॥

ಸಂನ್ಯಸ್ಯ ಲಕ್ಷ್ಮಣಂ ರಾಮೋ ಜಾನಕ್ಯಾ ರಕ್ಷಣೇ ವನೇ ।
ಸ್ವಯಂ ಜಗಾಮ ತೂರ್ಣಂ ತಂ ವಿವ್ಯಾಧ ಸಾಯಕೇನ ಚ ॥೩೭॥

ಲಕ್ಷ್ಮಣೇತಿ ಚ ಶಬ್ದಂ ಸ ಕೃತ್ವಾ ಚ ಮಾಯಯಾ ಮೃಗಃ ।
ಪ್ರಾಣಾಂಸ್ತತ್ಯಾಜ ಸಹಸಾ ಪುರೋ ದೃಷ್ಟ್ವಾ ಹರಿಂ ಸ್ಮರನ್ ॥೩೮॥

ಮೃಗದೇಹಂ ಪರಿತ್ಯಜ್ಯ ದಿವ್ಯರೂಪಂ ವಿಧಾಯ ಚ ।
ರತ್ನನಿರ್ಮಾಣಯಾನೇನ ವೈಕುಂಠಂ ಸ ಜಗಾಮ ಹ ॥೩೯॥

---

ಸೀತೆಗೆ ಸಮಾನವಾದ ಸೌಂದರ್ಯ ಗುಣ ಮತ್ತು ಅವಯವಗಳಿಂದ ಕೂಡಿದ ಮಾಯಾಸೀತೆಯನ್ನು ಮಾಡಿ ರಾಮನಿಗೆ ಕೊಟ್ಟು ನಿಜವಾದ ಸೀತೆಯನ್ನು ಕರೆದು ಕೊಂಡು ಗುಟ್ಟನ್ನು ಯಾರಿಗೂ ಹೇಳಬೇಡವೆಂದು ಹೇಳಿ ಹೊರಟುಹೋದನು. ಈ ಗುಟ್ಟು ಲಕ್ಷ್ಮಣನಿಗೂ ತಿಳಿಯಲಿಲ್ಲ! ಮತ್ತೊಬ್ಬರಿಗೆ ಹೇಗೆ ತಿಳಿಯುವುದು? ||೩೩-೩೪-೩೫||

ಈ ಸಮಯದಲ್ಲಿ ರಾಮನು ಚಿನ್ನದ ಜಿಂಕೆಯನ್ನು ನೋಡಿದನು. ಸೀತೆಯು ಅದಕ್ಕಾಗಿ ರಾಮನನ್ನು ಕಳುಹಿಸಿದಳು. ರಾಮನು ಸೀತೆಯ ರಕ್ಷಣೆಗೆ ಲಕ್ಷ್ಮಣ ನನ್ನು ಬಿಟ್ಟು ತಾನು ಹೋಗಿ ಬೇಗನೆ ಬಾಣದಿಂದ ಆ ಜಿಂಕೆಯನ್ನು ಕೊಂದನು. ||೩೬-೩೭||

ಆ ಮಾಯಾಮೃಗವು ಲಕ್ಷ್ಮಣಾ ಎಂದು ಕೂಗಿಕೊಂಡು ಹರಿಸ್ಮರಣೆಯನ್ನು ಮಾಡುತ್ತಾ ಪ್ರಾಣವನ್ನು ಬಿಟ್ಟಿತು. ಮೃಗದೇಹವನ್ನು ಬಿಟ್ಟು ದಿವ್ಯರೂಪವನ್ನು ಹೊಂದಿ ರತ್ನಗಳಿಂದ ಮಾಡಿದ ವಿಮಾನದಲ್ಲಿ ವೈಕುಂಠಲೋಕಕ್ಕೆ ಹೋದನು. ಅವನು ಹಿಂದೆ ವೈಕುಂಠ ದ್ವಾರಪಾಲಕರ ಸೇವಕನಾಗಿದ್ದನು. ಕಾರಣಾಂತರದಿಂದ

ವೈಕುಂಠಲೋಕದ್ವಾರ್ಯೌ ಸೀತ್ಕಿಂಕರೋ ದ್ವಾರಪಾಲಯೋಃ ।
ಪುನರ್ಜಗಾಮ ತದ್ದ್ವಾರಮಾದೇಶಾದ್ದ್ವಾರಪಾಲಯೋಃ ॥೪೦॥

ಅಥ ಶಬ್ದಂ ಚ ಸಾ ಶ್ರುತ್ವಾ ಲಕ್ಷ್ಮಣೇತಿ ಚ ವಿಕ್ಲವಂ ।
ತಂ ಹಿ ಸಾ ಪ್ರೇರಯಾಮಾಸ ಲಕ್ಷ್ಮಣಂ ರಾಮಸನ್ನಿಧೌ ॥೪೧॥

ಗತೇ ಚ ಲಕ್ಷ್ಮಣೇ ರಾಮಂ ರಾವಣೋ ದುರ್ನಿವಾರಣಃ ।
ಸೀತಾಂ ಗೃಹೀತ್ವಾ ಪ್ರಯಯೌ ಲಂಕಾಮೇವ ಸ್ವಲೀಲಯಾ ॥೪೨॥

ವಿಷಸಾದ ಚ ರಾಮಶ್ಚ ವನೇ ದೃಷ್ಟ್ವಾ ಚ ಲಕ್ಷ್ಮಣಂ ।
ತೂರ್ಣಂ ಚ ಸ್ವಾಶ್ರಮಂ ಗತ್ವಾ ಸೀತಾಂ ನೈವ ದದರ್ಶ ಸಃ ॥೪೩॥

ಮೂರ್ಛಾಂ ಸಂಪ್ರಾಪ ಸುಚಿರಂ ವಿಲಲಾಪ ಭೃಶಂ ಪುನಃ ।
ಪುನಃ ಪುನಶ್ಚ ಬಭ್ರಾಮ ತದನ್ವೇಷಣಪೂರ್ವಕಂ ॥೪೪॥

ಕಾಲೇನ ಪ್ರಾಪ್ಯ ತದ್ವಾರ್ತಾಂ ಗೋದಾವರೀ ನದೀತಟೇ ।
ಸಹಾಯಾನ್ವಾನರಾನ್ಕೃತ್ವಾ ಬಬಂಧ ಸಾಗರಂ ಹರಿಃ ॥೪೫॥

---

ರಾಕ್ಷಸನಾಗಿದ್ದನು. ಮತ್ತೆ ರಾಮನ ಬಾಣದಿಂದ ಸತ್ತು ವೈಕುಂಠದ ದ್ವಾರಪಾಲಕರ ಸಮೀಪಕ್ಕೆ ಹೋದನು. ॥೩೮-೩೯-೪೦॥

ಬಳಿಕ ಸೀತೆಯು ಲಕ್ಷ್ಮಣಾ ಎಂಬ ವಿಕಾರವಾದ ಶಬ್ದವನ್ನು ಕೇಳಿ ಲಕ್ಷ್ಮಣನನ್ನು ರಾಮನ ಸಮೀಪಕ್ಕೆ ಕಳುಹಿಸಿದಳು. ಲಕ್ಷ್ಮಣನು ಹೋಗುತ್ತಲು ರಾವಣನು ಸೀತೆಯನ್ನೆತ್ತಿಕೊಂಡು ಲಂಕೆಗೆ ಹೋದನು. ॥೪೧-೪೨॥

ಕಾಡಿನಲ್ಲಿ ರಾಮನು ಲಕ್ಷ್ಮಣನನ್ನು ನೋಡಿ ವಿಷಾದದಿಂದ ಬೇಗನೆ ಆಶ್ರಮಕ್ಕೆ ಬಂದು ನೋಡಿದನು. ಸೀತೆಯನ್ನು ಕಾಣಲಿಲ್ಲ. ॥೪೩॥

ರಾಮನು ಬಹಳಕಾಲ ಮೈಮರೆತು ಪುನಃ ದುಃಖಪಡುತ್ತಾ ಆ ಸೀತೆಯನ್ನು ಹುಡುಕುತ್ತಾ ತಿರುಗುತ್ತಿದ್ದನು. ಗೋದಾವರೀ ನದಿಯ ದಡದಲ್ಲಿ ಸೀತೆಯ ಸಮಾಚಾರವನ್ನು ತಿಳಿದು ವಾನರರನ್ನು ಸಹಾಯಕ್ಕೆ ತೆಗೆದುಕೊಂಡು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದನು. ॥೪೪-೪೫॥

ಲಂಕಾಂ ಗತ್ವಾ ರಘುಶ್ರೇಷ್ಠೋ ಜಘಾನ ಸಾಯಕೇನ ಚ ।
ಕಾಲೇನ ಪ್ರಾಪ್ಯ ತಂ ಹತ್ವಾ ರಾವಣಂ ಬಾಂಧವೈಸ್ಸಹ ॥೪೬॥

ತಾಂ ಚ ವಹ್ನಿಪರೀಕ್ಷಾಂ ಚ ಕಾರಯಾಮಾಸ ಸತ್ವರಂ ।
ಹುತಾಶಸ್ತತ್ರ ಕಾಲೇ ತು ವಾಸ್ತವೀಂ ಜಾನಕೀಂ ದದೌ ॥೪೭॥

ಉವಾಚ ಛಾಯಾ ವಹ್ನಿಂ ಚ ರಾಮಂ ಚ ವಿನಯಾನ್ವಿತಾ ।
ಕರಿಷ್ಯಾಮೀತಿ ಕಿಮಹಂ ತದುಪಾಯಂ ವದಸ್ವ ಮೇ ॥೪೮॥

॥ ರಾಮಾಗ್ನೀ ಊಚತುಃ ॥

ತ್ವಂ ಗಚ್ಛ ತಪಸೇ ದೇವೀ ಪುಷ್ಕರಂ ಚ ಸುಪುಣ್ಯದಂ ।
ಕೃತ್ವಾ ತಪಸ್ಯಾಂ ತತ್ರೈವ ಸ್ವರ್ಗಲಕ್ಷ್ಮೀರ್ಭವಿಷ್ಯಸಿ ॥೪೯॥

ಸಾ ಚ ತದ್ವಚನಂ ಶ್ರುತ್ವಾ ಪ್ರತಪ್ಯ ಪುಷ್ಕರೇ ತಪಃ ।
ದಿವ್ಯಂ ತ್ರಿಲಕ್ಷವರ್ಷಂ ಚ ಸ್ವರ್ಗಲಕ್ಷ್ಮೀರ್ಬಭೂವ ಹ ॥೫೦॥

ಸಾ ಚ ಕಾಲೇನ ತಪಸಾ ಯಜ್ಞಕುಂಡಸಮುದ್ಭವಾ ।
ಕಾಮಿನೀ ಪಾಂಡವಾನಾಂ ಚ ದ್ರೌಪದೀ ದ್ರುಪದಾತ್ಮಜಾ ॥೫೧॥

---

ರಾಮನು ಕಾಲಕ್ಕೆ ಸರಿಯಾಗಿ ಲಂಕೆಗೆ ಹೋಗಿ ರಾವಣನನ್ನು ಅವನ ಬಂಧುಗಳೊಡನೆ ಕೊಂದು ಸೀತೆಯನ್ನು ಅಗ್ನಿಯಲ್ಲಿ ಪರೀಕ್ಷೆಯನ್ನು ಮಾಡಿಸಿದನು. ಅಗ್ನಿಯು ಆ ಕಾಲದಲ್ಲಿ ನಿಜವಾದ ಸೀತೆಯನ್ನು ರಾಮನಿಗೆ ತಂದುಕೊಟ್ಟನು. ಛಾಯಾಸೀತೆಯು ಅಗ್ನಿಯನ್ನೂ ರಾಮನನ್ನೂ ಕುರಿತು ವಿನಯದಿಂದ ಈಗ ನಾನು ಮಾಡಬೇಕಾದುದೇನು? ನನಗೊಂದು ಉಪಾಯವನ್ನು ಹೇಳಿ. ಎಂದಳು. ||೪೬-೪೭-೪೮||

ರಾಮನೂ ಅಗ್ನಿಯೂ ಎಲೈ ದೇವಿಯೇ, ನೀನು ಪುಣ್ಯಕರವಾದ ಪುಷ್ಕರ ಕ್ಷೇತ್ರಕ್ಕೆ ಹೋಗಿ ತಪಸ್ಸು ಮಾಡು. ನೀನು ಸ್ವರ್ಗಲಕ್ಷ್ಮಿಯಾಗುವೆ. ಎಂದರು. ||೪೯||

ಛಾಯಾ ಸೀತೆಯು ಈ ಮಾತನ್ನು ಕೇಳಿ ಪುಷ್ಕರ ಕ್ಷೇತ್ರದಲ್ಲಿ ದೇವಮಾನದ ನೂರು ಲಕ್ಷವರ್ಷ ತಪಸ್ಸನ್ನು ಮಾಡಿ ಸ್ವರ್ಗಲಕ್ಷ್ಮಿಯಾದಳು. ಅವಳೇ ಕೆಲವು

ಕೃತೇ ಯುಗೇ ವೇದವತೀ ಕುಶಧ್ವಜಸುತಾ ಶುಭಾ ।
ತ್ರೇತಾಯಾಂ ರಾಮಪತ್ನೀ ಚ ಸೀತೇತಿ ಜನಕಾತ್ಮಜಾ ॥೩೨॥

ತಚ್ಛಾಯಾ ದ್ರೌಪದೀದೇವೀ ದ್ವಾಪರೇ ದ್ರುಪದಾತ್ಮಜಾ ।
ತ್ರಿಹಾಯಣೀ ಚ ಸಾ ಪ್ರೋಕ್ತಾ ವಿದ್ಯಮಾನಾ ಯುಗತ್ರಯೇ ॥೩೩॥

॥ ನಾರದ ಉವಾಚ ॥

ಪ್ರಿಯಾಃ ಪಂಚ ಕಥಂ ತಸ್ಯಾ ಬಭೂವುರ್ಮುನಿಪುಂಗವ ।
ಇತಿಮಚ್ಚಿತ್ತಸಂದೇಹಂ ಭಂಜ ಸಂದೇಹ ಭಂಜನ ॥೩೪॥

॥ ನಾರಾಯಣ ಉವಾಚ ॥

ಲಂಕಾಯಾಂ ವಾಸ್ತವೀ ಸೀತಾ ರಾಮಂ ಸಂಪ್ರಾಪ ನಾರದ ।
ರೂಪಯೌವನಸಂಪನ್ನಾ ಛಾಯಾ ಚ ಬಹುಚಿಂತಯಾ ॥೩೫॥

ರಾಮಾಗ್ನ್ಯೋರಾಜ್ಞಯಾ ತಪ್ತ್ವಾಮುಪಾಸ್ತೇ ಶಂಕರಂ ಪರಂ ।
ಕಾಮಾತುರಾ ಪತಿವ್ಯಗ್ರಾ ಪ್ರಾರ್ಥಯಂತೀ ಪುನಃ ಪುನಃ ॥೩೬॥

---

ಕಾಲವಾದಮೇಲೆ ದ್ರುಪದ ರಾಜನು ಮಾಡಿದ ಯಜ್ಞಕುಂಡದಲ್ಲಿ ಹುಟ್ಟಿ ದ್ರೌಪದೀ ಎಂಬ ಹೆಸರಿನಿಂದ ಪಾಂಡವರ ಪತ್ನಿಯಾದಳು. ॥೩೦-೩೧॥

ಕೃತಯುಗದಲ್ಲಿ ಕುಶಧ್ವಜನ ಮಗಳು ವೇದವತೀ. ತ್ರೇತಾಯುಗದಲ್ಲಿ ಜನಕನ ಮಗಳು ಸೀತೆ ರಾಮನ ಪತ್ನೀ. ಸೀತಾ ಛಾಯೆಯು ದ್ವಾಪರಯುಗದಲ್ಲಿ ದ್ರುಪದನ ಮಗಳು ದ್ರೌಪದೀ ದೇವೀ. ಹೀಗೆ ಮೂರು ಯುಗಗಳಲ್ಲಿಯೂ ಇದ್ದುದರಿಂದ ಲಕ್ಷ್ಮೀ್ಯಕಲಾಂಶಕ್ಕೆ ತ್ರಿಹಾಯಣೀ ಎಂದು ಹೆಸರು. ॥೩೨-೩೩॥

ನಾರದನು, ನಾರಾಯಣಮುನಿಯೇ, ದ್ರೌಪದಿಗೆ ಐವರು ಗಂಡಂದಿರು ಹೇಗಾದರು ? ಈ ನನ್ನ ಮನಸ್ಸಿನ ಸಂದೇಹವನ್ನು ನಿವಾರಣೆ ಮಾಡು. ಎಂದನು. ॥೩೪॥

ನಾರಾಯಣನು ಹೇಳಿದನು— ನಾರದನೇ, ಲಂಕೆಯಲ್ಲಿ ನಿಜವಾದ ಸೀತೆಯು ರಾಮನನ್ನು ಸೇರಿದಳು. ರೂಪ ಮತ್ತು ಯೌವನಗಳಿಂದ ಕೂಡಿದ ಛಾಯಾ ಸೀತೆಯು ಅಗ್ನಿ ರಾಮರ ಅಪ್ಪಣೆಯಿಂದ ಈಶ್ವರನನ್ನು ಕುರಿತು ತಪಸ್ಸುಮಾಡಿ ಕಾಮಾತುರಳಾಗಿ ಪತಿಯ ಆಸೆಯಿಂದ ಪತಿಂದೇಹಿ ಎಂದು ಐದುಬಾರಿ ಶಿವನನ್ನು

ಪತಿಂ ದೇಹಿ ಪತಿಂ ದೇಹಿ ಪತಿಂ ದೇಹಿ ತ್ರಿಲೋಚನ ।
ಪತಿಂ ದೇಹಿ ಪತಿಂ ದೇಹಿ ಪಂಚವಾರಂ ಚಕಾರ ಸಾ ॥೫೭॥

ಶಿವಸ್ತತ್ಪ್ರಾರ್ಥನಾಂ ಶ್ರುತ್ವಾ ಪ್ರಹಸ್ಯ ರಸಿಕೇಶ್ವರಃ ।
ಪ್ರಿಯೇ ತವ ಪ್ರಿಯಾಃ ಪಂಚ ಭವಿಷ್ಯಂತಿ ವರಂ ದದೌ ॥೫೮॥

ತೇನ ಸಾ ಪಾಂಡವಾನಾಂ ಚ ಬಭೂವ ಕಾಮಿನೀ ಪ್ರಿಯಾ ।
ಇತಿ ತೇ ಕಥಿತಂ ಸರ್ವಂ ಪ್ರಸ್ತಾವಂ ವಾಸ್ತವಂ ಶ್ರುಣು ॥೫೯॥

ಅಥ ಸಂಪ್ರಾಪ್ಯ ಲಂಕಾಯಾಂ ಸೀತಾಂ ರಾಮೋ ಮನೋಹರಾಂ ।
ವಿಭೀಷಣಾಯ ತಾಂ ಲಂಕಾಂ ದತ್ವಾಽಯೋಧ್ಯಾಂ ಯಯೌ ಪುನಃ ॥೬೦॥

ಏಕಾದಶಸಹಸ್ರಾಬ್ದಂ ಕೃತ್ವಾ ರಾಜ್ಯಂ ಚ ಭಾರತೇ ।
ಜಗಾಮ ಸರ್ವೈಃ ಲೋಕೈಶ್ಚ ಸಾರ್ಧಂ ವೈಕುಂಠಮೇವ ಚ ॥೬೧॥

ಕಮಲಾಂಶಾ ವೇದವತೀ ಕಮಲಾಯಾಂ ವಿವೇಶ ಸಾ ।
ಕಥಿತಂ ಪುಣ್ಯಮಾಖ್ಯಾನಂ ಪುಣ್ಯದಂ ಪಾಪನಾಶನಂ ॥೬೨॥

---

ಕುರಿತು ಕೇಳಿಕೊಂಡಳು. ಶಿವನು ನಗುತ್ತಾ ನಿನಗೆ ಐವರು ಪತಿಗಳಾಗುವರೆಂದು ವರವನ್ನು ಕೊಟ್ಟನು! ಆದುದರಿಂದ ಅವಳು ಪಂಚಪಾಂಡವರ ಪತ್ನಿಯಾದಳು. ॥೫೫-೫೬-೫೭-೫೮॥

ಈ ರೀತಿಯಾಗಿ ನಿನಗೆ ಎಲ್ಲವನ್ನೂ ಹೇಳಿದೆನು. ನಿಜವಾದ ಸಂಗತಿಯನ್ನು ಕೇಳು. ರಾಮನು ಲಂಕೆಯಲ್ಲಿ ಸೀತೆಯನ್ನು ಪಡೆದು ವಿಭೀಷಣನಿಗೆ ಲಂಕೆಯನ್ನು ಕೊಟ್ಟು ಅಯೋಧ್ಯೆಗೆ ಬಂದು ಹನ್ನೊಂದು ಸಾವಿರ ವರ್ಷ ರಾಜ್ಯಭಾರವನ್ನು ಮಾಡಿ ಸಮಸ್ತ ಜನರಿಂದಲೂ ಕೂಡಿ ವೈಕುಂಠ ಲೋಕಕ್ಕೆ ಹೋದನು. ॥೫೯-೬೦-೬೧॥

ಲಕ್ಷ್ಮಿಯ ಅಂಶಳಾದ ವೇದವತಿಯು ಲಕ್ಷ್ಮಿಯಲ್ಲಿಯೇ ಸೇರಿಕೊಂಡಳು. ನಾಲ್ಕು ವೇದಗಳೂ ಯಾವಳ ನಾಲಿಗೆಯ ತುದಿಯಲ್ಲಿ ಯಾವಾಗಲೂ ಇರುತ್ತಿದ್ದವು! ಆ ಕಾರಣದಿಂದ ಆಕೆಗೆ ವೇದವತೀ ಎಂದು ಹೆಸರಾಯ್ತು. ಪಾಪವನ್ನು ನಾಶಮಾಡಿ

ಸತತಂ ಮೂರ್ತಿಮಂತಶ್ಚ ವೇದಾಶ್ಚತ್ವಾರ ಏವ ಚ ।
ಸಂತಿ ಯಸ್ಯಾಶ್ಚ ಜಿಹ್ವಾಗ್ರೇ ಸಾ ಚ ವೇದವತೀ ಶ್ರುತಾ ॥೬೩॥
ಧರ್ಮಧ್ವಜ ಸುತಾಖ್ಯಾನಂ ನಿಬೋಧ ಕಥಯಾಮಿ ತೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಷೋಡಶೋಽಧ್ಯಾಯಃ

---

ಪುಣ್ಯವನ್ನು ಕೊಡತಕ್ಕ ವೇದವತಿಯ ಚರಿತ್ರೆಯನ್ನು ಹೇಳಿದೆನು. ಇನ್ನು ಧರ್ಮಧ್ವಜನ ಮಗಳ ಕಥೆಯನ್ನು ಹೇಳುವೆನು ಕೇಳು. ॥೬೨-೬೩॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಸಪ್ತದಶೋಽಧ್ಯಾಯಃ ||

### ಹದಿನೇಳನೆಯ ಅಧ್ಯಾಯವು

|| ಶ್ರೀ ನಾರಾಯಣ ಉವಾಚ ||

**ಧರ್ಮಧ್ವಜಸ್ಯ ಪತ್ನೀ ಚ ಮಾಧವೀತಿ ಚ ವಿಶ್ರುತಾ ।**
**ನೃಪೇಣ ಸಾರ್ಧಂ ಸಾಽರಾಮೇ ರೇಮೇ ಚ ಗಂಧಮಾದನೇ ||೧||**

**ಶಯ್ಯಾಂ ರತಿಕರೀಂ ಕೃತ್ವಾ ಪುಷ್ಪಚಂದನಚರ್ಚಿತಾಂ ।**
**ಚಂದನಾಲಿಪ್ತಸರ್ವಾಂಗೀ ಪುಷ್ಪಚಂದನವಾಯುನಾ ||೨||**

**ಸ್ತ್ರೀರತ್ನಮತಿಚಾರ್ವಂಗೀ ರತ್ನಭೂಷಣಭೂಷಿತಾ ।**
**ಕಾಮುಕೀ ರಸಿಕಾ ಸೃಷ್ಟ್ವಾ ರಸಿಕೇನ ಚ ಸಂಯುತಾ ||೩||**

---

ನಾರಾಯಣನು ಹೇಳಿದನು—ಮಾಧವೀ ಎಂದು ಪ್ರಸಿದ್ಧಳಾದ ಧರ್ಮಧ್ವಜನ ಪತ್ನಿಯು ಆ ರಾಜನೊಡನೆ ಗಂಧಮಾದನ ಪರ್ವತದ ಉದ್ಯಾನವನದಲ್ಲಿ ಕ್ರೀಡಿಸುತ್ತಿದ್ದಳು. ||೧||

ಅವಳು ಸುಖಪ್ರದವಾಗಿಯೂ, ಹೂವು, ಗಂಧ, ಇವುಗಳಿಂದ ಅಲಂಕೃತವಾಗಿಯೂ ಇರುವ ಹಾಸಿಗೆಯನ್ನು ಸಿದ್ಧಪಡಿಸಿ ತಾನೂ ಸಹ ಶರೀರಕ್ಕೆಲ್ಲಕ್ಕೂ ಗಂಧವನ್ನು ಲೇಪಿಸಿಕೊಂಡು ಗಂಧ ಹೂಗಳನ್ನು ಧರಿಸಿದವಳಾಗಿ, ||೨||

ಆಭರಣಗಳನ್ನು ಧರಿಸಿದವಳೂ, ಸುಂದರವಾದ ಅವಯವಗಳುಳ್ಳವಳೂ, ಕಾಮವಿಶಿಷ್ಟಳೂ, ಸ್ತ್ರೀಯರಲ್ಲಿ ಶ್ರೇಷ್ಠಳೂ ಆದ ಆ ಸುಂದರಿಯು ರಸಿಕನಾದ ತನ್ನ ಪತಿಯೊಂದಿಗೆ ಕೂಡಿದವಳಾಗಿ ಸುಖಾನುಭವದಲ್ಲಿ ಆಸಕ್ತಳಾದಳು. ||೩||

ಸುರತೇ ವಿರತಿರ್ನಾಸ್ತಿ ತಯೋಸ್ಸುರತಿವಿಜ್ಞಯೋಃ ।
ಗತಂ ದೇವವರ್ಷಶತಂ ನ ಜ್ಞಾತಂ ಚ ದಿವಾನಿಶಂ ॥೪॥

ತತೋ ರಾಜಾ ಮತಿಂ ಪ್ರಾಪ್ಯ ಸುರತಾದ್ವಿರರಾಮ ಚ ।
ಕಾಮುಕೀ ಸುಂದರೀ ಕಿಂಚಿನ್ನ ಚ ತೃಪ್ತಿಂ ಜಗಾಮ ಸಾ ॥೫॥

ದಧಾರ ಗರ್ಭಂ ಸಾ ಸದ್ಯೋ ದೈವಾದಬ್ದಶತಂ ಸತೀ ।
ಶ್ರೀಗರ್ಭಾ ಶ್ರೀಯುತಾ ಸಾ ಚ ಸಂಬಭೂವ ದಿನೇ ದಿನೇ ॥೬॥

ಶುಭೇ ಕ್ಷಣೇ ಶುಭದಿನೇ ಶುಭಯೋಗೇ ಚ ಸಂಯುತೇ ।
ಶುಭಲಗ್ನೇ ಶುಭಾಂಶೇ ಚ ಶುಭಸ್ವಾಮಿಗೃಹಾನ್ವಿತೇ ॥೭॥

ಕಾರ್ತಿಕೀ ಪೂರ್ಣಿಮಾಯಾಂ ತು ಸಿತವಾರೇ ಚ ಪದ್ಮಜ ।
ಸುಷಾವ ಸಾ ಚ ಪದ್ಮಾಂಶಾಂ ಪದ್ಮಿನೀಂ ತಾಂ ಮನೋಹರಾಂ ॥೮॥

---

ಕಾಮಶಾಸ್ತ್ರಕುಶಲರಾದ ಅವರಿಬ್ಬರಿಗೂ ಕ್ರೀಡೆಯಲ್ಲಿ ತೃಪ್ತಿಯಿಂದ ಮುಗಿಯುವಿಕೆಯೇ ಉಂಟಾಗಲಿಲ್ಲ. ಹೀಗೆಯೇ ದೇವಮಾನದ ನೂರು ವರ್ಷಗಳು ಕಳೆದು ಹೋದುವು. ಅವರಿಗೆ ಹಗಲು, ರಾತ್ರಿ ಇವುಗಳ ಭೇದವೂ ಸಹ ತಿಳಿಯಲಿಲ್ಲ. ॥೪॥

ಆಗ ರಾಜನು ವಿವೇಕಬುದ್ಧಿಯನ್ನು ಹೊಂದಿ ಕ್ರೀಡೆಯಿಂದ ನಿವೃತ್ತನಾದನು. ವಿಶೇಷವಾದ ಕಾಮಬುದ್ಧಿಯುಳ್ಳ ಆ ಸುಂದರಿಯು ಮಾತ್ರ ಕ್ರೀಡೆಯಿಂದ ಸ್ವಲ್ಪವೂ ತೃಪ್ತಳಾಗಲಿಲ್ಲ. ॥೫॥

ನೂರುವರ್ಷಗಳು ಕಳೆದ ತತ್‌ಕ್ಷಣದಲ್ಲೇ ಆ ಸುಂದರಿಯು ಗರ್ಭವನ್ನು ಧರಿಸಿದಳು. ಲಕ್ಷ್ಮಿಯನ್ನೇ ಗರ್ಭದಲ್ಲಿ ಧರಿಸಿದವಳಾಗಿ ಅವಳು ಪ್ರತಿದಿವಸದಲ್ಲೂ ವಿಶೇಷವಾದ ಕಾಂತಿಯನ್ನು ಹೊಂದಿದಳು. ॥೬॥

ಕಮಲದಲ್ಲಿ ಹುಟ್ಟಿದ ಬ್ರಹ್ಮನ ಮಗನಾದ ನಾರದನೇ, ನಿರ್ದುಷ್ಟವಾದ ದಿವಸ, ಕಾಲ, ಯೋಗ, ಲಗ್ನ, ಅಂಶದಲ್ಲಿ ಆದಿತ್ಯಾದಿನವಗ್ರಹಗಳೂ ಶುಭಸ್ಥಾನವನ್ನು ಹೊಂದಿರುವಾಗ ಕಾರ್ತಿಕಮಾಸದ ಪೂರ್ಣಿಮಾ ಶುಕ್ರವಾರದಲ್ಲಿ ಆ ಸುಂದರಿಯು ಲಕ್ಷ್ಮಿಯ ಅಂಶವಿಶಿಷ್ಟಳೂ ಪದ್ಮಿನೀ ಸ್ತ್ರೀಜಾತಿಗೆ ಸೇರಿದವಳೂ ಲಾವಣ್ಯವತಿಯೂ ಆದ ಸ್ತ್ರೀಶಿಶುವನ್ನು ಪ್ರಸವಿಸಿದಳು. ॥೭-೮॥

ಶರತ್ಪಾರ್ವಣಚಂದ್ರಾಸ್ಯಾಂ ಶರತ್ಪಂಕಜಲೋಚನಾಂ ।
ಪಕ್ವಬಿಂಬಾಧರೋಷ್ಠೀಂ ಚ ಪಶ್ಯಂತೀಂ ಸಸ್ಮಿತಾಂ ಗೃಹಂ ॥೯॥

ಹಸ್ತಪಾದತಲಾರಕ್ತಾಂ ನಿಮ್ನನಾಭಿಂ ಮನೋರಮಾಂ ।
ತದಧಸ್ತ್ರಿವಳೀಯುಕ್ತಾಂ ನಿತಂಬಯುಗವರ್ತುಳಾಂ ॥೧೦॥

ಶೀತೇ ಸುಖೋಷ್ಣಸರ್ವಾಂಗೀಂ ಗ್ರೀಷ್ಮೇ ಚ ಸುಖಶೀತಲಾಂ ।
ಶ್ಯಾಮಾಂ ಸುಕೇಶೀಂ ರುಚಿರಾಂ ನ್ಯಗ್ರೋಧಪರಿಮಂಡಲಾಂ ॥೧೧॥

ಪೀತಚಂಪಕವರ್ಣಾಭಾಂ ಸುಂದರೀಷ್ವೇವ ಸುಂದರೀಂ ।
ನರಾ ನಾರ್ಯಶ್ಚ ತಾಂ ದೃಷ್ಟ್ವಾ ತುಲನಾಂ ದಾತುಮಕ್ಷಮಾಃ ॥೧೨॥

ತೇನ ನಾಮ್ನಾ ಚ ತುಲಸೀಂ ತಾಂ ವದಂತಿ ಮನೀಷಿಣಃ ।
ಸಾ ಚ ಭೂಮಿಷ್ಠಮಾತ್ರೇಣ ಯೋಗ್ಯಾ ಸ್ತ್ರೀ ಪ್ರಕೃತಿರ್ಯಥಾ ॥೧೩॥

---

ಶರತ್ಕಾಲ ಪೂರ್ಣಿಮೆಯ ಚಂದ್ರನಂತೆ ಮುಖವುಳ್ಳವಳೂ ಶರದೃತುವಿನಲ್ಲಿರುವ ಕಮಲದಂತೆ ಕಣ್ಣುಳ್ಳವಳೂ ಸುಪಕ್ವವಾದ ತೊಂಡೆಹಣ್ಣಿನಂತೆ ತುಟಿಗಳುಳ್ಳವಳೂ, ಆಶ್ಚರ್ಯದಿಂದ ತಾನಿರುವ ಮನೆಯನ್ನು ನೋಡುತ್ತಿರುವಳೂ, ॥೯॥

ಕೈಕಾಲುಗಳ ಒಳಭಾಗದಲ್ಲಿ ಕೆಂಪು ಬಣ್ಣವುಳ್ಳವಳೂ, ಆಳವಾದ ನಾಭಿ ಪ್ರದೇಶವುಳ್ಳವಳೂ, ಅದರ ಕೆಳಭಾಗದಲ್ಲಿ ತ್ರಿವಳಿಯುಳ್ಳವಳೂ, ದುಂಡಾದ ಎರಡು ನಿತಂಬವುಳ್ಳವಳೂ, ಸುಂದರಾಂಗಿಯೂ, ॥೧೦॥

ಶೀತಕಾಲದಲ್ಲಿ ಹಿತವಾದ ಉಷ್ಣವುಳ್ಳ ಸರ್ವಾವಯವಗಳುಳ್ಳವಳೂ, ಬೇಸಿಗೆಯಲ್ಲಿ ಹಿತವಾದ ಶೈತ್ಯದಿಂದ ಕೂಡಿದ ಶರೀರವುಳ್ಳವಳೂ, ನೀಲವರ್ಣವಾದ ದೇಹ ಕಾಂತಿಯುಳ್ಳವಳೂ, ಮನೋಹರವಾದ ಆಕಾರ ಉಳ್ಳವಳೂ, ಆಲದ ಮರದ ಬಿಳಲುಗಳಂತೆ ದೀರ್ಘವಾದ ಕೇಶಸಮೂಹಗಳುಳ್ಳವಳೂ, ಪೀತವರ್ಣದ ಸಂಪಿಗೆಯ ಹೂವಿನಂತೆ ಕಾಂತಿಯುಳ್ಳ, ಸುಂದರಿಯರಲ್ಲಿ ಅತಿ ಸುಂದರಿಯಾದ ಆ ತುಲಸೀ ದೇವಿಯನ್ನು ಸ್ತ್ರೀಯರೂ ಪುರುಷರೂ ನೋಡಿ ಅವಳಿಗೆ ಹೋಲಿಕೆಯಾದ ಉಪಮಾನವನ್ನು ಹೇಳಲು ಶಕ್ತರಾಗಲಿಲ್ಲ! ॥೧೧-೧೨॥

ಅವಳನ್ನು ವಿದ್ವಾಂಸರು ಉಪಮಾನಗಳನ್ನೆಲ್ಲವನ್ನೂ ತಿರಸ್ಕರಿಸುವಂತೆ ಮೇಲಾಗಿರುವುದರಿಂದ ತುಲಸೀ ಎಂಬ ಹೆಸರಿನಿಂದ ಕರೆಯುವರು. ಅವಳು ಭೂಮಿಯಲ್ಲಿ ಜನಿಸಿದಾಗಿನಿಂದಲೇ ಪ್ರಕೃತಿದೇವಿಯಂತೆ ಮನೋಹರಳಾಗಿದ್ದಳು. ॥೧೩॥

ಸರ್ವೈರ್ನಿಷಿದ್ಧಾ ತಪಸೇ ಜಗಾಮ ಬದರೀವನಂ।
ತತ್ರ ದೇವಾಬ್ದಲಕ್ಷಂ ಚ ಚಕಾರ ಪರಮಂ ತಪಃ ॥೧೪॥

ಮನಸಾ ನಾರಾಯಣಃ ಸ್ವಾಮೀ ಭವಿತೇತಿ ಚ ನಿಶ್ಚಿತಾ ।
ಗ್ರೀಷ್ಮೇ ಪಂಚತಪಾಃ ಶೀತೇ ತೋಯವಸ್ತ್ರಾ ಚ ಪ್ರಾವೃಷಿ ॥೧೫॥

ಆಸನಸ್ಥಾ ವೃಷ್ಟಿಧಾರಾಃ ಸಹಂತೀತಿ ದಿವಾನಿಶಂ ।
ವಿಂಶತ್ಸಹಸ್ರವರ್ಷಂ ಚ ಫಲತೋಯಾಶನಾ ಚ ಸಾ ॥೧೬॥

ತ್ರಿಂಶತ್ಸಹಸ್ರ ವರ್ಷಂ ಚ ಪತ್ರಾಹಾರಾ ತಪಸ್ವಿನೀ ।
ಚತ್ವಾರಿಂಶತ್ಸಹಸ್ರಾಬ್ದಾ ವಾಯ್ವಾಹಾರಾ ಕೃಶೋದರೀ ॥೧೭॥

ತತೋ ದಶಸಹಸ್ರಾಬ್ದಂ ನಿರಾಹಾರಾ ಬಭೂವ ಸಾ ।
ನಿರ್ಲಕ್ಷ್ಯಾಂ ಚೈಕಪಾದಸ್ಥಾಂ ದೃಷ್ಟ್ವಾ ತಾಂ ಕಮಲೋದ್ಭವಃ ॥೧೮॥

---

ಆ ತುಲಸೀದೇವಿಯು ತಪಸ್ಸನ್ನು ಮಾಡಬೇಡವೆಂದು ಎಲ್ಲರಿಂದಲೂ ತಡೆಯಲ್ಪಟ್ಟರೂ ಕೂಡ ಅವರ ಮಾತನ್ನು ಲಕ್ಷಿಸದೆ ತಪಸ್ಸನ್ನು ಮಾಡಲು ಬದರಿಕಾರಣ್ಯಕ್ಕೆ ಹೊರಟು ಹೋದಳು. ಅಲ್ಲಿ ದೇವತೆಗಳ ಗಣನಾಪ್ರಕಾರವಾಗಿ ಒಂದು ಲಕ್ಷ ವರ್ಷಗಳವರೆಗೂ ಕಠಿಣವಾದ ತಪಸ್ಸನ್ನು ಆಚರಿಸಿದಳು. ॥೧೪॥

ತನ್ನ ಮನಸ್ಸಿನಲ್ಲಿ ಶ್ರೀಮನ್ನಾರಾಯಣನನ್ನೇ ಪತಿಯನ್ನಾಗಿ ಹೊಂದಬೇಕೆಂಬ ನಿಶ್ಚಯ ಉಳ್ಳವಳಾಗಿ ಗ್ರೀಷ್ಮಕಾಲದಲ್ಲಿ ಪಂಚಾಗ್ನಿಮಧ್ಯದಲ್ಲಿಯೂ ಶೀತಕಾಲದಲ್ಲಿ ಜಲಮಧ್ಯದಲ್ಲಿ ಒದ್ದೆಯಾದ ಬಟ್ಟೆಯನ್ನು ಧರಿಸಿದವಳಾಗಿಯೂ ಇದ್ದುಕೊಂಡು॥೧೫॥

ಯೋಗಶಾಸ್ತ್ರದಲ್ಲಿ ಹೇಳಿರುವ ಆಸನದಲ್ಲಿ ಕುಳಿತುಕೊಂಡು ಅಹೋರಾತ್ರಿಯಲ್ಲಿಯೂ ವರ್ಷ ಜಲಧಾರಾ ಸಮೂಹವನ್ನು ಸಹಿಸಿಕೊಂಡು ಹಣ್ಣು ನೀರುಗಳನ್ನೇ ತಿನ್ನುತ್ತಾ ಇಪ್ಪತ್ತುಸಾವಿರ ವರ್ಷಗಳನ್ನು ತಪಸ್ಸಿನಲ್ಲಿ ಕಳೆದಳು. ॥೧೬॥

ಆಮೇಲೆ ಮೂವತ್ತುಸಾವಿರ ವರ್ಷಗಳವರೆಗೂ ಮರದ ಎಲೆಗಳನ್ನೇ ತಿನ್ನುತ್ತಾ, ಬಳಿಕ ನಲವತ್ತು ಸಾವಿರ ವರ್ಷಗಳವರೆಗೂ ಗಾಳಿಯ ಸೇವನೆಯಿಂದಲೇ ಶರೀರವನ್ನು ಧಾರಣೆಮಾಡುತ್ತಾ, ಆ ಕೃಶಾಂಗಿಯು ತಪಸ್ಸನ್ನು ಆಚರಿಸಿದಳು. ॥೧೭॥

ಆ ಮೇಲೆ ಹತ್ತುಸಾವಿರ ವರ್ಷಗಳವರೆಗೂ ಗಾಳಿಯ ಸೇವನೆಯಿಂದಲೇ, ಯಾವ ಆಹಾರವನ್ನೂ ತೆಗೆದುಕೊಳ್ಳದೆ, ಯಾವ ಕಡೆಗೂ ದೃಷ್ಟಿಯನ್ನು ಕೊಡದೆ,

ಸಮಾಯಯೌ ವರಂ ದಾತುಂ ಪರಂ ಬದರಿಕಾಶ್ರಮಂ ।
ಚತುರ್ಮುಖಂ ಚ ಸಾ ದೃಷ್ಟ್ವಾ ನನಾಮ ಹಂಸವಾಹನಂ ॥೧೯॥

॥ ಬ್ರಹ್ಮೋವಾಚ ॥

ತಾಮುವಾಚ ಜಗತ್ಕರ್ತಾ ವಿಧಾತಾ ಜಗತಾಮಪಿ ।
ವರಂ ವೃಣೀಷ್ವ ತುಲಸಿ ಯತ್ತೇ ಮನಸಿ ವಾಂಛಿತಂ ॥೨೦॥

ಹರಿಭಕ್ತಿಂ ಹರೇರ್ದಾಸ್ಯಂ ಅಜರಾಮರತಾಮಪಿ ।

॥ ತುಲಸ್ಯುವಾಚ ॥

ಶೃಣು ತಾತ ಪ್ರವಕ್ಷ್ಯಾಮಿ ಯನ್ಮೇ ಮನಸಿ ವಾಂಛಿತಂ ॥೨೧॥

ಸರ್ವಜ್ಞಸ್ಯಾಪಿ ಪುರತಃ ಕಾಲಜ್ಜಾ ಮಮ ಸಾಂಪ್ರತಂ ।
ಅಹಂ ತು ತುಲಸೀ ಗೋಪೀ ಗೋಲೋಕೇಽಹಂ ಸ್ಥಿತಾ ಪುರಾ ॥೨೨॥

---

ಒಂದೇ ಕಾಲಿನಲ್ಲಿ ನಿಂತುಕೊಂಡು ತಪಸ್ಸುಮಾಡುತ್ತಿರುವ ಅವಳನ್ನು ನೋಡಿ ಮೆಚ್ಚಿದ ಬ್ರಹ್ಮನು, ॥೧೮॥

ವರಪ್ರದಾನಮಾಡಲು ಶ್ರೇಷ್ಠವಾದ ಬದರಿಕಾಶ್ರಮಕ್ಕೆ ಬಂದನು. ಹಂಸದ ಮೇಲೆ ಕುಳಿತಿರುವ ಚತುರ್ಮುಖ ಬ್ರಹ್ಮನನ್ನು ನೋಡಿ, ಆ ತುಲಸೀದೇವಿಯು ಅವನಿಗೆ ನಮಸ್ಕರಿಸಿದಳು. ॥೧೯॥

ಪ್ರಪಂಚದ ಸೃಷ್ಟಿಕರ್ತನೂ ನಿಯಾಮಕನೂ ಆದ ಬ್ರಹ್ಮನೂ ಅವಳನ್ನು ಕುರಿತು ಹೀಗೆ ಹೇಳಿದನು.

ಬ್ರಹ್ಮನು ಹೇಳಿದನು— ಎಲೈ ತುಲಸಿಯೇ, ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳು. ವಿಷ್ಣುವಿನಲ್ಲಿ ಭಕ್ತಿಯನ್ನೂ ದಾಸ್ಯಭಾವವನ್ನೂ, ಮುಪ್ಪು ಮರಣಗಳಿಲ್ಲದಿರುವಿಕೆಯನ್ನೂ ನಿನಗೆ ಬೇಕಾದರೆ ಕೊಡುವೆನು. ॥೨೦॥

ತುಲಸಿಯು ಹೇಳಿದಳು— ಓ ತಂದೆಯೇ, ನನ್ನ ಮನಸ್ಸಿನಲ್ಲಿರುವುದನ್ನು ಹೇಳುತ್ತೇನೆ, ಕೇಳು. ಎಲ್ಲವನ್ನೂ ತಿಳಿದಿರುವ ನಿನ್ನೆದುರಿಗೆ ನನಗೆ ನಾಚಿಕೆಯೂ ಯುಕ್ತವಾಗಿ ಇಲ್ಲ. ಪೂರ್ವದಲ್ಲಿ ಗೋಪಿಯಾದ ನಾನು ಗೋಲೋಕದಲ್ಲಿದ್ದು ಕೊಂಡು, ॥೨೧-೨೨॥

ಕೃಷ್ಣಪ್ರಿಯಾ ಕಿಂಕರೀ ಚ ತದಂಶಾ ತತ್ಸಖೀ ಪ್ರಿಯಾ ।
ಗೋವಿಂದರತಿಸಂಭುಕ್ತಾಮತೃಪ್ತಾಂ ಮಾಂ ಚ ಮೂರ್ಛಿತಾಂ ॥೨೩॥

ರಾಸೇಶ್ವರೀ ಸಮಾಗತ್ಯ ದದರ್ಶ ರಾಸಮಂಡಲೇ ।
ಗೋವಿಂದಂ ಭರ್ತ್ಸಯಾಮಾಸ ಮಾಂ ಶಶಾಪ ರುಷಾಽನ್ವಿತಾ ॥೨೪॥

ಯಾಹಿ ತ್ವಂ ಮಾನವೀಂ ಯೋನಿಮಿತ್ಯೇವಂ ಚ ಶಶಾಪ ಹ ।
ಮಾಮುವಾಚ ಸ ಗೋವಿಂದೋ ಮದಂಶಂ ಚ ಚತುರ್ಭುಜಂ ॥೨೫॥

ಲಭಿಷ್ಯಸಿ ತಪಸ್ತಪ್ತ್ವಾ ಭಾರತೇ ಬ್ರಹ್ಮಣೋ ವರಾತ್ ।
ಇತ್ಯೇವಮುಕ್ತ್ವಾ ದೇವೇಶೋಽಪ್ಯಂತರ್ಧಾನಂ ಚಕಾರ ಸಃ ॥೨೬॥

ದೇವ್ಯಾ ಭಿಯಾ ತನುಂ ತ್ಯಕ್ತ್ವಾ ಪ್ರಾಪ್ತಂ ಜನ್ಮ ಗುರೋ ಭುವಿ ।
ಅಹಂ ನಾರಾಯಣಂ ಕಾಂತಂ ಶಾಂತಂ ಸುಂದರವಿಗ್ರಹಂ ॥೨೭॥
ಸಾಂಪ್ರತಂ ತಂ ಪತಿಂ ಲಬ್ಧುಂ ವರಯೇ ತ್ವಂ ಚ ದೇಹಿ ಮೇ ।

---

ಕೃಷ್ಣನಿಗೆ ಪ್ರಿಯಳಾದ ಅವನನ್ನು ಸೇವಿಸುತ್ತಾ ಅವನ ಅಂಶವನ್ನು ಹೊಂದಿ ಅವನ ಸಖಿಯರಿಗೂ ಬೇಕಾದವಳಾಗಿ ಕೃಷ್ಣನ ಸಹವಾಸದಲ್ಲಿದ್ದು ಅದರಲ್ಲಿ ತೃಪ್ತಳಾಗದೆ ಮೂರ್ಛೆ ಹೊಂದಿದ ನನ್ನನ್ನು ನೋಡಿ ॥೨೩॥

ರಾಧೆಯು ರಾಸಮಂಡಲದಲ್ಲಿ ಸುಖಪರವಶಳಾಗಿದ್ದ ನನ್ನನ್ನು ಕಂಡು, ಕೃಷ್ಣನನ್ನು ನಿಂದಿಸಿ, ಕೋಪದಿಂದ ನನಗೂ ಶಾಪವನ್ನು ಕೊಟ್ಟಳು. "ನೀನು ಮನುಷ್ಯಜನ್ಮವನ್ನು ಹೊಂದು," ಎಂದು ಶಪಿಸಿದಳು. ಕೃಷ್ಣನೂ ಸಹ ನನ್ನನ್ನು ಕುರಿತು "ನೀನು ನಾಲ್ಕು ಭುಜಗಳುಳ್ಳ ನನ್ನ ಅಂಶದ ಪುರುಷನನ್ನು ಪತಿಯನ್ನಾಗಿ ಹೊಂದುವೆ." ಎಂದು ಹೇಳಿದನು. ॥೨೪-೨೫॥

ಭರತ ವರ್ಷದಲ್ಲಿ ನೀನು ತಪಸ್ಸನ್ನು ಆಚರಿಸಿ ಬ್ರಹ್ಮನ ವರದಿಂದ ಅಂತಹ ಪುರುಷನನ್ನು ಹೊಂದುವೆ. ಎಂದು ಹೇಳಿ, ದೇವತೆಗಳಿಗೆಲ್ಲರಿಗೂ ಒಡೆಯನಾದ ಕೃಷ್ಣನು ಅದೃಶ್ಯನಾದನು. ॥೨೬॥

ಓ ಸ್ವಾಮಿಯೇ, ರಾಧೆಯ ಭಯದಿಂದ ಶರೀರವನ್ನು ತ್ಯಜಿಸಿ ನಾನು ಭೂಲೋಕದಲ್ಲಿ ಹುಟ್ಟಿದೆನು. ನಾನು ಮನೋಹರನೂ ಶಾಂತಮೂರ್ತಿಯೂ

॥ ಬ್ರಹ್ಮೋವಾಚ ॥

ಸುದಾಮೋ ನಾಮ ಗೋಪಶ್ಚ ಶ್ರೀಕೃಷ್ಣಾಂಗಸಮುದ್ಭವಃ ॥೨೮॥

ತದಂಶಶ್ಚಾತಿ ತೇಜಸ್ವೀ ಲೇಭೇ ಜನ್ಮ ಚ ಭಾರತೇ ।
ಸಾಂಪ್ರತಂ ರಾಧಿಕಾಶಾಪಾದ್ದನುವಂಶಸಮುದ್ಭವಃ ॥೨೯॥

ಶಂಖಚೂಡೇತಿ ವಿಖ್ಯಾತಃ ತ್ರೈಲೋಕ್ಯೇ ನ ಚ ತತ್ಸಮಃ ।
ಗೋಲೋಕೇ ತ್ವಾಂ ಪುರಾ ದೃಷ್ಟ್ವಾ ಕಾಮೋನ್ಮಥಿತಮಾನಸಃ ॥೩೦॥

ವಿಲಂಭಿತುಂ ನ ಶಶಾಕ ರಾಧಿಕಾಯಾಃ ಪ್ರಭಾವತಃ ।
ಸ ಚ ಜಾತಿಸ್ಮರಸ್ತಸ್ಮಾತ್ಸುಧಾಮೋಽಭೂಚ್ಚ ಸಾಗರೇ ॥೩೧॥

ಜಾತಿಸ್ಮರಾ ತ್ವಮಪಿ ಸಾ ಸರ್ವಂ ಜಾನಾಸಿ ಸುಂದರೀ ।
ಅಧುನಾ ತಸ್ಯ ಪತ್ನೀ ತ್ವಂ ಸಂಭವಿಷ್ಯಸಿ ಶೋಭನೇ ॥೩೨॥

---

ಸುಂದರವಾದ ಆಕಾರವುಳ್ಳವನೂ ಆದ ಶ್ರೀ ಕೃಷ್ಣನನ್ನು ಪತಿಯನ್ನಾಗಿ ಹೊಂದಲು ಇಚ್ಛಿಸುತ್ತಿರುವೆನು. ನನಗೆ ಈ ವರವನ್ನು ಕೊಡು. ಎಂದಳು. ॥೨೭॥

ಬ್ರಹ್ಮನು ಹೇಳಿದನು— ಓ ತುಲಸಿಯೇ, ಕೃಷ್ಣನ ಶರೀರದಿಂದ ಹುಟ್ಟಿದ ಸುಧಾಮನೆಂಬ ಗೋಪನಿರುವನು. ಅವನು ಕೃಷ್ಣನ ಅಂಶದವನು. ಬಹಳ ತೇಜಸ್ವಿಯೂ ಆಗಿರುವನು. ರಾಧೆಯ ಶಾಪದಿಂದ ದನುವಂಶದಲ್ಲಿ ಹುಟ್ಟಿ ಭಾರತದಲ್ಲಿ ಜನ್ಮವನ್ನು ಪಡೆದಿರುವನು. ॥೨೮-೨೯॥

ಅವನು ಶಂಖಚೂಡನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವನು. ಮೂರು ಲೋಕಗಳಲ್ಲೂ ಅವನಿಗೆ ಸಮಾನರಾದವರು ಯಾರೂ ಇಲ್ಲ. ಅವನು ಹಿಂದೆ ಗೋಲೋಕದಲ್ಲಿ ನಿನ್ನನ್ನು ನೋಡಿ ಹೆಚ್ಚಾದ ಕಾಮವುಳ್ಳ ಮನಸ್ಸುಳ್ಳವನಾಗಿದ್ದರೂ, ॥೩೦॥

ರಾಧೆಯ ಪ್ರಭಾವದಿಂದ ನಿನ್ನನ್ನು ಆಲಿಂಗಿಸಲು ಶಕ್ತನಾಗಲಿಲ್ಲ. ಅವನು ತನ್ನ ಹಿಂದಿನ ಜನ್ಮದ ಸ್ಮರಣೆಯುಳ್ಳವನಾದುದರಿಂದ ಸುಧಾಮನೆಂದು ಹೆಸರಾದನು. ॥೩೧॥

ಎಲೈ ಸುಂದರಿಯೇ, ನೀನೂ ಕೂಡ ಹಿಂದಿನ ಜನ್ಮದ ಸ್ಮರಣೆಯುಳ್ಳವಳಾದುದರಿಂದ ಎಲ್ಲವನ್ನೂ ತಿಳಿದಿರುವೆ. ಈಗ ನೀನು ಅವನಿಗೆ ಪತ್ನಿಯಾಗು. ॥೩೨॥

ಪಶ್ಚಾನ್ನಾರಾಯಣಾಂಶಂ ತಂ ಕಾಂತಮೇವ ವರಿಷ್ಯಸಿ ।
ಶಾಪಾನ್ನಾರಾಯಣಸ್ಯೈವ ಕಲಯಾ ದೈವಯೋಗತಃ ॥೩೩॥

ಭವಿಷ್ಯಸಿ ವೃಕ್ಷರೂಪಾ ತ್ವಂ ಪೂತಾ ವಿಶ್ವಪಾವನೀ ।
ಪ್ರಧಾನಾ ಸರ್ವಪುಷ್ಪೇಷು ವಿಷ್ಣುಪ್ರಾಣಾಧಿಕಾ ಭವೇಃ ॥೩೪॥

ತ್ವಯಾ ವಿನಾ ಚ ಸರ್ವೇಷಾಂ ಪೂಜಾ ಚ ವಿಫಲಾ ಭವೇತ್ ।
ವೃಂದಾವನೇ ವೃಕ್ಷರೂಪಾ ನಾಮ್ನಾ ವೃಂದಾವನೀತಿ ಚ ॥೩೫॥

ತ್ವತ್ಪತ್ರೈಃ ಗೋಪಿಗೋಪಾಶ್ಚ ಪೂಜಯಿಷ್ಯಂತಿ ಮಾಧವಂ ।
ವೃಕ್ಷಾಧಿದೇವೀರೂಪೇಣ ಸಾರ್ಧಂ ಕೃಷ್ಣೇನ ಸಂತತಂ ॥೩೬॥

ವಿಹರಿಷ್ಯಸಿ ಗೋಪೇನ ಸ್ವಚ್ಛಂದಂ ಮದ್ವರೇಣ ಚ ।
ಇತ್ಯೇವಂ ವಚನಂ ಶ್ರುತ್ವಾ ಸಸ್ಮಿತಾ ಹೃಷ್ಟಮಾನಸಾ ॥೩೭॥

---

ಅನಂತರದಲ್ಲಿ ಶ್ರೀಮನ್ನಾರಾಯಣನ ಅಂಶರೂಪನಾದ ಶಂಖಚೂಡನನ್ನೇ ಪತಿಯನ್ನಾಗಿ ಪಡೆ. ಶ್ರೀಕೃಷ್ಣನ ಶಾಪದಿಂದಲೂ ದೈವೇಚ್ಛೆಯ ಪ್ರಾಬಲ್ಯದಿಂದಲೂ, ನೀನು ವೃಕ್ಷರೂಪವನ್ನು ಹೊಂದಿ ಎಲ್ಲ ಜನರನ್ನೂ ಶುದ್ಧಿಗೊಳಿಸುತ್ತಾ, ಹೂವುಗಳಲ್ಲೆಲ್ಲಾ ಅತಿ ಶ್ರೇಷ್ಠಳಾಗಿ ಕೃಷ್ಣನಿಗೆ ಪ್ರಾಣಕ್ಕಿಂತಲೂ ಹೆಚ್ಚಾದವಳಾಗಿರುವೆ. ॥೩೩-೩೪॥

ನಿನ್ನ ಸಂಬಂಧವಿಲ್ಲದೆ ಮಾಡಿದ ಪೂಜೆಯು ವ್ಯರ್ಥವಾಗುವುದೇ ಸರಿ. ಬೃಂದಾವನದಲ್ಲಿ ವೃಕ್ಷರೂಪಳಾಗಿರುತ್ತಾ ನಿನಗೆ ಬೃಂದಾವನೀ ಎಂಬ ಹೆಸರು ಬರುವುದು. ॥೩೫॥

ನಿನ್ನ ವೃಕ್ಷದ ಎಲೆಗಳಿಂದ ಗೋಪಸ್ತ್ರೀಪುರುಷರು ಕೃಷ್ಣನನ್ನು ಪೂಜಿಸುವರು. ತುಲಸೀ ವೃಕ್ಷದ ಅಧಿದೇವತೆಯಾದ ಸ್ತ್ರೀರೂಪದಿಂದಿರುವ ನೀನು ಕೃಷ್ಣನಿಂದೊಡಗೂಡಿ ಗೋಪನಾದ ಸುದಾಮನ ಜೊತೆಯಲ್ಲಿ ಸಹ ಯಥೇಚ್ಛೆಯಿಂದ ನನ್ನ ವರಪ್ರಭಾವದಿಂದ ವಿಹಾರಮಾಡು. ಹೀಗೆ ಹೇಳಿದ ಮಾತನ್ನು ಕೇಳಿ ತುಳಸಿಯು ಮಂದಹಾಸದಿಂದ ಸಂತೋಷಹೊಂದಿ ॥೩೬-೩೭॥

ಪ್ರಣನಾಮ ಚ ಬ್ರಹ್ಮಾಣಂ ತಂ ಚ ಕಿಂಚಿದುವಾಚ ಸಾ ।

|| ತುಲಸ್ಯುವಾಚ ||

ಯಥಾ ಮೇ ದ್ವಿಭುಜೇ ಕೃಷ್ಣೇ ವಾಂಛಾ ಚ ಶ್ಯಾಮಸುಂದರೇ ||೩೮||

ಸತ್ಯಂ ಬ್ರವೀಮಿ ಹೇ ತಾತ ನ ತಥಾ ಚ ಚತುರ್ಭುಜೇ ।
ಅತೃಪ್ತಾಽಹಂ ಚ ಗೋವಿಂದೇ ದೈವಾಚ್ಛೃಂಗಾರಭಂಗತಃ ||೩೯||

ಗೋವಿಂದಸ್ಯೈವ ವಚನಾತ್ಪ್ರಾರ್ಥಯಾಮಿ ಚತುರ್ಭುಜಂ ।
ತ್ವತ್ಪ್ರಸಾದೇನ ಗೋವಿಂದಂ ಪುನರೇವ ಸುದುರ್ಲಭಂ ||೪೦||

ಧ್ರುವಮೇವ ಲಭಿಷ್ಯಾಮಿ ರಾಧಾಭೀತಿಂ ಪ್ರಮೋಚಯ ।

|| ಬ್ರಹ್ಮೋವಾಚ ||

ಗೃಹಾಣ ರಾಧಿಕಾಮಂತ್ರಂ ದದಾಮಿ ಷೋಡಶಾಕ್ಷರಂ ||೪೧||

ತಸ್ಯಾಶ್ಚ ಪ್ರಾಣತುಲ್ಯಾ ತ್ವಂ ಮದ್ವರೇಣ ಭವಿಷ್ಯಸಿ ।
ಶೃಂಗಾರಂ ಯುವಯೋರ್ಗೋಪ್ಯಂ ನ ಜ್ಞಾಸ್ಯತಿ ಚ ರಾಧಿಕಾ ||೪೨||

---

ತುಲಸಿಯು ಬ್ರಹ್ಮನಿಗೆ ನಮಸ್ಕರಿಸಿ ಒಂದು ಮಾತನ್ನು ಹೇಳಿದಳು. ಓ ತಂದೆಯೇ! ನನಗೆ ನೀಲವರ್ಣವುಳ್ಳ ಸುಂದರನಾದ ಎರಡು ಭುಜಗಳುಳ್ಳ ಕೃಷ್ಣನಲ್ಲಿ ಹೇಗೆ ಅಪೇಕ್ಷೆಯಿದೆಯೋ ಹಾಗೆ ಚತುರ್ಭುಜಗಳುಳ್ಳ ಶಂಖಚೂಡನಲ್ಲಿ ಅಪೇಕ್ಷೆಯಿಲ್ಲ. ನಾನು ನಿಜವಾಗಿಯೂ ಹೇಳುವೆನು ಕೇಳು. ಕೃಷ್ಣನ ಸಹವಾಸ ಸೌಖ್ಯವು ನನಗೆ ಇನ್ನೂ ಸಾಲದೆ ದೈವೇಚ್ಛೆಯಿಂದ ಅದಕ್ಕೆ ಭಂಗವು ಬಂದಿರುವುದು. ||೩೮-೩೯||

ಕೃಷ್ಣನ ಮಾತಿನಂತೆಯೇ ಚತುರ್ಭುಜನಾದ ಶಂಖಚೂಡನಲ್ಲೂ ಸಹ ನನ್ನ ಅಪೇಕ್ಷೆಯನ್ನು ತಿಳಿಸಿ ನಿನ್ನ ಅನುಗ್ರಹದಿಂದ ಹೊಂದಲಸಾಧ್ಯನಾದ ಕೃಷ್ಣನನ್ನೇ ಖಂಡಿತವಾಗಿಯೂ ಹೊಂದುವೆನು. ಆದರೆ ರಾಧೆಯಿಂದ ಭಯವನ್ನು ಮಾತ್ರ ತಪ್ಪಿಸು. ಎಂದಳು. ||೪೦||

ಬ್ರಹ್ಮನು ಹೇಳಿದನು—ಹದಿನಾರು ಅಕ್ಷರವುಳ್ಳ ರಾಧಾಮಂತ್ರವನ್ನು ನಿನಗೆ ಉಪದೇಶಮಾಡುತ್ತೇನೆ. ಅದನ್ನು ಗ್ರಹಣ ಮಾಡು. ನನ್ನ ಅನುಗ್ರಹದಿಂದ ಆ ರಾಧೆಗೆ ನೀನು ಅತ್ಯಂತ ವಿಶ್ವಾಸಪಾತ್ರಳಾಗುವೆ. ನಿನ್ನ ಮತ್ತು ಕೃಷ್ಣನ ಕ್ರೀಡೆಯು ಗುಪ್ತವಾದುದಾಗಿ ರಾಧೆಗೆ ತಿಳಿಯುವುದಿಲ್ಲ. ||೪೧-೪೨||

ರಾಧಾ-ಸಮಾ ತ್ವಂ ಸುಭಗೇ ಗೋವಿಂದಸ್ಯ ಭವಿಷ್ಯಸಿ ।
ಇತ್ಯೇವಮುಕ್ತ್ವಾ ದತ್ವಾ ಚ ದೇವ್ಯಾ ವೈ ಷೋಡಶಾಕ್ಷರಂ ॥೪೩॥

ಮಂತ್ರಂ ಚೈವ ಜಗದ್ಧಾತಾ ಸ್ತೋತ್ರಂ ಚ ಕವಚಂ ಪರಂ ।
ಸರ್ವಂ ಪೂಜಾವಿಧಾನಂ ಚ ಪುರಶ್ಚರ್ಯಾವಿಧಿಕ್ರಮಂ ॥೪೪॥

ಪರಾಂ ಶುಭಾಶಿಷಂ ಚೈವ ಪೂಜಾಂ ಚೈವ ಚಕಾರ ಸಾ ।
ಬಭೂವ ಸಿದ್ಧಾ ಸಾ ದೇವೀ ತತ್ಪ್ರಸಾದಾದ್ರಮಾ ಯಥಾ ॥೪೫॥

ಸಿದ್ಧೇ ಮಂತ್ರೇಣ ತುಲಸೀ ವರಂ ಪ್ರಾಪ ಯಥೋದಿತಂ ।
ಬುಭುಜೇ ಚ ಮಹಾಭೋಗಂ ಯದ್ವಿಶ್ವೇಷು ಚ ದುರ್ಲಭಂ ॥೪೬॥

ಪ್ರಸನ್ನಮನಸಾ ದೇವೀ ತತ್ಯಾಜ ತಪಸಃ ಕ್ಲಮಂ ।
ಸಿದ್ಧೇ ಫಲೇ ನರಾಣಾಂ ಚ ದುಃಖಂ ಚ ಸುಖಮುತ್ತಮಂ ॥೪೭॥

---

ಎಲೈ ಸುಂದರಿಯೇ, ನೀನು ರಾಧೆಗೆ ಸಮನಾಗಿ ಕೃಷ್ಣನಿಗೆ ಪ್ರೀತಿಪಾತ್ರಳಾಗುವೆ. ಹೀಗೆ ಹೇಳಿ ರಾಧೆಯ ಷೋಡಶಾಕ್ಷರ ಮಂತ್ರವನ್ನು ತುಲಸಿಗೆ ಅನುಗ್ರಹಿಸಿ ಪ್ರಪಂಚದ ಸೃಷ್ಟಿಕರ್ತನಾದ ಬ್ರಹ್ಮನು ರಾಧಾಮಂತ್ರ ಸಂಬಂಧವಾದ ಸ್ತೋತ್ರವನ್ನೂ ಕವಚವನ್ನೂ, ಅದರ ಪೂಜಾ, ಪುರಶ್ಚರಣ ಕ್ರಮಗಳನ್ನೂ ತಿಳಿಸಿ, ॥೪೩-೪೪॥

ಶುಭಾಶೀರ್ವಾದಗಳನ್ನೂ ಸಹ ಮಾಡಿ ಅದೃಶ್ಯನಾದನು. ತುಲಸಿಯು ಅನೇಕ ಪ್ರಕಾರವಾಗಿ ಪೂಜಾದಿಗಳನ್ನು ನಡೆಸಿ ಬ್ರಹ್ಮನ ಅನುಗ್ರಹದಿಂದ ಲಕ್ಷ್ಮಿಯಂತೆ ಕೃತಕೃತ್ಯಳಾದಳು. ॥೪೫॥

ರಾಧಾಸಂಬಂಧವಾದ ಆ ಸಿದ್ಧಮಂತ್ರ ಪ್ರಭಾವದಿಂದ ತುಲಸಿಯು ತನಗೆ ಅಭೀಷ್ಟವಾದ ವರವನ್ನು ಹೊಂದಿ ಪ್ರಪಂಚದಲ್ಲಿ ಹೊಂದಲಸಾಧ್ಯಗಳಾದ ಅನೇಕ ವಿಧಗಳಾದ ಸುಖಗಳನ್ನು ಅನುಭವಿಸಿದಳು. ॥೪೬॥

ಆ ತುಲಸೀದೇವಿಯು ತನ್ನ ಇಷ್ಟಾರ್ಥವು ಸಿದ್ಧಿಯಾದುದರಿಂದ ನಿರ್ಮಲವಾದ ಮನಸ್ಸುಳ್ಳವಳಾಗಿ ತಾನು ತಪಸ್ಸು ಮಾಡುವಾಗ ಅನುಭವಿಸಿದ ಕಷ್ಟಗಳನ್ನೆಲ್ಲಾ ಮರೆತು ಮನುಷ್ಯರು ದುಃಖಮಿಶ್ರಿತವಾದ ಸುಖವನ್ನು ಅನುಭವಿಸುವಂತೆ, ॥೪೭॥

ಭುಕ್ತ್ವಾ ಪೀತ್ವಾ ಚ ಸಂತುಷ್ಟಾ ಶಯನಂ ಚ ಚಕಾರ ಸಾ ।
ತಲ್ಪೇ ಮನೋರಮೇ ತತ್ರ ಪುಷ್ಪಚಂದನಚರ್ಚಿತೇ ॥೪೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಸಪ್ತದಶೋಽಧ್ಯಾಯಃ

---

ಸುಖದುಃಖಗಳನ್ನನುಭವಿಸಿ ಅನೇಕ ವಿಧವಾದ ಪಾನಗಳನ್ನು ಮಾಡಿ ಸಂತೋಷದಿಂದ ಹೂ, ಗಂಧಗಳಿಂದ ಅಲಂಕರಿಸಲ್ಪಟ್ಟ ಸುಂದರವಾದ ಹಾಸಿಗೆಯಲ್ಲಿ ಶಯನ ಸುಖವನ್ನನುಭವಿಸಿದಳು. ॥೪೮॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಅಷ್ಟಾದಶೋಽಧ್ಯಾಯಃ ||

### ಹದಿನೆಂಟನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

**ತುಲಸೀ ಪರಿತುಷ್ಟಾ ಚ ಸುಷ್ವಾಪ ಹೃಷ್ಟಮಾನಸಾ ।**
**ನವಯೌವನಸಂಪನ್ನಾ ವೃಷಧ್ವಜವರಾಂಗನಾ ||೧||**

**ಚಿಕ್ಷೇಪ ಪಂಚಬಾಣಶ್ಚ ಪಂಚಬಾಣಾಂಶ್ಚ ತಾಂ ಪ್ರತಿ ।**
**ಪುಷ್ಪಾಯುಧೇನ ಸಾ ದಗ್ಧಾ ಪುಷ್ಪಚಂದನಚರ್ಚಿತಾ ||೨||**

**ಪುಲಕಾಂಚಿತಸರ್ವಾಂಗೀ ಕಂಪಿತಾ ರಕ್ತಲೋಚನಾ ।**
**ಕ್ಷಣಂ ಸಾ ಶುಷ್ಕತಾಂ ಪ್ರಾಪ ಕ್ಷಣಂ ಮೂರ್ಛಾಮವಾಪ ಹ ||೩||**

---

ನಾರಾಯಣನು ಹೇಳಿದನು—ವೃಷಧ್ವಜನ ಮಗಳೂ, ನವಯೌವನ ವತಿಯೂ ಆದ ತುಲಸೀದೇವಿಯು ಸಂತೋಷದಿಂದ ನಿರ್ಮಲಾಂತಃಕರಣ ಉಳ್ಳವಳಾಗಿ ನಿದ್ರಿಸಿದಳು. ||೧||

ಮನ್ಮಥನು ತನ್ನ ಅರವಿಂದವೇ ಮೊದಲಾದ ಐದು ಬಾಣಗಳನ್ನು ಪ್ರಯೋಗ ಮಾಡಿದನು. ಗಂಧ ಹೂವುಗಳಿಂದ ಅಲಂಕೃತಳಾದ ಆ ತುಲಸಿಯು ಹೀಗೆ ಮನ್ಮಥ ನಿಂದ ವ್ಯಥೆಗೊಳಿಸಲ್ಪಟ್ಟಳು. ||೨||

ಆ ತುಲಸಿಯು ರೋಮಾಂಚಹೊಂದಿದ ಸರ್ವಾವಯವ ಉಳ್ಳವಳಾಗಿ ನಡುಕ ಹೊಂದಿ ಕೆಂಪಾದ ಕಣ್ಣುಗಳುಳ್ಳವಳಾಗಿ, ಕ್ಷಣಕಾಲದವರೆಗೆ ಒಣಗಿಹೋದವಳಾಗಿ ಮೂರ್ಛಿತಳಾದಳು. ||೩||

ಕ್ಷಣಮುದ್ವಿಗ್ನತಾಂ ಪ್ರಾಪ ಕ್ಷಣಂ ತಂದ್ರಾಂ ಸುಖಾವಹಾಂ ।
ಕ್ಷಣಂ ಚ ದಹನಂ ಪ್ರಾಪ ಕ್ಷಣಂ ಪ್ರಾಪ ಪ್ರಸನ್ನತಾಂ ॥೪॥

ಕ್ಷಣಂ ಸಾ ಚೇತನಾಂ ಪ್ರಾಪ ಕ್ಷಣಂ ಪ್ರಾಪ ವಿಷಣ್ಣತಾಂ ।
ಉತ್ತಿಷ್ಠಂತೀ ಕ್ಷಣಂ ತಲ್ಪಾದ್ಗಚ್ಛಂತೀ ನಿಕಟೇ ಕ್ಷಣಂ ॥೫॥

ಭ್ರಮಂತೀ ಕ್ಷಣಮುದ್ವೇಗಾನ್ನಿವಸಂತೀ ಕ್ಷಣಂ ಪುನಃ ।
ಕ್ಷಣಮೇವ ಸಮುದ್ವೇಗಾತ್ಸುಷ್ವಾಪ ಪುನರೇವ ಸಾ ॥೬॥

ಪುಷ್ಪಚಂದನತಲ್ಪಂ ಚ ತದ್ಬಭೂವಾಽತಿಕಂಟಕಂ ।
ವಿಷಹಾರಿಸುಖಂ ದಿವ್ಯಂ ಸುಂದರಂ ಚ ಫಲಂ ಜಲಂ ॥೭॥

ನಿಲಯಂ ಚ ಬಿಲಾಕಾರಂ ಸೂಕ್ಷ್ಮವಸ್ತ್ರಂ ಹುತಾಶನಃ ।
ಸಿಂಧೂರಪತ್ರಕಂ ಚೈವ ವ್ರಣತುಲ್ಯಂ ಚ ದುಃಖದಂ ॥೮॥

---

ಒಂದು ಕ್ಷಣಕಾಲದಲ್ಲಿ ಉದ್ವೇಗವನ್ನೂ, ಇನ್ನೊಂದು ಕ್ಷಣಕಾಲದಲ್ಲಿ ಸುಖ ನಿದ್ದೆಯನ್ನೂ ಮತ್ತೊಂದು ಕ್ಷಣಕಾಲದಲ್ಲಿ ಸುಡುವಿಕೆಯನ್ನೂ ಬೇರೊಂದು ಕ್ಷಣ ಕಾಲದಲ್ಲಿ ನಿರ್ಮಲತ್ವವನ್ನೂ ಹೊಂದಿದಳು. ॥೪॥

ಮತ್ತು ಒಂದು ಕ್ಷಣದಲ್ಲಿ ಚಿತ್ತಸ್ವಾಸ್ಥ್ಯವನ್ನೂ ಇನ್ನೊಂದು ಕ್ಷಣದಲ್ಲಿ ಹೆಚ್ಚಾದ ವ್ಯಸನವನ್ನೂ ಹೊಂದಿದಳು. ಇನ್ನೊಂದು ಸಮಯದಲ್ಲಿ ಹಾಸಿಗೆಯಿಂದ ಎದ್ದುಹೋಗುತ್ತಲೂ ಬೇರೊಂದು ಸಮಯದಲ್ಲಿ ಅದರ ಹತ್ತಿರಕ್ಕೆ ಓಡಿಬರುತ್ತಲೂ ಇದ್ದಳು. ॥೫॥

ಒಂದು ಸಮಯದಲ್ಲಿ ಭ್ರಾಂತಿಯಿಂದ ಓಡಾಡುತ್ತಲೂ ಒಂದು ಸಮಯ ದಲ್ಲಿ ಒಂದೇಕಡೆಯಲ್ಲಿ ಇರುತ್ತಲೂ ಇನ್ನೊಂದು ಸ್ಷಣದಲ್ಲಿ ಉದ್ವೇಗದಿಂದ ಮತ್ತಿನ ನಿದ್ದೆಮಾಡುತ್ತಲೂ ಇದ್ದಳು. ॥೬॥

ಹೂವುಗಂಧಗಳಿಂದಲಂಕೃತವಾದ ಹಾಸಿಗೆಯೂ ಕೂಡ ಅವಳಿಗೆ ಬಹಳವಾಗಿ ಬಾಧೆಯನ್ನು ಕೊಡುವಂಥಾದ್ದಾಯಿತು. ಸುಖಕರವಾದ ದಿವ್ಯಫಲಗಳೂ ನೀರೂ ಕೂಡ ಅವಳಿಗೆ ವಿಷಕ್ಕೆ ಸಮಾನವಾದುವು! ॥೭॥

ಅವಳಿಗೆ ಮನೆಯು ಬಿಲದಂತೆಯೂ, ಸೂಕ್ಷ್ಮವಸ್ತ್ರವು ಬೆಂಕಿಯಂತೆಯೂ, ಸಿಂಧೂರದ ಚಿಹ್ನೆಗಳೂ ಕೂಡ ವ್ರಣಕ್ಕೆ ಸಮಾನವಾಗಿಯೂ ದುಃಖವನ್ನುಂಟು

ಕ್ಷಣಂ ದದರ್ಶ ತಂದ್ರಾಯಾಂ ಸುವೇಷಂ ಪುರುಷಂ ಸತೀ ।
ಸುಂದರಂ ಚ ಯುವಾನಂ ಚ ಸಸ್ಮಿತಂ ರಸಿಕೇಶ್ವರಂ ॥೯॥

ಚಂದನೋಕ್ಷಿತಸರ್ವಾಂಗಂ ರತ್ನಭೂಷಣ ಭೂಷಿತಂ ।
ಆಗಚ್ಛಂತಂ ಮಾಲ್ಯವಂತಂ ಪಿಬಂತಂ ತನ್ಮುಖಾಂಬುಜಂ ॥೧೦॥

ಕಥಯಂಥಂ ರತಿಕಥಾಂ ಬ್ರುವಂತಂ ಮಧುರಂ ಮುಹುಃ ।
ಸಂಭುಕ್ತವಂತಂ ತಲ್ಪೇ ಚ ಸಮಾಶ್ಲಿಷ್ಯಂತಮೀಪ್ಸಿತಂ ॥೧೧॥

ಪುನರೇವ ತು ಗಚ್ಛಂತಮಾಗಚ್ಛಂತಂ ಚ ಸನ್ನಿಧೌ ।
ಯಾಂತಂ ಕ್ವಯಾಸಿ ಪ್ರಾಣೇಶ ತಿಷ್ಠೇತ್ಯೇವಮುವಾಚ ಸಾ ॥೧೨॥

ಪುನಶ್ಚ ಚೇತನಾಂ ಪ್ರಾಪ್ಯ ವಿಲಲಾಪ ಪುನಃ ಪುನಃ ।
ಏವಂ ಸಾ ಯೌವನಂ ಪ್ರಾಪ್ಯ ತಸ್ಥೌ ತತ್ರೈವ ನಾರದ ॥೧೩॥

---

ಮಾಡುವುದಾಗಿ ಇದ್ದಿತು. ಆ ತುಲಸಿಯು ನಿದ್ರೆಮಾಡುತ್ತಿರವಾಗ ಒಂದು ಸಮಯದಲ್ಲಿ ಒಳ್ಳೆಯ ವಸ್ತ್ರಗಳಿಂದಲಂಕೃತನಾಗಿಯೂ, ಸೌಂದರ್ಯ ವಿಶಿಷ್ಟನಾಗಿಯೂ ಇರುವ ಒಬ್ಬ ರಸಿಕ ಶಿಖಾಮಣಿ ಯಾದ ಪುರುಷನನ್ನು ನೋಡಿದಳು. ॥೮-೯॥

ಸರ್ವಾವಯವಗಳಿಗೂ ಗಂಧವನ್ನು ಲೇಪಿಸಿಕೊಂಡು ರತ್ನಾಭರಣಗಳನ್ನು ಧರಿಸಿ, ಹಾರಗಳಿಂದ ಅಲಂಕೃತನಾಗಿ ತನ್ನ ಮುಖಕಮಲವನ್ನು ನಿರೀಕ್ಷಿಸುತ್ತಾ ಬರುತ್ತಿರುವ ಪುರುಷನನ್ನು ನೋಡಿದಳು. ॥೧೦॥

ಕ್ರೀಡಾಸಂಬಂಧವಾದ ಮಧುರವಾದ ಮಾತುಗಳನ್ನು ಬಾರಿಬಾರಿಗೂ ಹೇಳುತ್ತಾ ಶಯನಸುಖವನ್ನನುಭವಿಸಿ ಆಲಂಗಿಸುತ್ತಿರುವ ತನ್ನ ಪ್ರಿಯನನ್ನು ಕಂಡಳು. ॥೧೧॥

ಹೊರಟುಹೋಗುತ್ತಲೂ ಪುನಃ ತನ್ನ ಹತ್ತಿರಕ್ಕೆ ಬರುತ್ತಲೂ ಪುನಃ ಹೊರಟು ಹೋಗುತ್ತಲೂ ಇರುವ ಅವನನ್ನು ಕುರಿತು ಎಲೈ ಪ್ರಾಣಪ್ರಿಯನೇ! ಎಲ್ಲಿಗೆ ಹೋಗುವೆ? ನಿಲ್ಲು. ಎಂದು ಹೇಳಿದಳು. ॥೧೨॥

ಎಲೈ ನಾರದನೇ, ಆ ತುಲಸಿಯು ತನಗೆ ಸ್ಮೃತಿಯು ಬಂದಮೇಲೆ ಪದೇ ಪದೇ ರೋದಿಸಿದಳು. ಹೀಗೆ ಅವಳು ಯೌವನಾವಸ್ಥೆಯ ವಿರಹದ ಸುಖವನ್ನು ಹೊಂದಿ ಅಲ್ಲೇ ಕಾಲವನ್ನು ಕಳೆಯುತ್ತಿದ್ದಳು. ॥೧೩॥

ಶಂಖಚೂಡೋ ಮಹಾಯೋಗೀ ಜೈಗಿಷವ್ಯಾನ್ಮನೋಹರಂ ।
ಕೃಷ್ಣಮಂತ್ರಂ ಚ ಸಂಪ್ರಾಪ್ಯ ಕೃತ್ವಾ ಸಿದ್ಧಂ ತು ಪುಷ್ಕರೇ ॥೧೪॥

ಕವಚಂ ಚ ಗಲೇ ಬಧ್ವಾ ಸರ್ವಮಂಗಲಮಂಗಲಂ ।
ಬ್ರಹ್ಮಣಶ್ಚ ವರಂ ಪ್ರಾಪ್ಯ ಯತ್ತೇ ಮನಸಿ ವಾಂಛಿತಂ ॥೧೫॥

ಆಜ್ಞಯಾ ಬ್ರಹ್ಮಣಸ್ಸೋಽಪಿ ಬದರೀಂ ಚ ಸಮಾಯಯೌ ।
ಆಗಚ್ಛಂತಂ ಶಂಖಚೂಡಂ ದದರ್ಶ ತುಲಸೀ ಮುನೇ ॥೧೬॥

ನವಯೌವನಸಂಪನ್ನಂ ಕಾಮದೇವಸಮಪ್ರಭಂ ।
ಶ್ವೇತಚಂಪಕವರ್ಣಾಭಂ ರತ್ನಭೂಷಣಭೂಷಿತಂ ॥೧೭॥

ಶರತ್ಪಾರ್ವಣಚಂದ್ರಾಸ್ಯಂ ಶರತ್ಪಂಕಜಲೋಚನಂ ।
ರತ್ನಸಾರವಿನಿರ್ಮಾಣ ವಿಮಾನಸ್ಥಂ ಮನೋಹರಂ ॥೧೮॥

ರತ್ನಕುಂಡಲಯುಗ್ಮೇನ ಗಂಡಸ್ಥಲವಿರಾಜಿತಂ ।
ಪಾರಿಜಾತಪ್ರಸೂನಾನಾಂ ಮಾಲಾವಂತಂ ಚ ಸುಸ್ಮಿತಂ ॥೧೯॥

---

ಯೋಗಿಶ್ರೇಷ್ಠನಾದ ಶಂಖಚೂಡನೂ ತನ್ನ ಇಷ್ಟಾರ್ಥಸಿದ್ಧಿಗಾಗಿ ಸುಂದರವಾದ ಕೃಷ್ಣಮಂತ್ರವನ್ನು ಹೊಂದಿ ಪುಷ್ಕರಕ್ಷೇತ್ರದಲ್ಲಿ ಅದರ ಸಿದ್ಧಿಯನ್ನು ಹೊಂದಿ,॥೧೪॥

ತನ್ನ ಕಂಠದಲ್ಲಿ ಸಮಸ್ತ ಶುಭಗಳನ್ನೂ ಕೊಡುವ ಕವಚವನ್ನು ಕಟ್ಟಿಕೊಂಡು ಬ್ರಹ್ಮನಿಂದ " ನಿನಗೆ ಬೇಕಾದ ಇಷ್ಟಾರ್ಥಸಿದ್ಧಿಯನ್ನು ಹೊಂದು " ಎಂದು ಅನುಗ್ರಹಿಸಲ್ಪಟ್ಟು ಬ್ರಹ್ಮನ ಅಪ್ಪಣೆಯಂತೆ ಬದರಿಕಾಶ್ರಮಕ್ಕೆ ಬಂದನು. ಎಲೈ ನಾರದನೇ, ಬರುತ್ತಿರುವ ಶಂಖಚೂಡನನ್ನು ತುಲಸಿಯು ನೋಡಿದಳು. ॥೧೫-೧೬॥

ಯೌವನವಂತನೂ ಮನ್ಮಥನಿಗೆ ಸಮಾನವಾದ ಕಾಂತಿಯಿಂದ ಕೂಡಿರುವವನೂ, ಒಳ್ಳೆಯ ಸಂಪಿಗೆಯ ಹೂವಿನಂತೆ ಶೋಭೆಯುಳ್ಳವನೂ, ರತ್ನಾಭರಣಗಳಿಂದ ಅಲಂಕೃತನೂ, ॥೧೭॥

ಶರದೃತುವಿನ ಪೂರ್ಣಿಮಾಚಂದ್ರನಂತೆ ಮುಖವುಳ್ಳವನೂ, ಶರದೃತುವಿನ ಕಮಲದಂತೆ ಕಣ್ಣುಳ್ಳವನೂ, ಶ್ರೇಷ್ಠವಾದ ರತ್ನಗಳಿಂದ ಮಾಡಿದ ರಮಣೀಯವಾದ ವಿಮಾನದಲ್ಲಿ ಕುಳಿತಿರುವವನೂ, ರತ್ನಮಯವಾದ ಎರಡು ಕುಂಡಲಗಳಿಂದ ಪ್ರಕಾಶ

ಕಸ್ತೂರೀಕುಂಕುಮಾಯುಕ್ತಂ ಸುಗಂಧಿಚಂದನಾನ್ವಿತಂ ।
ಸಾ ದೃಷ್ಟ್ವಾ ಸನ್ನಿಧಾವೇನಂ ಮುಖಮಾಚ್ಛಾದ್ಯ ವಾಸಸಾ ॥೨೦॥

ಸಸ್ಮಿತಾ ತಂ ನಿರೀಕ್ಷಂತೀ ಸಕಟಾಕ್ಷಂ ಪುನಃ ಪುನಃ ।
ಬಭೂವಾಽತಿನಮ್ರಮುಖೀ ನವಸಂಗಮಲಜ್ಜಿತಾ ॥೨೧॥

ಶರದಿಂದುವಿನಿಂದ್ಯೈಕಸ್ವಮುಖೇಂದುವಿರಾಜಿತಾ ।
ಅಮೂಲ್ಯರತ್ನನಿರ್ಮಾಣ ಯಾವಕಾವಲಿಸಂಯುತಾ ॥೨೨॥

ಮಣೀಂದ್ರಸಾರನಿರ್ಮಾಣ-ಕ್ವಣನ್ಮಂಜೀರರಂಜಿತಾ ।
ದಧತೀ ಕಬರೀಭಾರಂ ಮಾಲತೀಮಾಲ್ಯಸಂಯುತಂ ॥೨೩॥

ಅಮೂಲ್ಯರತ್ನನಿರ್ಮಾಣಮಕರಾಕೃತಿಕುಂಡಲಾ ।
ಚಿತ್ರಕುಂಡಲಯುಗ್ಮೇನ ಗಂಡಸ್ಥಲವಿರಾಜಿತಾ ॥೨೪॥

---

ಮಾನವಾದ ಕೆನ್ನೆಗಳುಳ್ಳವನೂ ಪಾರಿಜಾತಪುಷ್ಪಗಳ ಮಾಲೆಯನ್ನು ಧರಿಸಿರುವವನೂ ಮಂದಹಾಸವಿಶಿಷ್ಟನೂ, ||೧೮-೧೯||

ಕಸ್ತೂರೀಕುಂಕುಮಗಳನ್ನು ಧರಿಸಿರುವವನೂ, ಸುವಾಸನೆಯುಳ್ಳ ಗಂಧವನ್ನು ಲೇಪಿಸಿಕೊಂಡಿರುವವನೂ, ಆದ ಆ ಯುವಕನನ್ನು ಸಮೀಪದಲ್ಲಿ ನೋಡಿ ತುಲಸಿಯು ಬಟ್ಟೆಯಿಂದ ಮುಖವನ್ನು ಮುಚ್ಚಿಕೊಂಡು, ಮಂದಹಾಸದಿಂದ ಪದೇ ಪದೇ ನೋಡುತ್ತಾ ಪ್ರಥಮ ಸಂಗಮದಿಂದ ನಾಚಿಕೆಯನ್ನು ಹೊಂದಿ ಬಹಳವಾಗಿ ನಮ್ರವಾದ ಮುಖವುಳ್ಳವಳಾದಳು. ||೨೦-೨೧||

ಶರತ್ಕಾಲದ ಚಂದ್ರನನ್ನೂ ತಿರಸ್ಕರಿಸಿದ ತನ್ನ ಚಂದ್ರನಂತಿರುವ ಮುಖದಿಂದ ಪ್ರಕಾಶಮಾನಳಾದ ಬಹಳ ಬೆಲೆಯುಳ್ಳ ರತ್ನಗಳಿಂದ ಮಾಡಲ್ಪಟ್ಟ ಪಾದಭೂಷಣಗಳಿಂದ ಅಲಂಕೃತಳಾದ, ||೨೨||

ಶ್ರೇಷ್ಠವಾದ ಇಂದ್ರನೀಲಮಣಿಗಳಿಂದ ಮಾಡಲ್ಪಟ್ಟ ಧ್ವನಿಗೊಡುತ್ತಿರುವ ಡಾಬಿನಿಂದ ಪ್ರಕಾಶಮಾನಳಾದ, ಮಾಲತೀ ಹೂಗಳ ಮಾಲೆಯಿಂದ ಕೂಡಿದ, ಹೆಚ್ಚು ಬೆಲೆಯುಳ್ಳ ರತ್ನಖಚಿತವಾದ ಮೊಸಳೆಯ ಆಕಾರದಂತಿರುವ ಕರ್ಣಕುಂಡಲಗಳಿಂದ ಶೋಭಿಸುತ್ತಿರುವ ಗಂಡಪ್ರದೇಶವುಳ್ಳ, ||೨೩-೨೪||

ರತ್ನೇಂದ್ರಸಾರಹಾರೇಣ ಸ್ತನಮಧ್ಯಸ್ಥಲೋಜ್ವಲಾ ।
ರತ್ನಕಂಕಣಕೇಯೂರ ಶಂಖಭೂಷಣಭೂಷಿತಾ ॥೨೫॥

ರತ್ನಾಂಗುಲೀಯಕೈರ್ದಿವ್ಯೈರಂಗುಲ್ಯಾವಳಿರಾಜಿತಾ ।
ದೃಷ್ಟ್ವಾ ತಾಂ ಲಲಿತಾಂ ರಮ್ಯಾಂ ಸುಶೀಲಾಂ ಸುಂದರೀಂ ಸತೀಂ ॥೨೬॥

ಉವಾಸ ತತ್ಸಮೀಪೇ ತು ಮಧುರಂ ತಾಮುವಾಚ ಸಃ ।

॥ ಶಂಖಚೂಡ ಉವಾಚ ॥

ಕಾ ತ್ವಂ ಕಸ್ಯ ಚ ಕನ್ಯಾ ಚ ಧನ್ಯಾ ಮಾನ್ಯಾ ಚ ಯೋಷಿತಾಂ ॥೨೭॥

ಕಾ ತ್ವಂ ಮಾನಿನಿ ಕಲ್ಯಾಣೀ ಸರ್ವಕಲ್ಯಾಣದಾಯಿನೀ ।
ಮೌನೀಭೂತೇ ಕಿಂಕರೇ ಮಾಂ ಸಂಭಾಷಾಂ ಕುರು ಸುಂದರಿ ॥೨೮॥

ಇತ್ಯೇವಂ ವಚನಂ ಶ್ರುತ್ವಾ ಸಕಾಮಾ ವಾಮಲೋಚನಾ ।
ಸಸ್ಮಿತಾ ನಮ್ರವದನಾ ಸಕಾಮಂ ತಮುವಾಚ ಸಾ ॥೨೯॥

---

ಶ್ರೇಷ್ಠವಾದ ಇಂದ್ರನೀಲಮಣಿಗಳ ಹಾರದಿಂದ ಪ್ರಕಾಶಮಾನವಾದ ಸ್ತನಗಳ ಮಧ್ಯಪ್ರದೇಶ ಉಳ್ಳವಳೂ ರತ್ನಮಯವಾದ ಕಂಕಣ, ಕೇಯೂರ, ಶಂಖ, ಈ ಆಭರಣಗಳಿಂದ ಅಲಂಕೃತಳೂ ಆದ ರತ್ನಖಚಿತವಾದ ಅಮೂಲ್ಯವಾದ ಉಂಗುರ ಗಳಿಂದ ಪ್ರಕಾಶಿಸಲ್ಪಟ್ಟ ಬೆರಳುಗಳುಳ್ಳ, ಒಳ್ಳೆಯ ನಡತೆಯಿಂದ ಕೂಡಿದ ಆ ಸುಂದರಿಯನ್ನು ನೋಡಿ ಶಂಖಚೂಡನು ॥೨೫-೨೬॥

ಅವಳ ಸಮೀಪಕ್ಕೆ ಹೋಗಿ ಈ ರೀತಿಯಲ್ಲಿ ಮಧುರವಾದ ಮಾತನ್ನು ಹೇಳಿದನು.

ಶಂಖಚೂಡನು ಹೇಳಿದನು—ಎಲೈ ಸುಂದರಿಯೇ, ಸ್ತ್ರೀಯರಲ್ಲಿ ಧನ್ಯಳೂ, ಪೂಜಿತಳೂ, ಆದ ನೀನು ಯಾರು? ಯಾರ ಮಗಳು? ಸಮಸ್ತ ಶುಭಗಳನ್ನೂ ಕೊಡುವಂತಿರುವ ನೀನು, ಯಾರು? ಏಕೆ ಮೌನವನ್ನಾಶ್ರಯಿಸಿರುವೆ? ಸೇವಕನಾದ ನನ್ನ ಜೊತೆಯಲ್ಲಿ ಸಂಭಾಷಣೆಯನ್ನು ಮಾಡು. ॥೨೭-೨೮॥

ಕಾಮವಿಶಿಷ್ಟಳಾದ ಆ ಸುಂದರಿಯು ಈ ಮಾತುಗಳನ್ನು ಕೇಳಿ ನಾಚಿಕೆಯ ಮಂದಹಾಸದಿಂದ ಅಧೋಮುಖ ಉಳ್ಳವಳಾಗಿ ಅವನನ್ನು ಕುರಿತು ಹೀಗೆ ಹೇಳಿದಳು. ॥೨೯॥

|| ತುಲಸ್ಯುವಾಚ ||

ಧರ್ಮಧ್ವಜಸುತಾಽಹಂ ಚ ತಪಸ್ಯಾಯಾಂ ತಪೋವನೇ ।
ತಪಸ್ವಿನ್ಯಹಂ ತಿಷ್ಠಾಮಿ ಕಸ್ತ್ವಂ ಗಚ್ಛ ಯಥಾಸುಖಂ ||೩೦||

ಕಾಮಿನೀಂ ಕುಲಜಾತಾಂ ಚ ರಹಸ್ಯೇಕಾಕಿನೀಂ ಸತೀಂ ।
ನ ಪೃಚ್ಛತಿ ಕುಲೇ ಜಾತ ಇತ್ಯೇವಂ ಮೇ ಶ್ರುತೌ ಶ್ರುತಂ ||೩೧||

ಲಂಪಟೋಽಸತ್ಕುಲೇ ಜಾತೋ ಧರ್ಮಶಾಸ್ತ್ರಾರ್ಥವರ್ಜಿತಃ ।
ಯೇನಾಶ್ರುತಃ ಶ್ರುತೇರರ್ಥಃ ಸ ಕಾಮಿಚ್ಛತಿ ಕಾಮಿನೀಂ ||೩೨||

ಆಪಾತಮಧುರಾಂ ಮತ್ತಾಮಂತಕಾಂ ಪುರುಷಸ್ಯ ತಾಂ ।
ವಿಷಕುಂಭಾಕಾರರೂಪಾಮಮೃತಾಸ್ಯಾಂ ಚ ಸಂತತಂ ||೩೩||

ಹೃದಯೇ ಕ್ಷುರಧಾರಾಭಾಂ ಶಶ್ವನ್ಮಧುರಭಾಷಿಣೀಂ ।
ಸ್ವಕಾರ್ಯಪರಿನಿಷ್ಪತ್ತ್ಯೈ ತತ್ಪರಾಂ ಸಂತತಂ ಚ ತಾಂ ||೩೪||

---

ತುಲಸಿಯು ಹೇಳಿದಳು—ಧರ್ಮಧ್ವಜನ ಮಗಳಾದ ನಾನು ಈ ಆಶ್ರಮದಲ್ಲಿ ತಪಸ್ಸುಮಾಡುತ್ತಾ ಇರುವೆನು. ನೀನು ಯಾರು? ನೀನು ಬೇಕಾದ ಕಡೆಗೆ ಹೋಗು. ||೩೦||

ಸತ್ಕುಲದಲ್ಲಿ ಹುಟ್ಟಿದವಳಾಗಿಯೂ, ಗುಪ್ತವಾದ ಸ್ಥಾನದಲ್ಲಿ ಒಬ್ಬೊಂಟಿಗಳಾಗಿಯೂ ಇರುವ ಸ್ತ್ರೀಯನ್ನು ಕುಲೀನನು ಸಂಭಾಷಣೆಗಾಗಿ ಕರೆಯುವುದಿಲ್ಲವೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದು. ||೩೧||

ವಿಷಯಾಸಕ್ತನೂ, ದುಷ್ಕುಲದಲ್ಲಿ ಹುಟ್ಟಿದವನೂ, ಧರ್ಮಶಾಸ್ತ್ರಗಳ ಅರ್ಥವನ್ನು ತಿಳಿಯದವನೂ ವೇದಾರ್ಥಗಳನ್ನು ಗ್ರಹಿಸದೇ ಇರುವವನೂ, ಕಾಮಾಸಕ್ತನೂ ಆದ ಪುರುಷನು ಕಾಮದಿಂದ ಕೂಡಿರುವ ಸ್ತ್ರೀಯನ್ನು ಅಪೇಕ್ಷಿಸುವನು. ||೩೨||

ಮೇಲೆ ನೋಡುವುದಕ್ಕೆ ರಮಣೀಯಳಾಗಿಯೂ, ಮದಿಸಿದವಳಾಗಿಯೂ, ಮನುಷ್ಯನಿಗೆ ಯಮಸ್ವರೂಪಳಾಗಿಯೂ ವಿಷದಿಂದ ತುಂಬಿರುವ ಕುಂಭಕ್ಕೆ ಸಮಾನವಾದ ಆಕಾರ ಉಳ್ಳವಳಾಗಿಯೂ ಯಾವಾಗಲೂ ಅಮೃತಕ್ಕೆ ಸಮಾನವಾದ ಮಾತುಗಳುಳ್ಳವಳಾಗಿಯೂ ಇರುವ, ಮನಸ್ಸಿನೊಳಗೆ ಹರಿತವಾದ ಕತ್ತಿಯಂತಿರುವ,

ಕಾರ್ಯಾರ್ಥೇ ಸ್ವಾಮಿವಶಗಾಂ ಅನ್ಯಥೈವಾಽವಶಾಂ ಸದಾ ।
ಸ್ವಾಂತರ್ಮಲಿನರೂಪಾಂ ಚ ಪ್ರಸನ್ನವದನೇಕ್ಷಣಾಂ ॥೩೫॥

ಶ್ರುತೌ ಪುರಾಣೇ ಯಾಸಾಂ ಚ ಚರಿತ್ರಮಪಿ ದೂಷಿತಂ ।
ತಾಸು ಕೋ ವಿಶ್ವಸೇತ್ಪ್ರಾಜ್ಞಃ ಪ್ರಜ್ಞಾವಾಂಶ್ಚ ದುರಾಶಯಃ ॥೩೬॥

ತಾಸಾಂ ಕೋ ವಾ ರಿಪುರ್ಮಿತ್ರಂ ಪ್ರಾರ್ಥಯಂತಿ ನವಂ ನವಂ ।
ದೃಷ್ಟ್ವಾ ಸುವೇಷಂ ಪುರುಷಂ ಇಚ್ಛಂತಿ ಹೃದಯೇ ಸದಾ ॥೩೭॥

ಬಾಹ್ಯೇ ಸ್ವಾರ್ಥಂ ಸತೀತ್ವಂ ಚ ಜ್ಞಾಪಯಂತೀ ಪ್ರಯತ್ನತಃ ।
ಶಶ್ವತ್ಕಾಮಾ ಚ ರಾಮಾ ಚ ಕಾಮಾಧಾರಾ ಮನೋಹರಾ ॥೩೮॥

ಬಾಹ್ಯೇ ಛಲಾತ್ಖೇದಯಂತೀ ಸ್ವಾಂತರ್ಮೈಥುನಮಾನಸಾ ।
ಕಾಂತಾಂ ಹಸಂತೀ ರಹಸಿ ಬಾಹ್ಯೇಽತೀವ ಸುಲಜ್ಜಿತಾ ॥೩೯॥

---

ಯಾವಾಗಲೂ ಹಿತಕರವಾಗಿಯೇ ಮಾತನಾಡುತ್ತಿರುವ, ತನ್ನ ಕಾರ್ಯಸಾಧನೆಗೆ ಮಾತ್ರ ವಿಶ್ವಾಸವನ್ನು ತೋರಿಸುತ್ತಿರುವ, ॥೩೩-೩೪॥

ತನ್ನ ಕೆಲಸವು ಸಿದ್ಧಿಸುವುದಕ್ಕಾಗಿ ಪುರುಷನಿಗೆ ಅಧೀನಳಾಗಿಯೂ ಅದು ಸಿದ್ಧಿಸಿದ ಮೇಲೆ ಸ್ವತಂತ್ರಳೂ, ಕೆಟ್ಟ ಮನಸ್ಸುಳ್ಳವಳೂ, ನಿರ್ಮಲವಾದ ಮುಖ, ಕಣ್ಣುಗಳುಳ್ಳವಳೂ, ಆದ, ವೇದಶಾಸ್ತ್ರಗಳಲ್ಲಿಯೂ, ಪುರಾಣದಲ್ಲಿಯೂ, ಯಾರ ಚರಿತ್ರೆಯು ದೂಷಿಸಲ್ಪಟ್ಟಿರುವುದೋ ಅಂತಹ ಸ್ತ್ರೀಯರಲ್ಲಿ ಬುದ್ಧಿ ಉಳ್ಳ ಯಾವ ಪಂಡಿತನಾಗಲೀ, ಕೆಟ್ಟ ನಡತೆಯುಳ್ಳವನಲ್ಲದ ಮನುಷ್ಯನಾಗಲೀ ನಂಬಿಕೆ ಇಡುವನು ? ॥೩೫-೩೬॥

ಅಂತಹ ಸ್ತ್ರೀಯರಿಗೆ ಯಾವನು ಶತ್ರುವು? ಯಾವನು ಸ್ನೇಹಿತನು ? ಒಳ್ಳೆಯ ವೇಷಧಾರಿಯಾದ ಪುರುಷನನ್ನು ಕಂಡರೆ ಅಂಥವನನ್ನು ಯಾವಾಗಲೂ ಅಪೇಕ್ಷಿಸುವರು ! ಮತ್ತು ಹೊಸ ಹೊಸದಾಗಿ ಅವನನ್ನು ಪ್ರಾರ್ಥಿಸುವರು ! ॥೩೭॥

ಹೊರಗಡೆಯಲ್ಲಿ ತನ್ನ ಹಿತಕ್ಕಾಗಿ ಪಾತಿವ್ರತ್ಯಪ್ರಭಾವವನ್ನೂ ಪದೇ ಪದೇ ಉಪದೇಶಿಸುತ್ತಿರುವವಳೂ, ಕಾಮದ ನಿವಾಸಸ್ಥಾನಳಾಗಿಯೂ, ಮನೋಹರಳಾಗಿಯೂ, ಕಾಮವಿಶಿಷ್ಟಳಾಗಿಯೂ ಇರುವ, ಹೊರಗೆ ಹಟದಿಂದ ಪುರುಷನನ್ನು ನಿರೋಧಿಸುವವಳೂ, ಅಂತರಂಗದಲ್ಲಿ ಕ್ರೀಡೆಯ ಅಪೇಕ್ಷೆಯುಳ್ಳವಳೂ, ಏಕಾಂತದಲ್ಲಿ

ಮಾನಿನೀ ಮೈಥುನಾಭಾವೇ ಕೋಪನಾ ಕಲಹಾಂಕುರಾ ।
ಸುಪ್ರೀತಾ ಭೂರಿಸಂಭೋಗಾತ್ಸ್ವಲ್ಪ ಮೈಥುನದುಃಖಿತಾ ॥೪೦॥

ಸುಮಿಷ್ಟಾನ್ನಾಚ್ಛೀತತೋಯಾದಾಕಾಂಕ್ಷಂತೀ ಚ ಮಾನಸೇ ।
ಸುಂದರಂ ರಸಿಕಂ ಕಾಂತಂ ಯುವಾನಂ ಗುಣಿನಂ ಸದಾ ॥೪೧॥

ಸುತಾತ್ಪರಮಭಿಸ್ನೇಹಂ ಕುರ್ವಂತೀ ರಸಿಕೋಪರಿ ।
ಪ್ರಾಣಾಧಿಕಂ ಪ್ರಿಯತಮಂ ಸಂಭೋಗಕುಶಲಂ ಪ್ರಿಯಂ ॥೪೨॥

ಪಶ್ಯಂತೀ ರಿಪುತುಲ್ಯಂ ಚ ವೃದ್ಧಂ ವಾ ಮೈಥುನಾಕ್ಷಮಂ ।
ಕಲಹಂ ಕುರ್ವತೀ ಶಶ್ವತ್ತೇನ ಸಾರ್ಧಂ ಸುಕೋಪನಾ ॥೪೩॥

ವಾಚಯಾ ಭಕ್ಷಯಂತೀ ತಂ ಸರ್ಪಆಖುಮಿವೋಲ್ಬಣಂ ।
ದುಸ್ಸಾಹಸಸ್ವರೂಪಾ ಚ ಸರ್ವದೋಷಾಶ್ರಯಾ ಸದಾ ॥೪೪॥

---

ಪುರುಷನನ್ನು ಪರಿಹಾಸ್ಯಮಾಡುವವಳೂ, ಬಹಿರಂಗದಲ್ಲಿ ಹೆಚ್ಚಾದ ನಾಚಿಕೆಯನ್ನು ತೋರಿಸತಕ್ಕವಳೂ, ಆದ, ॥೩೮-೩೯॥

ಅಹಂಕಾರ ಉಳ್ಳವಳೂ, ಕ್ರೀಡೆಯಿಲ್ಲದಿದ್ದರೆ ಕೋಪಿಷ್ಠಳೂ, ಕಲಹಾಸಕ್ತಳೂ, ಹೆಚ್ಚು ಸಂಭೋಗವನ್ನು ಪಡೆದರೆ ಸಂತೋಷ ಹೊಂದುವವಳೂ, ಅಲ್ಪವಾದ ಕ್ರೀಡೆಯನ್ನು ಹೊಂದಿದರೆ ದುಃಖಿತಳೂ ಆಗಿರುವ ಸ್ತ್ರೀಯು, ॥೪೦॥

ಮನಸ್ಸಿನಲ್ಲಿ ಒಳ್ಳೆಯ ಮೃಷ್ಟಾನ್ನ ಶೀತಲೋದಕಗಳನ್ನು ಅಪೇಕ್ಷಿಸುತ್ತಾ, ಸುಂದರನೂ, ರಸಿಕನೂ, ಸದ್ಗುಣವಂತನೂ, ಆಗಿ ಆ ಯುವಕನನ್ನು ಯಾವಾಗಲೂ ತನ್ನ ಮಗನಿಗಿಂತಲೂ ಹೆಚ್ಚಾಗಿ ಪ್ರೀತಿಸುವಳು. ಮತ್ತು ಕ್ರೀಡೆಯಲ್ಲಿ ಚತುರನಾದ ತನ್ನ ಪ್ರಿಯನನ್ನು ತನ್ನ ಪ್ರಾಣಗಳಿಗಿಂತಲೂ ಹೆಚ್ಚಾಗಿ ಕಾಣುವಳು. ॥೪೧-೪೨॥

ವೃದ್ಧನಾಗಿದ್ದರೂ, ಕ್ರೀಡೆಯಲ್ಲಿ ಆಸಕ್ತಿ ಇಲ್ಲದವನಾಗಿದ್ದರೂ, ಅಂತಹ ಸ್ವಾಮಿಯನ್ನು ಶತ್ರುವಿನಂತೆ ಭಾವಿಸುವವಳೂ ಯಾವಾಗಲೂ ಅಂತಹ ಪ್ರಿಯನೊಂದಿಗೆ ಕೋಪದಿಂದ ಜಗಳಮಾಡುತ್ತಿರುವವಳೂ ಆದ ಸ್ತ್ರೀಯು, ಹಾವು ಇಲಿಯನ್ನು ತಿನ್ನುವಂತೆ ಅಂತಹ ಪ್ರಿಯನನ್ನು ಕಠಿಣೋಕ್ತಿಗಳಿಂದ ತಿರಸ್ಕರಿಸುವಳು. ಮತ್ತು ಕೆಟ್ಟ ಸಾಹಸ ಉಳ್ಳವಳೂ ಎಲ್ಲ ವಿಧವಾದ ದೋಷಗಳಿಗೂ ಕಾರಣಭೂತಳೂ ಆಗಿರುವಳು. ॥೪೩-೪೪॥

ಬ್ರಹ್ಮವಿಷ್ಣುಶಿವಾದೀನಾಂ ದುಸ್ಸಾಧ್ಯಾ ಮೋಹರೂಪಿಣೀ ।
ತಪೋಮಾರ್ಗಾರ್ಗಲಾ ಶಶ್ವನ್ಮೋಕ್ಷದ್ವಾರಕವಾಟಿಕಾ ॥೪೫॥

ಹರೇರ್ಭಕ್ತಿರ್ವ್ಯವಹಿತಾ ಸರ್ವಮಾಯಾಕರಂಡಿಕಾ ।
ಸಂಸಾರಕಾರಾಗಾರೇ ಚ ಶಶ್ವನ್ನಿಗಡರೂಪಿಣೀ ॥೪೬॥

ಇಂದ್ರಜಾಲಸ್ವರೂಪಾ ಚ ಮಿಥ್ಯಾ ಚ ಸ್ವಪ್ನರೂಪಿಣೀ ।
ಬಿಭ್ರತೀ ಬಾಹ್ಯಸೌಂದರ್ಯಮಧೋಽಂಗಮತಿಕುತ್ಸಿತಂ ॥೪೭॥

ನಾನಾವಿಣ್ಮೂತ್ರಪೂಯಾನಾಮಾಧಾರಂ ಮಲಸಂಯುತಂ ।
ದುರ್ಗಂಧಿದೋಷಸಂಯುಕ್ತಂ ರಕ್ತಾರಕ್ತಮಸಂಸ್ಕೃತಂ ॥೪೮॥

ಮಾಯಾರೂಪಾ ಮಾಯಿನಾಂ ಚ ವಿಧಿನಾ ನಿರ್ಮಿತಾ ಪುರಾ ।
ವಿಷರೂಪಾ ಮುಮುಕ್ಷೂಣಾಮದೃಶ್ಯಾಪ್ಯಭಿವಾಂಛಿತಾಂ ॥೪೯॥

---

ಬ್ರಹ್ಮವಿಷ್ಣುಪರಮೇಶ್ವರರೇ ಮೊದಲಾದವರಿಗೂ ಸ್ತ್ರೀಯು ಮೋಹವನ್ನುಂಡುಮಾಡತಕ್ಕವಳಾಗಿ ಅಜೇಯಳಾಗಿರುವಳು! ಮತ್ತು ತಪೋಮಾರ್ಗಕ್ಕೆ ಪ್ರತಿಬಂಧಕಳಾಗಿಯೂ ಯಾವಾಗಲೂ ಮೋಕ್ಷದ್ವಾರಕ್ಕೆ ನಿರೋಧಕಳಾಗಿಯೂ ಇರುವಳು. ॥೪೫॥

ಮತ್ತು ವಿಷ್ಣುವಿನಲ್ಲಿ ಭಕ್ತಿ ಇಲ್ಲದವಳೂ, ಎಲ್ಲ ಅಜ್ಞಾನಕ್ಕೂ ಕಾರಣಭೂತಳೂ, ಸದಾ ಸಂಸಾರವೆಂಬ ಕಾರಾಗೃಹದ ಸಂಕೋಲೆಯಂತೆಯೂ ಇರುವಳು. ಇಂದ್ರಜಾಲದಂತೆ ತೋರಿಕೆಯ ರೂಪವುಳ್ಳವಳೂ, ಸ್ವಪ್ನದಂತೆ ಮಿಥ್ಯಾಸ್ವರೂಪವುಳ್ಳವಳೂ, ಬಾಹ್ಯಸೌಂದರ್ಯವುಳ್ಳವಳೂ ಒಳಗೆ ಕೆಟ್ಟಿರುವ ಅಂಗವುಳ್ಳವಳೂ ಆಗಿದ್ದರೂ ಸ್ತ್ರೀಯು ಪುರುಷನನ್ನು ಕೆಟ್ಟಮಾರ್ಗಕ್ಕೆ ಎಳೆದು ಒಯ್ಯುವಳು. ॥೪೬-೪೭॥

ಅನೇಕವಿಧವಾಗಿ ದುಷ್ಟವಾದ ಮಲ, ಮೂತ್ರ, ರಕ್ತ, ಮೊದಲಾದುವುಗಳಿಗೆ ಆಶ್ರಯಳೂ, ಕಶ್ಮಲವಿಶಿಷ್ಟಳೂ, ದುರ್ಗಂಧದಿಂದ ಕೂಡಿರುವವಳೂ, ಮಾಯೆಯ ಬಲೆಯಿಂದ ಕೂಡಿದವರಿಗೆ ಮಾಯಾಸ್ವರೂಪಿಣಿಯಾಗಿ ಅವಳು ಹಿಂದೆ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿರುವಳು. ಮೋಕ್ಷಾಪೇಕ್ಷಿಗಳಿಗೆ ಅವಳು ವಿಷಪ್ರಾಯಳಾಗಿ ದರ್ಶನಕ್ಕೂ ಅನರ್ಹಳಾಗಿಯೂ, ತನ್ನನ್ನ ಕಾಮಿಸುವವರಿಗೆ ಅದೃಶ್ಯಳೂ ಎಂದರೆ ತಿಳಿಯದಂತೆ ಮೋಸಮಾಡುವವಳೂ ಆಗಿರುವಳು. ॥೪೮-೪೯॥

ಇತ್ಯುಕ್ತ್ವಾ ತುಲಸೀ ತಂ ಚ ವಿರರಾಮ ಚ ನಾರದ ।
ಸಸ್ಮಿತಃ ಶಂಖಚೂಡಶ್ಚ ಪ್ರವಕ್ತುಮುಪಚಕ್ರಮೇ ॥೫೦॥

॥ ಶಂಖಚೂಡ ಉವಾಚ ॥

ತ್ವಯಾ ಯತ್ಕಥಿತಂ ದೇವಿ ನ ಚ ಸರ್ವಮಲೀಕಕಂ ।
ಕಿಂಚಿತ್ಸತ್ಯಮಲೀಕಂ ಚ ಕಿಂಚಿನ್ಮತ್ತೋ ನಿಶಾಮಯ ॥೫೧॥

ನಿರ್ಮಿತಂ ದ್ವಿವಿಧಂ ಧಾತ್ರಾ ಸ್ತ್ರೀರೂಪಂ ಸರ್ವಮೋಹನಂ ।
ಕೃತ್ವಾ ರೂಪಂ ವಾಸ್ತವಂ ಚ ಪ್ರಶಸ್ಯಂ ಚಾಪ್ರಶಂಸಿತಂ ॥೫೨॥

ಲಕ್ಷ್ಮೀಃ ಸರಸ್ವತೀ ದುರ್ಗಾ ಸಾವಿತ್ರೀ ರಾಧಿಕಾಧಿಕಾ ।
ಸೃಷ್ಟಿಸೂತ್ರಸ್ವರೂಪಾ ಚ ಆದ್ಯಾ ಸೃಷ್ಟಿರ್ವಿನಿರ್ಮಿತಾ ॥೫೩॥

ಏತಾಸಾಮಂಶರೂಪಂ ಚ ಸ್ತ್ರೀರೂಪಂ ವಾಸ್ತವಂ ಸ್ಮೃತಂ ।
ತತ್ಪ್ರಶಸ್ಯಂ ಯಶೋರೂಪಂ ಸರ್ವಮಂಗಳಕಾರಕಂ ॥೫೪॥

---

ಎಲೈ ನಾರದನೇ, ಹೀಗೆ ಹೇಳಿ ತುಲಸಿಯು ಸುಮ್ಮನಾದಳು. ಶಂಖಚೂಡನು ನಕ್ಕು ಈ ಪ್ರಕಾರವಾಗಿ ಹೇಳಲು ಆರಂಭಿಸಿದನು. ॥೫೦॥

ಶಂಖಚೂಡನು ಹೇಳಿದನು--ಎಲೈ ದೇವಿಯೇ, ನೀನು ಹೇಳಿದ ಮಾತುಗಳೆಲ್ಲವೂ ನಿಜವಲ್ಲವು. ಕೆಲವು ಮಾತುಗಳು ನಿಜವಾಗಿಯೂ, ಕೆಲವು ಸುಳ್ಳಾಗಿಯೂ ಇರುವುವು. ಆದುದರಿಂದ ನಾನು ಹೇಳುವ ಕೆಲವು ಮಾತುಗಳನ್ನೂ ಕೇಳು. ॥೫೧॥

ಬ್ರಹ್ಮನಿಂದ ಸ್ತ್ರೀರೂಪವು ಎಲ್ಲರನ್ನೂ ಮೋಹಗೊಳಿಸುವ ಉದ್ದೇಶದಿಂದ ಎರಡು ರೀತಿಯಲ್ಲಿ ಸೃಷ್ಟಿಸಲ್ಪಟ್ಟಿರುವುದು. ಕೆಲವು ಸ್ತ್ರೀಯರಲ್ಲಿ ನಿಜವೂ ಶ್ರೇಷ್ಠವೂ ಆದ ರೂಪವೂ ಇನ್ನು ಕೆಲವರಲ್ಲಿ ಕೃತಕವೂ, ದುಷ್ಟವೂ ಆದ ರೂಪವೂ ಇರುವುದು. ಇವುಗಳಲ್ಲಿ ॥೫೨॥

ಲಕ್ಷ್ಮೀ, ಸರಸ್ವತೀ, ದುರ್ಗಾ, ಸಾವಿತ್ರೀ, ರಾಧಾ, ಮೊದಲಾದವರು ಮೂಲ ಪ್ರಕೃತಿಯ ಪೂರ್ಣಾವತಾರಸ್ವರೂಪರು. ಗಂಗಾ ಮುಂತಾದವರು ಅಂಶಾವತಾರ ಸ್ವರೂಪರು. ಇವರುಪ್ರಪಂಚದ ಸೃಷ್ಟಿಗೆ ಮೂಲಭೂತರಾಗಿ ಬ್ರಹ್ಮನಿಂದ ಆದಿಯಲ್ಲಿ ಸೃಷ್ಟಿಸಲ್ಪಟ್ಟರು. ॥೫೩॥

ಇವರ ಅಂಶಸ್ವರೂಪವಾದ ಸ್ತ್ರೀರೂಪವೂ ಕೂಡ ನಿಜವಾದುದಾಗಿಯೂ, ಶ್ರೇಷ್ಠವಾದುದಾಗಿಯೂ, ಎಲ್ಲ ವಿಧವಾದ ಯಶಸ್ಸು ಮತ್ತು ಶುಭಗಳನ್ನು ಕೊಡುವಂಥಾದ್ದಾಗಿಯೂ ಇರುವುದು. ॥೫೪॥

ಶತರೂಪಾ ದೇವಹೂತೀ ಸ್ವಧಾ ಸ್ವಾಹಾ ಚ ದಕ್ಷಿಣಾ ।
ಛಾಯಾವತೀ ರೋಹಿಣೀ ಚ ವರುಣಾನೀ ಶಚೀ ತಥಾ ॥೫೫॥

ಕುಬೇರಸ್ಯ ಚ ಪತ್ನೀ ಯಾಽಪ್ಯದಿತಿಶ್ಚ ದಿತಿಸ್ತಥಾ ।
ಲೋಪಾಮುದ್ರಾಽನಸೂಯಾ ಚ ಕೋಟಿಭೀ ತುಲಸೀ ತಥಾ ॥೫೬॥

ಅಹಲ್ಯಾಽರುಂಧತೀ ಮೇನಾ ತಾರಾ ಮಂಡೋದರೀ ತಥಾ ।
ದಮಯಂತೀ ವೇದವತೀ ಗಂಗಾ ಚ ಮನಸಾ ತಥಾ ॥೫೭॥

ಪುಷ್ಟಿಸ್ತುಷ್ಟಿಃ ಸ್ಮೃತಿರ್ಮೇಧಾ ಕಾಲಿಕಾ ಚ ವಸುಂಧರಾ ।
ಷಷ್ಠೀ ಮಂಗಲಚಂಡೀ ಚ ಮೂರ್ತಿಶ್ಚ ಧರ್ಮಕಾಮಿನೀ ॥೫೮॥

ಸ್ವಸ್ತಿ ಶ್ರದ್ಧಾ ಚ ಶಾಂತಿಶ್ಚ ಕಾಂತಿಃ ಕ್ಷಾಂತಿಸ್ತಥಾ ಪರಾ ।
ನಿದ್ರಾ ತಂದ್ರಾ ಕ್ಷುತ್ಪಿಪಾಸಾ ಸಂಧ್ಯಾ ರಾತ್ರಿದಿನಾನಿ ಚ ॥೫೯॥

ಸಂಪತ್ತಿರ್ಧೃತಿಕೀರ್ತೀ ಚ ಕ್ರಿಯಾ ಶೋಭಾ ಪ್ರಭಾ ಶಿವಾ ।
ಯತ್ ಸ್ತ್ರೀರೂಪಂ ಚ ಸಂಭೂತಮುತ್ತಮಂ ತು ಯುಗೇ ಯುಗೇ ॥೬೦॥

---

ಶತರೂಪಾ, ದೇವಹೂತೀ, ಸ್ವಧಾ, ಸ್ವಾಹಾದೇವಿಯರು, ಛಾಯಾವತೀ, ರೋಹಿಣೀ, ವರುಣಾನೀ, ಶಚೀದೇವಿಯು, ಕುಬೇರನ ಪತ್ನಿಯು ಅದಿತಿ ದಿತಿಯರು, ಲೋಪಾಮುದ್ರೆ, ಅನುಸೂಯೆ, ಕೋಟಿಭೀ, ತುಲಸಿದೇವಿಯು, ॥೫೫-೫೬॥

ಅಹಲ್ಯಾ, ಅರುಂಧತೀ, ಮೇನಾ, ತಾರಾ, ಮಂಡೋದರೀ, ದಮಯಂತೀ, ವೇದವತೀ, ಗಂಗಾ, ಮನಸಾ, ಪುಷ್ಟಿ, ತುಷ್ಟಿ, ಸ್ಮೃತಿ, ಮೇಧಾ, ಕಾಲಿಕಾ, ವಸುಂಧರಾ, ಷಷ್ಠೀ, ಮಂಗಲಚಂಡೀ, ಮೂರ್ತಿಧರ್ಮಕಾಮಿನೀ, ಸ್ವಸ್ತಿ, ಶ್ರದ್ಧಾ, ಶಾಂತಿ, ಕಾಂತಿ, ಕ್ಷಾಂತಿ, ನಿದ್ರಾ, ತಂದ್ರಾ, ಕ್ಷುತ್, ಪಿಪಾಸಾ, ಸಂಧ್ಯಾ, ರಾತ್ರಿ, ದಿನ, ॥೫೭-೫೮-೫೯॥

ಸಂಪತ್ತಿ, ಧೃತಿ, ಕೀರ್ತಿ, ಕ್ರಿಯಾ, ಶೋಭಾ, ಶಿವಾ, ಪ್ರತಿಯುಗದಲ್ಲೂ ಹುಟ್ಟುವ ಈ ಸ್ತ್ರೀ ರೂಪಗಳು ಉತ್ತಮವಾದುವುಗಳು. ॥೬೦॥

ಕಲಾ ಕಲಾಂಶರೂಪಂ ಚ ಸ್ವರ್ವೇಶ್ಯಾದಿಕಮೇವ ಚ ।
ತದಪ್ರಶಸ್ಯಂ ವಿಶ್ವೇಷು ಪುಂಶ್ಚಲೀರೂಪಮೇವ ಚ ॥೬೧॥

ಸತ್ವಪ್ರಧಾನಂ ಯದ್ರೂಪಂ ತದ್ಯುಕ್ತಂ ಚ ಪ್ರಭಾವತಃ ।
ತದುತ್ತಮಂ ಚ ವಿಶ್ವೇಷು ಸಾಧ್ವೀರೂಪಂ ಪ್ರಶಂಸಿತಂ ॥೬೨॥

ತದ್ವಾಸ್ತವಂ ಚ ವಿಜ್ಞೇಯಂ ಪ್ರವದಂತಿ ಮನೀಷಿಣಃ ।
ರಜೋರೂಪಂ ತಮೋರೂಪಂ ಕಲಾಸು ವಿವಿಧಂ ಸ್ಮೃತಂ ॥೬೩॥

ಮಧ್ಯಮಾ ರಜಸಶ್ಚಾಂಶಾಸ್ತಾಸ್ತು ಭೋಗೇಷು ಲೋಲುಪಾಃ ।
ಸುಖಸಂಭೋಗವಶ್ಯಾಶ್ಚ ಸ್ವಕಾರ್ಯೇ ನಿರತಾಸ್ಸದಾ ॥೬೪॥

ಕಪಟಾ ಮೋಹಕಾರಿಣ್ಯೋ ಧರ್ಮಾರ್ಥವಿಮುಖಾಸ್ಸದಾ ।
ರಜೋರೂಪಸ್ಯ ಸಾಧ್ವೀತ್ವಮತೋ ನೈವೋಪಜಾಯತೇ ॥೬೫॥

---

ಇದುವರೆವಿಗೂ ಹೇಳಲ್ಪಟ್ಟ ಸ್ತ್ರೀ ರೂಪಗಳು ಕಲಾರೂಪಗಳಾಗಿಯೂ ಅಂಶ ಸ್ವರೂಪಗಳಾಗಿಯೂ ಇರುವುದರಿಂದ ಉತ್ತಮವಾದುವು. ಇವುಗಳನ್ನು ಬಿಟ್ಟು ಇತರಗಳಾದ ಸ್ವರ್ಗದ ವೇಶ್ಯೆಯರು ಸ್ವವೇಶ್ಯಾ ಮೊದಲಾದುವೂ, ಪುಂಶ್ಚಲೀರೂಪವೂ ಸಹ ಶ್ರೇಷ್ಠವಾದುವುಗಳಲ್ಲ. ಆದರೆ ॥೬೧॥

ಪ್ರಪಂಚದಲ್ಲಿ ಸತ್ವಗುಣ ಪ್ರಧಾನವಾಗಿ ಮಹಿಮೆಯಿಂದ ಕೂಡಿರುವ ಸ್ತ್ರೀ ರೂಪವು ವಿಶೇಷವಾಗಿ ಪ್ರಶಂಸಾರ್ಹವಾದುದು. ॥೬೨॥

ಅಂತಹ ಸ್ತ್ರೀರೂಪವನ್ನು ವಿದ್ವಾಂಸರು ನಿಜವಾದುದೆಂದು ಹೇಳುವರು. ಸ್ತ್ರೀ ರೂಪದಲ್ಲಿ ರಜೋಗುಣ ತಮೋಗುಣ, ಪ್ರಧಾನಗಳಾದ ಅನೇಕ ವಿಧವಾದ ರೂಪಗಳಿರುವುವು. ॥೬೩॥

ರಜೋಗುಣ ವಿಶಿಷ್ಟರಾಗಿ ಭೋಗಾಸಕ್ತಿಯಿಂದ ಕೂಡಿದವರಾಗಿ ಸುಖ ದಾಯಕವಾದ ಸಂಭೋಗಕ್ಕೆ ಅಧೀನರಾಗಿ ತಮ್ಮ ಸ್ವಂತ ಕೆಲಸದಲ್ಲೇ ದೃಷ್ಟಿಯುಳ್ಳ ಸ್ತ್ರೀಯರು ಮಧ್ಯಮ ಜಾತಿಗೆ ಸೇರಿದವರು. ॥೬೪॥

ಇವರು ನಿಜವಲ್ಲದ ಸ್ವಭಾವವುಳ್ಳವರಾಗಿ ಅಜ್ಞಾನಪೂರ್ವಕವಾಗಿ ಕೆಲಸ ಗಳನ್ನು ಮಾಡುತ್ತಾ ಧರ್ಮಾರ್ಥಗಳನ್ನು ಬಿಟ್ಟವರಾಗಿ ರಜೋಗುಣದ ಸಂಬಂಧ

ಇದಂ ಮಧ್ಯಮರೂಪಂ ಚ ಪ್ರವದಂತಿ ಮನೀಷಿಣಃ ।
ತಮೋರೂಪಂ ದುರ್ನಿವಾರ್ಯಮಧಮಂ ತದ್ವಿದುರ್ಬುಧಾಃ ॥೬೬॥

ನ ಪೃಚ್ಛತಿ ಕುಲೇ ಜಾತಃ ಪಂಡಿತಶ್ಚ ಪರಸ್ತ್ರಿಯಂ ।
ನಿರ್ಜನೇ ನಿರ್ಜಲೇ ವಾಽಪಿ ರಹಸ್ಯಪಿ ಪರಸ್ತ್ರಿಯಂ ॥೬೭॥

ಆಗಚ್ಛಾಮಿ ತ್ವತ್ಸಮೀಪಮಾಜ್ಞಯಾ ಬ್ರಹ್ಮಣೋಽಧುನಾ ।
ಗಾಂಧರ್ವೇಣ ವಿವಾಹೇನ ತ್ವಾಂ ಗೃಹೀಷ್ಯಾಮಿ ಶೋಭನೇ ॥೬೮॥

ಅಹಮೇವ ಶಂಖಚೂಡೋ ದೇವವಿದ್ರಾವಕಾರಕಃ ।
ದನುವಂಶ್ಯೋ ವಿಶೇಷೇಣ ಸುದಾಮೋಽಹಂ ಹರೇಃ ಪುರಾ ॥೬೯॥

ಅಹಮಷ್ಟಸು ಗೋಪೇಷು ಗೋಪೋಽಪಿ ಪಾರ್ಷದೇಷು ಚ ।
ಅಧುನಾ ದಾನವೇಂದ್ರೋಽಹಂ ರಾಧಿಕಾಯಾಶ್ಚ ಶಾಪತಃ ॥೭೦॥

---

ವನ್ನು ಹೊಂದಿರುವುದರಿಂದ ಇವರಲ್ಲಿ ಪಾತಿವ್ರತ್ಯಧರ್ಮವು ಸಂಬಂಧಿಸಿರುವುದಿಲ್ಲ. ||೬೫||

ಮತ್ತು ವಿದ್ವಾಂಸರು ಇವರನ್ನು ಮಧ್ಯಮಜಾತಿಯ ಸ್ತ್ರೀಯರೆಂದು ಹೇಳುವರು. ಪಂಡಿತರು ತಮೋಗುಣ ಪ್ರಧಾನರಾದ ಸ್ತ್ರೀಯರನ್ನು ಅಧಮಜಾತಿಗೆ ಸೇರಿದವರೆಂದು ತಿಳಿದಿರುವರು. ||೬೬||

ವಿದ್ವಾಂಸನಾಗಿಯೂ, ಸತ್ಕುಲಪ್ರಸೂತನಾಗಿಯೂ, ಇರುವ ಪುರುಷನು ಪರಸ್ತ್ರೀಯನ್ನು ಅವಳು ಏಕಾಂಗಿಯಾಗಿರುವ ಸ್ಥಳದಲ್ಲಿ ಮಾತನಾಡಿಸುವುದಿಲ್ಲ. ||೬೭||

ಎಲೈ ಸುಂದರಾಂಗಿಯೇ, ಬ್ರಹ್ಮನ ಅಪ್ಪಣೆಯಿಂದ ಈಗ ನಿನ್ನ ಹತ್ತಿರಕ್ಕೆ ಬಂದಿರುವೆನು. ನಿನ್ನನ್ನು ಗಾಂಧರ್ವ ವಿವಾಹ ವಿಧಿಯಿಂದ ಸ್ವೀಕರಿಸುವೆನು. ||೬೮||

ದೇವತೆಗಳನ್ನೂ ಓಡಿಸಿ ಅವರ ಸ್ಥಾನಮಾನಗಳನ್ನು ಪಡೆದಿರುವ ದನುವಂಶೋದ್ಭವನಾದ ನಾನೇ ಶಂಖಚೂಡನು. ಪೂರ್ವಜನ್ಮದಲ್ಲಿ ನಾನು ಸುದಾಮನೆಂಬ ಹೆಸರಿನಿಂದ ಕೃಷ್ಣನಿಗೆ ಸ್ನೇಹಿತನಾಗಿದ್ದೆನು. ||೬೯||

ಎಂಟು ಜನ ಗೋಪರಲ್ಲೂ ನಾನು ಒಬ್ಬ ಗೋಪನಾಗಿದ್ದು ಈಗ ರಾಧಾ ಶಾಪದಿಂದ ರಾಕ್ಷಸ ರಾಜನಾಗಿರುವೆನು. ||೭೦||

**ಜಾತಿಸ್ಮರೋಽಹಂ ಜಾನಾಮಿ ಕೃಷ್ಣಮಂತ್ರಪ್ರಭಾವತಃ ।**
**ಜಾತಿಸ್ಮರಾ ತ್ವಂ ತುಲಸೀ ಸಂಭುಕ್ತಾ ಹರಿಣಾ ಪುರಾ ॥೭೦॥**

**ತ್ವಮೇವ ರಾಧಿಕಾಕೋಪಾಜ್ಜಾತಾಽಸಿ ಭಾರತೇ ಭುವಿ ।**
**ತ್ವಾಂ ಸಂಭೋಕ್ತುಮುತ್ಸುಕೋಽಹಂ ನಾಽಲಂ ರಾಧಾಭಯಾತ್ತತಃ ॥೭೨॥**

**ಇತ್ಯೇವಮುಕ್ತ್ವಾ ಸ ಪುಮಾನ್ವಿರರಾಮ ಮಹಾಮುನೇ ।**
**ಸಸ್ಮಿತಂ ತುಲಸೀ ತುಷ್ಟಾ ಪ್ರವಕ್ತುಮುಪಚಕ್ರಮೇ ॥೭೩॥**

॥ ತುಲಸ್ಯುವಾಚ ॥

**ಏವಂ ವಿಧೋ ಬುಧೋ ನಿತ್ಯಂ ವಿಶ್ವೇಷು ಚ ಪ್ರಶಂಸಿತಃ ।**
**ಕಾಂತಮೇವಂ ವಿಧಂ ಕಾಂತಾ ಶಶ್ವದಿಚ್ಛತಿ ಕಾಮತಃ ॥೭೪॥**

**ತ್ವಯಾಽಹಮಧುನಾ ಸತ್ಯಂ ವಿಚಾರೇಣ ಪರಾಜಿತಾ ।**
**ಸನಿಂದಿತಶ್ಚಾಪ್ಯಶುಚಿಃ ಯಃ ಪುಮಾಂಶ್ಚ ಸ್ತ್ರಿಯಾ ಜಿತಃ ॥೭೫॥**

---

ಹಿಂದಿನ ಜನ್ಮವನ್ನು ಸ್ಮರಿಸುತ್ತಿರುವ ನಾನು ಇದೆಲ್ಲವನ್ನೂ ಕೃಷ್ಣಮಂತ್ರದ ಮಹಿಮೆಯಿಂದ ತಿಳಿದಿರುವೆನು. ಹಿಂದಿನ ಜನ್ಮವನ್ನು ತಿಳಿದಿರುವ ಎಲೈ ತುಲಸಿಯೇ, ನೀನೂ ಪೂರ್ವಜನ್ಮದಲ್ಲಿ ಕೃಷ್ಣನಿಂದ ಭೋಗಿಸಲ್ಪಟ್ಟಿರುವೆ. ॥೭೧॥

ರಾಧೆಯ ಕೋಪದ ಫಲವಾಗಿ ನೀನು ಭರತ ವರ್ಷದಲ್ಲಿ ಹುಟ್ಟಿರುವೆ. ನಿನ್ನನ್ನು ಭೋಗಿಸಲು ನಾನು ಬಹಳವಾಗಿ ಅಪೇಕ್ಷಿಸಿದರೂ ನೀನು ಒಪ್ಪದಿದ್ದರೆ ರಾಧೆಯ ಭಯದಿಂದ ಸುಮ್ಮನಿರಬೇಕಾಗಿದೆ. ॥೭೨॥

ಎಲೈ ಮುನಿಶ್ರೇಷ್ಠನಾದ ನಾರದನೇ, ಹೀಗೆ ಹೇಳಿ ಶಂಖಚೂಡನು ಸುಮ್ಮನಾಗಲು ತುಲಸಿಯು ಮಂದಹಾಸದಿಂದ ಮುಂದೆ ಹೇಳಲು ಪ್ರಾರಂಭಿಸಿದಳು.॥೭೩॥

ತುಲಸಿಯು ಹೇಳಿದಳು—ಪ್ರಪಂಚದಲ್ಲೆಲ್ಲಾ ಯಾವಾಗಲೂ ಹೊಗಳಲ್ಪಟ್ಟಿರುವ, ಪಂಡಿತನಾದ ನಿನ್ನಂತಹ ಪುರುಷನನ್ನು, ಯಾವ ಸ್ತ್ರೀಯುತಾನೇ ಅನುರಾಗದಿಂದ ಪತಿಯನ್ನಾಗಿ ಹೊಂದಲಪೇಕ್ಷಿಸುವುದಿಲ್ಲ? ॥೭೪॥

ನಾನು ನಿನ್ನಿಂದ ಈಗ ನಿಜವಾಗಿಯೂ ಶಾಸ್ತ್ರಾರ್ಥ ವಿಮರ್ಶೆಯಿಂದ ಗೆಲ್ಲಲ್ಪಟ್ಟಿರುವೆನು. ಯಾವ ಮನುಷ್ಯನು ಹೆಂಗುಸಿನಿಂದ ಜಯಿಸಲ್ಪಡುವನೋ ಅವನು ಅತ್ಯಂತ ದೂಷಣೆಗೆ ಪಾತ್ರನೂ ಅಪರಿಶುದ್ಧನೂ ಆಗಿರುವನು. ॥೭೫॥

ನಿಂದಂತಿ ಪಿತರೋ ದೇವಾ ಬಾಂಧವಾಃ ಸ್ತ್ರೀಜಿತಂ ನರಂ ।
ಸ್ತ್ರೀಜಿತಂ ಮನಸಾ ಮಾತಾ ಪಿತಾ ಭ್ರಾತಾ ಚ ನಿಂದತಿ ॥೭೬॥

ಶುದ್ಧೋ ವಿಪ್ರೋ ದಶಾಹೇನ ಜಾತಕೇ ಮೃತಕೇ ಯಥಾ ।
ಭೂಮಿಪೋ ದ್ವಾದಶಾಹೇನ ವೈಶ್ಯಃ ಪಂಚದಶಾಹತಃ ॥೭೭॥

ಶೂದ್ರೋ ಮಾಸೇನ ವೇದೇಷು ಮಾತೃವದ್ಧೀನಸಂಕರಃ ।
ಅಶುಚಿಃ ಸ್ತ್ರೀಜಿತಃ ಶುದ್ಧ್ಯೇಚ್ಚಿತಾದಹನಕಾಲತಃ ॥೭೮॥

ನ ಗೃಹ್ಣಂತೀಚ್ಛಯಾ ತಸ್ಯ ಪಿತರಃ ಪಿಂಡತರ್ಪಣಂ ।
ನ ಗೃಹ್ಣಂತೀವ ದೇವಾಶ್ಚ ತಸ್ಯ ಪುಷ್ಪಜಲಾದಿಕಂ ॥೭೯॥

---

ಹೆಂಗುಸಿನಿಂದ ಜಯಿಸಲ್ಪಟ್ಟಿರುವವನನ್ನು ಪಿತೃಗಳೂ, ದೇವತೆಗಳೂ, ಬಂಧುಗಳೂ, ದೂಷಿಸುವರು ಮತ್ತು ಅವನನ್ನು ತಾಯಿ ತಂದೆಗಳೂ ಅಣ್ಣತಮ್ಮಂದಿರೂ ಮನಸ್ಸಿನಿಂದಲೇ ದೂಷಿಸುವರು. ॥೭೬॥

ಜಾತಾಶೌಚ ಮೃತಾಶೌಚಗಳಲ್ಲಿ ಯಾವ ರೀತಿಯಾಗಿ ಬ್ರಾಹ್ಮಣನು ಹತ್ತು ದಿನಗಳು ಕಳೆದ ಮೇಲೂ, ರಾಜನು ಹನ್ನೆರಡು ದಿನಗಳಾದ ಮೇಲೂ, ವೈಶ್ಯನು ಹದಿನೈದು ದಿನಗಳಾದ ಮೇಲೂ ಶುದ್ಧಿ ಹೊಂದುವರೋ ಹಾಗೆ ಶೂದ್ರನು ಒಂದು ತಿಂಗಳು ಕಳೆದ ಮೇಲೆ ಶುದ್ಧಿಹೊಂದುವನು. ವೇದಗಳಲ್ಲಿ ವರ್ಣಸಾಂಕರ್ಯ ವಿಷಯದಲ್ಲಿ ಪುರುಷನಿಗೆ, ತನ್ನ ತಾಯಿಯು ಯಾವ ಜಾತಿಯಲ್ಲಿ ಹುಟ್ಟಿರುವಳೋ ಆ ಜಾತಿಗೆ ಉಕ್ತವಾಗಿರುವ ಆ ಶೌಚ ಪರಿಪಾಲನೆಯಿಂದ ಶುದ್ಧಿಯು ಹೇಳಲ್ಪಟ್ಟಿರುವುದು. ಹೆಂಗುಸಿನಿಂದ ಜಯಿಸಲ್ಪಟ್ಟಿರುವವನಾದರೋ ದೇಹಾಂತವಾದ ಪ್ರಾಯಶ್ಚಿತ್ತದಿಂದಲೇ ಶುದ್ಧಿಹೊಂದುವನು. ॥೭೭-೭೮॥

ಸ್ತ್ರೀಜಿತನಾದ ಪುರುಷನಿಂದ ಮಾಡಲ್ಪಟ್ಟಿರುವ ಪಿಂಡಪ್ರದಾನ ತರ್ಪಣಾದಿಗಳನ್ನು ಅವನ ಪಿತೃಗಳು ವಿಶ್ವಾಸದಿಂದ ಸ್ವೀಕರಿಸುವುದಿಲ್ಲ. ದೇವತೆಗಳೂ ಸಹ ಅವನು ಪೂಜಾದಿ ಸಮಯದಲ್ಲಿ ಅರ್ಪಿಸುವ ಹೂವು, ನೀರು, ಮೊದಲಾದುವುಗಳನ್ನು ಸ್ವೀಕಾರಮಾಡುವುದಿಲ್ಲ. ॥೭೯॥

ಕಿಂ ವಾ ಜ್ಞಾನೇನ ತಪಸಾ ಜಪಹೋಮಪ್ರಪೂಜನೈಃ ।
ಕಿಂ ವಿದ್ಯಯಾ ಚ ಯಶಸಾ ಸ್ತ್ರೀಭಿರ್ಯಸ್ಯ ಮನೋ ಹೃತಂ ॥೮೦॥

ವಿದ್ಯಾಪ್ರಭಾವಜ್ಞಾನಾರ್ಥಂ ಮಯಾ ತ್ವಂ ಚ ಪರೀಕ್ಷಿತಃ ।
ಕೃತ್ವಾ ಪರೀಕ್ಷಾಂ ಕಾಂತಸ್ಯ ವೃಣೋತಿ ಕಾಮಿನೀ ವರಂ ॥೮೧॥

ವರಾಯ ಗುಣಹೀನಾಯ ವೃದ್ಧಾಯಾಜ್ಞಾನಿನೇ ತಥಾ ।
ದರಿದ್ರಾಯ ಚ ಮೂರ್ಖಾಯ ರೋಗಿಣೇ ಕುತ್ಸಿತಾಯ ಚ ॥೮೨॥

ಅತ್ಯಂತಕೋಪಯುಕ್ತಾಯ ಚಾತ್ಯಂತದುರ್ಮುಖಾಯ ಚ ।
ಪಂಗವೇ ಚಾಂಗಹೀನಾಯ ಚಾಂಧಾಯ ಬಧಿರಾಯ ಚ ॥೮೩॥

ಜಡಾಯ ಚೈವ ಮೂಕಾಯ ಕ್ಲೀಬತುಲ್ಯಾಯ ಪಾಪಿನೇ ।
ಬ್ರಹ್ಮಹತ್ಯಾಂ ಲಭೇತ್ಸೋಽಪಿ ಸ್ವಕನ್ಯಾಂ ಪ್ರದದಾತಿ ಯಃ ॥೮೪॥

---

ಯಾವ ಮನುಷ್ಯನ ಮನಸ್ಸು ಹೆಂಗುಸಿನಿಂದ ಅಪಹರಿಸಲ್ಪಟ್ಟಿರುವುದೋ, ಅವನ ಜ್ಞಾನ, ತಪಸ್ಸು, ಜಪ, ಹೋಮ, ಪೂಜೆ, ವಿದ್ಯೆ, ಯಶಸ್ಸು, ಇವುಗಳಿಂದ ಯಾವ ಪ್ರಯೋಜನವೂ ಇಲ್ಲ. ॥೮೦॥

ನಾನು ನಿನ್ನನ್ನು ನಿನಗಿರುವ ವಿದ್ಯಾಮಹಿಮೆಯನ್ನು ತಿಳಿಯುವುದಕ್ಕೋಸ್ಕರ ಪರೀಕ್ಷಿಸಿದೆನು. ಉತ್ತಮ ಸ್ತ್ರೀಯು ಪುರುಷನ ಗುಣಗಳನ್ನು ಮೊದಲು ಪರೀಕ್ಷೆಮಾಡಿ ಅನಂತರದಲ್ಲಿ ಅವನನ್ನು ವರಿಸುವಳು. ॥೮೧॥

ಯಾವ ತಂದೆಯು ತನ್ನ ಮಗಳನ್ನು ಸದ್ಗುಣಯುಕ್ತನಲ್ಲದವನೂ, ವೃದ್ಧನೂ, ಜ್ಞಾನಹೀನನೂ, ದರಿದ್ರನೂ, ಮೂರ್ಖನೂ, ರೋಗಿಯೂ, ದುಷ್ಟಸ್ವಭಾವಶೀಲನೂ, ಅತಿ ಕೋಪಿಷ್ಠನೂ ವಿಕಾರಮುಖವುಳ್ಳವನೂ, ಕುಳ್ಳನೂ, ಅಂಗಹೀನನೂ, ಕುರುಡನೂ, ಕಿವುಡನೂ, ಜಡಸ್ವಭಾವವುಳ್ಳವನೂ, ಮೂಗನೂ, ನಪುಂಸಕನಿಗೆ ಸಮಾನನಾದವನೂ, ಪಾಪಕರ್ಮನಿರತನೂ, ಆದ ಪುರುಷನಿಗೆ ವಿವಾಹಮಾಡಿಕೊಡುವನೋ ಅವನು ಬ್ರಹ್ಮಹತ್ಯಾಪಾತಕಕ್ಕೆ ಸಮಾನವಾದ ಪಾಪವನ್ನು ಹೊಂದುವನು. ॥೮೨-೮೩-೮೪॥

ಶಾಂತಾಯ ಗುಣಿನೇ ಚೈವ ಯೂನೇ ಚ ವಿದುಷೇಽಪಿ ಚ ।
ಸಾಧವೇ ಚ ಸುತಾಂ ದತ್ವಾ ದಶಯಜ್ಞಫಲಂ ಲಭೇತ್ ॥೮೫॥

ಯಃ ಕನ್ಯಾಪಾಲನಂ ಕೃತ್ವಾ ಕರೋತಿ ಯದಿ ವಿಕ್ರಯಂ ।
ವಿಕ್ರೇತಾ ಧನಲೋಭೇನ ಕುಂಭೀಪಾಕಂ ಸ ಗಚ್ಛತಿ ॥೮೬॥

ಕನ್ಯಾಮೂತ್ರಂ ಪುರೀಷಂ ಚ ತತ್ರ ಭಕ್ಷತಿ ಪಾತಕೀ ।
ಕೃಮಿಭಿಃ ದಂಶಿತಃ ಕಾಕೈಃ ಯಾವದಿಂದ್ರಾಶ್ಚತುರ್ದಶ ॥೮೭॥

ತದಂತೇ ವ್ಯಾಧಿಸಂಯುಕ್ತಃ ಸಲಭೇಜ್ಜನ್ಮ ನಿಶ್ಚಿತಂ ।
ವಿಕ್ರೀಣಾತಿ ಮಾಂಸಭಾರಂ ವಹತ್ಯೇವ ದಿವಾನಿಶಂ ॥೮೮॥

ಇತ್ಯೇವಮುಕ್ತ್ವಾ ತುಲಸೀ ವಿರರಾಮ ತಪೋನಿಧೇ ।

---

ಶಾಂತಸ್ವಭಾವವುಳ್ಳವನೂ, ಸದ್ಗುಣಿಯೂ, ಯುವಕನೂ, ವಿದ್ವಾಂಸನೂ, ಸಾಧುಸ್ವಭಾವವುಳ್ಳವನೂ, ಆದ ಪುರುಷನಿಗೆ ಕನ್ಯಾಪ್ರದಾನ ಮಾಡುವವನಿಗೆ ಹತ್ತು ಯಜ್ಞಗಳನ್ನು ಮಾಡಿದಷ್ಟು ಪುಣ್ಯವು ದೊರೆಯುವುದು. ॥೮೫॥

ಯಾವನು ಮಗಳನ್ನು ಪೋಷಣೆಮಾಡಿ ಧನದಾಸೆಯಿಂದ ಅವಳನ್ನು ಮಾರುವನೋ ಅವನು ಕುಂಭೀಪಾಕವೆಂಬ ನರಕವನ್ನು ಹೊಂದುವನು. ॥೮೬॥

ಪಾಪಿಷ್ಠನಾದ ಅಂತಹ ತಂದೆಯು ಆ ನರಕದಲ್ಲಿ ಮಗಳ ಮೂತ್ರಪುರೀಷಗಳನ್ನು ಭಕ್ಷಿಸುತ್ತಾ, ಹುಳುಗಳಿಂದಲೂ, ಕಾಗೆಗಳಿಂದಲೂ ಹಿಂಸಿಸಲ್ಪಡುತ್ತಾ ಹದಿನಾಲ್ಕು ಇಂದ್ರರು ಇರುವವರೆಗೂ ಕಷ್ಟಪಡುತ್ತಾ ಬಿದ್ದಿರುವನು. ॥೮೭॥

ಅನಂತರದಲ್ಲಿ ಮುಂದಿನ ಜನ್ಮದಲ್ಲಿ ರೋಗಪೀಡಿತನಾಗಿಯೇ ಇರುತ್ತಾ ಹಗಲು ರಾತ್ರಿಯೂ ಮಾಂಸ ವಿಕ್ರಯಾದಿಗಳನ್ನು ಮಾಡುತ್ತಾ ಕಷ್ಟಪಡುವನು.॥೮೮॥

ಎಲೈ ನಾರದನೇ ! ಹೀಗೆ ಹೇಳಿ ತುಳಸಿಯು ಸುಮ್ಮನಾದಳು.

(ಈ ಸಮಯಕ್ಕೆ ಸರಿಯಾಗಿ ಬ್ರಹ್ಮನು ಅಲ್ಲಿಗೆ ಬಂದು ಅವರಿಬ್ಬರನ್ನು ಕುರಿತು ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.)

॥ ಬ್ರಹ್ಮೋವಾಚ ॥

ಕಿಂ ಕರೋಷಿ ಶಂಖಚೂಡ ಸಂವಾದಮನಯಾ ಸಹ ॥೮೯॥

ಗಾಂಧರ್ವೇಣ ವಿವಾಹೇನ ತ್ವಂ ಚಾಽಸ್ಯಾ ಗ್ರಹಣಂ ಕುರು ।
ಪುರುಷೇಷ್ವಸಿ ರತ್ನಸ್ತ್ವಂ ಸ್ತ್ರೀಷು ರತ್ನಂ ತ್ವಿಯಂ ಸತೀ ॥೯೦॥

ವಿದಗ್ಧಾಯಾ ವಿದಗ್ಧೇನ ಸಂಗಮೋ ಗುಣವಾನ್ ಭವೇತ್ ।
ನಿರ್ವಿರೋಧಸುಖಂ ರಾಜನ್ ಕೋ ವಾ ತ್ಯಜತಿ ದುರ್ಲಭಂ ॥೯೧॥

ಯೋಽವಿರೋಧಸುಖತ್ಯಾಗೀ ಸ ಪಶುರ್ನಾತ್ರ ಸಂಶಯಃ ।
ಕಿಂ ಪರೀಕ್ಷಸಿ ತ್ವಂ ಕಾಂತಮೀದೃಶಂ ಗುಣಿನಂ ಸತೀ ॥೯೨॥

ದೇವಾನಾಮಸುರಾಣಾಂ ಚ ದಾನವಾನಾಂ ವಿಮರ್ದಕಂ ।
ಯಥಾ ಲಕ್ಷ್ಮೀಶ್ಚ ಲಕ್ಷ್ಮೀಶೇ ಯಥಾ ಕೃಷ್ಣೇ ಚ ರಾಧಿಕಾ ॥೯೩॥

---

ಬ್ರಹ್ಮನು ಹೇಳಿದನು—ಎಲೈ ಶಂಖಚೂಡನೇ! ಏತಕ್ಕೆ ಈ ತುಲಸಿಯೊದಿಂಗೆ ವಾದಮಾಡುತ್ತಿರುವೆ? ॥೮೯॥

ಗಾಂಧರ್ವವಿವಾಹರೀತಿಯಂತೆ ನೀನು ಇವಳನ್ನು ಸ್ವೀಕರಿಸು. ಪುರುಷರಲ್ಲಿ ನೀನು ಶ್ರೇಷ್ಠನು. ಸ್ತ್ರೀಯರಲ್ಲಿ ಇವಳು ಶ್ರೇಷ್ಠಳು. ॥೯೦॥

ಅತ್ಯಂತ ಗುಣಯುಕ್ತಳಾದವಳಿಗೆ ಗುಣವಂತನೊಡನೆ ಸಂಬಂಧವು ಬಹಳ ಯುಕ್ತವಾದುದು. ಎಲೈ ರಾಜನಾದ ಶಂಖಚೂಡನೇ, ಯಾವನು ತಾನೇ ವಿರೋಧವಿಲ್ಲದ ಅಲಭ್ಯವಾದ ಸುಖವು ಸಿಕ್ಕಿದರೆ ಅದನ್ನು ಬಿಡುವನು? ॥೯೧॥

ಯಾವನು ವಿರೋಧವಿಲ್ಲದ ಸುಖವು ಸಿಕ್ಕಿರುವಾಗಲೂ ಅದನ್ನು ಬಿಟ್ಟು ಬಿಡುವನೋ ಅವನು ಪಶುಪ್ರಾಯನೆಂಬುವುದರಲ್ಲಿ ಸಂದೇಹವಿಲ್ಲ. ಎಲೈ ತುಲಸಿಯೇ, ಇಷ್ಟು ಗುಣವಂತನಾದ ಈ ಶಂಖಚೂಡನನ್ನು ವರಿಸಲು ಏತಕ್ಕೆ ಇನ್ನೂ ಪರೀಕ್ಷಿಸುತ್ತಿರುವೆ? ॥೯೨॥

ದೇವದಾನವ ರಾಕ್ಷಸರನ್ನೆಲ್ಲಾ ಜಯಿಸಿರುವ ಈ ಶಂಖಚೂಡನನ್ನು ವರಿಸು. ಲಕ್ಷ್ಮೀದೇವಿಯು ವಿಷ್ಣುವಿನಲ್ಲೂ, ರಾಧೆಯು ಶ್ರೀ ಕೃಷ್ಣನಲ್ಲೂ, ॥೯೩॥

ಯಥಾ ಮಯಿ ಚ ಸಾವಿತ್ರೀ ಭವಾನೀ ಚ ಭವೇ ಯಥಾ ।
ಯಥಾ ಧರಾ ವರಾಹೇ ಚ ದಕ್ಷಿಣಾ ಚ ಯಥಾಽಧ್ವರೇ ॥೯೪॥

ಯಥಾಽತ್ರೇರನಸೂಯಾ ಚ ದಮಯಂತೀ ಯಥಾನಲೇ ।
ರೋಹಿಣೀ ಚ ಯಥಾ ಚಂದ್ರೇ ಯಥಾ ಕಾಮೇ ರತಿಃ ಸದಾ ॥೯೫॥

ಯಥಾಽದಿತಿಃ ಕಶ್ಯಪೇ ಚ ವಸಿಷ್ಠೇಽರುಂಧತೀ ಸತೀ ।
ಯಥಾಽಹಲ್ಯಾ ಗೌತಮೇ ಚ ದೇವಹೂತಿಶ್ಚ ಕರ್ದಮೇ ॥೯೬॥

ಯಥಾ ಬೃಹಸ್ಪತೌ ತಾರಾ ಶತರೂಪಾ ಮನೌ ಯಥಾ ।
ಯಥಾ ಚ ದಕ್ಷಿಣಾ ಯಜ್ಞೇ ಯಥಾ ಸ್ವಾಹಾ ಹುತಾಶನೇ ॥೯೭॥

ಯಥಾ ಶಚೀ ಮಹೇಂದ್ರೇ ಚ ಯಥಾ ಪುಷ್ಟಿರ್ಗಣೇಶ್ವರೇ ।
ದೇವಸೇನಾ ಯಥಾ ಸ್ಕಂಧೇ ಧರ್ಮೇ ಮೂರ್ತಿರ್ಯಥಾ ಸತೀ ॥೯೮॥

ಸೌಭಾಗ್ಯಾ ಸುಪ್ರಿಯಾ ತ್ವಂ ಚ ಶಂಖಚೂಡೇ ತಥಾ ಭವ ।
ಅನೇನ ಸಾರ್ಧಂ ಸುಚಿರಂ ಸುಂದರೇಣ ಚ ಸುಂದರೀ ॥೯೯॥

---

ಸಾವಿತ್ರಿಯು ನನ್ನಲ್ಲೂ, ಭವಾನಿಯು ಈಶ್ವರನಲ್ಲೂ, ಧರಾದೇವಿಯು ವರಾಹ ಮೂರ್ತಿಯಲ್ಲೂ, ದಕ್ಷಿಣಾದೇವಿಯು ಯಜ್ಞಪುರುಷನಲ್ಲೂ, ॥೯೪॥

ಅನುಸೂಯೆಯು ಅತ್ರಿಮಹರ್ಷಿಗಳಲ್ಲೂ, ದಮಯಂತಿಯು ನಳನಲ್ಲೂ, ರೋಹಿಣಿಯು ಚಂದ್ರನಲ್ಲೂ, ರತಿಯು ಮನ್ಮಥನಲ್ಲೂ, ॥೯೫॥

ದಿತಿಯು ಕಶ್ಯಪನಲ್ಲೂ, ಅರುಂಧತಿಯು ವಸಿಷ್ಠನಲ್ಲೂ, ಅಹಲ್ಯೆಯು ಗೌತಮನಲ್ಲೂ, ದೇವಹೂತಿಯು ಕರ್ದಮನಲ್ಲೂ, ॥೯೬॥

ತಾರೆಯು ಬೃಹಸ್ಪತಿಯಲ್ಲೂ, ಶತರೂಪಾದೇವಿಯು ಮನುವಿನಲ್ಲೂ, ದಕ್ಷಿಣಾ ದೇವಿಯು ಯಜ್ಞಪುರುಷನಲ್ಲೂ, ಸ್ವಾಹಾದೇವಿಯು ಅಗ್ನಿಯಲ್ಲೂ, ॥೯೭॥

ಶಚೀದೇವಿಯು ಮಹೇಂದ್ರನಲ್ಲೂ, ಪುಷ್ಟಿಯು ಗಣೇಶ್ವರನಲ್ಲೂ, ದೇವ ಸೇನೆಯು ಸ್ಕಂದನಲ್ಲೂ, ಮೂರ್ತಿಯು ಧರ್ಮದೇವತೆಯಲ್ಲೂ, ॥೯೮॥

ಹೇಗೆ ವಿಶ್ವಾಸಯುಕ್ತರಾಗಿರುವರೋ ಹಾಗೆಯೇ ನೀನೂ ಕೂಡ ಶಂಖ ಚೂಡನಿಗೆ ಪ್ರೇಮಪಾತ್ರಳಾಗು. ಎಲೈ ಸುಂದರಿಯಾದ ತುಲಸಿಯೇ, ಇವನೊಡನೆ ನೀನು ಬಹುಕಾಲದವರೆಗೂ, ॥೯೯॥

**ಸ್ಥಾನೇ ಸ್ಥಾನೇ ವಿಹಾರಂ ಚ ಯಥೇಚ್ಛಂ ಕುರು ಸಂತತಂ ।**
**ಪಶ್ಚಾತ್ ಪ್ರಾಪ್ಸ್ಯಸಿ ಗೋಲೋಕೇ ಶ್ರೀಕೃಷ್ಣಂ ಪುನರೇವ ಚ ॥೧೦೦॥**
**ಚತುರ್ಭುಜಂ ಚ ವೈಕುಂಠೇ ಶಂಖಚೂಡೇ ಮೃತೇ ಸತಿ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ**
**ಅಷ್ಟಾದಶೋಽಧ್ಯಾಯಃ**

---

ಯುಕ್ತವಾದ ಸ್ಥಾನವಿಶೇಷಗಳಲ್ಲಿ ನಿನ್ನ ಇಷ್ಟಬಂದಂತೆ ವಿಹರಿಸು. ಅನಂತರ ಕಾಲಕ್ರಮದಲ್ಲಿ ಪುನಃ ನೀನು ಗೋಲೋಕದಲ್ಲಿರುವ ಶ್ರೀಕೃಷ್ಣನ ಸಾನ್ನಿಧ್ಯವನ್ನು ಹೊಂದುವೆ. ಶಂಖಚೂಡನು ಮೃತನಾದ ಮೇಲೆ ವೈಕುಂಠದಲ್ಲಿ ಆ ಚತುರ್ಭುಜನನ್ನು ಪಡೆಯುವೆ. ॥೧೦೦॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹದಿನೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ನವಮಸ್ಕಂಧೇ

### || ಏಕೋನವಿಂಶೋಽಧ್ಯಾಯಃ ||

### ಹತ್ತೊಂಬತ್ತನೆಯ ಅಧ್ಯಾಯವು

|| ನಾರದ ಉವಾಚ ||

**ವಿಚಿತ್ರಮಿದಮಾಖ್ಯಾನಂ ಭವತಾ ಸಮುದಾಹೃತಂ ।**
**ಶ್ರುತೇನ ಯೇನ ಮೇ ತೃಪ್ತಿರ್ನ ಕದಾಪಿ ಹಿ ಜಾಯತೇ ॥೧॥**

**ತತಃ ಪರಂ ತು ಯಜ್ಜಾತಂ ತತ್ತ್ವಂ ವದ ಮಹಾಮತೇ ।**

|| ನಾರಾಯಣ ಉವಾಚ ||

**ಇತ್ಯೇವಮಾಶಿಷಂ ದತ್ವಾ ಸ್ವಾಲಯಂ ಚ ಯಯೌ ವಿಧಿಃ ॥೨॥**

**ಗಾಂಧರ್ವೇಣ ವಿವಾಹೇನ ಜಗೃಹೇ ತಾಂ ಚ ದಾನವಃ ।**
**ಸ್ವರ್ಗೇ ದುಂದುಭಿವಾದ್ಯಂ ಚ ಪುಷ್ಪವೃಷ್ಟಿರ್ಬಭೂವ ಹ ॥೩॥**

---

ನಾರದನು ಹೇಳಿದನು— ಎಲೈ ಮಹಾ ಬುದ್ಧಿಶಾಲಿಯಾದ ನಾರಾಯಣ ಮುನಿಯೇ, ನಿನ್ನಿಂದ ಹೇಳಲ್ಪಟ್ಟ ಈ ಕಥಾವಿಶೇಷವು ಬಹಳ ಆಶ್ಚರ್ಯಕರವಾದುದು. ಇದನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯುಂಟಾಗುವುದಿಲ್ಲ. ಅನಂತರದಲ್ಲಿ ನಡೆದ ವೃತ್ತಾಂತವನ್ನು ನನಗೆ ಹೇಳಬೇಕು. ||೧||

ನಾರಾಯಣನು ಹೇಳಿದನು—ಈ ಪ್ರಕಾರವಾಗಿ ಅವರಿಗೆ ಆಶೀರ್ವದಿಸಿ ಬ್ರಹ್ಮನು ತನ್ನ ನಿವಾಸಕ್ಕೆ ಹೊರಟು ಹೋದನು. ರಾಕ್ಷಸ ರಾಜನಾದ ಶಂಖಚೂಡನು ಆ ತುಲಸಿಯನ್ನು ಗಾಂಧರ್ವ ವಿವಾಹ ಪ್ರಕಾರದಿಂದ ಪರಿಗ್ರಹಿಸಿದನು. ಆ ಸಮಯದಲ್ಲಿ ಸ್ವರ್ಗಲೋಕದಲ್ಲಿ ದುಂದುಭಿವಾದ್ಯವೂ ಪುಷ್ಪವೃಷ್ಟಿಯೂ ನಡೆದುವು. ||೨-೩||

ಸ ರೇಮೇ ರಾಮಯಾ ಸಾರ್ಧಂ ವಾಸಗೇಹೇ ಮನೋರಮೇ ।
ಮೂರ್ಛಾಂ ಸಂಪ್ರಾಪ ತುಲಸೀ ನವಸಂಗಮಸಂಗತಾ ॥೪॥

ನಿಮಗ್ನಾ ನಿರ್ಜಲೇ ಸಾಧ್ವೀ ಸಂಭೋಗಸುಖಸಾಗರೇ ।
ಚತುಷ್ಷಷ್ಟಿಕಲಾ ಮಾನಂ ಚತುಷ್ಷಷ್ಟಿವಿಧಂ ಸುಖಂ ॥೫॥

ಕಾಮಶಾಸ್ತ್ರೇ ಯನ್ನಿರುಕ್ತಂ ರಸಿಕಾನಾಂ ಯಥೇಪ್ಸಿತಂ ।
ಅಂಗಪ್ರತ್ಯಂಗ ಸಂಶ್ಲೇಷಪೂರ್ವಕಂ ಸ್ತ್ರೀಮನೋಹರಂ ॥೬॥

ತತ್ಸರ್ವಂ ರಸಶೃಂಗಾರೇ ಚಕಾರ ರಸಿಕೇಶ್ವರಃ ।
ಅತೀವ ರಮ್ಯದೇಶೇ ಚ ಸರ್ವಜಂತುವಿವರ್ಜಿತೇ ॥೭॥

ಪುಷ್ಪಚಂದನತಲ್ಪೇ ಚ ಪುಷ್ಪಚಂದನವಾಯುನಾ ।
ಪುಷ್ಪೋದ್ಯಾನೇ ನದೀತೀರೇ ಪುಷ್ಪಚಂದನಚರ್ಚಿತೇ ॥೮॥

ಗೃಹೀತ್ವಾ ರಸಿಕೋ ರಾಸೇ ಪುಷ್ಪಚಂದನಚರ್ಚಿತಾಂ ।
ಭೂಷಿತೋ ಭೂಷಣೇನ್ನೈವ ರತ್ನಭೂಷಣಭೂಷಿತಾಂ ॥೯॥

---

ಆ ಶಂಖಚೂಡನು ತುಲಸಿಯೊಡನೆ ರಮಣೀಯವಾದ ಗೃಹದಲ್ಲಿ ಕ್ರೀಡಿಸುವಾಗ ಅವಳು ಹೊಸದಾದ ಕ್ರೀಡೆಯ ಸುಖಾಧಿಕ್ಯದಿಂದ ಮೂರ್ಛೆಹೊಂದಿದಳು. ॥೪॥

ಆ ತುಲಸಿಯು ಸಂಭೋಗರೂಪವಾದ ಸುಖಮಯವಾದ ಸಮುದ್ರದಲ್ಲಿ ನೀರಿಲ್ಲದೆ ಮುಳುಗಿಹೋದಳು. ಅಪಾರವಾದ ಸಂಭೋಗಸುಖವನ್ನನುಭವಿಸಿದಳೆಂದು ಭಾವವು. ಅರವತ್ತುನಾಲ್ಕು ಕಲೆಗಳೆಂದೂ, ಅರವತ್ತುನಾಲ್ಕು ಪ್ರಕಾರವಾದ ಸುಖಗಳೆಂದೂ, ॥೫॥

ಕಾಮಶಾಸ್ತ್ರದಲ್ಲಿ ರಸಿಕರಿಗೆ ಹೇಳಿರುವ ರೀತಿಯಲ್ಲಿ ಆ ಶಂಖಚೂಡನು ಆಯಾಯ ಅವಯವಗಳ ಸಂಬಂಧವಿಶೇಷಗಳಿಂದ ಆ ತುಲಸಿಗೆ ಹಿತವನ್ನುಂಟುಮಾಡುತ್ತಾ, ರಸಿಕಾಗ್ರೇಸರನಾದ ಆತನು ಆ ಕ್ರೀಡಾವಿಶೇಷಗಳನ್ನೆಲ್ಲವನ್ನೂ ನಿರ್ಜನವೂ, ರಮಣೀಯವೂ, ಆದ ಪ್ರದೇಶಗಳಲ್ಲಿ ಅನುಭವಿಸಿದನು. ॥೬-೭॥

ಹೂವು ಗಂಧಗಳಿಂದ ಸುವಾಸನಾಸಕ್ತವಾದ ಗಾಳಿಯು ಬೀಸುವ ಪ್ರದೇಶದಲ್ಲೂ, ಹೂವು, ಗಂಧಗಳಿಂದ ಪರಿಮಳಯುಕ್ತವಾದ ಹಾಸಿಗೆಯಲ್ಲೂ ಹೂ ತೋಟದಲ್ಲೂ, ಪುಷ್ಪಚಂದನಗಳಿಂದ ಶೋಭಿತವಾದ ನದೀತೀರದಲ್ಲೂ, ರಸಿಕನಾದ ಆ ಶಂಖ

ಸುರತೇ ವಿರತಿರ್ನಾಸ್ತಿ ತಯೋಃ ಸುರತವಿಜ್ಞಯೋಃ ।
ಜಹಾರ ಮಾನಸಂ ಭರ್ತುಃ ಲೋಲಯಾ ಲೀಲಯಾ ಸತೀ ॥೧೦॥

ಚೇತನಾಂ ರಸಿಕಾಯಾಶ್ಚ ಜಹಾರ ರಸಭಾವವಿತ್ ।
ವಕ್ಷಸಶ್ಚಂದನಂ ರಾಜ್ಞಸ್ತಿಲಕಂ ವಿಜಹಾರ ಸಾ ॥೧೧॥

ಸ ಚ ಜಹಾರ ತಸ್ಯಾಶ್ಚ ಸಿಂದೂರಂ ಬಿಂದುಪತ್ರಕಂ ।
ಸ ತದ್ವಕ್ಷಸ್ಯುರೋಜೇ ಚ ನಖರೇಖಾಂ ದದೌ ಮುದಾ ॥೧೨॥

ಸಾ ದದೌ ತದ್ವಾಮಪಾರ್ಶ್ವೇ ಕರಭೂಷಣಲಕ್ಷಣಂ ।
ರಾಜಾ ತದೋಷ್ಠಪುಟಕೇ ದದೌ ರದನದಂಶನಂ ॥೧೩॥

ತದ್ಗಂಡಯುಗಲೇ ಸಾ ಚ ಪ್ರದದೌ ತಚ್ಚತುರ್ಗುಣಂ ।
ಆಲಿಂಗನಂ ಚುಂಬನಂ ಚ ಜಂಘಾದಿಮರ್ದನಂ ತಥಾ ॥೧೪॥

---

ಚೂಡನು ಆಭರಣಗಳಿಂದ ಅಲಂಕೃತನಾಗಿ ರತ್ನಾಭರಣಗಳಿಂದ ಅಲಂಕೃತಳಾದ ಆ ತುಲಸಿಯೊಡನೆ ಕೂಡಿ ಸುಖಿಸಿದನು. ||೮-೯||

ಕ್ರೀಡಾಕುಶಲರಾದ ಅವರಿಬ್ಬರಿಗೂ ಕ್ರೀಡೆಯಲ್ಲಿ ತೃಪ್ತಿಯಾಗಲೇ ಇಲ್ಲ. ಪತಿಯಲ್ಲಿ ಅನುರಕ್ತಳಾದ ಆ ತುಲಸಿಯು ಶಂಖಚೂಡನ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದಳು. ||೧೦||

ಶೃಂಗಾರಪೂರಿತವಾದ ರಸಭಾವಗಳನ್ನು ತಿಳಿದಿರುವ ಆ ಶಂಖಚೂಡನು ರಸಿಕಳಾದ ಆ ತುಲಸಿಯ ಹೃದಯವನ್ನು ವಿಶೇಷವಾಗಿ ಅಪಹರಿಸಿದನು. ಕ್ರೀಡಾ ಸಮಯದಲ್ಲಿ ಆ ತುಲಸಿಯು ರಾಜನ ಎದೆಯ ಗಂಧವನ್ನು ಹಣೆಯ ತಿಲಕವನ್ನೂ ಅಪಹರಿಸಿದಳು. ||೧೧||

ಶಂಖಚೂಡನು ಅವಳ ಲಲಾಟದಲ್ಲಿದ್ದ ಎಲೆಯ ಆಕಾರವಾಗಿ ಬರೆದಿರುವ ಸಿಂಧೂರದ ಬಿಂದುವನ್ನು ಅಪಹರಿಸಿದನು. ಮತ್ತು ಅವಳ ಎದೆ, ಸ್ತನ ಪ್ರದೇಶ ಗಳಲ್ಲಿ ಸಂತೋಷದಿಂದ ನಖಕ್ಷತಗಳನ್ನು ಮಾಡಿದನು. ||೧೨||

ಆ ತುಲಸಿಯು ರಾಜನ ಎಡಭಾಗದಲ್ಲಿ ಕೈಬಡವೆಗಳಿಂದ ಗುರುತನ್ನು ಮಾಡಿದಳು. ಅವನು ಅವಳ ತುಟಿಗಳ ಮೇಲೂ ಹಲ್ಲುಗಳಿಂದ ಗುರುತುಮಾಡಿದನು.||೧೩||

ಆ ತುಲಸಿಯು ಅವನ ಗಂಡಪ್ರದೇಶದಲ್ಲಿ ನಾಲ್ಕರಷ್ಟು ಗುರುತುಮಾಡಿದಳು. ಅವರು ಪರಸ್ಪರ ಆಲಿಂಗನ, ಚುಂಬನ, ಜಂಘಮರ್ದನ ಇವೇ ಮೊದಲಾದ ಕ್ರೀಡಾ

ಏವಂ ಪರಸ್ಪರಂ ಕ್ರೀಡಾಂ ಚಕ್ರತುಸ್ತೌ ವಿಜಾನತೌ ।
ಸುರತೇ ವಿರತೇ ತೌ ಚ ಸಮುತ್ಥಾಯ ಪರಸ್ಪರಂ ॥೧೫॥

ಸುವೇಷಂ ಚಕ್ರತುಸ್ತತ್ರ ಯದ್ಯನ್ಮನಸಿ ವಾಂಛಿತಂ ।
ಚಂದನೈಃ ಕುಂಕುಮಾರಕ್ತೈಃ ಸಾ ತಸ್ಯ ತಿಲಕಂ ದದೌ ॥೧೬॥

ಸರ್ವಾಂಗೇ ಸುಂದರೇ ರಮ್ಯೇ ಚಕಾರ ಚಾನುಲೇಪನಂ ।
ಸುವಾಸಂ ಚೈವ ತಾಂಬೂಲಂ ವಹ್ನಿಶುದ್ಧೇ ಚ ವಾಸಸೀ ॥೧೭॥

ಪಾರಿಜಾತಸ್ಯ ಕುಸುಮಂ ಜರಾರೋಗಹರಂ ಪರಂ ।
ಅಮೂಲ್ಯರತ್ನನಿರ್ಮಾಣಂ ಅಂಗುಲೀಯಕಮುತ್ತಮಂ ॥೧೮॥

ಸುಂದರಂ ಚ ಮಣಿವರಂ ತ್ರಿಷು ಲೋಕೇಷು ದುರ್ಲಭಂ ।
ದಾಸೀ ತವಾಹ ಮಿತ್ಯೇವಂ ಸಮುಚ್ಚಾರ್ಯ ಪುನಃ ಪುನಃ ॥೧೯॥

---

ವಿಶೇಷವನ್ನು ಅನುಭವಿಸುತ್ತಾ, ಹೀಗೆ ಅನ್ಯೋನ್ಯವಾಗಿ ಅಭಿಜ್ಞರಾದ ಅವರಿಬ್ಬರೂ ಕ್ರೀಡಿಸುತ್ತಾ ಕ್ರೀಡೆಯಿಂದ ತೃಪ್ತರಾಗಿ ಮೇಲಕ್ಕೆ ಎದ್ದರು. ||೧೪-೧೫||

ಆಮೇಲೆ ತಮ್ಮ ತಮ್ಮ ಮನಸ್ಸಿಗೆ ಇಷ್ಟವಾಗುವಂತೆ ವಸ್ತ್ರಾಧರಣಗಳಿಂದ ಅಲಂಕಾರ ಮಾಡಿಕೊಂಡರು. ಆ ತುಲಸಿಯು ಕುಂಕುಮ ಮಿಶ್ರಿತವಾದ ಗಂಧದಿಂದ ಅವನ ಹಣೆಯಲ್ಲಿ ತಿಲಕವನ್ನು ಇಟ್ಟಳು. ||೧೬||

ಮತ್ತು ಆ ತುಲಸಿಯು ಆ ಶಂಖಚೂಡನ ಸುಂದರವಾದ ಎಲ್ಲಾ ಅವಯವಗಳಲ್ಲೂ ಗಂಧವನ್ನು ಸವರಿ ಒಳ್ಳೆಯ ವಾಸನೆಯುಳ್ಳ ತಾಂಬೂಲವನ್ನು ಕೊಟ್ಟಳು ಮತ್ತು ಪರಿಶುದ್ಧವಾದ ವಸ್ತ್ರವನ್ನೂ ಸಹ ಕೊಟ್ಟಳು. ||೧೭||

ವಾರ್ಧಕ್ಯ ರೋಗಗಳನ್ನು ಪರಿಹಾರಮಾಡುವ ಪಾರಿಜಾತ ಪುಷ್ಪವನ್ನೂ ಅನರ್ಘ್ಯವಾದ ರತ್ನಗಳಿಂದ ಮಾಡಲ್ಪಟ್ಟ ಶ್ರೇಷ್ಠವಾದ ಉಂಗುರವನ್ನೂ ಸಹ ಅವನಿಗೆ ಕೊಟ್ಟಳು. ಮೂರು ಲೋಕಗಳಲ್ಲೂ ಅಲಭ್ಯವಾದ ಶ್ರೇಷ್ಠವಾದ ರತ್ನವನ್ನೂ ಸಹ ಕೊಟ್ಟು ಆ ತುಲಸಿಯು ಓ ಸ್ವಾಮಿಯೇ, ದಾಸಿಯಾದ ನಾನು ನಿನಗೆ ಅಧೀನಳು. ಎಂದು ಬಾರಿ ಬಾರಿಗೂ ಹೇಳುತ್ತಾ ||೧೮-೧೯||

ನನಾಮ ಪರಯಾ ಭಕ್ತ್ಯಾ ಸ್ವಾಮಿನಂ ಗುಣಶಾಲಿನಂ ।
ಸಸ್ಮಿತಾ ತನ್ಮುಖಾಂಭೋಜಂ ಲೋಚನಾಭ್ಯಾಂ ಪುನಃ ಪುನಃ ॥೨೦॥

ನಿಮೇಷರಹಿತಾಭ್ಯಾಂ ಚಾಽಪ್ಯಪಶ್ಯತ್ಕಾಮಸುಂದರಂ ।
ಸ ಚ ತಾಂ ಚ ಸಮಾಕೃಷ್ಯ ಚಕಾರ ವಕ್ಷಸಿ ಪ್ರಿಯಾಂ ॥೨೧॥

ಸಸ್ಮಿತಂ ವಾಸಸಾ ಚ್ಛನ್ನಂ ದದರ್ಶ ಮುಖಪಂಕಜಂ ।
ಚುಚುಂಬ ಕಠಿನೇ ಗಂಡೇ ಬಿಂಬೋಷ್ಠೌ ಪುನರೇವ ಚ ॥೨೨॥

ದದೌ ತಸ್ಯೈ ವಸ್ತ್ರಯುಗ್ಮಂ ವರುಣಾದಾಹೃತಂ ಚ ಯತ್ ।
ತದಾಹೃತಾಂ ರತ್ನಮಾಲಾಂ ತ್ರಿಷು ಲೋಕೇಷು ದುರ್ಲಭಾಂ ॥೨೩॥

ದದೌ ಮಂಜೀರಯುಗ್ಮಂ ಚ ಸ್ವಾಹಾಯಾ ಆಹೃತಂ ಚ ಯತ್ ।
ಕೇಯೂರಯುಗ್ಮಂ ಛಾಯಾಯಾ ರೋಹಿಣ್ಯಾಶ್ಚೈವ ಕುಂಡಲಂ ॥೨೪॥

---

ಸುಗುಣಗಳಿಂದ ಕೂಡಿರುವ ಆ ಶಂಖಚೂಡನ ಮುಖಕಮಲವನ್ನು ಮಂದ ಹಾಸದಿಂದ ಪದೇ ಪದೇ ನೋಡುತ್ತಾ ಅಧಿಕವಾದ ಭಕ್ತಿಯಿಂದ ನಮಸ್ಕಾರ ಮಾಡಿದಳು. ॥೨೦॥

ಮತ್ತು ಮನ್ಮಥನಂತೆ ಸುಂದರನಾದ ತನ್ನ ಪತಿಯನ್ನು ಎವೆಯಿಕ್ಕದೆ ನೋಡಿದಳು. ಅವನು ಅವಳನ್ನು ಹತ್ತಿರಕ್ಕೆ ಎಳೆದು ತನ್ನ ವಕ್ಷಃ ಪ್ರದೇಶದಲ್ಲಿ ಅವಳನ್ನು ಕೂರಿಸಿಕೊಂಡನು. ॥೨೧॥

ಆ ಶಂಖಚೂಡನು ವಸ್ತ್ರದಿಂದ ಆಚ್ಛಾದಿತವಾದ ಅವಳ ಮುಖಕಮಲವನ್ನು ನೋಡಿ ಮಂದಹಾಸದಿಂದ ಕಠಿಣವಾದ ಗಂಡಪ್ರದೇಶವನ್ನೂ ಬಿಂಬಫಲದಂತೆ ಆಕಾರ ಉಳ್ಳ ತುಟಿಗಳನ್ನೂ ಬಾರಿ ಬಾರಿಗೂ ಚುಂಬಿಸಿದನು. ॥೨೨॥

ಅವನು ಆ ತುಲಸೀದೇವಿಗೆ ವರುಣನಿಂದ ತರಲ್ಪಟ್ಟ ಎರಡು ವಸ್ತ್ರಗಳನ್ನೂ, ಮೂರು ಲೋಕಗಳಲ್ಲೂ ದುಷ್ಪ್ರಾಪ್ಯವಾದ ರತ್ನಹಾರವನ್ನೂ ಕೊಟ್ಟನು. ॥೨೩॥

ಮತ್ತು ಅಗ್ನಿಯು ಕೊಟ್ಟಿದ್ದ ಎರಡು ಕಾಲ್ಕಡಗಗಳನ್ನೂ, ಸೂರ್ಯಪತ್ನಿ ಯಾದ ಛಾಯಾದೇವಿಯಿಂದ ಕೊಡಲ್ಪಟ್ಟ ಎರಡು ತೋಳ್ಬಂದಿಗಳನ್ನೂ, ಚಂದ್ರನ ಪತ್ನಿಯಾದ ರೋಹಿಣಿಯಿಂದ ಕೊಡಲ್ಪಟ್ಟ ಎರಡು ಕುಂಡಲಗಳನ್ನೂ, ಸಹ ಅಲಂ ಕರಿಸಿಕೊಳ್ಳಲು ಕೊಟ್ಟನು. ॥೨೪॥

ಅಂಗುಲೀಯಕರತ್ನಾನಿ ರತ್ನಾಶ್ಚ ಕರಭೂಷಣಂ ।
ಶಂಖಂ ಚ ರುಚಿರಂ ಚಿತ್ರಂ ಯದ್ದತ್ತಂ ವಿಶ್ವಕರ್ಮಣಾ ॥೨೫॥

ವಿಚಿತ್ರಪದ್ಮಕಶ್ರೇಣೀಂ ಶಯ್ಯಾಂ ಚಾಪಿ ಸುದುರ್ಲಭಾಂ ।
ಭೂಷಣಾನಿ ಚ ದತ್ವಾ ಚ ಭೂಪೋ ಹಾಸಂ ಚಕಾರ ಹ ॥೨೬॥

ನಿರ್ಮಮೇ ಕಬರೀ ಭಾರೇ ತಸ್ಯಾ ಮಾಂಗಲ್ಯಭೂಷಣಂ ।
ಸುಚಿತ್ರಂ ಪದ್ಮಕಂ ಗಂಡೇ ಕಪೋಲೇsಸ್ಯಾಸ್ಸಮಂತತಃ ॥೨೭॥

ಚಂದ್ರಲೇಖಾತ್ರಿಭಿರ್ಯುಕ್ತಂ ಚಂದನೇನ ಸುಗಂಧಿನಾ ।
ಪರೀತಂ ಪರಿತಶ್ಚಿತ್ರೈಃ ಸಾರ್ಧಂ ಕುಂಕುಮಬಿಂದುಭಿಃ ॥೨೮॥
ಜ್ವಲತ್ಪ್ರದೀಪಾಕಾರಂ ಚ ಸಿಂದೂರತಿಲಕಂ ದದೌ ।

---

ಅಲ್ಲದೆ ರತೀದೇವಿಯು ಕೊಟ್ಟಿದ್ದ ಹಸ್ತಾಭರಣಗಳನ್ನೂ, ಉಂಗುರಗಳನ್ನೂ, ಇನ್ನೂ ಅನೇಕ ವಿಧವಾದ ವಿಶ್ವಕರ್ಮನಿಂದ ಕೊಡಲ್ಪಟ್ಟ ರತ್ನವಿಶೇಷಗಳನ್ನೂ, ಮನೋಹರವಾಗಿಯೂ, ಅನೇಕ ಬಣ್ಣಗಳಿಂದ ಕೂಡಿರುವುದಾಗಿಯೂ ಇರುವ ಶಂಖವನ್ನೂ ಸಹ ಧರಿಸಿಕೊಳ್ಳಲು ಕೊಟ್ಟನು. ॥೨೫॥

ಆ ದೊರೆಯಾದ ಶಂಖಚೂಡನು ನಾನಾ ಬಗೆಯ ಪದ್ಮಕಮಣಿಗಳ ಸರಗಳಿಂದ ಅಲಂಕರಿಸಲ್ಪಟ್ಟಿದ್ದ ಸಾಮಾನ್ಯ ಜನರಿಗೆ ಎಲ್ಲಿಯೂ ದೊರೆಯದಂತಹ ಹಾಸಿಗೆಯನ್ನೂ, ಆಭರಣಗಳನ್ನೂ ಆ ತುಲಸೀದೇವಿಗೆ ಕೊಟ್ಟು ಮಂದಹಾಸದಿಂದ ಸಂತೋಷವನ್ನು ಸೂಚಿಸಿದನು. ॥೨೬॥

ಅಲ್ಲದೆ ಅವಳ ಕೇಶಪಾಶದಲ್ಲಿ ರಚಿಸಿದ ಜಡೆಯ ಮೇಲುಗಡೆಯಲ್ಲಿ ಮಂಗಳಕರಗಳಾದ ಸುವರ್ಣದ ಪುಷ್ಪಾಭರಣಗಳನ್ನೂ ಮುಡಿಸಿದನು. ಮತ್ತು ಅವಳ ಕಪೋಲಗಳಲ್ಲಿ ಸುತ್ತಲೂ ಮಕರಿಕಾಪತ್ರರಚನೆ ಪದ್ಮ ಚಿತ್ರಲೇಖನಗಳಿಂದಲೂ ಅಲಂಕರಿಸಿದನು. ॥೨೭॥

ಮತ್ತು ಚಂದ್ರಕಲೆಯಂತೆ ಸ್ವಚ್ಛವಾದ ಪಚ್ಚಕರ್ಪೂರದಿಂದ ಸುವಾಸನೆಯುಳ್ಳ ಶ್ರೀಗಂಧದಿಂದ ರಚಿತವಾದ ಮೂರುಗೆರೆಗಳಿಂದ ಕೂಡಿದ, ಸುತ್ತಲೂ ಚಿತ್ರಲೇಖನದಿಂದೊಪ್ಪುವ ಕುಂಕುಮದ ಬೊಟ್ಟುಗಳಿಂದ ಶೋಭಿಸುತ್ತಿರುವ, ಬೆಳಗುತ್ತಿರುವ ದೀಪದ ಕುಡಿಯಂತಿರುವ ಚಂದ್ರದ ತಿಲಕವನ್ನೂ ಅವಳ ಹಣೆಯಲ್ಲಿ ರಚಿಸಿದನು. ॥೨೮॥

ತತ್ಪಾದಪದ್ಮಯುಗಳೇ ಸ್ಥಲಪದ್ಮವಿನಿಂದಿತೇ ॥೨೯॥

ಚಿತ್ರಾಲಕ್ತಕರಾಗಂ ಚ ನಖರೇಷು ದದೌ ಮುದಾ ।
ಸ್ವವಕ್ಷಸಿ ಮುಹುರ್ನ್ಯಸ್ಯ ಸರಾಗಂ ಚರಣಾಂಬುಜಂ ॥೩೦॥

ಹೇದೇವಿ ತವ ದಾಸೋಽಹಂ ಇತ್ಯುಚ್ಚಾರ್ಯ ಪುನಃ ಪುನಃ ।
ರತ್ನಭೂಷಿತಹಸ್ತೇನ ತಾಂ ಚ ಕೃತ್ವಾಽಸ್ಯ ವಕ್ಷಸಿ ॥೩೧॥

ತಪೋವನಂ ಪರಿತ್ಯಜ್ಯ ರಾಜಾ ಸ್ಥಾನಾಂತರಂ ಯಯೌ ।
ಮಲಯೇ ದೇವನಿಲಯೇ ಶೈಲೇ ಶೈಲೇ ತಪೋವನೇ ॥೩೨॥

ಸ್ಥಾನೇ ಸ್ಥಾನೇಽತಿರಮ್ಯೇ ಚ ಪುಷ್ಪೋದ್ಯಾನೇ ಚ ನಿರ್ಜನೇ ।
ಕಂದರೇ ಕಂದರೇ ಸಿಂಧುತೀರೇ ಚೈವಾತಿಸುಂದರೇ ॥೩೩॥

---

ನೆಲದಲ್ಲಿ ಬೆಳೆದಿರುವ ಕಮಲವನ್ನೂ ತಿರಸ್ಕರಿಸುವಷ್ಟು ಕೋಮಲವಾಗಿರುವ ಆ ತುಲಸೀದೇವಿಯ ಎರಡು ಕಾಲುಗಳಲ್ಲೂ ಕೆಂಪಾದ ಅರಗಿನ ಬಣ್ಣದಿಂದ ಅಲಂಕರಿಸಿ, ಉಗುರುಗಳಿಗೂ ಬಣ್ಣವನ್ನು ಹಾಕಿದನು. ಮತ್ತು ಹಾಗೆ ಶೋಭಿಸುತ್ತಿರುವ ಅವಳ ಪಾದವನ್ನು ಅಭಿನಂದನ ಸಂತೋಷದಿಂದ ತನ್ನ ಎದೆಯಲ್ಲಿ ಬಾರಿ ಬಾರಿಗೂ ಇಟ್ಟುಕೊಳ್ಳುತ್ತಾ, ॥೨೯-೩೦॥

ಕಾಂತಿವಿಶೇಷದಿಂದ ರಂಜಿಸುತ್ತಿರುವ ಓ ದೇವಿಯೇ, "ನಿನ್ನ ಸೌಂದರ್ಯ ಗುಣಗಳಿಂದ ಜಿತನಾಗಿರುವ ನಾನು ನಿನ್ನ ವಶವರ್ತಿಯಾದ ದಾಸನಾಗಿರುತ್ತೇನೆ." ಎಂದು ಬಾರಿ ಬಾರಿಗೂ ಹೇಳುತ್ತಾ, ರತ್ನಾಭರಣಗಳಿಂದ ಅಲಂಕೃತವಾದ ಹಸ್ತದಿಂದ ಅವಳನ್ನು ತನ್ನ ಎದೆಯಲ್ಲಿ ಅಪ್ಪಿಕೊಂಡು, ಆ ದೊರೆಯು ವಿಹಾರಕ್ಕೋಸ್ಕರವಾಗಿ ಬೇರೆ ಬೇರೆಯ ಸ್ಥಳಗಳನ್ನು ಪಡೆಯಲು ಆ ತಪೋವನವನ್ನು ಬಿಟ್ಟು ಹೊರಟನು. ದೇವತೆಗಳ ಕ್ರೀಡಾಸ್ಥಾನವಾದ ಮಲಯ ಪರ್ವತದಲ್ಲೂ, ಇತರ ಗುಡ್ಡ ಬೆಟ್ಟಗಳಲ್ಲಿಯೂ, ತಪೋವನಗಳಲ್ಲಿಯೂ ವಿಹರಿಸುತ್ತಿದ್ದನು. ॥೩೧-೩೨॥

ಅವರಿಬ್ಬರೂ ಮನೋಹರವಾದ ಒಂದೊಂದು ಸ್ಥಳದಲ್ಲಿಯೂ, ಜನ ರಹಿತವಾಗಿ ಶಾಂತಿಯುಳ್ಳ ಹೂವಿನ ತೋಟಗಳಲ್ಲೂ, ಬೆಟ್ಟದ ಗುಹೆಗಳು, ನದಿಯ ದಡಗಳು, ತುಂಬ ರಮಣೀಯವಾದ ಪುಷ್ಪಭದ್ರಾ ನದಿಯ ದಡಗಳು, ಇವುಗಳಲ್ಲಿಯೂ, ತಂಪಾದ ತಿಳಿಯಾದ ನೀರಿನಿಂದಲೂ ಮಂದ ಮಾರುತದಿಂದಲೂ ಹಿತಕರವಾಗಿರುವ

ಪುಷ್ಪಭದ್ರಾನದೀತೀರೇ ನೀರವಾತಮನೋಹರೇ ।
ಪುಲಿನೇ ಪುಲಿನೇ ದಿವ್ಯೇ ನದ್ಯಾಂ ನದ್ಯಾಂ ನದೇ ನದೇ ॥೩೪॥

ಮಧೌ ಮಧುಕರಾಣಾಂ ಚ ಮಧುರಧ್ವನಿನಾದಿತೇ ।
ವಿಸ್ಪಂದನೇ ಸುರಸನೇ ನಂದನೇ ಗಂಧಮಾದನೇ ॥೩೫॥

ದೇವೋದ್ಯಾನೇ ನಂದನೇ ಚ ಚಿತ್ರಚಂದನಕಾನನೇ ।
ಚಂಪಕಾನಾಂ ಕೇತಕೀನಾಂ ಮಾಧವೀನಾಂ ಚ ಮಾಧವೇ ॥೩೬॥

ಕುಂದಾನಾಂ ಮಾಲತೀನಾಂ ಚ ಕುಮುದಾಂಭೋಜಕಾನನೇ ।
ಕಲ್ಪವೃಕ್ಷೇ ಕಲ್ಪವೃಕ್ಷೇ ಪಾರಿಜಾತ ವನೇ ವನೇ ॥೩೭॥

ನಿರ್ಜನೇ ಕಾಂಚನೇ ಸ್ಥಾನೇ ಧನ್ಯೇ ಕಾಂಚನಪರ್ವತೇ ।
ಕಾಂಚೀವನೇ ಕಿಂಜಲಕೇ ಕಂಚುಕೇ ಕಾಂಚನಾಕರೇ ॥೩೮॥

---

ಹಾಗೆಯೇ ಸೊಗಸಾದ ಪ್ರತಿಯೊಂದು ಮರಳುಗುಡ್ಡೆ, ನದೀ, ಪಶ್ಚಿಮಕ್ಕೆ ಹರಿದು ಸಮುದ್ರವನ್ನು ಸೇರುವ ನದೀ, ಇವುಗಳಲ್ಲಿಯೂ ವಿಹರಿಸಲು ತೊಡಗಿದರು. ||೩೩-೩೪||

ಹಾಗೆಯೇ ವಸಂತಋತುವಿನಲ್ಲಿ ದುಂಬಿ ಜೇನುಗಳ ಮನೋಹರವಾದ ಧ್ವನಿಯಿಂದ ಮೊಳಗುತ್ತಿರುವ ವಿಸ್ಪಂದನ ಮತ್ತು ಸುರಸನ ಎಂಬ ಕಾಡುಗಳಲ್ಲಿಯೂ, ಸಂತೋಷಕರವಾದ ಗಂಧಮಾದನ ಪರ್ವತದಲ್ಲಿಯೂ, ದೇವತೆಗಳ ಉದ್ಯಾನವನವಾದ ನಂದನವನದಲ್ಲಿಯೂ, ನಾನಾ ಬಗೆಯ ಗಂಧದ ಮರಗಳ ಕಾಡುಗಳಲ್ಲಿಯೂ, ವಸಂತಕಾಲದಲ್ಲಿ ಹೂಬಿಡುವ ಸಂಪಿಗೆ, ತಾಳೆ, ಜಾಜೀ, ಇರುವಂತಿಗೆ, ಕುಂದ, ಮಲ್ಲಿಗೆ, ತಾವರೆ, ಕನ್ನೈದಿಲೆ, ಮುಂತಾದ ಹೂವುಗಳುಳ್ಳ ವನಗಳಲ್ಲಿಯೂ, ಬೇಕು ಬೇಕಾದ ಕಲ್ಪವೃಕ್ಷಗಳ ನೆರಳಿನಲ್ಲೂ, ಪಾರಿಜಾತದ ಗಿಡಗಳ ವನದಲ್ಲಿಯೂ, ಆ ಶಂಖಚೂಡನೂ ತುಲಸೀದೇವಿಯೂ ವಿಹರಿಸುತ್ತಿದ್ದರು. ||೩೫-೩೬-೩೭||

ಜನ ರಹಿತವಾಗಿ ಶಾಂತವಾಗಿರುವ ಹೊಂಬಣ್ಣದ ಕಾಂತಿಯುಳ್ಳ ಪ್ರದೇಶದಲ್ಲಿಯೂ, ಅಲ್ಲಿರುವವರಿಗೆ ಧನ್ಯತೆಯ ಭಾವನೆಯನ್ನುಂಟುಮಾಡುವ ಮೇರುಪರ್ವತದಲ್ಲಿಯೂ, ಕಾಂಚೀಕ್ಷೇತ್ರದ ಅಥವಾ ದುಂಡಾಗಿರುವ ಉಪವನದಲ್ಲೂ, ಹೊಂಬಣ್ಣದ ಹೂವಿನ ಪರಾಗದಿಂದ ಕೂಡಿರುವ, ಸಂಪತ್ತಿಗೆ ತೌರುಮನೆಯಂತಿರುವ

ಪುಷ್ಪಚಂದನತಲ್ಪೇಷು ಪುಂಸ್ಕೋಕಿಲರುತಶ್ರುತೇ ।
ಪುಷ್ಪಚಂದನಸಂಯುಕ್ತಃ ಪುಷ್ಪಚಂದನವಾಯುನಾ ॥೩೯॥

ಕಾಮುಕ್ಯಾ ಕಾಮುಕಃ ಕಾಮಾತ್ ಸ ರೇಮೇ ರಮಯಾ ಸಹ ।
ನಹಿ ತೃಪ್ತೋ ದಾನವೇಂದ್ರಃ ತೃಪ್ತಿಂ ನೈವ ಜಗಾಮ ಸಾ ॥೪೦॥

ಹವಿಷಾ ಕೃಷ್ಣವರ್ತ್ಮೇವ ವವೃಧೇ ಮದನಸ್ತಯೋಃ ।
ತಯಾ ಸಹ ಸಮಾಗತ್ಯ ಸ್ವಾಶ್ರಮಂ ದಾನವಸ್ತತಃ ॥೪೧॥

ರಮ್ಯಂ ಕ್ರೀಡಾಲಯಂ ಗತ್ವಾ ವಿಜಹಾರ ಪುನಃ ಪುನಃ ।
ಏವಂ ಸ ಬುಭುಜೇ ರಾಜ್ಯಂ ಶಂಖಚೂಡಃ ಪ್ರತಾಪವಾನ್ ॥೪೨॥

---

ಕಲಾಪತ್ರಿನ ಪೀತಾಂಬರದಲ್ಲಿ ತುಂಬಿರುವ ಹೊಂಬಣ್ಣದ ಹೂವಿನ ಪರಾಗದಿಂದ ಕೂಡಿರುವ, ಹೂವುಗಂದ ಇವುಗಳುಳ್ಳ ಹಾಸಿಗೆಗಳಲ್ಲಿ, ಗಂಡುಕೋಗಿಲೆಯ ಇಂಪಾದ ಪಂಚಮಸ್ವರದ ಧ್ವನಿಯಿಂದ ಕೂಡಿರುವ ಉಪವನಗಳಲ್ಲಿಯೂ, ಹೂವಿನ ಪರಾಗದ ಸುಗಂಧದಿಂದ ಕೂಡಿದವನಾಗಿ ಕಾಮುಕನಾದ ಆ ಶಂಖಚೂಡನು ಲಕ್ಷ್ಮಿಯ ಅಂಶದಿಂದ ಅವತರಿಸಿದ್ದ ಆ ತುಲಸೀದೇವಿಯೊಡನೆ ಅನುರಾಗದ ಅತಿಶಯದಿಂದ ಕ್ರೀಡಿಸುತ್ತಿದ್ದನು. ಇಷ್ಟಾದರೂ ಆ ದಾನವ ಶ್ರೇಷ್ಠನ ಅವತಾರವಾದ ಶಂಖಚೂಡನು ಈ ಕಾಮಭೋಗದಲ್ಲಿ ತೃಪ್ತಿಯನ್ನು ಪಡೆಯಲಿಲ್ಲ. ನಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ । ಎಂಬಂತೆ ಈ ಕಾಮಭೋಗವು ಸಾಕೆನಿಸಲಿಲ್ಲವು ! ಆ ತುಲಸೀದೇವಿಗೂ ಹಾಗೆಯೇ ಈ ಭೋಗಸುಖದಿಂದ ತೃಪ್ತಿಯುಂಟಾಗಲಿಲ್ಲವು! ||೩೮-೩೯-೪೦||

ಮತ್ತೇನೆಂದರೆ ತುಪ್ಪ, ಸಮಿತ್, ಮುಂತಾದ ಹವಿಸ್ಸುಗಳಿಂದ ಅಗ್ನಿಯು ಹೆಚ್ಚುತ್ತಲೇ ಇರುವಂತೆ, ಅವರಿಬ್ಬರಲ್ಲಿಯೂ ಕಾಮಾಸಕ್ತಿಯು ಬೆಳೆಯಿತು. ಆಮೇಲೆ ಆ ಶಂಖಚೂಡನು ಆ ತುಲಸೀದೇವಿಯೊಡನೆ ತನ್ನ ಆಶ್ರಮಕ್ಕೆ ಹಿಂತಿರುಗಿ ಬಂದನು. ಮನುಸ್ಮೃತಿಯಲ್ಲಿ ಅಧ್ಯಾಯ ೨. ಶ್ಲೋಕ ೯೪. ನೋಡಬಹುದು. ||೪೧||

ಆಮೇಲೆ ಪರಾಕ್ರಮಶಾಲಿಯಾದ ಆ ಶಂಖಚೂಡನು ಮನೋಹರವಾದ ವಿಹಾರ ಪ್ರದೇಶವನ್ನು ಪಡೆದು ಅವಳೊಡನೆ ವಿಹರಿಸುತ್ತಾ, ಈ ರೀತಿಯಲ್ಲಿ ರಾಜ್ಯ ಸುಖಾನುಭವವನ್ನೂ ಮಾಡುತ್ತಿದ್ದನು. ||೪೨||

**ಏಕಮನ್ವಂತರಂ ಪೂರ್ಣಂ ರಾಜರಾಜೇಶ್ವರೋ ಮಹಾನ್ ।**
**ದೇವಾನಾಮಸುರಾಣಾಂ ಚ ದಾನವಾನಾಂ ಚ ಸಂತತಂ ॥೪೩॥**

**ಗಂಧರ್ವಾಣಾಂ ಕಿನ್ನರಾಣಾಂ ರಾಕ್ಷಸಾನಾಂ ಚ ಶಾಂತಿದಃ ।**
**ಹೃತಾಧಿಕಾರಾ ದೇವಾಶ್ಚ ಚರಂತಿ ಭಿಕ್ಷುಕಾ ಯಥಾ ॥೪೪॥**

**ತೇ ಸರ್ವೇಽತಿವಿಷಣ್ಣಾಶ್ಚ ಪ್ರಜಗ್ಮುಃ ಬ್ರಹ್ಮಣಸ್ಸಭಾಂ ।**
**ವೃತ್ತಾಂತಂ ಕಥಯಾಮಾಸೂ ರುರುದುಶ್ಚ ಭೃಶಂಮುಹುಃ ॥೪೫॥**

**ತದಾ ಬ್ರಹ್ಮಾ ಸುರೈಸ್ಸಾರ್ಧಂ ಜಗಾಮ ಶಂಕರಾಲಯಂ ।**
**ಸರ್ವೇಶಂ ಕಥಯಾಮಾಸ ವಿಧಾತಾ ಚಂದ್ರಶೇಖರಂ ॥೪೬॥**

**ಬ್ರಹ್ಮಾ ಶಿವಶ್ಚ ತೈಸ್ಸಾರ್ಧಂ ವೈಕುಂಠಂ ಚ ಜಗಾಮ ಹ ।**
**ದುರ್ಲಭಂ ಪರಮಂಧಾಮ ಜರಾಮೃತ್ಯುಹರಂ ಪರಂ ॥೪೭॥**

---

ಈ ಪ್ರಕಾರವಾಗಿ ಆ ಶಂಖಚೂಡನು ಎಲ್ಲ ರಾಜರಿಗೂ ಮೇಲಾದ ಚಕ್ರವರ್ತಿ ಸ್ಥಾನವನ್ನು ಪರಾಕ್ರಮದಿಂದ ಪಡೆದು ಒಂದು ಮನ್ವಂತರದಷ್ಟು ಕಾಲ ರಾಜ್ಯ ಸುಖವನ್ನು ಅನುಭವಿಸುತ್ತಾ, ದೇವತೆಗಳು, ರಾಕ್ಷಸರು, ದಾನವರು, ಗಂಧರ್ವರು, ಕಿನ್ನರರು, ಅಸುರರು ಇವರೆಲ್ಲರಿಗಿಂತ ಹೆಚ್ಚಾದ ಅಧಿಕಾರವನ್ನು ನಡೆಯಿಸುತ್ತಾ, ಅವರೆಲ್ಲರಿಗೂ ಕೆಲಸವಿಲ್ಲದಂತೆಮಾಡಿ, ಶಾಂತಿಯನ್ನು ನೆಲೆಗೊಳಿಸಿದ್ದನು. ಈ ರೀತಿಯಲ್ಲಿ ದೇವತೆಗಳೂ ತಮ್ಮ ಅಧಿಕಾರವನ್ನು ಕಳೆದುಕೊಂಡವರಾಗಿ, ಮಾನವರ ಯಾಗಗಳಲ್ಲಿ ಹವಿರ್ಭಾಗವನ್ನೂ ಕಳೆದುಕೊಂಡು ಭಿಕ್ಷುಕರ ಹಾಗೆ ಅಲೆಯುತ್ತಿದ್ದರು. ॥೪೩-೪೪॥

ಆಬಳಿಕ ದೇವತೆಗಳೆಲ್ಲರೂ ತುಂಬ ದುಃಖಿತರಾಗಿ ಬಹ್ಮನ ಸಭೆಯನ್ನು ಪಡೆದು, ನಡೆದಿದ್ದ ಸಮಾಚಾರವನ್ನು ಅವನಿಗೆ ಅರಿಕೆ ಮಾಡಿ, ಬಾರಿ ಬಾರಿಗೂ ಹೆಚ್ಚಾಗಿ ವ್ಯಸನಪಟ್ಟರು. ॥೪೫॥

ತರುವಾಯ ಬ್ರಹ್ಮನೂ ಆ ದೇವತೆಗಳೊಡನೆ ಈಶ್ವರನ ವಾಸಸ್ಥಾನವಾದ ಕೈಲಾಸವನ್ನು ಪಡೆದು, ಎಲ್ಲಕ್ಕೂ ಒಡೆಯನಾದ ಚಂದ್ರಶೇಖರನಾದ ಶಂಕರನಿಗೆ ದೇವತೆಗಳ ದುಸ್ಥಿತಿಯನ್ನು ವಿಜ್ಞಾಪಿಸಿದನು. ॥೪೬॥

ಅನಂತರದಲ್ಲಿ ಆ ಬ್ರಹ್ಮನೂ, ಶಿವನೂ, ದೇವತೆಗಳೊಡನೆ ಸಾಮಾನ್ಯ ಜನ

ಸಂಪ್ರಾಪ ಚ ವರಂ ದ್ವಾರಂ ಆಶ್ರಮಾಣಾಂ ಹರೇರಹೋ ।
ದದರ್ಶ ದ್ವಾರಪಾಲಾಂಶ್ಚ ರತ್ನಸಿಂಹಾಸನಸ್ಥಿತಾನ್ ॥೪೮॥

ಶೋಭಿತಾನ್ ಪೀತವಸ್ತ್ರೈಶ್ಚ ರತ್ನಭೂಷಣಭೂಷಿತಾನ್ ।
ವನಮಾಲಾನ್ವಿತಾನ್ ಸರ್ವಾನ್ ಶ್ಯಾಮಸುಂದರವಿಗ್ರಹಾನ್ ॥೪೯॥

ಶಂಖಚಕ್ರಗದಾಪದ್ಮಧರಾಂಶ್ಚೈವ ಚತುರ್ಭುಜಾನ್ ।
ಸಸ್ಮಿತಾನ್ ಸ್ಮೇರವಕ್ತ್ರಾಂಶ್ಚ ಪದ್ಮನೇತ್ರಾನ್ ಮನೋಹರಾನ್॥೫೦॥

ಬ್ರಹ್ಮಾ ತಾನ್ ಕಥಯಾಮಾಸ ವೃತ್ತಾಂತಂ ಗಮನಾರ್ಥಕಂ ।
ತೇಽನುಜ್ಞಾಂ ಚ ದದುಸ್ತಸ್ಮೈ ಪ್ರವಿವೇಶ ತದಾಜ್ಞಯಾ ॥೫೧॥

---

ರಿಂದ ಪಡೆಯಲಸಾಧ್ಯವಾದ, ಮುಪ್ಪು ಸಾವುಗಳನ್ನು ತಪ್ಪಿಸಿ ಮೋಕ್ಷವನ್ನು ಕೊಡಲು ಶ್ರೇಷ್ಠಸ್ಥಾನವಾದ, ಉತ್ತಮಲೋಕವಾದ ವೈಕುಂಠವನ್ನು ಪಡೆದನು.॥೪೭॥

ಅನಂತರದಲ್ಲಿ ಆ ದೇವತೆಗಳು ಎಲ್ಲರೂ ಪವಿತ್ರಸ್ಥಾನಗಳಲ್ಲಿ ಶ್ರೇಷ್ಠವಾದ ವಿಷ್ಣುವಿನ ಆ ವೈಕುಂಠಲೋಕವನ್ನು ಪಡೆದು, ಅವನ ಅರಮನೆಯ ಬಾಗಿಲನ್ನೂ ತಲಪಿದರು. ಅಲ್ಲಿದ್ದ ರತ್ನಖಚಿತವಾದ ಸಿಂಹಾಸನಗಳಲ್ಲಿ ಕುಳಿತಿರುವ, ಪೀತಾಂಬರಗಳನ್ನು ಧರಿಸಿ ರಂಜಿಸುತ್ತಿರುವ, ನವರತ್ನಗಳನ್ನು ಮೆಟ್ಟಿರುವ ಆಭರಣಗಳಿಂದ ಅಲಂಕೃತರಾಗಿರುವ, ಬಾಡದಿರುವ ಹೂಮಾಲೆಗಳಿಂದ ಕೂಡಿ ಶೋಭಿಸುತ್ತಿರುವ, ಸಾಮವರ್ಣದ ರಮಣೀಯವಾದ ಶರೀರಗಳಿಂದ ಒಪ್ಪುತ್ತಿರುವ, ಶಂಖ ಚಕ್ರ ಗದಾ ಪದ್ಮ ಎಂಬ ವೈಷ್ಣವಚಿನ್ಹೆಗಳಿಂದ ಕಂಗೊಳಿಸುತ್ತಿರುವ, ಮುಗುಳುನಗೆಯಿಂದ ಕೂಡಿರುವ, ಸಂತೋಷದಿಂದ ಕಳಕಳಿಸುತ್ತಿರುವ ಮುಖಗಳುಳ್ಳ, ಕಮಲದಂತಿರುವ ಕಣ್ಣುಗಳುಳ್ಳ, ನಾಲ್ಕು ತೋಳುಗಳುಳ್ಳ, ನೋಡುವವರ ಮನಸ್ಸನ್ನು ಸೂರೆಗೊಳ್ಳುವ ಆಕಾರಗಳಿಂದ ಕೂಡಿದ್ದ, ದ್ವಾರಪಾಲಕರೆಲ್ಲರನ್ನೂ ನೋಡಿದರು. ॥೪೮-೪೯-೫೦॥

ಆಗ ಬ್ರಹ್ಮನು ಆ ದ್ವಾರಪಾಲಕರನ್ನು ಕುರಿತು ದೇವತೆಗಳೊಡನೆ ತಾನು ಅಲ್ಲಿಗೆ ಬಂದುದರ ಉದ್ದೇಶವನ್ನೂ, ನಡೆದಿದ್ದ ಸಮಾಚಾರವನ್ನೂ ತಿಳಿಯಹೇಳಿದನು. ಅವರೂ ಅನುಮತಿಯನ್ನು ಕೊಟ್ಟರು. ಅವರ ಅಪ್ಪಣೆಯನ್ನನುಸರಿಸಿ ಬ್ರಹ್ಮನೂ, ಶಂಕರನೂ, ದೇವತೆಗಳೊಡನೆ ಒಳಕ್ಕೆ ಪ್ರವೇಶಿಸಿದರು. ॥೫೧॥

ಈ ವೈಕುಂಠಲೋಕದ ವರ್ಣನೆಯು ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಅನುಸಾರವಾದ, ಸಾರೂಪ್ಯ ಎಂದು ಪ್ರಸಿದ್ಧವಾಗಿರುವ ಮುಕ್ತಿಯನ್ನು ಪಡೆದಿರುವ ಭಕ್ತರ ಸ್ಥಿತಿಯನ್ನು ಸೂಚಿಸುತ್ತದೆ. ಮುಕ್ತಿಯಲ್ಲಿ ನಾಲ್ಕು ಪ್ರಕಾರಗಳುಂಟು. ಸಾಲೋಕ್ಯ ಎಂದರೆ ದೇವರ ಲೋಕದಲ್ಲಿ ವಾಸವನ್ನು ಪಡೆದಿರುವಿಕೆಯು. ಸಾಮೀಪ್ಯ ಎಂದರೆ ದೇವರ ಸಮೀಪದಲ್ಲಿರುವಿಕೆಯಾಗಿರುತ್ತದೆ. ಭಕ್ತಿ, ಉಪಾಸನೆಗಳ ಮಾರ್ಗದಿಂದ ಭಕ್ತರು ತಮಗೆ ಇಷ್ಟವಾದ ದೇವರನ್ನು ಧ್ಯೇಯವಾಗಿಟ್ಟುಕೊಂಡು ಉಪಾಸನೆ ಮಾಡುತ್ತಾ ಕಡೆಗೆ ಆ ದೇವರ ಸಾಕ್ಷಾತ್ಕಾರವನ್ನು ಪಡೆದು ಆ ದೇವಾನುಗ್ರಹದಿಂದ ಸ್ವಸ್ವರೂಪದ ಆನಂದಾನುಭವವನ್ನು ಮಾಡುತ್ತಿರುತ್ತಾರೆ. ಇದು ಮಾಧ್ವಸಿದ್ಧಾಂತಾನುಸಾರವಾದ ಮುಕ್ತಿಯ ಸ್ವರೂಪವು. ಇದರಲ್ಲಿ ಮುಕ್ತರಾದ ಜೀವರು ದೇವರಿಗಿಂತ ಭಿನ್ನವಾದರೂಪವುಳ್ಳವರಾದರೂ ದೇವರ ಲೋಕದಲ್ಲಿ ವಾಸವನ್ನು ಪಡೆದು, ತಮ್ಮ ಯೋಗ್ಯತೆಗೆ ತಕ್ಕಷ್ಟುಮಟ್ಟಿಗೆ ಹೆಚ್ಚು ಕಡಿಮೆಯಾಗಿ ದೇವರ ಸಾಮೀಪ್ಯವನ್ನೂ ಹೊಂದಿ, ನೈಜಸುಖಾನುಭವವನ್ನು ಪಡೆದಿರುತ್ತಾರೆ. ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಮುಕ್ತರಾದವರು ದೇವರ ಹಾಗೆಯೇ ಇರುವ ರೂಪವನ್ನೂ ಪಡೆದು ಮುಕ್ತರಾದವರೆಲ್ಲರೂ ತಾರತಮ್ಯವಿಲ್ಲದೆ ಒಂದೇ ಸಮನಾದ, ಸುಖಾನುಭವವನ್ನು ಮಾಡುತ್ತಿರುತ್ತಾರೆ. ಅದ್ವೈತಸಿದ್ಧಾಂತದಲ್ಲಿ ಈ ಮೂರು ಬಗೆಯ ಫಲವನ್ನೂ ಸಗುಣಬ್ರಹ್ಮೋಪಾಸನೆಯಿಂದ ಪಡೆಯಬಹುದು. ಆದರೆ ಇದೂ ಜನ್ಯವಾದುದರಿಂದ ಅನಿತ್ಯವಾದುದು. ಆದುದರಿಂದ ಇವನ್ನೂ ಮೀರಿರುವ ನಿತ್ಯವೂ ಸ್ವಾಭಾವಿಕವೂ ಆಗಿರುವ ಸಾಯುಜ್ಯವೆಂಬ ಮುಕ್ತಿಸ್ಥಿತಿಯನ್ನು ಮುಕ್ತರಾದ ಜೀವರು ಎಂದಿನಂತೆ ಪಡೆದಿರುತ್ತಾರೆ. ಜೀವರಿಗೂ ದೇವರಿಗೂ ಈ ವ್ಯವಹಾರಕಾಲದಲ್ಲಿ ಇರುವಂತೆ ತೋರುತ್ತಿರುವ ಭೇದವೆಲ್ಲವೂ ಉಪಾಧಿಗಳಿಂದ ಉಂಟಾಗಿರುವುದರಿಂದಲೂ, ಈ ಉಪಾಧಿಗಳಲ್ಲಿ ಅಹಂತಾ ಮಮತಾ ಎಂಬ ಅಭಿಮಾನಗಳಿಂದ ಉಂಟಾಗಿರುವ ಭೇದವು ಸ್ವಸ್ವರೂಪದ ಅಜ್ಞಾನದಿಂದ ಕಾಣಬರುತ್ತಿರುವುದರಿಂದಲೂ, ಈ ಅಜ್ಞಾನವು ಸ್ವಸ್ವರೂಪದ ಜ್ಞಾನದಿಂದ ತೊಲಗಲು, ಜೀವರೂ ದೇವರೂ ಸಚ್ಚಿದಾನಂದರೂಪದಲ್ಲಿ ಅಭಿನ್ನರೆಂಬ, ಬ್ರಹ್ಮಾತ್ಮೈಕ್ಯದ ಸಾಕ್ಷಾತ್ಕಾರವು ಅಪರೋಕ್ಷಾನುಭವವಾಗಲು, ಕಂಠಚಾಮೀಕರನ್ಯಾಯದಂತೆ, ಮುಕ್ತಿಯನ್ನು ಪಡೆದಂತೆ ಆಗಿ, ಸಾಯುಜ್ಯವೆಂಬ ಮೋಕ್ಷಸ್ಥಿತಿಯಲ್ಲಿ ಅಖಂಡಾನಂದಜ್ಞಾನಘನರಾಗಿ ಎಂದಿನಂತೆಯೇ ಉಳಿದಿರುತ್ತಾರೆ. ಆದುದರಿಂದ ಅದ್ವೈತದರ್ಶನದಲ್ಲಿ ಇತರಗಳಾದ ಮಾಧ್ವ ರಾಮಾನುಜೀಯ ಮುಂತಾದ ಎಲ್ಲ ದರ್ಶನಗಳಿಗೂ ತಕ್ಕಸ್ಥಾನಮಾನಗಳಿವೆ. ಇವರು ತಿಳಿಸುವಂತೆ ಸಗುಣಸಾಕ್ಷಾತ್ಕಾರವೆಂಬ ಮೋಕ್ಷವನ್ನೂ, ಕ್ರಿಸ್ತರೂ ಮುಸ್ಲಿಮರೂ ನಂಬಿರುವಂತೆ ಸಗುಣನಿರಾಕಾರ

ತತ್ವಸಾಕ್ಷಾತ್ಕಾರವೆಂಬ ಮೋಕ್ಷವನ್ನೂ, ಅದ್ವೈತಿಗಳೂ ಒಪ್ಪುತ್ತಾರೆ. ಆದರೆ ಇವಕ್ಕೂ ಮೀರಿರುವ, ಇವೆಲ್ಲವನ್ನೂ ಒಳಗೊಳ್ಳಬಲ್ಲಷ್ಟು ದೊಡ್ಡದಾದ, ಮೇಲಾದ ಸ್ಥಿತಿಯೊಂದು ಇದೆ. ಇದರಂತೆ ಜೀವರು ನಿತ್ಯಶುದ್ಧ ಬುದ್ಧಮುಕ್ತಸ್ವರೂಪರೆಂಬುದು ಸ್ವಾಭಾವಿಕವಾಗಿ ಎಂದಿನಂತೆ ಉಳಿಯುವುದೇ ಆಗಿರುತ್ತದೆ ಎಂದು ಶ್ರುತಿಗಳು ಎಂದರೆ "ಸರ್ವಂ ಖಲ್ವಿದಂ ಬ್ರಹ್ಮ" "ಅಯಮಾತ್ಮಾ ಬ್ರಹ್ಮ" "ತತ್ವಮಸಿ," "ಅಹಂ ಬ್ರಹ್ಮಾಸ್ಮಿ" ಎಂಬ ಮಹಾವಾಕ್ಯಗಳು ತಿಳಿಸುತ್ತಿವೆ. ಶ್ರೀಮಧ್ವಸಿದ್ಧಾಂತದ ಮುಖ್ಯಾಂಶಗಳನ್ನು ಈ ಪದ್ಯದಲ್ಲಿ ಸಂಗ್ರಹಿಸಿದೆ.

ಶ್ರೀಮನ್ಮಧ್ವಮತೇ, ಹರಿಃ ಪರತರಃ, ಸತ್ಯಂಜಗತ್ ತತ್ವತೋ,
ಭಿನ್ನಾ ಜೀವಗಣಾ, ಹರೇರನುಚರಾ, ನಿಚೋಚ್ಚಭಾವಂ ಗತಾಃ |
ಮುಕ್ತಿಃ ನೈಜಸುಖಾನುಭೂತಿಃ, ಅತುಲಾ ಭಕ್ತಿಶ್ಚ ತತ್ಸಾಧನಂ,
ಹ್ಯಕ್ಷಾದಿತ್ರಿತಯಂ ಪ್ರಮಾಣಂ, ಅಖಿಲಾಮ್ನಾಯೈಕವೇದ್ಯೋ ಹರಿಃ ||

ಶ್ರೀರಾಮಾನುಜಸಿದ್ಧಾಂತದ ಮುಖ್ಯ ವಿಷಯಗಳನ್ನು ಈ ಪದ್ಯದಲ್ಲಿ ಸಂಗ್ರಹಿಸಿದೇನೆ.

ತತ್ವೇ ರಾಮಾನುಜೀಯೇ, ಸಕಲ ಚಿದಚಿತ ಶ್ಚಾಂಶಶೇಷಾಶ್ಶರೀರಂ,
ಶೇಷೀ ನಾರಾಯಣಸ್ಸ್ಯಾತ್, ಅನವಧಿಗುಣಯುಕ್, ಬ್ರಹ್ಮ, ಲಕ್ಷ್ಮೀವಿಶಿಷ್ಟಃ |
ಜೀವಾ ಭಿನ್ನಾಣುರೂಪಾಃ, ಪರಮಸಮತಯಾ ದಿವ್ಯವೈಕುಂಠಲೋಕೇ
ಮುಕ್ತಿರ್ಭಕ್ತ್ಯಾಪ್ರಪತ್ತ್ಯಾ ಭವತಿ ಚ ನಿಯತಂ ಜ್ಞಾನಕರ್ಮೋಭಯೇನ ||

ಹಾಗೆಯೇ ಅದ್ವೈತಸಿದ್ಧಾಂತದ ಮುಖ್ಯ ತತ್ವಗಳನ್ನು ಈ ಪದ್ಯದಲ್ಲಿ ಸಂಗ್ರಹಿಸಿದೇನೆ.

ಅದ್ವೈತೇ, ಬ್ರಹ್ಮ ಸತ್ಯಂ, ಜಗದಿದ ಮನೃತಂ, ಮಾಯಯಾ ಭಾಸಮಾನಂ,
ಜೀವೋ ಬ್ರಹ್ಮಸ್ವರೂಪೋಽಪ್ಯಹಮಿತಿ ಮಮ ಚೇತ್ಯಸ್ತಿ ದೇಹೇಽಭಿಮಾನಾತ್ |
ಶ್ರುತ್ಯಾ ಬ್ರಹ್ಮಾಹ ಮಸ್ಮೀತ್ಯನುಭವ ಉದಿತೇ ಕರ್ತೃಭೋಕ್ತೃತ್ವನಾಶಾತ್
ಮಾಯಾಸಂಸಾರಮುಕ್ತೋ ರಿಹ ಭವತಿ ಸದಾ ಸಚ್ಚಿದಾನಂದರೂಪಃ ||

ಈ ವಿಶೇಷವರ್ಣನೆಯು ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಅನುಸಾರವಾದ ಸಾಲೋಕ್ಯ, ಸಾಮೀಪ್ಯ ಮತ್ತು ಸಾರೂಪ್ಯ ಎಂದು ಪ್ರಸಿದ್ಧವಾದ ಮುಕ್ತಿಯನ್ನು ಪಡೆದಿರುವ ಭಕ್ತರ ಸ್ಥಿತಿಯನ್ನು ಸೂಚಿಸಿದೆ. ಅದ್ವೈತಸಿದ್ಧಾಂತದಲ್ಲಿ ವರ್ಣಿಸಿರುವ ಸಗುಣಬ್ರಹ್ಮಸಾಕ್ಷಾತ್ಕಾರರೂಪವಾದ ಉಪಾಸನಾಫಲದ ಸ್ವರೂಪವೂ ಇದೇ ಆಗಿದೆ. ಎಂಬುದನ್ನು ಗಮನಿಸಬಹುದು.

**ಏದಂ ಷೋಡಶ ದ್ವಾರಾಣಿ ನಿರೀಕ್ಷ್ಯ ಕಮಲೋದ್ಭವಃ।**
**ದೈವೈಸ್ಸಾರ್ಧಂ ತಾನತೀತ್ಯ ಪ್ರವಿವೇಶಹರೇಸ್ಸಭಾಂ ॥೫೨॥**

**ದೇವರ್ಷಿಭಿಃ ಪರಿವೃತಾಂ ಪಾರ್ಷದೈಶ್ಚ ಚತುರ್ಭುಜೈಃ।**
**ನಾರಾಯಣಸ್ವರೂಪೈಶ್ಚ ಸರ್ವೈಃ ಕೌಸ್ತುಭಭೂಷಿತೈಃ ॥೫೩॥**

**ನವೇಂದು ಮಂಡಲಾಕಾರಾಂ ಚತುರಶ್ರಾಂ ಮನೋಹರಾಂ।**
**ಮಣೀಂದ್ರಹಾರನಿರ್ಮಾಣಾಂ ಹೀರಾಸಾರ ಸುಶೋಭಿತಾಂ ॥೫೪॥**

**ಅಮೂಲ್ಯರತ್ನ ಖಚಿತಾಂ ರಚಿತಾಂ ಸ್ವೇಚ್ಛಯಾ ಹರೇಃ।**
**ಮಾಣಿಕ್ಯಮಾಲಾಜಾಲಾಭಾಂ ಮುಕ್ತಾಪಂಙ್ತಿವಿಭೂಷಿತಾಂ ॥೫೫॥**

**ಮಂಡಿತಾಂ ಮಂಡಲಾಕಾರೈಃ ರತ್ನದರ್ಪಣಕೋಟಿಭಿಃ।**
**ವಿಚಿತ್ರೈಶ್ಚಿತ್ರರೇಖಾಭಿಃ ನಾನಾಚಿತ್ರವಿಚಿತ್ರಿತಾಂ ॥೫೬॥**

---

ಈ ರೀತಿಯಲ್ಲಿಯೇ ಹದಿನಾರು ಬಾಗಿಲುಗಳನ್ನೂ ದ್ವಾರಪಾಲಕರನ್ನೂ ನೋಡಿ ಅನುಮತನಾಗಿ ಆ ಬಾಗಿಲುಗಳನ್ನು ದಾಟಿ ಬ್ರಹ್ಮನು ದೇವತೆಗಳೊಡನೆ ವಿಷ್ಣುವಿನ ಸಭೆಯನ್ನು ಪ್ರವೇಶಿಸಿದನು. ॥೫೨॥

ಆ ವಿಷ್ಣು ಸಭೆಯು ದೇವರ್ಷಿಗಳಿಂದಲೂ, ವಿಷ್ಣುವಿನಂತೆ ನಾಲ್ಕು ತೋಳುಗಳುಳ್ಳ ಪರಿವಾರದ ಜನರಿಂದಲೂ, ತುಂಬಿದ್ದಿತು. ಅವರೆಲ್ಲರೂ ನಾರಾಯಣನಂತೆ ಆಕಾರವುಳ್ಳವರಾಗಿಯೂ, ಕೌಸ್ತುಭರತ್ನದಿಂದ ಅಲಂಕೃತರಾಗಿಯೂ ಇದ್ದರು. ಆ ವೈಕುಂಠಸಭೆಯು ಬಿದಿಗೆ ಚಂದ್ರ ಬಿಂಬದ ಆಕಾರವುಳ್ಳದಾಗಿಯೂ, ಮುಂಭಾಗದಲ್ಲಿ ಚಚ್ಚೌಕವಾಗಿ ಮನೋಹರವಾಗಿತ್ತು. ಅಲ್ಲದೆ ಶ್ರೇಷ್ಠವಾದ ನವರತ್ನಗಳ ಸರಗಳ ಮೇಲುಕಟ್ಟುಗಳುಳ್ಳದ್ದಾಗಿಯೂ, ಹೀರಮಣಿಗಳ ಮಾಲೆಗಳಿಂದ ಅಲಂಕೃತವಾಗಿಯೂ, ಹೆಚ್ಚು ಬೆಲೆಯುಳ್ಳ ರತ್ನಗಳಿಂದ ಮೆಟ್ಟಿದ ನೆಲವುಳ್ಳದಾಗಿಯೂ, ಮಣಿಗಳ ಸರಗಳನ್ನು ಬಲೆಯಂತೆ ಕಟ್ಟಿರುವುದರಿಂದ ಕಾಂತಿಯುಳ್ಳದ್ದಾಗಿಯೂ, ಮುತ್ತುಗಗಳಿಂದ ಮಾಡಿದ ಸರಗಳ ಗೊಂಚಲುಗಳನ್ನು ಇಳಿಯಬಿಟ್ಟಿದ್ದುದರಿಂದ ಕಳಕಳಿಸುತ್ತಿರುವುದಾಗಿಯೂ, ಮತ್ತು ಶ್ರೀಮಹಾವಿಷ್ಣುವಿನ ಸ್ವಂತ ಇಚ್ಛೆಯನ್ನನುಸರಿಸಿ ರಚಿತವಾಗಿದ್ದ ಆ ಸಭೆಯನ್ನು ದೇವತೆಗಳು ಪ್ರವೇಶಿಸಿದರು. ॥೫೩-೫೪-೫೫॥

ಮತ್ತು ಆ ಸಭೆಯು ದುಂಡಾಗಿರುವ ರತ್ನಮಯವಾದ ಅನೇಕ ನಿಲುಗನ್ನಡಿಗಳಿಂದ ಅಲಂಕೃತವಾಗಿತ್ತು; ನಾನಾಬಗೆಯಾದ ರೇಖಾಚಿತ್ರಗಳಿಂದಲೂ ಭಾವ

ಪದ್ಮರಾಗೇಂದ್ರರಚಿತಾಂ ರುಚಿರಾಂ ಮಣಿಪಂಕಜೈಃ ।
ಸೋಪಾನಶತಕೈರ್ಯುಕ್ತಾಂ ಸ್ಯಮಂತಕವಿನಿರ್ಮಿತೈಃ ॥೫೭॥

ಪಟ್ಟಸೂತ್ರಗ್ರಂಥಿಯುಕ್ತೈಃ ಚಾರುಚಂದನಪಲ್ಲವೈಃ ।
ಇಂದ್ರನೀಲಸ್ತಂಭವರ್ಯೈಃ ವೇಷ್ಟಿತಾಂ ಸುಮನೋಹರಾಂ ॥೫೮॥

ತದ್ರತ್ನಪೂರ್ಣಕುಂಭಾನಾಂ ಸಮೂಹೈಶ್ಚ ಸಮನ್ವಿತಾಂ ।
ಪಾರಿಜಾತಪ್ರಸೂನಾನಾಂ ಮಾಲಾಜಾಲೈರ್ವಿರಾಜಿತಾಂ ॥೫೯॥

ಕಸ್ತೂರೀ ಕುಂಕುಮಾರಕ್ತೈಃ ಸುಗಂಧಿಚಂದನದ್ರುಮೈಃ ।
ಸುಸಂಸ್ಕೃತಾಂ ತು ಸರ್ವತ್ರ ವಾಸಿತಾಂ ಗಂಧವಾಯುನಾ ॥೬೦॥

ವಿದ್ಯಾಧರೀ ಸಮೂಹಾನಾಂ ನೃತ್ಯಜಾಲೈರ್ವಿರಾಜಿತಾಂ ।
ಸಹಸ್ರಯೋಜನಾಯಾಮಾಂ ಪರಿಪೂರ್ಣಾಂ ಚ ಕಿಂಕರೈಃ ॥೬೧॥

---

ಚಿತ್ರಗಳಿಂದಲೂ ರಂಜಿಸುತ್ತಿತ್ತು ; ಶ್ರೇಷ್ಠವಾದ ಪದ್ಮರಾಗಮಣಿಗಳಿಂದ ರಚಿತವಾದ ರತ್ನಮಯವಾದ ಕಮಲಗಳಿಂದ ಮನೋಹರವಾಗಿದ್ದಿತು ; ಪ್ರಸಿದ್ಧವಾದ ಸ್ಯಮಂತಕಮಣಿಗಳಿಂದ ರಚಿತವಾದ ಅನೇಕ ಮೆಟ್ಟಿಲುಗಳಿಂದ ಕೂಡಿದ್ದಾಗಿಯೂ, ರೇಷ್ಮೆಯ ದಾರದಿಂದ ಮಾಡಿದ ಗೊಂಡೆಗಳಿಂದಲೂ, ಮನೋಹರವಾದ ಚಂದನದ ಚಿಗುರುಗಳಿಂದಲೂ, ಇಂದ್ರನೀಲಮಣಿಯಿಂದ ರಚಿತವಾದ ಸೊಗಸಾದ ಕಂಬಗಳಿಂದಲೂ, ಸುತ್ತುವರಿದಿರುವ ಆ ಸಭೆಯು ಪ್ರಕಾಶಿಸುತ್ತಿತ್ತು. ॥೫೬-೫೭-೫೮॥

ಅಲ್ಲದೆ ಆ ಸಭೆಯು ಅಂತಹ ರತ್ನಗಳಿಂದ ಮಾಡಿದ ಪೂರ್ಣಕುಂಭಗಳ ಸಮೂಹಗಳಿಂದ ಕೂಡಿ, ಪಾರಿಜಾತಪುಷ್ಪಗಳ ಸರಗಳ ಸಮೂಹಗಳಿಂದಲೂ ಕೂಡಿ ಶೋಭಿಸುತ್ತಿತ್ತು. ಕಸ್ತೂರಿಯ ಸುಗಂಧದಿಂದಲೂ ಕುಂಕುಮಕೇಸರಿಯ ಹೊಂಬಣ್ಣದಿಂದಲೂ, ಗಂಧವೃಕ್ಷಗಳ ಸುವಾಸನೆಯಿಂದಲೂ, ಎಲ್ಲೆಡೆಯಲ್ಲಿಯೂ ವಾಸನೆ ಕಟ್ಟಲ್ಪಟ್ಟದ್ದಾಗಿ ಬೀಸುತ್ತಿರುವ ವಾಯುವಿನಿಂದಲೂ ವಿರಾಜಿಸುತ್ತಿತ್ತು. ॥೫೯-೬೦॥

ಅಲ್ಲದೆ ಆ ಸಭೆಯು ವಿದ್ಯಾಧರ ಸ್ತ್ರೀಯರಿಂದ ನೆರವೇರಿಸಲ್ಪಡುತ್ತಿದ್ದ ನಾನಾ ಬಗೆಯ ನರ್ತನಗಳಿಂದ ಕಂಗೊಳಿಸುತ್ತಿದ್ದಿತು. ಆ ಸಭಾಪ್ರದೇಶವು ಒಂದು ಸಾವಿರ ಯೋಜನಗಳಷ್ಟು ವಿಸ್ತಾರವುಳ್ಳದಾಗಿ ಅನೇಕರಾದ ಸೇವಕರಿಂದಲೂ ತುಂಬಿದ್ದಿತು. ॥೬೧॥

ದದರ್ಶ ಶ್ರೀಹರಿಂ ಬ್ರಹ್ಮಾ ಶಂಕರಶ್ಚ ಸುರೈಸ್ಸಹ ।
ವಸಂತಂ ತನ್ಮಧ್ಯದೇಶೇ ಯಥೇಂದುಂ ತಾರಕಾವೃತಂ ॥೬೨॥

ಅಮೂಲ್ಯರತ್ನನಿರ್ಮಾಣಚಿತ್ರಸಿಂಹಾಸನೇ ಸ್ಥಿತಂ ।
ಕಿರೀಟಿನಂ ಕುಂಡಲಿನಂ ವನಮಾಲಾ ವಿಭೂಷಿತಂ ॥೬೩॥

ಚಂದನೋಕ್ಷಿತಸರ್ವಾಂಗಂ ಬಿಭ್ರತಂ ಕೇಳಿಪಂಕಜಂ ।
ಪುರತೋ ನೃತ್ತಗೀತಂ ಚ ಪಶ್ಯಂತಂ ಸಸ್ಮಿತಂ ಮುದಾ ॥೬೪॥

ಶಾಂತಂ ಸರಸ್ವತೀಕಾಂತಂ ಲಕ್ಷ್ಮೀಧೃತಪದಾಂಬುಜಂ ।
ಲಕ್ಷ್ಮ್ಯಾ ಪ್ರದತ್ತತಾಂಬೂಲಂ ಭುಕ್ತವಂತಂ ಸುವಾಸಿತಂ ॥೬೫॥

---

ದೇವತೆಗಳೊಡನೆ ಬ್ರಹ್ಮನೂ ಶಂಕರನೂ ಆ ಸಭೆಯನ್ನು ಪ್ರವೇಶಿಸಿ, ಅಲ್ಲಿ ನಕ್ಷತ್ರಗಳ ಪರಿವಾರದಿಂದ ಕೂಡಿರುವ ಚಂದ್ರನಂತಿರುವ, ಆ ಸಭೆಯ ಮಧ್ಯ ಪ್ರದೇಶದಲ್ಲಿ ಮಂಡಿಸಿರುವ, ಶ್ರೀಮನ್ನಾರಾಯಣನನ್ನು ನೋಡಿದರು. ॥೬೨॥

ಆ ಸಭಾ ಮಧ್ಯದಲ್ಲಿ ಹೆಚ್ಚಾದ ಬೆಲೆಯುಳ್ಳ ರತ್ನಗಳನ್ನು ಕೆತ್ತಿರುವ ವಿಚಿತ್ರವಾದ ಸಿಂಹಾಸನದಲ್ಲಿ ಮಂಡಿಸಿರುವ, ಕಿರೀಟ ಮತ್ತು ಕುಂಡಲಗಳನ್ನು ಧರಿಸಿರುವ, ವೈಜಯಂತೀ ಎಂಬ ವನಮಾಲೆಯಿಂದ ಅಲಂಕೃತನಾಗಿರುವ ಶ್ರೀಮಹಾವಿಷ್ಣುವನ್ನು ದೇವತೆಗಳು ನೋಡಿದರು. ॥೬೩॥

ಪರಿಮಳ ಗಂಧದಿಂದ ಲೇಪಿಸಿದ ಎಲ್ಲ ಅವಯವಗಳುಳ್ಳ, ವಿಲಾಸಾರ್ಥವಾದ ಕಮಲವನ್ನು ಧರಿಸಿರುವ, ಮುಗುಳುನಗೆಯಿಂದ ಕೂಡಿರುವ, ಎದುರಿಗೆ ನಡೆಯುತ್ತಿದ್ದ ನರ್ತನವನ್ನೂ ಗಾನವನ್ನೂ ಸಂತೋಷದೊಡನೆ ನೋಡುತ್ತಿರುವ ವಿಷ್ಣುವನ್ನು ಕಂಡರು. ॥೬೪॥

ಶಾಂತಿಸ್ವಭಾವವುಳ್ಳ, ಸರಸ್ವತೀದೇವಿಗೆ ಪ್ರಿಯನಾದ, ಲಕ್ಷ್ಮಿಯಿಂದ ಒತ್ತುವುದಕ್ಕಾಗಿ ಧರಿಸಿದ ಪಾದಕಮಲವುಳ್ಳ, ಲಕ್ಷ್ಮಿಯು ಕೊಟ್ಟಿದ್ದ ಸುವಾಸನೆಯುಳ್ಳ ತಾಂಬೂಲವನ್ನು ಮೆಲ್ಲುತ್ತಿರುವ, ಶ್ರೀಮನ್ನಾರಾಯಣನನ್ನು ದೇವತೆಗಳು ಕಂಡರು. ॥೬೫॥

ಗಂಗಯಾ ಪರಯಾ ಭಕ್ತ್ಯಾ ಸೇವಿತಂ ಶ್ವೇತಚಾಮರೈಃ ।
ಸರ್ವೈಶ್ಚ ಸ್ತೂಯಮಾನಂ ಚ ಭಕ್ತಿನಮ್ರಾತ್ಮಕಂಧರೈಃ ॥೬೬॥

ಏವಂ ವಿಶಿಷ್ಟಂ ತಂ ದೃಷ್ಟ್ವಾ ಪರಿಪೂರ್ಣತಮಂ ಪ್ರಭುಂ ।
ಬ್ರಹ್ಮಾದಯ ಸ್ಸುರಾಸ್ಸರ್ವೇ ಪ್ರಣಮ್ಯ ತುಷ್ಟುವುಸ್ತದಾ ॥೬೭॥

ಪುಲಕಾಂಚಿತ ಸರ್ವಾಂಗಾಃ ಸಾಶ್ರು ನೇತ್ರಾಶ್ಚ ಗದ್ಗದಾಃ ।
ಭಕ್ತಾಶ್ಚ ಪರಯಾ ಭಕ್ತ್ಯಾ ಭೀತಾ ನಮ್ರಾತ್ಮಕಂಧರಾಃ ॥೬೮॥

ಕೃತಾಂಜಲಿಪುಟೋ ಭೂತ್ವಾ ವಿಧಾತಾ ಜಗತಾಮಪಿ ।
ವೃತ್ತಾಂತಂ ಕಥಯಾಮಾಸ ವಿನಯೇನ ಹರೇಃ ಪುರಃ ॥೬೯॥

ಹರಿಸ್ತದ್ವಚನಂ ಶ್ರುತ್ವಾ ಸರ್ವಜ್ಞಃ ಪರಭಾವವಿತ್ ।
ಪ್ರಹಸ್ಯೋವಾಚ ಬ್ರಹ್ಮಾಣಂ ರಹಸ್ಯಂ ಚ ಮನೋಹರಂ ॥೭೦॥

---

ಹೆಚ್ಚಾದ ಭಕ್ತಿಯಿಂದ ಕೂಡಿ ಗಂಗೆಯು ಶುಭ್ರವಾದ ಚಾಮರಗಳಿಂದ ಸೇವಿಸುತ್ತಿರಲು, ಭಕ್ತಿವಿನಯಗಳಿಂದ ಬಗ್ಗಿಸಿಕೊಂಡಿರುವ ಕತ್ತುಗಳುಳ್ಳ ಎಲ್ಲರಿಂದಲೂ ಸ್ತೋತ್ರಮಾಡಲ್ಪಡುತ್ತಿರುವ ಶ್ರೀಮಹಾವಿಷ್ಣುವನ್ನು ನೋಡಿದರು. ||೬೬||

ಆಗ ಇಂತಹ ವೈಭವದಿಂದ ಕೂಡಿರುವ, ಸರ್ವವ್ಯಾಪಿಯೂ ಪೂರ್ಣಕಾಮನೂ ಸರ್ವಶಕ್ತನೂ ಆದ ಆ ನಾರಾಯಣನನ್ನು ಬ್ರಹ್ಮನೇ ಮೊದಲಾದ ಆ ಎಲ್ಲ ದೇವತೆಗಳೂ ನೋಡಿ, ನಮಸ್ಕರಿಸಿ ಸ್ತೋತ್ರಮಾಡಿದರು. ||೬೭||

ಆ ಮಹಿಮೆಯನ್ನು ನೋಡಿದ ದೇವತೆಗಳೆಲ್ಲರೂ ಆನಂದ ಆಶ್ಚರ್ಯಗಳಿಂದ ಉಂಟಾದ ರೋಮಾಂಚದಿಂದ ಕೂಡಿದ ಎಲ್ಲ ಅವಯವಗಳುಳ್ಳವರಾಗಿ, ಸಂತೋಷದಿಂದ ಉಂಟಾದ ಕಣ್ಣೀರುಳ್ಳವರೂ, ಗದ್ಗದ ಧ್ವನಿಯುಳ್ಳವರೂ ಆದರು. ಮತ್ತು ಅನನ್ಯವೂ ನಿರತಿಶಯವೂ ಆಗಿರುವ ಭಕ್ತಿಯಿಂದ ಕೂಡಿದ ಆ ಭಕ್ತರು ವಿನಯದಿಂದ ಬಗ್ಗಿಸಿದ ಕತ್ತುಳ್ಳವರಾಗಿದ್ದರು. ||೬೮||

ಆಗ ಎಲ್ಲ ಲೋಕಗಳನ್ನೂ ಸೃಜಿಸಿದ ಬ್ರಹ್ಮನು ವಿನಯದಿಂದ ಕೈಕಟ್ಟಿಕೊಂಡಿರುವವನಾಗಿ ಆ ವಿಷ್ಣುವಿನ ಎದುರಿಗೆ ಸಮೀಪಕ್ಕೆ ಹೋಗಿ ಭೂಲೋಕದಲ್ಲಿ ನಡೆದಿದ್ದ ಶಂಖಚೂಡನ ವೃತ್ತಾಂತವನ್ನು ಅರಿಕೆ ಮಾಡಿದನು. ||೬೯||

ಎಲ್ಲವನ್ನೂ ತಿಳಿದಿರುವ, ಇತರರ ಅಭಿಪ್ರಾಯಗಳನ್ನೂ ತಿಳಿಯಬಲ್ಲ, ಆ

॥ ಶ್ರೀ ಭಗವಾನುವಾಚ ॥

ಶಂಖಚೂಡಸ್ಯ ವೃತ್ತಾಂತಂ ಸರ್ವಂ ಜಾನಾಮಿ ಪದ್ಮಜ ।
ಮದ್ಭಕ್ತಸ್ಯ ಚ ಗೋಪಸ್ಯ ಮಹಾತೇಜಸ್ವಿನಃ ಪುರಾ ॥೨೦॥

ಶೃಣು ತತ್ಸರ್ವವೃತ್ತಾಂತಂ ಇತಿಹಾಸಂ ಪುರಾತನಂ ।
ಗೋಲೋಕಸ್ಯೈವ ಚರಿತಂ ಪಾಪಘ್ನಂ ಪುಣ್ಯಕಾರಕಂ ॥೨೨॥

ಸುದಾಮಾ ನಾಮ ಗೋಪಶ್ಚ ಪಾರ್ಷದಪ್ರವರೋ ಮಮ ।
ಸ ಪ್ರಾಪ ದಾನವೀಂ ಯೋನಿಂ ರಾಧಾಶಾಪಾತ್ಸುದಾರುಣಾತ್ ॥೨೩॥

ತತ್ರೈಕದಾಽಹಮಗಮಂ ಸ್ವಾಲಯಾದ್ರಾಸಮಂಡಲಂ ।
ವಿರಜಾಮಪಿ ನೀತ್ವಾ ಚ ಮಮ ಪ್ರಾಣಾಧಿಕಾ ಪರಾ ॥೨೪॥

---

ವಿಷ್ಣುವು ಬ್ರಹ್ಮನ ಆ ಮಾತನ್ನು ಕೇಳಿ, ಮುಗುಳುನಗೆಯನ್ನು ಸೂಸಿ, ಆ ಬ್ರಹ್ಮನನ್ನು ಕುರಿತು ಗುಟ್ಟಾದ ಮನೋಹರವಾದ ಈ ಮಾತುಗಳನ್ನು ಹೇಳಿದನು. ॥೨೦॥

ಷಡ್ಗುಣೈಶ್ವರ್ಯಸಂಪನ್ನನಾದ ನಾರಾಯಣನು ಹೀಗೆ ಹೇಳಿದನು—ಓ ಬ್ರಹ್ಮನೇ, ಆ ಶಂಖಚೂಡನ ಎಲ್ಲ ಸಮಾಚಾರವನ್ನೂ ನಾನು ಬಲ್ಲೆನು. ನನ್ನ ಭಕ್ತನಾದ ಗೋಪರಲ್ಲಿ ಒಬ್ಬನಾದ ತುಂಬ ತೇಜಶ್ಶಾಲಿಯಾದ ಆ ಶಂಖಚೂಡನಿಗೆ ಸಂಬಂಧಿಸಿರುವ ಬಹು ಹಿಂದಿನ ಕಾಲದಲ್ಲಿ ನಡೆದ ಹಳೆಯ ಕಥೆ ಎಲ್ಲವನ್ನೂ ನಿನಗೆ ನಾನು ಹೇಳುತ್ತೇನೆ, ಕೇಳು, ಈ ಶಂಖಚೂಡನ ಚರಿತ್ರೆಯು ಗೋಲೋಕಕ್ಕೆ ಸಂಬಂಧಿಸಿರುತ್ತದೆ. ಈ ಇತಿಹಾಸವನ್ನು ಕೇಳುವವರಿಗೆ ಅವರಲ್ಲಿರಬಹುದಾದ ಪಾಪವೆಲ್ಲವೂ ನಾಶವಾಗುವುದಲ್ಲದೆ ಪುಣ್ಯವೂ ಉಂಟಾಗುವುದು. ॥೨೧-೨೨॥

ಓ ಬ್ರಹ್ಮನೇ, ನನ್ನ ಸದಸ್ಯರಲ್ಲೂ ಪರಿವಾರದವರಲ್ಲೂ ಶ್ರೇಷ್ಠನಾದ ಸುದಾಮಾ ಎಂಬ ಒಬ್ಬ ಗೋಪನಿದ್ದನು. ಅವನು ಬಹು ಕಠಿನವಾದ ರಾಧಾದೇವಿಯ ಶಾಪದಿಂದ ದಾನವನಾಗಿ ಹುಟ್ಟಿದನು. ಹೇಗೆಂದರೆ, ॥೨೩॥

ಒಂದಾನೊಂದು ದಿನ ನಾನು ನನ್ನ ವಾಸಸ್ಥಾನದಿಂದ ಹೊರಟು ರಾಸಮಂಡಲಕ್ಕೆ ವಿರಜಾ ಎಂಬ ಗೋಪಸ್ತ್ರೀಯನ್ನೂ ಕರೆದುಕೊಂಡು ಹೋದೆನು. ಅವಳು ನನಗೆ ನನ್ನ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಪಾತ್ರಳಾಗಿದ್ದಳು. ॥೨೪॥

ಸಾ ಮಾಂ ವಿರಜಯಾ ಸಾರ್ಧಂ ವಿಜ್ಞಾಯ ಕಿಂಕರೀಮುಖಾತ್ ।
ಪಶ್ಚಾತ್ಕ್ರುದ್ಧಾ ಸಾ ಜಗಾಮ ನ ದದರ್ಶ ಚ ತತ್ರ ಮಾಂ ॥೭೫॥

ವಿರಜಾಂ ಚ ನದೀರೂಪಾಂ ಮಾಂ ಜ್ಞಾತ್ವಾ ಚ ತಿರೋಹಿತಂ ।
ಪುನರ್ಜಗಾಮ ಸಾ ದೃಷ್ಟ್ವಾ ಸ್ವಾಲಯಂ ಸಖಿಭಿಸ್ಸಹ ॥೭೬॥

ಮಾಂ ದೃಷ್ಟ್ವಾ ಮಂದಿರೇ ದೇವೀ ಸುದಾಮ್ನಾ ಸಹಿತಂ ಪುರಾ ।
ಭೃಶಂ ಸಾ ಭರ್ತ್ಸಯಾಮಾಸ ಮೌನೀಭೂತಂ ಚ ಸುಸ್ಥಿರಂ ॥೭೭॥

ತಚ್ಛ್ರುತ್ವಾಽಸಹಮಾನಶ್ಚ ಸುದಾಮಾ ತಾಂ ಚುಕೋಪ ಹ ।
ಸ ಚ ತಾಂ ಭರ್ತ್ಸಯಾಮಾಸ ಕೋಪೇನ ಮಮ ಸನ್ನಿಧೌ ॥೭೮॥

ತಚ್ಛ್ರುತ್ವಾ ಕೋಪಯುಕ್ತಾ ಸಾ ರಕ್ತಪಂಕಜಲೋಚನಾ ।
ಬಹಿಷ್ಕರ್ತುಂ ಚಕಾರಾಜ್ಞಾಂ ಸಂತ್ರಸ್ತಂ ಮಮ ಸಂಸದಿ ॥೭೯॥

---

ಓ ಬ್ರಹ್ಮನೇ ಆ ರಾಧೆಯು ನಾನು ವಿರಜೆಯೊಡನೆ ಇರುವುದನ್ನು ತನ್ನ ಸಖಿಯ ಮುಖದಿಂದ ತಿಳಿದು, ಕೋಪಗೊಂಡವಳಾಗಿ ಅನಂತರದಲ್ಲಿ ಅಲ್ಲಿಗೇ ಬಂದಳು. ಆದರೆ ನನ್ನನ್ನು ಮಾತ್ರ ಅವಳು ಅಲ್ಲಿ ಕಾಣಲಿಲ್ಲ! ॥೭೫॥

ಆ ವಿರಜೆ ಎಂಬ ಗೋಪಿಯು ನದೀರೂಪಳಾಗಿದ್ದುದನ್ನೂ, ನಾನು ಕಣ್ಮರೆಯಾಗಿದ್ದುದನ್ನೂ, ನೋಡಿ ಆ ರಾಧೆಯು ಹಿಂತಿರುಗಿ ತನ್ನ ಸಖಿಯರೊಡನೆ ತನ್ನ ವಾಸಸ್ಥಾನಕ್ಕೆ ಬಂದುಬಿಟ್ಟಳು. ॥೭೬॥

ಆ ರಾಧಾದೇವಿಯು ನನ್ನನ್ನು ಮುಂಚಿನಂತೆಯೇ ಸುದಾಮನೊಡನೆ ಮನೆಯಲ್ಲಿಯೇ ಇರುವುದನ್ನು ನೋಡಿ, ನಾನು ಮಾತನ್ನಾಡದೆ ಶಾಂತನಾಗಿರುವುದನ್ನೂ ನೋಡಿ ನನ್ನನ್ನು ಬಹಳವಾಗಿ ಬೆದರಿಸಿದಳು! ॥೭೭॥

ಹೀಗೆ ಮರ್ಯಾದೆಯನ್ನೂ ಮೀರಿದ ಆ ಮಾತನ್ನು ಕೇಳಿ ಸುದಾಮನೂ ಕೋಪಗೊಂಡನು. ಮತ್ತು ಅವನು ನನ್ನ ಸಮೀಪದಲ್ಲಿಯೇ ಅವಳನ್ನು ಕುರಿತು ಬೆದರಿಕೆಯ ಮಾತುಗಳನ್ನಾಡಿದನು. ॥೭೮॥

ಓ ಬ್ರಹ್ಮನೇ, ಆ ಸುದಾಮನು ಆಡಿದ ಬಿರುನುಡಿಯನ್ನು ಕೇಳಿ ಆ ರಾಧೆಯು ಕೋಪಗೊಂಡವಳಾಗಿ ಕೆಂಪೇರಿದ ಕಣ್ಣುಗಳುಳ್ಳವಳಾಗಿ ಅವನನ್ನು ಹೊರಕ್ಕೆ ಕಳುಹಿಸುವಂತೆ ಅಪ್ಪಣೆ ಮಾಡಿದಳು. ॥೭೯॥

ಸಖೀಲಕ್ಷಂ ಸಮುತ್ತಸ್ಥೌ ದುರ್ವಾರಂ ತೇಜಸೋಲ್ಬಣಂ ।
ಬಹಿಶ್ಚಕಾರ ತಂ ತೂರ್ಣಂ ಜಲ್ಪಂತಂ ಚ ಪುನಃ ಪುನಃ ॥೮೦॥

ಸಾ ಚ ತತ್ತಾಡನಂ ತಾಸಾಂ ಶ್ರುತ್ವಾ ರುಷ್ಟಾ ಶಶಾಪ ಹ ।
ಯಾಹಿ ರೇ ದಾನವೀಂ ಯೋನಿಂ ಇತ್ಯೇವಂ ದಾರುಣಂ ವಚಃ ॥೮೧॥

ತಂ ಗಚ್ಛಂತಂ ಶಪಂತಂ ಚ ರುದಂತಂ ಮಾಂ ಪ್ರಣಮ್ಯ ಚ ।
ವಾರಯಾಮಾಸ ತುಷ್ಟಾ ಸಾ ರುದತೀ ಕೃಪಯಾ ಪುನಃ ॥೮೨॥

ಹೇ ವತ್ಸ ತಿಷ್ಠ ಮಾ ಗಚ್ಛ ಕ್ವ ಯಾಸೀತಿ ಪುನಃ ಪುನಃ ।
ಸಮುಚ್ಚಾರ್ಯ ಚ ತತ್ಪಶ್ಚಾತ್ ಜಗಾಮ ಸಾ ಚ ವಿಕ್ಲವಂ ॥೮೩॥

---

ಆ ಕೂಡಲೇ ಅವಳ ಅಪ್ಪಣೆಯನ್ನು ನೆರವೇರಿಸಲು ಒಂದು ಲಕ್ಷ ಜನ ಸಖಿಯರು ಎದ್ದರು. ಅವರ ತೇಜಸ್ಸು ಸಹಿಸಲೂ ತಡೆಯಲೂ ಅಸಾಧ್ಯವಾಗಿತ್ತು. ಆ ಸುದಾಮನು ಬಾರಿಬಾರಿಗೂ ಹೇಳುತ್ತಿದ್ದ ಮಾತನ್ನು ಕೇಳದೆಯೇ ಅವನನ್ನು ಸಭೆಯಿಂದ ಹೊರಕ್ಕೆ ಕಳುಹಿಸಿದರು. ॥೮೦॥

ಓ ಬ್ರಹ್ಮನೇ, ಆ ಬಲಪ್ರಯೋಗದ ಸಮಯದಲ್ಲಿ ಜಗಳವೂ ಹೊಡೆದಾಟವೂ ಆಯಿತು. ಸುದಾಮನೂ ಅವಳ ಸಖಿಯರನ್ನು ಹೊಡೆದನೆಂಬುದನ್ನು ಕೇಳಿ ರಾಧೆಯು ಕೋಪಗೊಂಡವಳಾಗಿ ಅವನನ್ನು ಕುರಿತು " ಎಲವೋ, ನೀನು ರಾಕ್ಷಸ ನಾಗಿ ಹುಟ್ಟು." ಎಂದು ಭಯಂಕರವಾದ ಮಾತನ್ನಾಡಿ ಶಪಿಸಿದಳು. ॥೮೧॥

ಅಪರಾಧಕ್ಕೆ ಅನನುರೂಪವಾದ ಭಯಂಕರವಾದ ಅವಳ ಶಾಪವನ್ನು ಕೇಳಿ ಸುದಾಮನು ರೋದಿಸುತ್ತಾ ನನಗೆ ನಮಸ್ಕಾರವನ್ನೂ ಮಾಡಿ ಹೋಗುತ್ತಾ ಶಪಿಸು ತ್ತಿರುವುದನ್ನು ನೋಡಿ ರಾಧೆಯು ತನ್ನನ್ನು ಎದುರಿಸಿದವನ ನಿಗ್ರಹದಿಂದ ಸಂತೋಷ ಪಟ್ಟವಳಾದರೂ, ಕಾಂತಾಜನ ಸಹಜವಾದ ಮರುಕದಿಂದ ದುಃಖಿತಳಾಗಿ ಅವನನ್ನು ಬಿಟ್ಟುಹೋಗದಂತೆ ತಡೆದಳು. ॥೮೨॥

ಅಪ್ಪ, ಮಗು, ಸುದಾಮನೇ ನಿಲ್ಲು, ಹೊರಟುಹೋಗಬೇಡ ! ಎಲ್ಲಿಗೆ ಹೋಗುತ್ತೀಯೆ ? ಬೇಡ, ಬೇಡ, ಎಂದು ಬಾರಿಬಾರಿಗೂ ಹೇಳುತ್ತಾ ಆ ರಾಧಾ ದೇವಿಯೂ ಅನಂತರದಲ್ಲಿ ತುಂಬಾ ವಿಷಾದವನ್ನು ಪಡೆದಳು. ॥೮೩॥

ಗೋಪ್ಯಶ್ಚ ರುರುದುಸ್ಸರ್ವಾಃ ಗೋಪಾಶ್ಚಾಪಿ ಸುದುಃಖಿತಾಃ ।
ತೇ ಸರ್ವೇ ರಾಧಿಕಾ ಚಾಪಿ ತತ್ಪಶ್ಚಾದ್ಬೋಧಿತಾ ಮಯಾ ॥೮೪॥

ಆಯಾಸ್ಯತಿ ಕ್ಷಣಾರ್ಧೇನ ಕೃತ್ವಾ ಶಾಪಸ್ಯ ಪಾಲನಂ ।
ಸುದಾಮಂ ಸ್ತ್ವಮಿಹಾಗಚ್ಛೇತ್ಯುಕ್ತ್ವಾ ಸಾ ಚ ನಿವಾರಿತಾ ॥೮೫॥

ಗೋಲೋಕಸ್ಯ ಕ್ಷಣಾರ್ಧೇನ ಚೈಕಂ ಮನ್ವಂತರಂ ಭವೇತ್ ।
ಪೃಥಿವ್ಯಾ ಜಗತಾಂ ಧಾತಃ ಇತ್ಯೇವ ವಚನಂ ಧ್ರುವಂ ॥೮೬॥

ಇತ್ಯೇವಂ ಶಂಖಚೂಡಶ್ಚ ಪುನಸ್ತತ್ರೈವ ಯಾಸ್ಯತಿ ।
ಮಹಾಬಲಿಷ್ಠೋ ಯೋಗೇಶಃ ಸರ್ವಮಾಯಾ ವಿಶಾರದಃ ॥೮೭॥

---

ಓ ಬ್ರಹ್ಮನೇ, ಅವಳಂತೆಯೇ ಅಲ್ಲಿದ್ದ ಎಲ್ಲ ಗೋಪಸ್ತ್ರೀಯರೂ, ಗೊಪ ಜನರೂ, ದುಃಖಿತರಾಗಿ ರೋದನಮಾಡಿದರು. ಅನಂತರದಲ್ಲಿ ನಾನು ಅವರೆಲ್ಲರನ್ನೂ ಪ್ರಿಯಳಾದ ರಾಧೆಯನ್ನೂ ಕುರಿತು ಆ ಸಂಗತಿಯ ಕಾರಣವನ್ನೂ ಅದರ ಫಲ ಫಲಿಣಾಮಗಳನ್ನೂ ವಿವರಿಸಿ ತಿಳಿಯಹೇಳಿ ಸಮಾಧಾನಪಡಿಸಿದೆನು. ॥೮೪॥

ಓ ರಾಧೆಯೇ, ಈ ಸುದಾಮನು ಅರ್ಧಕ್ಷಣದಷ್ಟು ಅಲ್ಪಕಾಲದಲ್ಲಿಯೇ ನಿನ್ನ ಶಾಪದ ವಚನವನ್ನೂ ಸತ್ಯವನ್ನಾಗಿಸಿ ಕಾಪಾಡಿ ಹಿಂದಿರುಗಿಬರುವನು. ಓ ಸುದಾಮನೇ, ನೀನೂ ಬೇಗನೆ ಶಾಪವನ್ನು ಅನುಭವಿಸಿ ಇಲ್ಲಿಗೇ ಜಾಗ್ರತೆಯಾಗಿ ಹಿಂದಿರುಗಿ ಬಾ. ಹೀಗೆಂದು ಇಬ್ಬರಿಗೂ ಹೇಳಿ, ರಾಧೆಯು ಸುದಾಮನನ್ನು ತಡೆಯದಂತೆ ನಿವಾರಣೆಮಾಡಿದೆನು. ಹೇಗೆಂದರೆ ॥೮೫॥

ಓ ಬ್ರಹ್ಮನೇ, ಗೋಲೋಕದಲ್ಲಿನ ಕಾಲಮಾನದಲ್ಲಿ ಒಂದು ಅರ್ಧಕ್ಷಣವು ಭೂಲೋಕದಲ್ಲಿನ ಕಾಲಮಾನದಲ್ಲಿ ಒಂದು ಮನ್ವಂತರ ಕಾಲದಷ್ಟಾಗುವುದು. ಆದುದರಿಂದ ನನ್ನ ಮಾತು ನಿಜವಾದುದೇ ಆಗಿದೆ. ॥೮೬॥

ಆದುದರಿಂದ ಈ ಪ್ರಕಾರವಾಗಿ ಶಂಖಚೂಡನೂ ತುಂಬ ಪರಾಕ್ರಮ ಶಾಲಿಯೂ, ಯೋಗಗಳಲ್ಲಿ ಪ್ರವೀಣನೂ, ಎಲ್ಲ ಬಗೆಯ ಮಾಯೆಗಳಲ್ಲಿಯೂ ಗಟ್ಟಿಗನೂ, ಆಗಿರುವುದರಿಂದ ಶಾಪವು ಮುಗಿದಮೇಲೆ ಹಿಂತಿರುಗಿ, ಗೋಲೋಕದಲ್ಲಿ ರಾಧಾಕೃಷ್ಣರ ಸಮಿಪಪವನ್ನೇ ಪಡೆಯುವನು. ॥೮೭॥

**ಮಮ ಶೂಲಂ ಗೃಹೀತ್ವಾ ಚ ಶೀಘ್ರಂ ಗಚ್ಛತ ಭಾರತಂ ।**
**ಶಿವಃ ಕರೋತು ಸಂಹಾರಂ ಮಮ ಶೂಲೇನ ರಕ್ಷಸಃ ॥೮೮॥**

**ಮಮೈವ ಕವಚಂ ಕಂಠೇ ಸರ್ವಮಂಗಳಕಾರಕಂ ।**
**ಬಿಭರ್ತಿ ದಾನವಃ ಶಶ್ವತ್ ಸಂಸಾರೇ ವಿಜಯೀ ತತಃ ॥೮೯॥**

**ತಸ್ಮಿನ್ ಬ್ರಹ್ಮನ್ ಸ್ಥಿತೇ ಚೈವ ನ ಕೋಽಪಿ ಹಿಂಸಿತುಂ ಕ್ಷಮಃ ।**
**ತದ್ಯಾಚನಾಂ ಕರಿಷ್ಯಾಮಿ ವಿಪ್ರರೂಪೋಽಹಮೇವ ಚ ॥೯೦॥**

**ಸತೀತ್ವಹಾನಿಸ್ತತ್ಪತ್ನ್ಯಾ ಯತ್ರ ಕಾಲೇ ಭವಿಷ್ಯತಿ ।**
**ತತ್ರೈವ ಕಾಲೇ ತನ್ಮೃತ್ಯುಃ ಇತಿ ದತ್ತೋ ವರಸ್ತ್ವಯಾ ॥೯೧॥**

---

ಓ ಬ್ರಹ್ಮನೇ, ನೀವೆಲ್ಲರೂ, ನನ್ನ ಈ ಶೂಲಾಯುಧವನ್ನು ತೆಗೆದುಕೊಂಡು ಭೂಲೋಕಕ್ಕೆ ಹೋಗಿರಿ. ಈ ಶಂಕರನು ನನ್ನ ಈ ಶೂಲಾಯುಧದಿಂದ ಆ ಶಂಖ ಚೂಡನೆಂಬ ದಾನವನನ್ನು ಸಂಹರಿಸಲಿ. ||೮೮||

ಆ ಶಂಖಚೂಡನೆಂಬ ದಾನವನು ಎಲ್ಲ ಬಗೆಯ ಮಂಗಳಗಳನ್ನೂ ಉಂಟು ಮಾಡಿಕೊಡುವ ನನ್ನ ಕವಚವನ್ನು ಎಂದರೆ, ರಕ್ಷಣೆಯನ್ನು ಮಾಡುವ ಮಂತ್ರ ಜಪದ ಭಾಗವನ್ನು ಯಾವಾಗಲೂ ಮಾನಸಿಕವಾಗಿ ಪುರಶ್ಚರಣೆಯನ್ನು ಮಾಡುತ್ತಾ ತನ್ನ ಕಂಠದಲ್ಲಿ ಧರಿಸಿರುತ್ತಾನೆ. ಆದುದರಿಂದಲೇ ಅವನು ಬಾರಿಬಾರಿಗೂ ಈ ಸಾಂಸಾರಿಕ ವಾದ ವ್ಯವಹಾರಗಳಲ್ಲಿ ತಪ್ಪದೆ ಜಯಶಾಲಿಯಾಗಿರುತ್ತಾನೆ. ||೮೯||

ಓ ಬ್ರಹ್ಮನೇ, ಆ ಶಂಖಚೂಡನಿಗೆ ಆ ವಿಷ್ಣುಕವಚವು ರಕ್ಷಕವಾಗಿ ಇರಲಾಗಿ ಯಾರೂ ಅವನನ್ನು ಸಂಹರಿಸಲು ಸಮರ್ಥರಾಗುವುದಿಲ್ಲವು. ಆದುದರಿಂದ ನಾನೇ ಬ್ರಾಹ್ಮಣನ ವೇಷವನ್ನು ಧರಿಸಿ ಹೋಗಿ ಅದನ್ನು ಅವನಿಂದ ಯಾಚಿಸಿ ಪಡೆಯು ವೆನು. ||೯೦||

ಅಲ್ಲದೆ ಅವನ ಹೆಂಡಿತಿಯಾಗಿರುವ ತುಲಸೀದೇವಿಯ ಪಾತಿವ್ರತ್ಯಕ್ಕೆ ಯಾವ ಸಮಯದಲ್ಲಿ ಭಂಗವುಟಾಗುವುದೋ, ಆ ಕಾಲದಲ್ಲಿಯೇ ಅವನಿಗೆ ಮರಣವು ಸಂಭವಿಸ ತಕ್ಕುದೆಂದು ನೀನೂ ಅವನಿಗೆ ವರವನ್ನು ಕೊಟ್ಟಿರುವೆ. ||೯೧||

ತತ್ಪತ್ನ್ಯಾಶ್ಚೋದರೇ ವೀರ್ಯಂ ಅರ್ಪಯಿಷ್ಯಾಮಿ ನಿಶ್ಚಿತಂ ।
ತತ್ಕ್ಷಣೇ ಚೈವ ತನ್ಮೃತ್ಯುಃ ಭವಿಷ್ಯತಿ ನ ಸಂಶಯಃ ॥೯೨॥

ಪಶ್ಚಾತ್ಸಾ ದೇಹಮುತ್ಸೃಜ್ಯ ಭವಿಷ್ಯತಿ ಮಮ ಪ್ರಿಯಾ ।
ಇತ್ಯುಕ್ತ್ವಾ ಜಗತಾಂ ನಾಥೋ ದದೌ ಶೂಲಂ ಹರಾಯ ಚ ॥೯೩॥

ಶೂಲಂ ದತ್ವಾ ಯಯೌ ಶೀಘ್ರಂ ಹರಿರಭ್ಯಂತರೇ ಮುದಾ ।
ಭಾರತಂ ಚ ಯಯುರ್ದೇವಾ ಬ್ರಹ್ಮರುದ್ರಪುರೋಗಮಾಃ ॥೯೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಏಕೋನವಿಂಶೋಽಧ್ಯಾಯಃ

---

ಓ ಬ್ರಹ್ಮನೇ, ಅವನ ಹೆಂಡಿತಿಯ ಗರ್ಭದಲ್ಲಿ ನಾನು~ಖಂಡಿತವಾಗಿಯೂ ವೀರ್ಯವನ್ನೂ ಇಡುವೆನು. ಆ ಕೂಡಲೆ ಆವಳಿಗೂ ಮರಣವು ಸಂಭವಿಸುವುದು! ಇದರಲ್ಲಿ ಸಂದೇಹವಿಲ್ಲವು. ॥೯೨॥

ಆಮೇಲೆ ತುಲಸೀದೇವಿಯೂ ಆ ಶರೀರವನ್ನು ಬಿಟ್ಟು ತನ್ನ ಮೂಲಸ್ವರೂಪ ವಾದ ಲಕ್ಷ್ಮಿಯಲ್ಲಿ ಸೇರಿ ಪುನಃ ಮುಂಚಿನಂತೆಯೇ ನನಗೂ ಪ್ರೀತಿಪಾತ್ರಳಾಗಿರು ವಳು. ಲೋಕಗಳಿಗೆಲ್ಲಕ್ಕೂ ಒಡೆಯನಾದ ವಿಷ್ಣುವೂ ಇದೆಲ್ಲವನ್ನೂ ದೇವತೆಗಳಿಗೆ ತಿಳಿಯಹೇಳಿ ಶಿವನಿಗೆ ಶೂಲಾಯುಧವನ್ನೂ ಕೊಟ್ಟನು. ॥೯೩॥

ಹೀಗೆ ವಿಷ್ಣುವು ರುದ್ರನಿಗೆ ಶೂಲಾಯುಧವನ್ನು ಕೊಟ್ಟು ಜಾಗ್ರತೆಯಾಗಿ ಸಭೆಯಿಂದ ಹೊರಟು ಒಳಕ್ಕೆ ಹೋದನು. ಬ್ರಹ್ಮಾ, ರುದ್ರ ಮುಂತಾದ ನಾಯಕ ರಾಗಿರುವ ದೇವತೆಗಳೂ ಭೂಲೋಕಕ್ಕೆ ಹಿಂತಿರುಗಿ ಬಂದರು. ॥೯೪॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

॥ ವಿಂಶೋಽಧ್ಯಾಯಃ ॥

**ಇಪ್ಪತ್ತನೆಯ ಅಧ್ಯಾಯವು**

॥ ಶ್ರೀನಾರಾಯಣ ಉವಾಚ ॥

**ಬ್ರಹ್ಮಾ ಶಿವಂ ಸನ್ನಿಯೋಜ್ಯ ಸಂಹಾರೇ ದಾನವಸ್ಯ ಚ ।**
**ಜಗಾಮ ಸ್ವಾಲಯಂ ತೂರ್ಣಂ ಯಥಾಸ್ಥಾನಂ ಸುರೋತ್ತಮಾಃ ॥೧॥**

**ಚಂದ್ರಭಾಗಾನದೀತೀರೇ ವಟಮೂಲೇ ಮನೋಹರೇ ।**
**ತತ್ರ ತಸ್ಥೌ ಮಹಾದೇವೋ ದೇವವಿಸ್ತಾರಹೇತವೇ ॥೨॥**

**ದೂತಂ ಕೃತ್ವಾ ಚಿತ್ರರಥಂ ಗಂಧರ್ವೇಶ್ವರಮೀಪ್ಸಿತಂ ।**
**ಶೀಘ್ರಂ ಪ್ರಸ್ಥಾಪಯಾಮಾಸ ಶಂಖಚೂಡಾಂತಿಕಂ ಮುದಾ ॥೩॥**

---

ನಾರಾಯಣನು ಹೇಳಿದನು — ಬ್ರಹ್ಮನು ಶಂಖಚೂಡನೆಂಬ ದಾನವನನ್ನು ಸಂಹಾರಮಾಡಲು ಶಿವನನ್ನು ಗೊತ್ತುಮಾಡಿ ತನ್ನ ಲೋಕಕ್ಕೆ ಹೋದನು. ದೇವತೆಗಳೂ ತಂತಮ್ಮ ಸ್ಥಳಗಳಿಗೆ ಹೋದರು. ॥೧॥

ಶಿವನು ಭರತಖಂಡದಲ್ಲಿ ಚಂದ್ರಭಾಗಾನದಿಯ ತೀರದಲ್ಲಿರುವ ಒಂದು ಆಲದಮರದ ಬುಡದಲ್ಲಿ ದೇವತೆಗಳ ಗುಂಪನ್ನು ಸೇರಿಸುವುದಕ್ಕಾಗಿ ವಾಸವಾಗಿದ್ದನು. ॥೨॥

ಗಂಧರ್ವಾಧಿಪತಿಯಾದ ಚಿತ್ರರಥನನ್ನು ದೂತನನ್ನಾಗಿ ಮಾಡಿಕೊಂಡು ಅವನನ್ನು ಬೇಗನೆ ಶಂಖಚೂಡನ ಸಮೀಪಕ್ಕೆ ಕಳುಹಿಸಿದನು. ॥೩॥

ಸರ್ವೇಶ್ವರಾಜ್ಞಯಾ ಶೀಘ್ರಂ ಯಯೌ ತನ್ನಗರಂ ಪರಂ ।
ಮಹೇಂದ್ರನಗರೋತ್ಕೃಷ್ಟಂ ಕುಬೇರಭವನಾಧಿಕಂ ॥೪॥

ಪಂಚಯೋಜನವಿಸ್ತೀರ್ಣಂ ದೈರ್ಘ್ಯೇ ತದ್ದ್ವಿಗುಣಂ ಭವೇತ್ ।
ಸ್ಫಟಿಕಾಕಾರಮಣಿಭಿರ್ನಿರ್ಮಿತಂ ಯಾನವೇಷ್ಟಿತಂ ॥೫॥

ಸಪ್ತಭಿಃ ಪರಿಖಾಭಿಶ್ಚ ದುರ್ಗಮಾಭಿಃ ಸಮನ್ವಿತಂ ।
ಜ್ವಲದಗ್ನಿನಿಭೈಃ ಶಶ್ವತ್ಕಲ್ಪಿತಂ ರತ್ನಕೋಟಿಭಿಃ ॥೬॥

ಯುಕ್ತಂ ಚ ವೀಥಿಶತಕೈರ್ಮಣಿವೇದಿವಿಚಿತ್ರಿತೈಃ ।
ಪರಿತೋ ವಣಿಜಾಂ ಸೌಧೈರ್ನಾನಾವಸ್ತುವಿರಾಜಿತೈಃ ॥೭॥

ಸಿಂಧೂರಾಕಾರಮಣಿಭಿರ್ನಿರ್ಮಿತೈಶ್ಚ ವಿಚಿತ್ರಿತೈಃ ।
ಭೂಷಿತಂ ಭೂಷಿತೈರ್ದಿವ್ಯೈರಾಶ್ರಮೈಃ ಶತಕೋಟಿಭಿಃ ॥೮॥

ಗತ್ವಾ ದದರ್ಶ ತನ್ಮಧ್ಯೇ ಶಂಖಚೂಡಾಲಯಂ ಪರಂ ।
ಅತೀವ ವಲಯಾಕಾರಂ ಯಥಾ ಪೂರ್ಣೇಂದುಮಂಡಲಂ ॥೯॥

ಜ್ವಲದಗ್ನಿಶಿಖಾಕ್ತಾಭಿಃ ಪರಿಖಾಭಿಶ್ಚತಸೃಭಿಃ ।
ತದ್ದುರ್ಗಮಂ ಚ ಶತ್ರೂಣಾಮನ್ಯೇಷಾಂ ಸುಗಮಂ ಸುಖಂ ॥೧೦॥

---

ಆ ಚಿತ್ರರಥನು ಸರ್ವೇಶ್ವರನಾದ ಶಿವನ ಅಪ್ಪಣೆಯಿಂದ ಇಂದ್ರನ ಮತ್ತು ಕುಬೇರನ ಪಟ್ಟಣಗಳಿಗಿಂತಲೂ ಉತ್ಕೃಷ್ಟವಾದ ಐದುಗಾವುದ ಅಗಲವೂ ಹತ್ತು ಗಾವುದ ಉದ್ದವೂ ಇರುವ ಸ್ಫಟಿಕ ಮುಂತಾದ ಮಣಿಗಳಿಂದ ಮಾಡಿರುವ, ರಥಾದಿಗಳಿಂದ ಕೂಡಿ ಏಳುಸುತ್ತು ಕೋಟೆಗಳುಳ್ಳ ಅನೇಕ ರತ್ನಗಳಿಂದ ಮಾಡಿದ ಜಗುಲಿಗಳುಳ್ಳ ನೂರಾರು ಬೀದಿಗಳುಳ್ಳ ವಿಚಿತ್ರವಾದ ವಸ್ತುಗಳಿಂದ ತುಂಬಿದ, ವರ್ತಕರ ಉಪ್ಪರಿಗೆ ಮನೆಗಳು ಸುತ್ತಲೂ ಇರುವ ಅನೇಕ ಆಶ್ರಮಗಳಿಂದ ಕೂಡಿದ ಶಂಖಚೂಡನ ಪಟ್ಟಣಕ್ಕೆ ಹೋದನು. ॥೪-೫-೬-೭-೮॥

ಆ ಶಂಖಚೂಡನ ಪಟ್ಟಣದ ಮಧ್ಯದಲ್ಲಿ ಅವನ ಮನೆಯು ಪೂರ್ಣಚಂದ್ರನಂತೆ ಗುಂಡಾಗಿ ಬೆಂಕಿಯು ಉರಿಯುವಂತೆ ಪ್ರಕಾಶಿಸುತ್ತಿರುವ ನಾಲ್ಕು ಪ್ರಾಕಾರಗಳಿಂದ ಶತ್ರುಗಳಿಗೆ ಪ್ರವೇಶಿಸಲಸಾಧ್ಯವಾದ, ಬಹಳ ಎತ್ತರವಾದ ರತ್ನಕಲಶಗಳಿಂದ

ಅತ್ಯುಚ್ಚೈರ್ಗಗನಸ್ಪರ್ಶಮಣಿಶೃಂಗವಿರಾಜಿತಂ ।
ರಾಜಿತಂ ದ್ವಾದಶದ್ವಾರೈರ್ದ್ವಾರಪಾಲಸಮನ್ವಿತಂ ॥೧೧॥

ಮಣೀಂದ್ರಸಾರನಿರ್ಮಾಣೈಃ ಶೋಭಿತಂ ಲಕ್ಷಮಂದಿರೈಃ ।
ಶೋಭಿತಂ ರತ್ನಸೋಪಾನೈ ರತ್ನಸ್ತಂಭವಿರಾಜಿತಂ ॥೧೨॥

ತದ್ದೃಷ್ಟ್ವಾ ಪುಷ್ಪದಂತೋಽಪಿ ವರಂ ದ್ವಾರಂ ದದರ್ಶ ಸಃ ।
ದ್ವಾರೇ ನಿಯುಕ್ತಂ ಪುರುಷಂ ಶೂಲಹಸ್ತಂ ಚ ಸಸ್ಮಿತಂ ॥೧೩॥

ತಿಷ್ಠಂತಂ ಪಿಂಗಳಾಕ್ಷಂ ಚ ತಾಮ್ರವರ್ಣಂ ಭಯಂಕರಂ ।
ಕಥಯಾಮಾಸ ವೃತ್ತಾಂತಂ ಜಗಾಮ ತದನುಜ್ಞಯಾ ॥೧೪॥

ಅತಿಕ್ರಮ್ಯ ಚ ತದ್ದ್ವಾರಂ ಜಗಾಮಾಭ್ಯಂತರಂ ಪುನಃ ।
ನ ಕೋಽಪಿ ರಕ್ಷತಿ ಶ್ರುತ್ವಾ ದೂತರೂಪಂ ರಣಸ್ಯ ಚ ॥೧೫॥

ಗತ್ವಾ ಸೋಽಭ್ಯಂತರದ್ವಾರಂ ದ್ವಾರಪಾಲಮುವಾಚ ಹ ।
ರಣಸ್ಯ ಸರ್ವವೃತ್ತಾಂತಂ ವಿಜ್ಞಾಪಯತ ಮಾ ಚಿರಂ ॥೧೬॥

---

ಕೂಡಿದ ಹನ್ನೆರಡು ಬಾಗಿಲುಗಳಿಂದ ಕೂಡಿದ ಇಂದ್ರನೀಲರತ್ನದಿಂದ ಮಾಡಿದ ಅನೇಕಮನೆಗಳಿಂದಲೂ ರತ್ನದ ಸೋಪಾನಗಳಿಂದಲೂ ಕಂಬಗಳಿಂದಲೂ ಪ್ರಕಾಶಿಸುತ್ತಾ ಮಿತ್ರರು ಪ್ರವೇಶಿಸಲು ಅನುಕೂಲವಾಗಿದ್ದಿತು. ॥೯-೧೦-೧೧-೧೨॥

ಪುಷ್ಪದಂತನು (ಚಿತ್ರರಥನ ಮತ್ತೊಂದು ಹೆಸರು) ಆ ಮನೆಯನ್ನು ನೋಡಿ ಬಾಗಿಲಿನಲ್ಲಿ ತ್ರಿಶೂಲವನ್ನು ಹಿಡಿದು ನಗುತ್ತಾ ಕೆಂಪಾದ ಕಣ್ಣುಗಳಿಂದಲೂ ತಾಮ್ರವರ್ಣದ ಮೈಬಣ್ಣದಿಂದಲೂ ಭಯಂಕರವಾಗಿ ಕಾಣುವ ದ್ವಾರಪಾಲಕನನ್ನು ಕಂಡು ತಾನು ಬಂದ ಸಮಾಚಾರವನ್ನು ಹೇಳಿ ಅವನ ಅಪ್ಪಣೆಯಿಂದ ಒಳಕ್ಕೆಹೋದನು. ಯುದ್ಧಾಹ್ವಾನವನ್ನೂ ತಡೆಯದೆ ಸ್ವಾಗತಿಸುವಷ್ಟು ಶಂಖಚೂಡನು ಗಟ್ಟಿಗನಾಗಿದ್ದನು ! ॥೧೩-೧೪॥

ಪುಷ್ಪದಂತನು ಆ ಬಾಗಿಲನ್ನು ದಾಟಿ ಒಳಗೆ ಹೋಗಿ ಯುದ್ಧಕ್ಕೆ ಕರೆಯಲು ಬಂದ ದೂತನನ್ನು ಯಾರೂ ಬಾಗಿಲಿನಲ್ಲಿ ತಡೆಯುವುದಿಲ್ಲ ಎಂಬ ಮಾತನ್ನು ಕೇಳಿ ಒಳಬಾಗಿಲಿನ ಬಳಿಯಲ್ಲಿದ್ದ ದ್ವಾರಪಾಲಕನನ್ನು ಕುರಿತು ಯುದ್ಧಕ್ಕೆ ಕರೆಯುವುದಕ್ಕೆ ಬಂದಿರುವ ವೃತ್ತಾಂತವನ್ನು ನಿಮ್ಮ ರಾಜನಿಗೆ ತಿಳಿಸು ಎಂದು ಹೇಳಲು ಆ ದೂತನು

ಸ ಚ ತಂ ಕಥಯಿತ್ವಾ ಚ ದೂತೋ ಗಂತುಮುವಾಚ ಹ ।
ಸ ಗತ್ವಾ ಶಂಖಚೂಡಂ ತಂ ದದರ್ಶ ಸುಮನೋಹರಂ ॥೧೭॥

ರಾಜಮಂಡಲಮಧ್ಯಸ್ಥಂ ಸ್ವರ್ಣಸಿಂಹಾಸನೇ ಸ್ಥಿತಂ ।
ಮಣೀಂದ್ರರಚಿತಂ ದಿವ್ಯಂ ರತ್ನದಂಡಸಮನ್ವಿತಂ ॥೧೮॥

ರತ್ನಕೃತ್ರಿಮಪುಷ್ಪೈಶ್ಚ ಪ್ರಶಸ್ತೈಃ ಶೋಭಿತಂ ಸದಾ ।
ಭೃತ್ಯೇನ ಮಸ್ತಕೇ ನ್ಯಸ್ತಂ ಸ್ವರ್ಣಚ್ಛತ್ರಂ ಮನೋಹರಂ ॥೧೯॥

ಸೇವಿತಂ ಪಾರ್ಷದಗಣೈ ರುಚಿರೈಃ ಶ್ವೇತಚಾಮರೈಃ ।
ಸುವೇಷಂ ಸುಂದರಂ ರಮ್ಯಂ ರತ್ನಭೂಷಣಭೂಷಿತಂ ॥೨೦॥

ಮಾಲ್ಯೇನ ಲೇಪನಂ ಸೂಕ್ಷ್ಮಂ ಸುವಸ್ತ್ರಂ ದಧತಂ ಮುನೇ ।
ದಾನವೇಂದ್ರೈಃ ಪರಿವೃತಂ ಸುವೇಷೈಶ್ಚ ತ್ರಿಕೋಟಿಭಿಃ ॥೨೧॥

ಶತಕೋಟಿಭಿರನ್ಯೈಶ್ಚ ಭ್ರಮದ್ಭಿರಸ್ತ್ರಪಾಣಿಭಿಃ ।
ಏವಂ ಭೂತಂ ಚ ತಂ ದೃಷ್ಟ್ವಾ ಪುಷ್ಪದಂತಃ ಸವಿಸ್ಮಯಃ ॥೨೨॥
ಉವಾಚ ಸ ಚ ವೃತ್ತಾಂತಂ ಯದುಕ್ತಂ ಶಂಕರೇಣ ಚ ।

---

ಅವನನ್ನು ಒಳಕ್ಕೆ ಹೋಗೆಂದು ಕಳುಹಿಸಿದನು. ಪುಷ್ಪದಂತನು ಸುಂದರನಾದ ಶಂಖಚೂಡನನ್ನು ನೋಡಿದನು. ॥೧೫-೧೬-೧೭॥

ರಾಜರ ಸಮೂಹದ ನಡುವೆ ಚಿನ್ನದ ಸಿಂಹಾಸನದಲ್ಲಿ ಕುಳಿತು ರತ್ನಖಚಿತವಾದ ರಾಜದಂಡವನ್ನು ಹಿಡಿದುಕೊಂಡು ರತ್ನಗಳ ಹೂವುಗಳಿಂದ ಅಲಂಕರಿಸಲ್ಪಟ್ಟ ಸೇವಕನು ಚಿನ್ನದ ಛತ್ರಿಯನ್ನು ತಲೆಯ ಮೇಲೆ ಹಿಡಿದಿರಲು ಸೇವಕರು ಚಾಮರಗಳನ್ನು ಬೀಸುತ್ತಿರಲು ಸೂಕ್ಷ್ಮವಸ್ತ್ರವನ್ನುಟ್ಟು ಹೂವನ್ನೂ ರತ್ನಾಭರಣಗಳನ್ನೂ ಅಲಂಕರಿಸಿಕೊಂಡು ಮೂರುಕೋಟಿ ದಾನವರು ಸುತ್ತಲೂ ಸೇವಿಸುತ್ತಿರಲು, ಶಸ್ತ್ರಧಾರಿಗಳಾದ ಇತರರು ಉಪಚರಿಸುತ್ತಿರಲು, ಆ ಶಂಖಚೂಡನನ್ನು ಕಂಡನು. ॥೧೮-೧೯-೨೦-೨೧॥

ಪುಷ್ಪದಂತನು ಹೀಗೆ ಕುಳಿತಿದ್ದ ಶಂಖಚೂಡನನ್ನು ನೋಡಿ ಆಶ್ಚರ್ಯಪಟ್ಟು ಶಿವನು ಹೇಳಿದ ವೃತ್ತಾಂತವನ್ನು ಅವನಿಗೆ ಹೇಳಿದನು. ॥೨೨॥

|| ಪುಷ್ಪದಂತ ಉವಾಚ ||

ರಾಜೇಂದ್ರ ಶಿವಭೃತ್ಯೋಽಹಂ ಪುಷ್ಪದಂತಾಭಿದಃ ಪ್ರಭೋ ||೨೩||

ಯದುಕ್ತಂ ಶಂಕರೇಣೈವ ತದ್ಬ್ರವೀಮಿ ನಿಶಾಮಯ ।
ರಾಜ್ಯಂ ದೇಹಿ ಚ ದೇವಾನಾಮಧಿಕಾರಂ ಚ ಸಾಂಪ್ರತಂ ||೨೪||

ದೇವಾಶ್ಚ ಶರಣಾಪನ್ನಾ ದೇವೇಶಂ ಶ್ರೀಹರಿಂ ಪರಂ ।
ಹರಿರ್ದತ್ತ್ವಾಸ್ಯ ಶೂಲಂ ಚ ತೇನ ಪ್ರಸ್ಥಾಪಿತಃ ಶಿವಃ ||೨೫||

ಪುಷ್ಪಭದ್ರಾನದೀತೀರೇ ವಟಮೂಲೇ ತ್ರಿಲೋಚನಃ ।
ವಿಷಯಂ ದೇಹಿ ತೇಷಾಂ ಚ ಯುದ್ಧಂ ವಾ ಕುರು ನಿಶ್ಚಿತಂ ||೨೬||

ಗತ್ವಾ ವಕ್ಷ್ಯಾಮಿ ಕಿಂ ಶಂಭುಮಥ ತದ್ವದ ಮಾಮಪಿ ।
ದೂತಸ್ಯ ವಚನಂ ಶ್ರುತ್ವಾ ಶಂಖಚೂಡಃ ಪ್ರಹಸ್ಯ ಚ ||೨೭||

ಪ್ರಭಾತೇಽಹಂ ಗಮಿಷ್ಯಾಮಿ ತ್ವಂ-ಚ ಗಚ್ಛೇತ್ಯುವಾಚ ಹ ।
ಸ ಗತ್ವೋವಾಚ ತಂ ತೂರ್ಣಂ ವಟಮೂಲಸ್ಥಮೀಶ್ವರಂ ||೨೮||
ಶಂಖಚೂಡಸ್ಯ ವಚನಂ ತದೀಯಂ ತನ್ಮುಖೋದಿತಂ ।

---

ಪುಷ್ಪದಂತನು ಹೇಳಿದನು—ರಾಜೇಂದ್ರನೇ, ನಾನು ಪುಷ್ಪದಂತನೆಂಬ ಶಿವ ದೂತನು. ಶಿವನು ಹೇಳಿದುದನ್ನು ಹೇಳುವೆನು. ಕೇಳು. ದೇವತೆಗಳಿಗೆ ರಾಜ್ಯವನ್ನೂ ಅಧಿಕಾರವನ್ನೂ ಕೊಡು. ದೇವತೆಗಳು ಹರಿಯನ್ನು ಮರೆಹೊಕ್ಕರು. ಹರಿಯು ಶಿವನಿಗೆ ಶೂಲಾಯುಧವನ್ನು ಕೊಟ್ಟನು. ಶಿವನು ಯುದ್ಧಕ್ಕೆ ಹೊರಟು ಪುಷ್ಪಭದ್ರಾ ನದಿಯ ದಡದಲ್ಲಿರುವ ಆಲದ ಮರದ ಬುಡದಲ್ಲಿಳಿದುಕೊಂಡಿರುವನು. ದೇವತೆಗಳಿಗೆ ದೇಶವನ್ನಾದರೂ ಕೊಡು. ಯುದ್ಧವನ್ನಾದರೂ ಮಾಡು. ನಾನು ಹೋಗಿ ಶಿವನಿಗೆ ಏನನ್ನು ಹೇಳಲಿ ಅದನ್ನು ಹೇಳು. ಎಂದನು. ||೨೩-೨೪-೨೫-೨೬||

ದೂತನ ಮಾತನ್ನು ಕೇಳಿ ಶಂಖಚೂಡನು ನಕ್ಕು ನಾಳೆ ಪ್ರಾತಃಕಾಲದಲ್ಲಿ ನಾನು ಯುದ್ಧಕ್ಕೇ ಬರುವೆನು. ನೀನು ಹೋಗು ಎಂದು ಹೇಳಿದನು. ಆ ಪುಷ್ಪ ದಂತನು ಈಶ್ವರನ ಸಮೀಪಕ್ಕೆ ಬೇಗನೆ ಹೋಗಿ ಶಂಖಚೂಡನು ಹೇಳಿದ ಮಾತನ್ನು ಹೇಳಿದನು. ||೨೭-೨೮||

ಏತಸ್ಮಿನ್ನಂತರೇ ಸ್ಕಂದ ಆಜಗಾಮ ಶಿವಾಂತಿಕೇಂ ॥೨೯॥

ವೀರಭದ್ರಶ್ಚ ನಂದೀ ಚ ಮಹಾಕಾಲಃ ಸುಭದ್ರಕಃ ।
ವಿಶಾಲಾಕ್ಷಶ್ಚ ಬಾಣಶ್ಚ ಪಿಂಗಳಾಕ್ಷೋ ವಿಕಂಪನಃ ॥೩೦॥

ವಿರೂಪೋ ವಿಕೃತಿಶ್ಚೈವ ಮಣಿಭದ್ರಶ್ಚ ಬಾಷ್ಕಲಃ ।
ಕಪಿಲಾಖ್ಯೋ ದೀರ್ಘದಂಷ್ಟ್ರೋ ವಿಕಟಸ್ತಾಮ್ರಲೋಚನಃ ॥೩೧॥

ಕಾಲಕಂಠೋ ಬಲೀ ಭದ್ರಃ ಕಾಲಜಿಹ್ವಃ ಕುಟೀಚರಃ ।
ಬಲೋನ್ಮತ್ತೋ ರಣಶ್ಲಾಘೀ ದುರ್ಜಯೋ ದುರ್ಗಮಸ್ತಥಾ ॥೩೨॥

ಅಷ್ಟೌ ಚ ಭೈರವಾಃ ರೌದ್ರಾ ರುದ್ರಾಶ್ಚೈಕಾದಶ ಸ್ಮೃತಾಃ ।
ವಸವೋಽಷ್ಟೌ ವಾಸವಶ್ಚ ಆದಿತ್ಯಾ ದ್ವಾದಶ ಸ್ಮೃತಾಃ ॥೩೩॥

ಹುತಾಶನಶ್ಚ ಚಂದ್ರಶ್ಚ ವಿಶ್ವಕರ್ಮಾಶ್ವಿನೌ ಚ ತೌ ।
ಕುಬೇರಶ್ಚ ಯಮಶ್ಚೈವ ಜಯಂತೋ ನಲಕೂಬರಃ ॥೩೪॥

ವಾಯುಶ್ಚ ವರುಣಶ್ಚೈವ ಬುಧಶ್ಚ ಮಂಗಲಸ್ತಥಾ ।
ಧರ್ಮಶ್ಚ ಶನಿರೀಶಾನಃ ಕಾಮದೇವಶ್ಚ ವೀರ್ಯವಾನ್ ॥೩೫॥

ಉಗ್ರದಂಷ್ಟ್ರಾ ಚೋಗ್ರಚಂಡಾ ಕೋಟರಾ ಕೈಟಭೀ ತಥಾ ।
ಸ್ವಯಂ ಚಾಷ್ಟಭುಜಾ ದೇವೀ ಭದ್ರಕಾಲೀ ಭಯಂಕರೀ ॥೩೬॥

---

ಈ ಸಮಯಕ್ಕೆ ಸರಿಯಾಗಿ ಕುಮಾರಸ್ವಾಮಿಯು ಶಿವನ ಸಮೀಪಕ್ಕೆ ಬಂದನು. ವೀರಭದ್ರ, ನಂದಿ, ಮಹಾಕಾಲ, ಸುಭದ್ರ, ವಿಶಾಲಾಕ್ಷ, ಬಾಣ, ಪಿಂಗಲಾಕ್ಷ, ವಿಕಂಪನ, ವಿರೂಪ, ವಿಕೃತಿ, ಮಣಿಭದ್ರ, ಬಾಷ್ಕಲ, ಕಪಿಲ, ದೀರ್ಘದಂಷ್ಟ್ರ, ವಿಕಟ, ತಾಮ್ರಲೋಚನ, ಕಾಲಕಂಠ, ಬಲೀ, ಭದ್ರ, ಕಾಲಜಿಹ್ವ, ಕುಟೀಚರ, ಬಲೋನ್ಮತ್ತ, ದುರ್ಜಯ, ದುರ್ಗಮ, ಅಷ್ಟಭೈರವರು, ಏಕಾದಶರುದ್ರರು, ಅಷ್ಟವಸುಗಳು, ದೇವೇಂದ್ರ, ದ್ವಾದಶಾದಿತ್ಯರು, ಅಗ್ನಿ, ಚಂದ್ರ, ವಿಶ್ವಕರ್ಮ, ಅಶ್ವಿನೀ ದೇವತೆಗಳು, ಕುಬೇರ, ಯಮ, ಜಯಂತ, ನಲಕೂಬರ, ವಾಯು, ವರುಣ, ಬುಧ, ಅಂಗಾರಕ, ಧರ್ಮ, ಶನಿ, ಈಶಾನ, ಕಾಮದೇವ, ಉಗ್ರದಂಷ್ಟ್ರ, ಉಗ್ರಚಂಡ, ಕೋಟರಾ, ಕೈಟಭೀ, ಎಂಟು ತೋಳುಗಳುಗಳುಳ್ಳ ಭಯಂಕರಿಯಾದ ಭದ್ರಕಾಲೀ ದೇವೀ, ಇವರೆಲ್ಲರೂ ಬಂದರು. ॥೨೯-೩೦-೩೧-೩೨-೩೩-೩೪-೩೫-೩೬॥

ರತ್ನೇಂದ್ರಹಾರನಿರ್ಮಾಣವಿಮಾನೋಪರಿ ಸಂಸ್ಥಿತಾ ।
ರಕ್ತವಸ್ತ್ರಪರೀಧಾನಾ ರಕ್ತಮಾಲ್ಯಾನುಲೇಪನಾ ॥೩೭॥

ನೃತ್ಯಂತೀ ಚ ಹಸಂತೀ ಚ ಗಾಯಂತೀ ಸುಸ್ವರಂ ಮುದಾ ।
ಅಭಯಂ ದದಾತಿ ಭಕ್ತೇಭ್ಯೋಽಭಯಾ ಸಾ ಚ ಭಯಂ ರಿಪುಂ ॥೩೮॥

ಬಿಭ್ರತೀ ವಿಕಟಾಂ ಜಿಹ್ವಾಂ ಸುಲೋಲಾಂ ಯೋಜನಾಯತಾಂ ।
ಶಂಖಚಕ್ರಗದಾಪದ್ಮಖಡ್ಗಚರ್ಮಧನುಃ ಶರಾನ್ ॥೩೯॥

ಖರ್ಪರಂ ವರ್ತುಲಾಕಾರಂ ಗಂಭೀರಂ ಯೋಜನಾಯತಂ ।
ತ್ರಿಶೂಲಂ ಗಗನಸ್ಪರ್ಶಿ ಶಕ್ತಿಂ ಚ ಯೋಜನಾಯತಾಂ ॥೪೦॥

ಮುದ್ಗರಂ ಮುಸಲಂ ವಜ್ರಂ ಖೇಟಂ ಫಲಕಮುಜ್ವಲಂ ।
ವೈಷ್ಣವಾಸ್ತ್ರಂ ವಾರುಣಾಸ್ತ್ರಂ ವಾಹ್ನೇಯಂ ನಾಗಪಾಶಕಂ ॥೪೧॥

ನಾರಾಯಣಾಸ್ತ್ರಂ ಗಾಂಧರ್ವಂ ಬ್ರಹ್ಮಾಸ್ತ್ರಂ ಗಾರುಡಂ ತಥಾ ।
ಪರ್ಜನ್ಯಾಸ್ತ್ರಂ ಪಾಶುಪತಂ ಜೃಂಭಣಾಸ್ತ್ರಂ ಚ ಪಾರ್ವತಂ ॥೪೨॥

---

ಭದ್ರಕಾಲೀದೇವಿಯು ಶ್ರೇಷ್ಠವಾದ ರತ್ನಗಳಿಂದ ಮಾಡಿದ ವಿಮಾನವನ್ನೇರಿ, ಕೆಂಪುವಸ್ತ್ರವನ್ನುಟ್ಟು, ಕೆಂಪುಗಂಧವನ್ನು ಬಳಿದುಕೊಂಡು, ಕೆಂಪಾದ ಹೂಮಾಲೆಯನ್ನು ಧರಿಸಿ, ಕುಣಿಯುತ್ತಾ, ನಗುತ್ತಾ, ಮಧುರವಾಗಿ ಗಾನಮಾಡುತ್ತಾ, ಭಕ್ತರಿಗೆ ಅಭಯವನ್ನೂ ಶತ್ರುಗಳಿಗೆ ಭಯವನ್ನೂ ಉಂಟುಮಾಡುತ್ತಾ, ||೩೭-೩೮||

ವಿಕಾರವಾಗಿ ಉದ್ದವಾದ ನಾಲಿಗೆಯನ್ನು ಅಲ್ಲಾಡಿಸುತ್ತಾ, ಶಂಖ, ಚಕ್ರ, ಗದೆ, ಕಮಲ, ಕತ್ತಿ, ಗುರಾಣಿ ಬಿಲ್ಲು, ಬಾಣ, ಗುಂಡಾಗಿಯೂ ವಿಸ್ತಾರವಾಗಿಯೂ ಆಳವಾಗಿಯೂ ಇರುವ ಪಾನಪಾತ್ರೆ (ನರಕಪಾಲ) ಆಕಾಶವನ್ನು ಮುಟ್ಟುವ ತ್ರಿಶೂಲ, ಉದ್ದವಾದ ಶಕ್ತ್ಯಾಯುಧ, ಮುದ್ಗರ, ಮುಸಲ, ವಜ್ರ, ಸುರಗಿ, ಗುರಾಣಿ ಮುಂತಾದ ಆಯುಧಗಳೂ ವೈಷ್ಣವ, ವಾರುಣ, ಆಗ್ನೇಯ, ನಾಗಪಾಶ, ||೩೯-೪೦-೪೧||

ನಾರಾಯಣ, ಗಾಂಧರ್ವ, ಬ್ರಹ್ಮ, ಗಾರುಡ, ಪರ್ಜನ್ಯ, ಪಾಶುಪತ

ಮಹೇಶ್ವರಾಸ್ತ್ರಂ ವಾಯವ್ಯಂ ದಂಡಂ ಸಂಮೋಹನಂ ತಥಾ ।
ಅವ್ಯರ್ಥಮಸ್ತ್ರಕಂ ದಿವ್ಯಂ ದಿವ್ಯಾಸ್ತ್ರಶತಕಂ ಪರಂ ॥೪೩॥

ಆಗತ್ಯ ತತ್ರ ತಸ್ಥೌ ಚ ಯೋಗಿನೀನಾಂ ತ್ರಿಕೋಟಿಭಿಃ ।
ಭೂತಪ್ರೇತಪಿಶಾಚಾಶ್ಚ ಕೂಷ್ಮಾಂಡಾ ಬ್ರಹ್ಮರಾಕ್ಷಸಾಃ ॥೪೪॥

ಸಾರ್ಧಂ ಚ ಡಾಕಿನೀನಾಂ ಚ ವಿಕಟಾನಾಂ ತ್ರಿಕೋಟಿಭಿಃ ।
ವೇತಾಲಾ ರಾಕ್ಷಸಾಶ್ಚೈವ ಯಕ್ಷಾಶ್ಚೈವ ತು ಕಿನ್ನರಾಃ ॥೪೫॥

ತಾಭಿಶ್ಚೈವ ಸಹ ಸ್ಕಂದಃ ಪ್ರಣಮ್ಯ ಚಂದ್ರಶೇಖರಂ ।
ಪಿತುಃ ಪಾರ್ಶ್ವೇ ಸಹಾಯಾರ್ಥಂ ಸಮುವಾಸ ತದಾಜ್ಞಯಾ ॥೪೬॥

ಅಥ ದೂತೇ ಗತೇ ತತ್ರ ಶಂಖಚೂಡಃ ಪ್ರತಾಪವಾನ್ ।
ಉವಾಚ ತುಲಸೀಂ ವಾರ್ತಾಂ ಗತ್ವಾಽಭ್ಯಂತರಮೇವ ಚ ॥೪೭॥

ರಣವಾರ್ತಾಂ ಚ ಸಾ ಶ್ರುತ್ವಾ ಶುಷ್ಕಕಂಠೋಷ್ಠತಾಲುಕಾ ।
ಉವಾಚ ಮಧುರಂ ಸಾಧ್ವೀ ಹೃದಯೇನ ವಿದೂಯತಾ ॥೪೮॥

---

ಜೃಂಭಣ, ಪರ್ವತ, ಮಾಹೇಶ್ವರ, ವಾಯುವ್ಯ, ಯಮದಂಡ, ಸಂಮೋಹನ, ಅವ್ಯರ್ಥ ಮುಂತಾದ ಇನ್ನೂ ನೂರಾರು ದಿವ್ಯಾಸ್ತ್ರಗಳನ್ನು ಧರಿಸಿ, ॥೪೨-೪೩॥

ಶಿವನ ಸಮೀಪಕ್ಕೆ ಬಂದು ಮೂರುಕೋಟಿ ಯೋಗಿನಿಯರಿಂದಲೂ ವಿಕಾರವಾದ ಮೂರುಕೋಟಿ ಡಾಕಿನಿಯರಿಂದಲೂ ಕೂಡಿ ಇದ್ದಳು. ಭೂತ, ಪ್ರೇತ, ಪಿಶಾಚ, ಕೂಷ್ಮಾಂಡ, ಬ್ರಹ್ಮರಾಕ್ಷಸ, ಬೇತಾಲ, ರಾಕ್ಷಸ, ಯಕ್ಷ, ಕಿನ್ನರ ಮುಂತಾದ ದುಷ್ಟಗ್ರಹಗಳ ಸೇನೆಯೊಡನೆ ಕೂಡಿದ ಕುಮಾರಸ್ವಾಮಿಯು ಶಿವನಿಗೆ ನಮಸ್ಕಾರ ಮಾಡಿ ಸಹಾಯಾರ್ಥವಾಗಿ ಅವನಪ್ಪಣೆಯಿಂದ ತಂದೆಯ ಸಮೀಪದಲ್ಲಿದ್ದನು. ॥೪೪-೪೫-೪೬॥

ಬಳಿಕ ದೂತನು ಹೋದಮೇಲೆ ಪರಾಕ್ರಮಿಯಾದ ಶಂಖಚೂಡನು ರಾಣಿವಾಸಕ್ಕೆ ಹೋಗಿ ತುಲಸಿಗೆ ವೃತ್ತಾಂತವನ್ನೆಲ್ಲವನ್ನೂ ತಿಳಿಸಿದನು. ತುಳಸಿಯು ಯುದ್ಧದ ವರ್ತಮಾನವನ್ನು ಕೇಳಿ ಗಂಟಲು ನಾಲಿಗೆ ತುಟಿಗಳು ಒಣಗಿ ದುಃಖಪಡುತ್ತಿರುವ ಮನಸ್ಸಿನಿಂದ ಕೂಡಿ ಹಿತಕರವಾದ ಮಾತನ್ನಾಡಿದಳು. ॥೪೭-೪೮॥

|| ತುಲಸ್ಯುವಾಚ ||

ಹೇ ಪ್ರಾಣಬಂಧೋ ಹೇ ನಾಥ ತಿಷ್ಠ ಮೇ ವಕ್ಷಸಿ ಕ್ಷಣಂ ||೪೯||

ಭುಂಕ್ಷ್ವ ಜನ್ಮ ಸಮಾಸಾದ್ಯ ಯನ್ಮೇ ಮನಸಿ ವಾಂಛಿತಂ ।
ಪಶ್ಯಾಮಿ ತ್ವಾಂ ಕ್ಷಣಂ ಕಿಂಚಿಲ್ಲೋಚನಾಭ್ಯಾಂ ಚ ಸಾದರಂ ||೫೦||

ಆಂದೋಲಯಂತೇ ಪ್ರಾಣಾ ಮೇ ಮನೋ ದಗ್ಧಂ ಚ ಸಂತತಂ ।
ದುಃಸ್ವಪ್ನಶ್ಚ ಮಯಾ ದೃಷ್ಟಶ್ಚಾದ್ಯೈವ ಚರಮೇ ನಿಶಿ ||೫೧||

ತುಲಸೀವಚನಂ ಶ್ರುತ್ವಾ ಭುಕ್ತ್ವಾ ಪೀತ್ವಾ ನೃಪೇಶ್ವರಃ ।
ಉವಾಚ ವಚನಂ ಪ್ರಾಜ್ಞೋ ಹಿತಂ ಸತ್ಯಂ ಯಥೋಚಿತಂ ||೫೨||

ಕಾಲೇನ ಯೋಜಿತಂ ಸರ್ವಂ ಕರ್ಮಭೋಗನಿಬಂಧನಂ ।

|| ಶಂಖಚೂಡ ಉವಾಚ ||

ಶುಭಂ ಹರ್ಷಃ ಸುಖಂ ದುಃಖಂ ಭಯಂ ಶೋಕಶ್ಚ ಮಂಗಲಂ||೫೩||

---

ತುಲಸಿಯು ಹೇಳಿದಳು—ಎಲೈ ಪ್ರಾಣನಾಥನೇ, ಒಂದು ಕ್ಷಣಕಾಲ ನನ್ನ ಹೃದಯದಲ್ಲಿರು. ನನ್ನ ಪ್ರಾಣಕ್ಕೆ ನೀನೇ ಆಶ್ರಯನು. ಒಂದು ಕ್ಷಣ ನನ್ನ ಪ್ರಾಣವನ್ನು ಕಾಪಾಡು. ನನ್ನ ಮನಸ್ಸಿನಲ್ಲಿರುವ ಆಶೆಯನ್ನು ಈ ಜನ್ಮದಲ್ಲಿ ನೆರವೇರಿಸು. ಒಂದು ಕ್ಷಣಕಾಲ ಪ್ರೀತಿಯಿಂದ ನನ್ನ ಕಣ್ಣುಗಳಿಂದ ನೋಡುತ್ತೇನೆ. ನನ್ನ ಪ್ರಾಣಗಳು ಚಲಿಸುತ್ತಿವೆ. ಮನಸ್ಸು ಯಾವಾಗಲೂ ದಹಿಸುತ್ತಿದೆ. ಈ ದಿನವೇ ರಾತ್ರಿಯ ಕೊನೆಯ ಭಾಗದಲ್ಲಿ ಕೆಟ್ಟ ಕನಸನ್ನೂ ಕಂಡೆನು. ||೪೯-೫೦-೫೧||

ತುಲಸಿಯ ಮಾತನ್ನು ಕೇಳಿ ಶಂಖಚೂಡನು ಊಟಮಾಡಿ ಮಧುಪಾನ ಮಾಡಿ, ತುಲಸಿಯನ್ನು ಕುರಿತು ಹಿತವಾಗಿಯೂ ನಿಜವಾಗಿಯೂ ಸಮಯೋಚಿತವಾಗಿಯೂ ಇರುವ ಮಾತನ್ನೂ ಆಡಿದನು. ||೫೨||

ಶಂಖಚೂಡನು ಹೇಳಿದನು—ದೇವಿಯೇ, ಕೇಳು. ಸಮಸ್ತ ಕರ್ಮಗಳ ಫಲಾನುಭವವು ಕಾಲಕ್ಕೆ ಸರಿಯಾಗಿ ಒದಗುವುದು. ಶುಭವಾಗಲೀ, ಸಂತೋಷ, ಸುಖ, ದುಃಖ, ಭಯ, ಶೋಕ, ಮಂಗಳಗಳು ಆಗಲೀ ಕಾಲವನ್ನನುಸರಿಸಿ ಫಲದಾಯಕವಾಗುವುವು. ಮರಗಳು ಕವಲೊಡೆದು ಹೂ, ಕಾಯಿ, ಹಣ್ಣುಗಳಾಗ

ಕಾಲೇ ಭವಂತಿ ವೃಕ್ಷಾಶ್ಚ ಸ್ಕಂಧವಂತಶ್ಚ ಕಾಲತಃ ।
ಕ್ರಮೇಣ ಪುಷ್ಪವಂತಶ್ಚ ಫಲವಂತಶ್ಚ ಕಾಲತಃ ॥೫೪॥

ತೇಷಾಂ ಫಲಾನಿ ಪಕ್ವಾನಿ ಪ್ರಭವಂತ್ಯೇವ ಕಾಲತಃ ।
ತೇ ಸರ್ವೇ ಫಲಿತಾಃ ಕಾಲೇ ಪಾತಯಂತಿ ಚ ಕಾಲತಃ ॥೫೫॥

ಕಾಲೇ ಭವಂತಿ ವಿಶ್ವಾನಿ ಕಾಲೇ ನಶ್ಯಂತಿ ಸುಂದರಿ ।
ಕಾಲಾತ್ಸ್ರಷ್ಟಾ ಚ ಸೃಜತಿ ಪಾತಾ ಪಾತಿ ಚ ಕಾಲತಃ ॥೫೬॥

ಸಂಹರ್ತಾ ಸಂಹರೇತ್ಕಾಲೇ ಕ್ರಮೇಣ ಸಂಚರಂತಿ ತೇ ।
ಬ್ರಹ್ಮವಿಷ್ಣುಶಿವಾದೀನಾಮೀಶ್ವರಃ ಪ್ರಕೃತಿಃ ಪರಾ ॥೫೭॥

ಸ್ರಷ್ಟಾ ಪಾತಾ ಚ ಸಂಹರ್ತಾ ಸ ಚಾತ್ಮಾ ಕಾಲನರ್ತಕಃ ।
ಕಾಲೇ ಸ ಏವ ಪ್ರಕೃತಿಂ ಸ್ವಾಭಿನ್ನಾಂ ಸ್ವೇಚ್ಛಯಾ ಪ್ರಭುಃ ॥೫೮॥

ನಿರ್ಮಾಯ ಕೃತವಾನ್ ಸರ್ವಾನ್ವಿಶ್ವಸ್ಥಾಂಶ್ಚ ಚರಾಚರಾನ್ ।
ಸರ್ವೇಶಃ ಸರ್ವರೂಪಶ್ಚ ಸರ್ವಾತ್ಮಾ ಪರಮೇಶ್ವರಃ ॥೫೯॥

ಜನಂ ಜನೇನ ಜನಿತಾ ಜನಂ ಪಾತಿ ಜನೇನ ಯಃ ।
ಜನಂ ಜನೇನ ಹರತೇ ತಂ ದೇವಂ ಭಜ ಸಾಂಪ್ರತಂ ॥೬೦॥

---

ಬೇಕಾದರೂ ಆ ಹಣ್ಣುಗಳು ಪಕ್ವವಾಗಿ ಕೆಳಗೆ ಬೀಳಬೇಕಾದರೂ ಪ್ರಪಂಚವು ಸೃಷ್ಟಿಯಾಗಬೇಕಾದರೂ ನಾಶವಾಗಬೇಕಾದರೂ ಕಾಲವೇ ಕಾರಣವು. ಬ್ರಹ್ಮ ವಿಷ್ಣು ಮಹೇಶ್ವರರು ಅವರ ಕೆಲಸವಾದ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡಬೇಕಾದರೂ ಕಾಲವನ್ನನುಸರಿಸಿಯೇ ಮಾಡುವರು. ಈ ತ್ರಿಮೂರ್ತಿಗಳಿಗೂ ಬೇರೆಯಾದ ಶ್ರೇಷ್ಠವಾದ ಮೂಲಪ್ರಕೃತಿಯಿಂದ ಕೂಡಿದ ಈಶ್ವರನಿರುವನು. ||೫೩-೫೪-೫೫-೫೬-೫೭||

ಅವನೇ ಪರಮಾತ್ಮನು. ಸಮಸ್ತವನ್ನೂ ಸೃಷ್ಟಿಸಿ ಕಾಪಾಡಿ ಸಂಹಾರವನ್ನೂ ಮಾಡುವನು. ಅವನೇ ಕಾಲವನ್ನೂ ಕುಣಿಸುವನು. ಆ ಆತ್ಮನೇ ಸೃಷ್ಟಿಕಾಲವು ಬಂದಾಗ ತನಗಿಂತಲೂ ಬೇರೆಯಲ್ಲದ ತನ್ನ ಇಚ್ಛಾಶಕ್ತಿಯಿಂದ ನಿರ್ಮಿಸಿ ಸಮಸ್ತ ಪ್ರಪಂಚದಲ್ಲಿರುವ ಚರಾಚರ ಪ್ರಾಣಿಗಳನ್ನು ಮಾಡಿರುವನು. ಆ ಪರಮೇಶ್ವರನು ಎಲ್ಲಕ್ಕೂ ಒಡೆಯನಾಗಿ ಸರ್ವರೂಪನಾಗಿ ಸಮಸ್ತಕ್ಕೂ ಆತ್ಮಸ್ವರೂಪನಾಗಿ ಜನರನ್ನು

ಯಸ್ಯಾಽಽಜ್ಞಯಾ ವಾತಿ ವಾತಃ ಶೀಘ್ರಗಾಮೀ ಚ ಸಾಂಪ್ರತಂ ।
ಯಸ್ಯಾಽಽಜ್ಞಯಾ ಚ ತಪನಸ್ತಪತ್ಯೇವ ಯಥಾಕ್ಷಣಂ ॥೬೦॥

ಯಥಾ ಕ್ಷಣಂ ವರ್ಷತೀಂದ್ರೋ ಮೃತ್ಯುಶ್ಚರತಿ ಜಂತುಷು ।
ಯಥಾ ಕ್ಷಣಂ ದಹತ್ಯಗ್ನಿಶ್ಚಂದ್ರೋ ಭ್ರಮತಿ ಶೀತವಾನ್ ॥೬೨॥

ಮೃತ್ಯೋರ್ಮೃತ್ಯುಂ ಕಾಲಕಾಲಂ ಯಮಸ್ಯ ಚ ಯಮಂ ಪರಂ ।
ವಿಭುಂ ಸ್ರಷ್ಟುಶ್ಚ ಸ್ರಷ್ಟಾರಂ ಪಾತುಶ್ಚ ಪಾತೃಕಂ ಭವೇ ॥೬೩॥

ಸಂಹರ್ತಾರಂ ಚ ಸಂಹರ್ತುಸ್ತಂ ದೇವಂ ಶರಣಂ ವ್ರಜ ।
ಕೋ ವಾ ಬಂಧುಶ್ಚ ಕೇಷಾಂ ವಾ ಸರ್ವಬಂಧುಂ ಭಜ ಪ್ರಿಯೇ ॥೬೪॥

ಅಹಂ ಕೋ ವಾ ಚ ತ್ವಂ ಕಾ ವಾ ವಿಧಿನಾ ಯೋಜಿತಃ ಪುರಾ ।
ತ್ವಯಾ ಸಾರ್ಧಂ ಕರ್ಮಣಾ ಚ ಪುನಸ್ತೇನ ವಿಯೋಜಿತಃ ॥೬೫॥

---

ಜನರಿಂದಲೇ ಹುಟ್ಟಿಸಿ, ಜನರಿಂದಲೇ ರಕ್ಷಿಸಿ, ಜನರಿಂದಲೇ ನಾಶಮಾಡುವನು. ಈಗ ನೀನು ಆ ದೇವನನ್ನು ಧ್ಯಾನಿಸು. ॥೫೮-೫೯-೬೦॥

ಯಾರ ಆಜ್ಞೆಯಿಂದ ಗಾಳಿಯು ವೇಗವಾಗಿ ಚಲಿಸುವುದೋ, ಸೂರ್ಯನು ಸಂತಾಪವನ್ನುಂಟುಮಾಡುವನೋ, ದೇವೇಂದ್ರನು ಮಳೆಗರೆಯುವನೋ, ಮೃತ್ಯು ದೇವತೆಯು ಪ್ರಾಣಿಗಳನ್ನು ನಾಶಮಾಡುವುದೋ, ಅಗ್ನಿಯು ಸುಡುವನೋ, ಚಂದ್ರನು ತಣ್ಣಗಿರುವನೋ, ಮೃತ್ಯುವಿಗೆ ಮೃತ್ಯುಸ್ವರೂಪನೂ ಯಮನಿಗೆ ಯಮನೂ ಬ್ರಹ್ಮನಿಗೂ ಸೃಷ್ಟಿಕರ್ತನೂ ರಕ್ಷಕನಿಗೆ ರಕ್ಷಕನೂ, ಆದ ಶ್ರೇಷ್ಠನಾದ ಆತ್ಮನನ್ನು ಧ್ಯಾನಿಸು. ॥೬೧-೬೨-೬೩॥

ಪ್ರಪಂಚವನ್ನು ಸಂಹರಿಸುವವನನ್ನೂ ಸಂಹರಿಸುವವನಾದ ಆ ದೇವನನ್ನು ಶರುಣುಹೊಂದು. ಯಾರಿಗೆ ಯಾರು ಬಂಧುಗಳು ? ಪ್ರೀತಿಪಾತ್ರಳಾದ ತುಲಸಿಯೇ, ಎಲ್ಲರಿಗೂ ಬಂಧುವಾದ ಆ ದೇವನನ್ನು ಧ್ಯಾನಿಸು. ॥೬೪॥

ನಾನು ಯಾರೋ, ನೀನು ಯಾರೋ, ಕರ್ಮಫಲವಾದ ಅದೃಷ್ಟವು ನನ್ನನ್ನೂ ನಿನ್ನನ್ನೂ ಸೇರಿಸಿತ್ತು ! ಮತ್ತೆ ಅದೇ ನಮ್ಮನ್ನು ಅಗಲಿಸುವುದು. ಅಜ್ಞಾನಿಯಾದವನು ವಿಪತ್ತು ಬಂದಾಗ ದುಃಖದಿಂದ ಭಯಪಡುವನು. ಕಾಲಕ್ಕನುಸಾರವಾಗಿ

ಅಜ್ಞಾನೀ ಕಾತರಃ ಶೋಕೇ ವಿಪತ್ತೌ ನ ಚ ಪಂಡಿತಃ ।
ಸುಖೇ ದುಃಖೇ ಭ್ರಮುತ್ಯೇವ ಕಾಲನೇಮಿಕ್ರಮೇಣ ಚ ॥೬೬॥

ನಾರಾಯಣಂ ತಂ ಸರ್ವೇಶಂ ಕಾಂತಂ ಯಾಸ್ಯಸಿ ನಿಶ್ಚಿತಂ ।
ತಪಃ ಕೃತಂ ಯದರ್ಥೇ ಚ ಪುರಾ ಬದರಿಕಾಶ್ರಮೇ ॥೬೭॥

ಮಯಾ ತ್ವಂ ತಪಸಾ ಲಬ್ಧಾ ಬ್ರಹ್ಮಣಸ್ತು ವರೇಣ ಚ ।
ಹರ್ಯರ್ಥೇ ಯತ್ತ್ವ ತಪೋ ಹರಿಂ ಪ್ರಾಪ್ಸ್ಯಸಿ ಕಾಮಿನಿ ॥೬೮॥

ವೃಂದಾವನೇ ಚ ಗೋವಿಂದಂ ಗೋಲೋಕೇ ತ್ವಂ ಲಭಿಷ್ಯಸಿ ।
ಅಹಂ ಯಾಸ್ಯಾಮಿ ತ್ವಲ್ಲೋಕಂ ತನುಂ ತ್ಯಕ್ತ್ವಾ ಚ ದಾನವೀಂ ॥೬೯॥

ತತ್ರ ದ್ರಕ್ಷ್ಯಸಿ ಮಾಂ ತ್ವಂ ಚ ದ್ರಕ್ಷ್ಯಾಮಿ ತ್ವಾಂ ಚ ಸಾಂಪ್ರತಂ ।
ಆಗಮಂ ರಾಧಿಕಾಶಾಪಾದ್ಭಾರತಂ ಚ ಸುದುರ್ಲಭಂ ॥೭೦॥

ಪುನರ್ಯಾಸ್ಯಾಮಿ ತತ್ರೈವ ಕಃ ಶೋಕೋ ಮೇ ಶೃಣು ಪ್ರಿಯೇ ।
ತ್ವಂ ಚ ದೇಹಂ ಪರಿತ್ಯಜ್ಯ ದಿವ್ಯಂ ರೂಪಂ ವಿಧಾಯ ಚ ॥೭೧॥
ತತ್ಕಾಲಂ ಪ್ರಾಪ್ಸ್ಯಸಿ ಹರಿಂ ಮಾ ಕಾಂತೇ ಕಾತರಾ ಭವ ।

---

ಸುಖದುಃಖಗಳಲ್ಲಿ ಭ್ರಾಂತಿಯನ್ನು ಹೊಂದುವನು. ಪಂಡಿತನಿಗೆ ಭಯವಾಗಲೀ ಭ್ರಾಂತಿಯಾಗಲೀ ಇಲ್ಲ. ॥೬೫-೬೬॥

ನನ್ನ ತಪಸ್ಸಿನಿಂದಲೂ ಬ್ರಹ್ಮನ ವರದಿಂದಲೂ ನನಗೆ ನೀನು ದೊರೆತಿರುವೆ. ನೀನು ಹಿಂದೆ ಬದರಿಕಾಶ್ರಮದಲ್ಲಿ ಯಾವುದಕ್ಕಾಗಿ ತಪಸ್ಸುಮಾಡಿದೆಯೋ ಆ ತಪಸ್ಸಿನ ಫಲವಾಗಿ ನಾರಾಯಣನನ್ನೇ ಪತಿಯಾಗಿ ಪಡೆಯುವೆ. ಇದು ನಿಶ್ಚಯವು. ॥೬೭-೬೮॥

ವೃಂದಾವನದಲ್ಲಿಯೂ ಗೋಲೋಕದಲ್ಲಿಯೂ ನೀನು ಕೃಷ್ಣನನ್ನು ಪತಿಯನ್ನಾಗಿ ಪಡೆಯುವೆ. ನಾನೂ ಈ ರಾಕ್ಷಸ ಶರೀರವನ್ನು ಬಿಟ್ಟು ಗೋಲೋಕಕ್ಕೆ ಹೋಗುತ್ತೇನೆ. ಆಗ ನೀನು ನನ್ನನ್ನು ನೋಡುವೆ ನಾನೂ ನಿನ್ನನ್ನು ನೋಡುವೆನು. ಈಗ ನಾನು ರಾಧೆಯ ಶಾಪದಿಂದ ಈ ಭರತಖಂಡಕ್ಕೆ ಬಂದಿರುವೆನು. ಪುನಃ ಅಲ್ಲಿಗೇ ಹೋಗುತ್ತೇನೆ! ನನಗೆ ದುಃಖವೇತಕ್ಕೆ? ನೀನೂ ದೇಹವನ್ನು ಬಿಟ್ಟು ದಿವ್ಯವಾದ ರೂಪವನ್ನು ಪಡೆದು ಆ ಕ್ಷಣದಲ್ಲಿಯೇ ಕೃಷ್ಣನ ಸಮೀಪಕ್ಕೆ ಹೋಗುತ್ತೀಯೆ. ಪ್ರಿಯೆಯಾದ ತುಲಸಿಯೇ ದುಃಖಪಡಬೇಡ! ॥೬೯-೭೦-೭೧॥

ಇತ್ಯುಕ್ತ್ವಾ ಚ ದಿನಾಂತೇ ಚ ತಯಾ ಸಾರ್ಧಂ ಮನೋಹರಂ॥೭೨॥
ಸುಷ್ವಾಪ ಶೋಭನೇ ತಲ್ಪೇ ಪುಷ್ಪಚಂದನಚರ್ಚಿತೇ ।
ನಾನಾಪ್ರಕಾರವಿಭವಂ ಚಕಾರ ರತ್ನಮಂದಿರೇ ॥೭೩॥

ರತ್ನಪ್ರದೀಪಸಂಯುಕ್ತೇ ಸ್ತ್ರೀರತ್ನಂ ಪ್ರಾಪ್ಯ ಸುಂದರೀಂ ।
ನಿನಾಯ ರಜನೀಂ ರಾಜಾ ಕ್ರೀಡಾಕೌತುಕಮಂಗಲೈಃ ॥೭೪॥

ಕೃತ್ವಾ ವಕ್ಷಸಿ ತಾಂ ಕಾಂತಾಂ ರುದತೀಮತಿದುಃಖಿತಾಂ ।
ಕೃಶೋದರೀಂ ನಿರಾಹಾರಾಂ ನಿಮಗ್ನಾಂ ಶೋಕಸಾಗರೇ ॥೭೫॥

ಪುನಸ್ತಾಂ ಬೋಧಯಾಮಾಸ ದಿವ್ಯಜ್ಞಾನೇನ ಜ್ಞಾನವಿತ್ ।
ಪುರಾ ಕೃಷ್ಣೇನ ಯದ್ದತ್ತಂ ಭಾಂಡೀರೇ ತತ್ವಮುತ್ತಮಂ ॥೭೬॥

ಸ ಚ ತಸ್ಯೈ ದದೌ ಸರ್ವಂ ಸರ್ವಶೋಕಹರಂ ಪರಂ ।
ಜ್ಞಾನಂ ಸಂಪ್ರಾಪ್ಯ ಸಾ ದೇವೀ ಪ್ರಸನ್ನವದನೇಕ್ಷಣಾ ॥೭೭॥

---

ಹೀಗೆಂದು ಹೇಳಿ ಸಂಧ್ಯಾಕಾಲದಲ್ಲಿ ಹೂಗಂಧಗಳಿಂದಲೂ ಅಲಂಕಾರಗಳಿಂದಲೂ ಕೂಡಿ ರತ್ನಖಚಿತವಾದ ಮನೆಯಲ್ಲಿ ಮನೋಹರವಾದ ಹಾಸಿಗೆಯಲ್ಲಿ ತುಲಸಿಯೊಡನೆ ಮಲಗಿಕೊಂಡನು. ॥೭೨-೭೩॥

ರತ್ನಗಳಂತೆ ಹೊಳೆಯುವ ದೀಪಗಳಿಂದ ಕೂಡಿದ ಮನೆಯಲ್ಲಿ ಸ್ತ್ರೀಶ್ರೇಷ್ಠಳಾದ ತುಳಸಿಯೊಡನೆ ಮಂಗಳಕರವಾದ ಕ್ರೀಡೆಯಲ್ಲಾಸಕ್ತನಾಗಿ ಶಂಖಚೂಡನು ರಾತ್ರಿಯನ್ನು ಕಳೆದನು. ॥೭೪॥

ಆಹಾರವಿಲ್ಲದೆ ಕೃಶವಾದ ಶರೀರವುಳ್ಳವಳೂ ದುಃಖಸಮುದ್ರದಲ್ಲಿ ಮುಳುಗಿದವಳೂ ಅಳುತ್ತಿರುವವಳೂ ಆದ ಆ ತನ್ನ ಪತ್ನಿಯನ್ನು ಜ್ಞಾನಿಯಾದ ಶಂಖಚೂಡನು ತನ್ನೆದೆಗೆ ತಬ್ಬಿಕೊಂಡು ಹಿಂದೆ ಕೃಷ್ಣನು ಭಾಂಡವೆಂಬ ಸ್ಥಳದಲ್ಲಿ ತನಗೆ ಉಪದೇಶಿಸಿದ ಶ್ರೇಷ್ಠವಾದ ತತ್ವವನ್ನು ಮತ್ತೆ ಆಕೆಗೆ ಉಪದೇಶಿಸಿದನು. ॥೭೫-೭೬॥

ನಾರದನೇ, ಶಂಖಚೂಡನು ದುಃಖವನ್ನು ನಾಶಮಾಡುವ ಶ್ರೇಷ್ಠವಾದ ತತ್ವವನ್ನು ಉಪದೇಶಮಾಡಿದಮೇಲೆ ತುಲಸಿಯು ಜ್ಞಾನವನ್ನು ಪಡೆದು ಪ್ರಸನ್ನವಾದ ಮುಖದಿಂದ ಸಮಸ್ತವೂ ನಾಶವಾಗತಕ್ಕುದೆಂದು ತಿಳಿದು ಸಂತೋಷದಿಂದ

ಕ್ರೀಡಾಂ ಚಕಾರ ಹರ್ಷೇಣ ಸರ್ವಂ ಮತ್ವೇತಿ ನಶ್ವರಂ ।
ತೌ ದಂಪತೀ ಚ ಕ್ರೀಡಂತೌ ನಿಮಗ್ನೌ ಸುಖಸಾಗರೇ ॥೭೮॥

ಪುಲಕಾಂಕಿತಸರ್ವಾಂಗೌ ಮೂರ್ಛಿತೌ ನಿರ್ಜನೇ ಮುನೇ ।
ಅಂಗಪ್ರತ್ಯಂಗಸಂಯುಕ್ತೌ ಸುಪ್ರೀತೌ ಸುರತೋತ್ಸುಕೌ ॥೭೯॥

ಏಕಾಂಗೌ ಚ ತಥಾ ತೌ ದ್ವೌ ಚಾರ್ಧನಾರೀಶ್ವರೋ ಯಥಾ ।
ಪ್ರಾಣೇಶ್ವರಂ ಚ ತುಲಸೀ ಮೇನೇ ಪ್ರಾಣಾಧಿಕಂ ಪರಂ ॥೮೦॥

ಪ್ರಾಣಾಧಿಕಾಂ ಚ ತಾಂ ಮೇನೇ ರಾಜಾ ಪ್ರಾಣೇಶ್ವರೀಂ ಸತೀಂ ।
ತೌ ಸ್ಥಿತೌ ಸುಖಸುಪ್ತೌ ಚ ತಂದ್ರಿತೌ ಸುಂದರೌ ಸಮೌ ॥೮೧॥

ಸುವೇಷೌ ಸುಖಸಂಭೋಗಾದಚೇಷ್ಟೌ ಸುಮನೋಹರೌ ।
ಕ್ಷಣಂ ಸ ಚೇತಸೌ ತೌ ಚ ಕಥಯಂತೌ ರಸಾಶ್ರಯಾತ್ ॥೮೨॥

ಕಥಾಂ ಮನೋರಮಾಂ ದಿವ್ಯಾಂ ಹಸಂತೌ ಚ ಕ್ಷಣಂ ಪುನಃ ।
ಕ್ಷಣಂ ಚ ಕೇಳಿಸಂಯುಕ್ತೌ ರಸಭಾವಸಮನ್ವಿತೌ ॥೮೩॥

---

ಕ್ರೀಡಿಸಿದಳು. ಆ ದಂಪತಿಗಳು ಸುಖಸಾಗರದಲ್ಲಿ ಮುಳುಗಿದವರಾಗಿ ಮೈಯೆಲ್ಲವೂ ರೋಮಾಂಚವನ್ನು ಹೊಂದಿರಲು ಆ ನಿರ್ಜನವಾದ ಪ್ರದೇಶದಲ್ಲಿ ಸುಖಪರವಶರಾಗಿ ಮೂರ್ಛೆಯನ್ನು ಹೊಂದಿದರು. ॥೭೭-೭೮॥

ಆ ದಂಪತಿಗಳು ಪರಸ್ಪರ ಅಂಗಗಳನ್ನು ಕೂಡಿಸಿಕೊಂಡು ಸುರತದಿಂದ ತೃಪ್ತರಾಗಿ ಅರ್ಧನಾರೀಶ್ವರನಂತೆ ಅವರಿಬ್ಬರೂ ಒಂದೇ ಶರೀರವಾಗಿದ್ದರು. ತುಲಸಿಯು ತನ್ನ ಪ್ರಿಯನನ್ನು ತನ್ನ ಪ್ರಾಣಕ್ಕಿಂತಲೂ ಅತಿಶಯವಾಗಿ ಪ್ರೀತಿಸಿದಳು. ರಾಜನೂ ತುಲಸಿಯನ್ನು ತನ್ನ ಪ್ರಾಣಕ್ಕಿಂತಲೂ ಅತಿಶಯವಾಗಿ ಪ್ರೀತಿಸಿದನು. ॥೭೯-೮೦॥

ಅವರಿಬ್ಬರೂ ಸುಖಸಂಭೋಗದಿಂದ ಚಲಿಸದೆ ಸುಖವಾಗಿ ನಿದ್ರೆಮಾಡಿ ಏಕಕಾಲದಲ್ಲಿ ಎಚ್ಚರವನ್ನು ಹೊಂದಿ ಶೃಂಗಾರರಸದಿಂದ ಮನೋಹರವಾದ ಕಥೆಯನ್ನು ಹೇಳುತ್ತಾ ನಗುತ್ತಾ ಉತ್ತರಕ್ಷಣದಲ್ಲಿಯೇ ರಸಭಾವಗಳಿಂದ ಕೂಡಿದ ಕ್ರೀಡೆಯನ್ನು ಮಾಡಿದರು. ॥೮೧-೮೨-೮೩॥

**ಸುರತೇ ವಿರತಿರ್ನಾಸ್ತಿ ತೌ ತದ್ವಿಷಯಪಂಡಿತೌ ।**
**ಸತತಂ ಜಯಯುಕ್ತೌ ದ್ವೌ ಕ್ಷಣಂ ನೈವ ಪರಾಜಿತೌ ॥೮೪॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ ವಿಂಶೋಽಧ್ಯಾಯಃ**

---

ಸುರತದಲ್ಲಿ ಸಂಪೂರ್ಣ ತಿಳಿವಳಿಕೆಯುಳ್ಳ ಅವರ ಕ್ರೀಡೆಗೆ ಕೊನೆಯೇ ಇರಲಿಲ್ಲ. ಆ ಕ್ರೀಡೆಯಲ್ಲಿ ಇಬ್ಬರೂ ಜಯಶಾಲಿಗಳಾಗಿದ್ದರು. ಇಬ್ಬರಿಗೂ ಸೋಲಿಲ್ಲವೇ ಇಲ್ಲ. ||೮೪||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ಏಕವಿಂಶೋಽಧ್ಯಾಯಃ ||

### ಇಪ್ಪತ್ತೊಂದನೆಯ ಅಧ್ಯಾಯವು

|| ಶ್ರೀ ನಾರಾಯಣ ಉವಾಚ ||

**ಶ್ರೀಕೃಷ್ಣಂ ಮನಸಾ ಧ್ಯಾತ್ವಾ ರಕ್ಷಃ ಕೃಷ್ಣಪರಾಯಣಃ ।**
**ಬ್ರಾಹ್ಮೇ ಮುಹೂರ್ತೇ ಉತ್ಥಾಯ ಪುಷ್ಪತಲ್ಪಾನ್ಮನೋಹರಾತ್ ॥೧॥**

**ರಾತ್ರಿವಾಸಃ ಪರಿತ್ಯಜ್ಯ ಸ್ನಾತ್ವಾ ಮಂಗಲವಾರಿಣಾ ।**
**ಧೌತೇ ಚ ವಾಸಸೀ ಧೃತ್ವಾ ಕೃತ್ವಾ ತಿಲಕಮುಜ್ವಲಂ ॥೨॥**

**ಚಕಾರಾಹ್ನಿಕಮಾವಶ್ಯಮಭೀಷ್ಟದೇವವಂದನಂ ।**
**ದಧ್ಯಾಜ್ಯಮಧುಲಾಜಾಂಶ್ಚ ದದರ್ಶ ವಸ್ತು ಮಂಗಲಂ ॥೩॥**

**ರತ್ನಶ್ರೇಷ್ಠಂ ಮಣಿಶ್ರೇಷ್ಠಂ ವಸ್ತ್ರಶ್ರೇಷ್ಠಂ ಚ ಕಾಂಚನಂ ।**
**ಬ್ರಾಹ್ಮಣೇಭ್ಯೋ ದದೌ ಭಕ್ತ್ಯಾ ಯಥಾ ನಿತ್ಯಂ ಚ ನಾರದ ॥೪॥**

---

ನಾರಾಯಣನು ಹೇಳಿದನು—ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ಉಷಃಕಾಲದಲ್ಲಿ ಮನೋಹರವಾದ ಹೂವಿನ ಹಾಸಿಗೆಯಿಂದ ಎದ್ದು ರಾತ್ರಿ ಉಟ್ಟಿದ್ದ ಬಟ್ಟೆಯನ್ನು ಬಿಟ್ಟು ಮಂಗಲಕರವಾದ ನೀರಿನಲ್ಲಿ ಸ್ನಾನಮಾಡಿ ಒಗೆದ ಬಟ್ಟೆಗಳನ್ನುಟ್ಟು ಹಣೆಯಲ್ಲಿ ತಿಲಕವನ್ನಿಟ್ಟು ಸಂಧ್ಯಾವಂದನೆಯನ್ನು ಮಾಡಿ ಇಷ್ಟದೇವತೆಗೆ ನಮಸ್ಕರಿಸಿ ಮೊಸರು, ತುಪ್ಪ, ಜೇನು, ಅರಳು ಮುಂತಾದ ಮಂಗಲದ್ರವ್ಯಗಳನ್ನು ಆ ಶಂಖಚೂಡನು ನೋಡಿದನು. ||೧-೨-೩||

ನಾರದನೇ, ಪ್ರತಿದಿನವೂ ಮಾಡುವಂತೆ ಶ್ರೇಷ್ಠವಾದ ರತ್ನಗಳನ್ನೂ ಮಣಿಗಳನ್ನೂ ವಸ್ತ್ರಗಳನ್ನೂ ಚಿನ್ನವನ್ನೂ ಭಕ್ತಿಯಿಂದ ಬ್ರಾಹ್ಮಣರಿಗೆ ಅವನು ದಾನ ಮಾಡಿದನು. ||೪||

ಅಮೂಲ್ಯರತ್ನಂ ಯತ್ಕಿಂಚಿನ್ಮುಕ್ತಾಮಾಣಿಕ್ಯಹೀರಕಂ ।
ದದೌ ವಿಪ್ರಾಯ ಗುರವೇ ಯಾತ್ರಾ ಮಂಗಲಹೇತವೇ ॥೫॥

ಗಜರತ್ನಂ ಅಶ್ವರತ್ನಂ ಧನರತ್ನಂ ಮನೋಹರಂ ।
ದದೌ ಸರ್ವಂ ದರಿದ್ರಾಯ ವಿಪ್ರಾಯ ಮಂಗಲಾಯ ಚ ॥೬॥

ಭಾಂಡಾರಾಣಾಂ ಸಹಸ್ರಾಣಿ ನಗರಾಣಾಂ ದ್ವಿಲಕ್ಷಕಂ ।
ಗ್ರಾಮಾಣಾಂ ಶತಕೋಟಿಂ ಚ ಬ್ರಾಹ್ಮಣಾಯ ದದೌ ಮುದಾ ॥೭॥

ಪುತ್ರಂ ಕೃತ್ವಾ ತು ರಾಜೇಂದ್ರಂ ಸರ್ವೇಷು ದಾನವೇಷು ಚ ।
ಪುತ್ರೇ ಸಮರ್ಪ್ಯ ಭಾರ್ಯಾಂ ತಾಂ ರಾಜ್ಯಂ ಚ ಸರ್ವಸಂಪದಂ॥೮॥

ಪ್ರಜಾನುಚರ ಸಂಘಾಂ ಚ ಭಾಂಡಾರಂ ವಾಹನಾದಿಕಂ ।
ಸ್ವಯಂ ಸನ್ನಾಹಯುಕ್ತಶ್ಚ ಧನುಷ್ಪಾಣಿರ್ಬಭೂವ ಹ ॥೯॥

ಭೃತ್ಯದ್ವಾರಾ ಕ್ರಮೇಣೈವ ಚಕಾರ ಸೈನ್ಯಸಂಚಯಂ ।
ಅಶ್ವಾನಾಂ ಚ ತ್ರಿಲಕ್ಷೇಣ ಲಕ್ಷೇಣ ವರಹಸ್ತಿನಾಂ ॥೧೦॥

---

ಯುದ್ಧಪ್ರಯಾಣದ ಮಂಗಳಕ್ಕಾಗಿ ಗುರುವಿಗೆ ಬಹಳ ಬೆಲೆಯುಳ್ಳ ಮುತ್ತು ಮಾಣಿಕ್ಯ ಗೋಮೇಧಿಕ ಮೊದಲಾದುವುಗಳನ್ನು ಕೊಟ್ಟನು. ॥೫॥

ತನಗೆ ಮಂಗಳವಾಗುವುದಕ್ಕೋಸ್ಕರವಾಗಿ ದರಿದ್ರನಾದ ಬ್ರಾಹ್ಮಣನಿಗೆ ಶ್ರೇಷ್ಠವಾದ ಆನೆ ಕುದುರೆ ಧನ ಇವುಗಳನ್ನು ಕೊಟ್ಟನು. ॥೬॥

ಇದಲ್ಲದೆ ತನ್ನ ಮರಣವನ್ನು ನಿಶ್ಚಯಿಸಿ, ಸಂತೋಷದಿಂದ ಬ್ರಾಹ್ಮಣರಿಗೆ ಸಾವಿರ ಭಂಡಾರಗಳ ಹಣವನ್ನೂ ಎರಡು ಲಕ್ಷ ನಗರಗಳನ್ನೂ ನೂರುಕೋಟಿ ಗ್ರಾಮಗಳನ್ನೂ ದಾನವಾಗಿ ಕೊಟ್ಟನು. ॥೭॥

ಸಮಸ್ತ ದಾನವರಿಗೂ ತನ್ನ ಮಗನನ್ನು ರಾಜನನ್ನಾಗಿ ಮಾಡಿ ರಾಜ್ಯವನ್ನೂ ತನ್ನ ಹೆಂಡಿತಿಯನ್ನೂ ಸಮಸ್ತ ಸಂಪತ್ತನ್ನೂ ಪ್ರಜೆಗಳನ್ನೂ ಸೇವಕರನ್ನೂ ಭಂಡಾರವನ್ನೂ ಮಗನ ವಶಮಾಡಿ ತಾನು ಯುದ್ಧಕ್ಕೆ ಸಿದ್ಧನಾಗಿ ಕೈಯಲ್ಲಿ ಧನುಸ್ಸನ್ನು ಹಿಡಿದುಕೊಂಡನು. ॥೮-೯॥

ನಾರದನೇ, ಕೇಳು. ತನ್ನ ಸೇವಕರಿಂದ ಕ್ರಮವಾಗಿ ಸೈನ್ಯವನ್ನು ಕೂಡಿ ಸುತ್ತಾ ಮೂರು ಲಕ್ಷ ಕುದುರೆಗಳು ಒಂದು ಲಕ್ಷ ಆನೆಗಳು ಹತ್ತುಸಾವಿರ ರಥಗಳು

ರಥಾನಾಮಯುತೇನೈವ ಧಾನುಷ್ಕಾಣಾಂ ತ್ರಿಕೋಟಿಭಿಃ ।
ತ್ರಿಕೋಟಿಭಿರ್ವರ್ಮಿಣಾಂ ಚ ಶೂಲಿನಾಂ ಚ ತ್ರಿಕೋಟಿಭಿಃ ॥೧೧॥

ಕೃತಸೇನಾಪರಿಮಿತಾ ದಾನವೇಂದ್ರೇಣ ನಾರದ ।
ತಸ್ಯಾಂ ಸೇನಾಪತಿಶ್ಚೈವ ಯುದ್ಧಶಾಸ್ತ್ರವಿಶಾರದಃ ॥೧೨॥

ಮಹಾರಥಃ ಸ ವಿಜ್ಞೇಯೋ ರಥಿನಾಂ ಪ್ರವರೋ ರಣೇ ।
ತ್ರಿಲಕ್ಷಾಽಕ್ಷೌಹಿಣೀ ಸೇನಾಪತಿಂ ಕೃತ್ವಾ ನರಾಧಿಪಃ ॥೧೩॥

ತ್ರಿಂಶದಕ್ಷೌಹಿಣೀ ಬಾಧಂ ಭಾಂಡೌಘಂ ಚ ಚಕಾರ ಹ ।
ಬಹಿರ್ಬಭೂವ ಶಿಬಿರಾನ್ಮನಸಾ ಶ್ರೀಹರಿಂ ಸ್ಮರನ್ ॥೧೪॥

ರತ್ನೇಂದ್ರಸಾರನಿರ್ಮಾಣ ವಿಮಾನಮಾರುರೋಹ ಸಃ ।
ಗುರುವರ್ಗಾನ್ಪುರಸ್ಕೃತ್ಯ ಪ್ರಯಯೌ ಶಂಕರಾಂತಿಕಂ ॥೧೫॥

ಪುಣ್ಯಭದ್ರಾನದೀತೀರೇ ಯತ್ರಾಕ್ಷಯವಟಃ ಶುಭಃ ।
ಸಿದ್ಧಾಶ್ರಮಂ ಚ ಸಿದ್ಧಾನಾಂ ಸಿದ್ಧಿಕ್ಷೇತ್ರಂ ಚ ನಾರದ ॥೧೬॥

---

ಮೂರು ಕೋಟಿ ಬಿಲ್ಲಾಳುಗಳು ಮೂರು ಕೋಟಿ ಕವಚಧಾರಿಗಳು ಮೂರು ಕೋಟಿ ಶೂಲಧಾರಿಗಳು ಸಹಿತವಾಗಿ ಲೆಕ್ಕವಿಲ್ಲದಷ್ಟು ಸೇನೆಯನ್ನು ಶಂಖಚೂಡನು ಕೂಡಿಸಿದನು. ॥೧೦-೧೧॥

ಆ ಸೇನೆಯಲ್ಲಿ ಯುದ್ಧಶಾಸ್ತ್ರವನ್ನು ಚೆನ್ನಾಗಿ ತಿಳಿದ, ರಥಿಕರೊಡನೆ ಯುದ್ಧ ಮಾಡುವುದರಲ್ಲಿ ಶ್ರೇಷ್ಠನಾದ, ಮಹಾರಥನನ್ನು ಮೂರುಲಕ್ಷ ಅಕ್ಷೌಹಿಣೀ ಸೇನೆಗೆ ಅಧಿಪತಿಯನ್ನಾಗಿ ಮಾಡಿ ಮೂವತ್ತು ಅಕ್ಷೌಹಿಣೀ ಸೇನೆಗೆ ಬೇಕಾಗುವಷ್ಟು ದ್ರವ್ಯಸಮೂಹವನ್ನು ಶೇಖರಿಸಿ, ಮೂವತ್ತು ಅಕ್ಷೌಹಿಣೀ ಸೈನ್ಯವನ್ನು ಪಟ್ಟಣದ ಮತ್ತು ಬೆಂಗಾವಲಿನ ರಕ್ಷಣೆಗಾಗಿಟ್ಟು ಮನಸ್ಸಿನಲ್ಲಿ ಶ್ರೀಕೃಷ್ಣನನ್ನು ಸ್ಮರಿಸುತ್ತಾ ಶಂಖಚೂಡನು ಶಿಬಿರದಿಂದ ಹೊರಕ್ಕೆ ಬಂದನು. ॥೧೨-೧೩-೧೪॥

ಆ ಶಂಖಚೂಡನು ಶ್ರೇಷ್ಠವಾದ ರತ್ನಗಳಿಂದ ನಿರ್ಮಿಸಿದ ವಿಮಾನವನ್ನೇರಿ ತನ್ನ ಗುರುಗಳನ್ನು ಮುಂದಿಟ್ಟುಕೊಂಡು ಶಿವನ ಸಮಾಪಕ್ಕೆ ಹೋದನು. ॥೧೫॥

ನಾರದನೇ ಕೇಳು, ಪುಣ್ಯಭದ್ರಾನದಿಯ ತೀರದಲ್ಲಿ ಮಂಗಲಕರವಾದ ಅಕ್ಷಯ ವಟವೆಂಬ ಮರವಿರುವುದು. ಅದು ಸಿದ್ಧಾಶ್ರಮವು. ಯೋಗಿಗಳಿಗೆ ಸಮಸ್ತಸಿದ್ಧಿಗಳನ್ನೂ

ಕಪಿಲಸ್ಯ ತಪಃ ಸ್ಥಾನಂ ಪುಣ್ಯಕ್ಷೇತ್ರೇ ಚ ಭಾರತೇ ।
ಪಶ್ಚಿಮೋದಧಿಪೂರ್ವೇ ಚ ಮಲಯಸ್ಯ ಚ ಪಶ್ಚಿಮೇ ॥೧೭॥

ಶ್ರೀಶೈಲೋತ್ತರಭಾಗೇ ಚ ಗಂಧಮಾದನದಕ್ಷಿಣೇ ।
ಪಂಚಯೋಜನವಿಸ್ತೀರ್ಣಾ ದೈರ್ಘ್ಯೇ ಶತಗುಣಾ ತಥಾ ॥೧೮॥

ಶುದ್ಧಸ್ಫಟಿಕಸಂಕಾಶಾ ಭಾರತೇ ಚ ಸುಪುಣ್ಯದಾ ।
ಶಾಶ್ವತೀ ಜಲಪೂರ್ಣಾ ಚ ಪುಣ್ಯಭದ್ರಾನದೀ ಶುಭಾ ॥೧೯॥

ಲವಣಾಬ್ಧಿಪ್ರಿಯಾಭಾರ್ಯಾ ಶಶ್ವತ್ಸೌಭಾಗ್ಯಸಂಯುತಾ ।
ಶರಾವತೀ ಮಿಶ್ರಿತಾ ಚ ನಿರ್ಗತಾ ಸಾ ಹಿಮಾಲಯಾತ್ ॥೨೦॥

ಗೋಮತೀಂ ವಾಮತಃ ಕೃತ್ವಾ ಪ್ರವಿಷ್ಟಾ ಪಶ್ಚಿಮೋದಧೌ ।
ತತ್ರ ಗತ್ವಾ ಶಂಖಚೂಡೋ ದದರ್ಶ ಚಂದ್ರಶೇಖರಂ ॥೨೧॥

ವಟಮೂಲೇ ಸಮಾಸೀನಂ ಸೂರ್ಯಕೋಟಿಸಮಪ್ರಭಂ ।
ಕೃತ್ವಾ ಯೋಗಾಸನಂ ದೃಷ್ಟ್ವಾ ಮುದ್ರಾಯುಕ್ತಂ ಚ ಸಸ್ಮಿತಂ॥೨೨॥

---

ಕೊಡುವ ಕ್ಷೇತ್ರವು. ಭರತಖಂಡದಲ್ಲಿ ಕಪಿಲಋಷಿಯು ತಪಸ್ಸುಮಾಡಿದ ಸ್ಥಲವಾಗಿ ಪುಣ್ಯಕ್ಷೇತ್ರವಾಗಿರುವುದು. ಆ ಕ್ಷೇತ್ರವು ಪಶ್ಚಿಮಸಮುದ್ರಕ್ಕೆ ಪೂರ್ವದಿಕ್ಕಿನಲ್ಲಿಯೂ ಮಲಯ ಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲೂ ಶ್ರೀಶೈಲದ ಉತ್ತರಕ್ಕೂ ಗಂಧಮಾದನ ಪರ್ವತದ ದಕ್ಷಿಣಕ್ಕೂ ಇರುವುದು. ಅಲ್ಲಿ ಐದು ಯೋಜನ ಅಗಲವೂ ಇದರ ನೂರರಷ್ಟು ಉದ್ದವೂ ಶುದ್ಧವಾದ ಸ್ಫಟಿಕದಂತೆ ಬಿಳುಪಾದ ನೀರೂ ಉಳ್ಳ ಭರತಖಂಡದಲ್ಲಿ ಪುಣ್ಯವನ್ನು ಕೊಡತಕ್ಕ ನೀರಿನಿಂದ ತುಂಬಿದ ಮಂಗಳಕರವಾದ ಪುಣ್ಯಭದ್ರಾನದಿಯು ಇರುವುದು. ॥೧೬-೧೭-೧೮-೧೯॥

ಆ ಪುಣ್ಯಭದ್ರಾನದಿಯು ಶರಾವತೀ ನದಿಯೊಡನೆ ಸೇರಿ ಪಶ್ಚಿಮಸಮುದ್ರಕ್ಕೆ ಸೇರುವುದು. ಇದರ ಎಡಭಾಗದಲ್ಲಿ ಗೋಮತೀ ನದಿಯು ಪಶ್ಚಿಮಸಮುದ್ರಕ್ಕೆ ಸೇರುವುದು. ಆ ಕ್ಷೇತ್ರಕ್ಕೆ ಹೋಗಿ ಶಂಖಚೂಡನು ಚಂದ್ರಶೇಖರನಾದ ಶಿವನನ್ನು ನೋಡಿದನು. ॥೨೦-೨೧॥

ಶಿವನು ಆಲದಮರದ ಕೆಳಗೆ ಕುಳಿತುಕೊಂಡು ಕೋಟಿಸೂರ್ಯಸಮಾನ ಕಾಂತಿಯಿಂದ ಹೊಳೆಯುತ್ತಾ ಯೋಗಾಸನವನ್ನು ಹಾಕಿಕೊಂಡು ಜ್ಞಾನಮುದ್ರೆ

ಶುದ್ಧಸ್ಫಟಿಕಸಂಕಾಶಂ ಜ್ವಲಂತಂ ಬ್ರಹ್ಮತೇಜಸಾ ।
ತ್ರಿಶೂಲಪಟ್ಟಿಶಧರಂ ವ್ಯಾಘ್ರಚರ್ಮಾಂಬರಂ ವರಂ ॥೨೩॥

ಭಕ್ತಮೃತ್ಯುಹರಂ ಶಾಂತಂ ಗೌರೀಕಾಂತಂ ಮನೋಹರಂ ।
ತಪಸಾಂ ಫಲದಾತಾರಂ ದಾತಾರಂ ಸರ್ವಸಂಪದಾಂ ॥೨೪॥

ಆಶುತೋಷಂ ಪ್ರಸನ್ನಾಸ್ಯಂ ಭಕ್ತಾನುಗ್ರಹಕಾರಕಂ ।
ವಿಶ್ವನಾಥಂ ವಿಶ್ವಬೀಜಂ ವಿಶ್ವರೂಪಂ ಚ ವಿಶ್ವಜಂ ॥೨೫॥

ವಿಶ್ವಂಭರಂ ವಿಶ್ವವರಂ ವಿಶ್ವಸಂಹಾರಕಾರಕಂ ।
ಕಾರಣಂ ಕಾರಣಾನಾಂ ಚ ನರಕಾರ್ಣವತಾರಣಂ ॥೨೬॥

ಜ್ಞಾನಪ್ರದಂ ಜ್ಞಾನಬೀಜಂ ಜ್ಞಾನಾನಂದಂ ಸನಾತನಂ ।
ಅವರುಹ್ಯ ವಿಮಾನಾಚ್ಚ ತಂ ದೃಷ್ಟ್ವಾ ದಾನವೇಶ್ವರಃ ॥೨೭॥

ಸರ್ವೈಃ ಸಾರ್ಧಂ ಭಕ್ತಿಯುಕ್ತಃ ಶಿರಸಾ ಪ್ರಣನಾಮ ಸಃ ।
ವಾಮತೋ ಭದ್ರಕಾಲೀಂ ಚ ಸ್ಕಂದಂ ಚ ತತ್ಪುರಃ ಸ್ಥಿತಂ ॥೨೮॥

---

ಯನ್ನು ಧರಿಸಿ ನಗುತ್ತಾ ಸ್ಫಟಿಕಮಣಿಯ ವೈಬಣ್ಣವುಳ್ಳವನಾಗಿ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಾ ತ್ರಿಶೂಲ, ಪಟ್ಟಿಶ ಮುಂತಾದ ಆಯುಧಗಳನ್ನು ಧರಿಸಿ ಹುಲಿಯ ಚರ್ಮವನ್ನು ಹೊದೆದುಕೊಂಡು ಭಕ್ತರ ಮೃತ್ಯುವನ್ನು ನಿವಾರಣೆಮಾಡುವವನಾಗಿ ತಪಸ್ಸಿಗೆ ಫಲವನ್ನೂ ಕೊಡತಕ್ಕವನಾಗಿ ಶಾಂತನಾಗಿರುವ, ॥೨೨-೨೩-೨೪॥

ಬೇಗನೆ ಸಂತೋಷವನ್ನು ಹೊಂದುವವನಾದ ಪ್ರಸನ್ನವಾದ ಮುಖದಿಂದ ಭಕ್ತರಿಗೆ ಅನುಗ್ರಹವನ್ನುಂಟುಮಾಡುವ ಪ್ರಪಂಚಕ್ಕೆ ಒಡೆಯನೂ ಪ್ರಪಂಚಕ್ಕೆ ಕಾರಣನೂ ಪ್ರಪಂಚಸ್ವರೂಪನೂ ಆ ಪ್ರಪಂಚವನ್ನು ಹುಟ್ಟಿಸಿ ಕಾಪಾಡಿ ನಾಶ ಮಾಡತಕ್ಕವನೂ ಸಮಸ್ತ ಕಾರಣವಸ್ತುಗಳಿಗೂ ಕಾರಣನೂ ನರಕ ಸಮುದ್ರವನ್ನು ದಾಟಿಸುವವನೂ ಜ್ಞಾನಕ್ಕೆ ಕಾರಣನೂ ಜ್ಞಾನವನ್ನು ಕೊಡತಕ್ಕವನೂ ಜ್ಞಾನಾನಂದ ಸ್ವರೂಪನೂ ಅನಾದಿಯಾದವನೂ ಆದ ಆ ಶಿವನನ್ನು ನೋಡಿ ॥೨೫-೨೬॥

ಶಂಖಚೂಡನು ವಿಮಾನದಿಂದಿಳಿದು ಸಮಸ್ತರಿಂದಲೂ ಕೂಡಿ ಭಕ್ತಿಯಿಂದ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಶಿವನ ಎಡಗಡೆಯಲ್ಲಿ ಭದ್ರಕಾಲಿಯೂ ಮುಂಭಾಗದಲ್ಲಿ ಕುಮಾರಸ್ವಾಮಿಯೂ ಇದ್ದರು. ನಮಸ್ಕಾರಮಾಡಿದ ಶಂಖಚೂಡ

ಆಶಿಷಂ ಚ ದದೌ ತಸ್ಮೈ ಕಾಲೀ ಸ್ಕಂದಶ್ಚ ಶಂಕರಃ ।
ಉತ್ತಸ್ಥುರಾಗತಂ ದೃಷ್ಟ್ವಾ ಸರ್ವೇ ನಂದೀಶ್ವರಾದಯಃ ॥೨೯॥

ಪರಸ್ಪರಂ ಚ ಭಾಷಾಂತೇ ಚಕ್ರುಸ್ತತ್ರ ಚ ಸಾಂಪ್ರತಂ ।
ರಾಜಾ ಕೃತ್ವಾ ಚ ಸಂಭಾಷಾಮುವಾಸ ಶಿವಸನ್ನಿಧೌ ॥೩೦॥

ಪ್ರಸನ್ನಾತ್ಮಾ ಮಹಾದೇವೋ ಭಗವಾಂಸ್ತಮುವಾಚ ಹ ।
॥ ಮಹಾದೇವ ಉವಾಚ ॥
ವಿಧಾತಾ ಜಗತಾಂ ಬ್ರಹ್ಮಾ ಪಿತಾ ಧರ್ಮಸ್ಯ ಧರ್ಮವಿತ್ ॥೩೧॥

ಮರೀಚಿಸ್ತಸ್ಯ ಪುತ್ರಶ್ಚ ವೈಷ್ಣವಶ್ಚಾಪಿ ಧಾರ್ಮಿಕಃ ।
ಕಶ್ಯಪಶ್ಚಾಪಿ ತತ್ಪುತ್ರೋ ಧರ್ಮಿಷ್ಠಶ್ಚ ಪ್ರಜಾಪತಿಃ ॥೩೨॥

ದಕ್ಷಃ ಪ್ರೀತ್ಯಾ ದದೌ ತಸ್ಮೈ ಭಕ್ತ್ಯಾ ಕನ್ಯಾಸ್ತ್ರಯೋದಶ
ತಾಸ್ವೇಕಾ ಚ ದನುಃ ಸಾಧ್ವೀ ತತ್ಸೌಭಾಗ್ಯವಿವರ್ಧಿತಾ ॥೩೩॥

---

ನಿಗೆ ಭದ್ರಕಾಲಿಯೂ ಕುಮಾರಸ್ವಾಮಿಯೂ ಶಿವನೂ ಆಶೀರ್ವಾದವನ್ನು ಮಾಡಿದರು. ಶಂಖಚೂಡನು ಬಂದುದನ್ನು ನೋಡಿ ನಂದೀಶ್ವರನೇ ಮೊದಲಾದ ಶಿವನ ಸೇವಕರು ಎದ್ದುನಿಂತು ಮರ್ಯಾದೆಯನ್ನು ಮಾಡಿದರು. ॥೨೭-೨೮-೨೯॥

ಶಿವನೂ ಶಂಖಚೂಡನೂ ಪರಸ್ಪರ ಮಾತನಾಡಿದ ಮೇಲೆ ತನ್ನ ಸಮೀಪದಲ್ಲಿರುವ ಶಂಖಚೂಡನನ್ನು ಕುರಿತು ಶಿವನು ಪ್ರಸನ್ನನಾಗಿ ಮಾತನಾಡಿದನು. ॥೩೦॥

ಮಹಾದೇವನು ಹೇಳಿದನು---ಜಗತ್ತನ್ನು ಸೃಷ್ಟಿಮಾಡಿದ ಧರ್ಮಜ್ಞನಾದ ಬ್ರಹ್ಮನು ಲೋಕಕ್ಕೆ ತಂದೆಯು. ಅವನಿಗೆ ವಿಷ್ಣುಭಕ್ತನಾದ ಧರ್ಮವನ್ನಾಚರಿಸುವ ಮರೀಚಿಯು ಮಗನು. ಅವನಿಗೆ ಧರ್ಮಾಸಕ್ತನಾದ ಕಶ್ಯಪನು ಮಗನು. ದಕ್ಷನು ಪ್ರೀತಿಯಿಂದ ತನ್ನ ಹದಿಮೂರು ಜನ ಕನ್ಯೆಯರನ್ನು ಆ ಕಶ್ಯಪನಿಗೆ ಕೊಟ್ಟನು. ಆ ಕನ್ಯೆಯರಲ್ಲಿ ಪತಿವ್ರತೆಯಾದ ದನು ಎಂಬುವಳು ಸೌಭಾಗ್ಯವತಿಯಾಗಿದ್ದಳು. ॥೩೧-೩೨-೩೩॥

ಚತ್ವಾರಿಂಶದ್ದನೋಃ ಪುತ್ರಾಃ ದಾನವಾಸ್ತೇಜಸೋಲ್ಬಣಾಃ ।
ತೇಷ್ವೇಕೋ ವಿಪ್ರಚಿತ್ತಿಶ್ಚ ಮಹಾಬಲಪರಾಕ್ರಮಃ ॥೩೪॥

ತತ್ಪುತ್ರೋ ಧಾರ್ಮಿಕೋ ದಂಭೋ ವಿಷ್ಣುಭಕ್ತೋ ಜಿತೇಂದ್ರಿಯಃ ।
ಜಜಾಪ ಪರಮಂ ಮಂತ್ರಂ ಪುಷ್ಕರೇ ಲಕ್ಷವತ್ಸರಂ ॥೩೫॥

ಶುಕ್ರಾಚಾರ್ಯಂ ಗುರುಂ ಕೃತ್ವಾ ಕೃಷ್ಣಸ್ಯ ಪರಮಾತ್ಮನಃ ।
ತದಾ ತ್ವಾಂ ತನಯಂ ಪ್ರಾಪ ಪರಂ ಕೃಷ್ಣಪರಾಯಣಂ ॥೩೬॥

ಪುರಾ ತ್ವಂ ಪಾರ್ಷದೋ ಗೋಪೋ ಗೋಪೇಷ್ವಪಿ ಸುಧಾರ್ಮಿಕಃ ।
ಅಧುನಾ ರಾಧಿಕಾಶಾಪಾದ್ಭಾರತೇ ದಾನವೇಶ್ವರಃ ॥೩೭॥

ಆಬ್ರಹ್ಮಸ್ತಂಭಪರ್ಯಂತಂ ತುಚ್ಛಂ ಮೇನೇ ಚ ವೈಷ್ಣವಃ ।
ಸಾಲೋಕ್ಯಸಾಯುಜ್ಯ ಸಾಮೀಪ್ಯಂ ಚ ಹರೇರಪಿ ॥೩೮॥

---

ದನುದೇವಿಗೆ ಇಪ್ಪತ್ತುನಾಲ್ಕು ಜನ ಮಕ್ಕಳು. ಮಹಾತೇಜಸ್ವಿಗಳಾಗಿದ್ದರು. ಅವರಲ್ಲಿ ವಿಪ್ರಚಿತ್ತ ಎಂಬುವನು ಮಹಾಬಲಪರಾಕ್ರಮಿಯಾಗಿದ್ದನು. ಅವನ ಮಗನು ದಂಭನೆಂಬುವನು, ಧರ್ಮಿಷ್ಠನಾಗಿಯೂ ಜಿತೇಂದ್ರಿಯನಾಗಿಯೂ, ವಿಷ್ಣು ಭಕ್ತನಾಗಿಯೂ ಇದ್ದನು. ಅವನು ಶುಕ್ರಾಚಾರ್ಯರನ್ನು ಗುರುವಾಗಿ ಮಾಡಿಕೊಂಡು ಪರಮಾತ್ಮನಾದ ಶ್ರೀ ಕೃಷ್ಣನ ಮಂತ್ರವನ್ನು ಉಪದೇಶಮಾಡಿಸಿಕೊಂಡು ಪುಷ್ಕರ ಕ್ಷೇತ್ರದಲ್ಲಿ ಒಂದು ಲಕ್ಷವರ್ಷ ಶ್ರೇಷ್ಠವಾದ ಆ ಮಂತ್ರಜಪವನ್ನು ಮಾಡಿ ಕೃಷ್ಣ ಭಕ್ತನಾದ ನಿನ್ನನ್ನು ಮಗನನ್ನಾಗಿ ಪಡೆದನು. ॥೩೪-೩೫-೩೬॥

ನೀನು ಪೂರ್ವದಲ್ಲಿ ಗೋಪರಲ್ಲಿ ಮುಖ್ಯನಾಗಿ ಧರ್ಮಮಾರ್ಗದಲ್ಲಿ ನಡೆ ಯುತ್ತಾ ಗೋಲೋಕದಲ್ಲಿ ಕೃಷ್ಣನ ಸೇವಕನಾಗಿದ್ದೆ. ರಾಧೆಯ ಶಾಪದಿಂದ ಈಗ ಭರತಖಂಡದಲ್ಲಿ ದಾನವರ ಒಡೆಯನಾಗಿರುವೆ. ಬ್ರಹ್ಮನು ಮೊದಲುಗೊಂಡು ಸ್ತಂಬ ವೆಂಬ ಕ್ರಿಮಿಯ ಪರ್ಯಂತರವಾಗಿರುವ ಸಮಸ್ತ ಪ್ರಪಂಚವೂ ಶಾಶ್ವತವಲ್ಲವೆಂದು ತಿಳಿದಿರುವ ವಿಷ್ಣುಭಕ್ತನಾಗಿರುವೆ. ವಿಷ್ಣುಭಕ್ತರು ಹರಿಯ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯ ಎಂಬ ನಾಲ್ಕು ಬಗೆಯ ಮೋಕ್ಷವನ್ನು ಕೊಟ್ಟರೂ ಒಲ್ಲದೆ ಹರಿಯ ಸೇವಕ (ಭಕ್ತ) ನಾಗಿರುವುದನ್ನೇ ಅಪೇಕ್ಷಿಸುವರು. ॥೩೭-೩೮॥

ದೀಯಮಾನಂ ನ ಗೃಹ್ಣಂತಿ ವೈಷ್ಣವಾಃ ಸೇವನಂ ವಿನಾ ।
ಬ್ರಹ್ಮತ್ವಮಮರತ್ವಂ ವಾ ತುಚ್ಛಂ ಮೇನೇ ಚ ವೈಷ್ಣವಃ ॥೩೯॥

ಇಂದ್ರತ್ವಂ ವಾ ಮನುತ್ವಂ ವಾ ನ ಮೇನೇ ಗಣನಾಸು ಚ ।
ಕೃಷ್ಣಭಕ್ತಸ್ಯ ತೇ ಕಿಂ ವಾ ದೇವಾನಾಂ ವಿಷಯೇ ಭ್ರಮೇ ॥೪೦॥

ದೇಹಿ ರಾಜ್ಯಂ ಚ ದೇವಾನಾಂ ಮತ್ಪ್ರೀತಿಂ ರಕ್ಷ ಭೂಮಿಪ ।
ಸುಖಂ ಸ್ವರಾಜ್ಯೇ ತ್ವಂ ತಿಷ್ಠ ದೇವಾಸ್ತಿಷ್ಠಂತು ವೈ ಪದೇ ॥೪೧॥

ಅಲಂ ಭೂತವಿರೋಧೇನ ಸರ್ವೇ ಕಶ್ಯಪವಂಶಜಾಃ ।
ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ॥೪೨॥

ಜ್ಞಾತಿದ್ರೋಹಸ್ಯ ಪಾಪಾನಿ ಕಲಾಂ ನಾರ್ಹಂತಿ ಷೋಡಶೀಂ ।
ಸ್ವಸಂಪದಾಂ ಚ ಹಾನಿಂ ಚ ಯದಿ ರಾಜೇಂದ್ರ ಮನ್ಯಸೇ ॥೪೩॥

ಸರ್ವಾವಸ್ಥಾಂ ಚ ಸಮತಾಂ ಕೇಷಾಂ ಯಾತಿ ಚ ಸರ್ವದಾ ।
ಬ್ರಹ್ಮಣಶ್ಚ ತಿರೋಭಾವೇ ಲಯೇ ಪ್ರಾಕೃತಿಕೇ ಸದಾ ॥೪೪॥

---

ವಿಷ್ಣುಭಕ್ತನು ಬ್ರಹ್ಮತ್ವವನ್ನೂ ದೇವತ್ವವನ್ನೂ ಅಶಾಶ್ವತವೆಂದು ತಿಳಿಯುವನು. ಇಂದ್ರತ್ವವನ್ನೂ, ಮನುತ್ವವನ್ನೂ ಲೆಕ್ಕಿಸುವುದಿಲ್ಲ. ಹೀಗಿರುವಲ್ಲಿ ಕೃಷ್ಣನ ಭಕ್ತನಾದ ನಿನಗೆ ದೇವತೆಗಳ ರಾಜ್ಯರೂಪವಾದ ಅಲ್ಪ ವಿಷಯದಲ್ಲಿ ಭ್ರಾಂತಿಯು ಬರುವುದೇ ? ॥೩೯-೪೦॥

ಎಲೈ ರಾಜನೇ, ದೇವತೆಗಳಿಗೆ ಅವರ ರಾಜ್ಯವನ್ನು ಕೊಟ್ಟುಬಿಡು. ನಿನ್ನ ರಾಜ್ಯದಲ್ಲಿ ನೀನು ಸುಖವಾಗಿರು. ದೇವತೆಗಳು ಅವರವರ ಅಧಿಕಾರದಲ್ಲಿ ಅವರವರು ಇರಲಿ. ಪ್ರೀತಿಯಿಂದ ಹೇಳುವ ಮಾತನ್ನು ನಡೆಸು. ಸಮಸ್ತ ಪ್ರಾಣಿಗಳಲ್ಲಿಯೂ ದ್ವೇಷವನ್ನು ಮಾಡಬಾರದು. ದೇವತೆಗಳೂ ಅಸುರರೂ ಎಲ್ಲರೂ ಕಶ್ಯಪವಂಶದಲ್ಲಿಯೇ ಹುಟ್ಟಿದವರು. ಬ್ರಹ್ಮಹತ್ಯಾದಿ ಮಹಾಪಾಪಗಳೂ ಕೂಡ ಜ್ಞಾತಿದ್ರೋಹ ಪಾಪದ ಹದಿನಾರನೆಯ ಒಂದಂಶವೂ ಆಗಲಾರದು. ॥೪೧-೪೨॥

ಎಲೈ ರಾಜನೇ, ದೇವತೆಗಳಿಗೆ ರಾಜ್ಯವನ್ನು ಕೊಟ್ಟರೆ ನನ್ನ ಸಂಪತ್ತು ನಾಶವಾಗುವುದು, ಎಂದು ನೀನು ತಿಳಿದರೆ ಪ್ರಾಕೃತಿಕ ಪ್ರಳಯದಲ್ಲಿ ಸೃಷ್ಟಿಕರ್ತನಾದ ಬ್ರಹ್ಮನೇ ಇರುವುದಿಲ್ಲ. ಹೀಗಿರುವಲ್ಲಿ ಯಾವಾಗಲೂ ಯಾರು ತಾನೇ ಎಲ್ಲಾ ಅವಸ್ಥೆಗಳಲ್ಲಿಯೂ ಸಮವಾಗಿ ಬಾಳುವರು ? ॥೪೩-೪೪॥

ಆವಿರ್ಭಾವಃ ಪುನಸ್ತಸ್ಯ ಪ್ರಭಾವಾದೀಶ್ವರೇಚ್ಛಯಾ ।
ಜ್ಞಾನವೃದ್ಧಿಶ್ಚ ತಪಸಾ ಸ್ಮೃತಿಲೋಪಶ್ಚ ನಿಶ್ಚಿತಂ ॥೪೫॥

ಕರೋತಿ ಸೃಷ್ಟಿಂ ಜ್ಞಾನೇನ ಸ್ರಷ್ಟಾ ಸೋಽಪಿ ಕ್ರಮೇಣ ಚ ।
ಪರಿಪೂರ್ಣತಮೋ ಧರ್ಮಃ ಸತ್ಯೇ ಸತ್ಯಾಶ್ರಯೋ ಸದಾ ॥೪೬॥

ತ್ರಿಭಾಗಃ ಸೋಽಪಿ ತ್ರೇತಾಯಾ ದ್ವಿಭಾಗೋ ದ್ವಾಪರೇ ಸ್ಮೃತಃ ।
ಏಕಭಾಗಃ ಕಲೌ ಪೂರ್ವಂ ತದಂಶಶ್ಚ ಕ್ರಮೇಣ ಚ ॥೪೭॥

ಕಲಾಮಾತ್ರಂ ಕಲೇಃ ಶೇಷೇ ಕುಹ್ವಾಂ ಚಂದ್ರಕಲಾಯಥಾ ।
ಯಾದೃಕ್ತೇಜೋ ರವೇಃ ಗ್ರೀಷ್ಮೇ ನ ತಾದೃಕ್ ಶಿಶಿರೇ ಪುನಃ ॥೪೮॥

ದಿನೇಷು ಯಾದೃಙ್ಮಧ್ಯಾಹ್ನೇ ಸಾಯಂ ಪ್ರಾತರ್ನ ತತ್ಸಮಂ ।
ಉದಯಂ ಯಾತಿ ಕಾಲೇನ ಬಾಲತಾಂ ಚ ಕ್ರಮೇಣ ಚ ॥೪೯॥

ಪ್ರಕಾಂಡತಾಂ ಚ ತತ್ಪಶ್ಚಾತ್ಕಾಲೇಽಸ್ತಂ ಪುನರೇತಿ ಸಃ ।
ದಿನೇ ಪ್ರಚ್ಛನ್ನತಾಂ ಯಾತಿ ಕಾಲೇನ ದುರ್ದಿನೇ ಘನೇ ॥೫೦॥

---

ಈಶ್ವರೇಚ್ಛೆಯ ಮಹಿಮೆಯಿಂದ ಬ್ರಹ್ಮನು ಪುನಃ ಹುಟ್ಟುವನು. ಅವನಿಗೆ ಒಂದು ಕಾಲದಲ್ಲಿ ಸ್ಮೃತಿಲೋಪವೂ ಆಗುವುದು, ತಪಸ್ಸಿನಿಂದ ಜ್ಞಾನವನ್ನು ಹೆಚ್ಚಿಸಿಕೊಂಡು ಆ ಜ್ಞಾನದಿಂದ ಕ್ರಮವಾಗಿ ಮತ್ತೆ ಸೃಷ್ಟಿಯನ್ನು ಮಾಡುವನು. ॥೪೫॥

ಸತ್ಯವೇ ವಿಶೇಷವಾಗಿ ಪ್ರಚಾರದಲ್ಲಿರುವ ಕೃತಯುಗದಲ್ಲಿ ಧರ್ಮವು ಪೂರ್ಣವಾಗಿರುವುದು. ತ್ರೇತಾಯುಗದಲ್ಲಿ ಮೂರು ಭಾಗವಿರುವುದು. ದ್ವಾಪರದಲ್ಲಿ ಎರಡು ಭಾಗವಿರುವುದು. ಕಲಿಯುಗದಲ್ಲಿ ಒಂದು ಭಾಗವಿದ್ದು ಕ್ರಮೇಣ ಕಡಿಮೆಯಾಗುತ್ತಾ ಬಂದು ಅಮಾವಾಸ್ಯೆಯ ದಿನ ಚಂದ್ರನ ಕಲೆಯಂತೆ ಕಲಿಯುಗದ ಕೊನೆಯಲ್ಲಿ ಕಲಾಮಾತ್ರವಾಗಿ ಧರ್ಮವು ಇರುವುದು. ॥೪೬-೪೭॥

ಸೂರ್ಯನಿಗೆ ಗ್ರೀಷ್ಮಋತುವಿನಲ್ಲಿ ಎಷ್ಟು ತೇಜಸ್ಸಿರುವುದೋ ಶಿಶಿರಋತುವಿನಲ್ಲಿ ಅಷ್ಟು ತೇಜಸ್ಸಿರುವುದಿಲ್ಲ. ಮಧ್ಯಾಹ್ನದಲ್ಲಿ ಎಷ್ಟು ತೇಜಸ್ಸಿರುವುದೋ ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಅಷ್ಟು ಪ್ರಕಾಶವಿರುವುದಿಲ್ಲ. ಅವನು ಪ್ರಾತಃಕಾಲದಲ್ಲಿ ಹುಟ್ಟುತ್ತಾನೆ. ಕ್ರಮೇಣ ಬಾಲಸೂರ್ಯನಾಗುತ್ತಾನೆ. ಆಮೇಲೆ ಪ್ರಚಂಡ

ರಾಹುಗ್ರಸ್ತೇ ಕಂಪಿತಶ್ಚ ಪುನರೇವ ಪ್ರಸನ್ನತಾಂ ।
ಪರಿಪೂರ್ಣತಮುಶ್ಚಂದ್ರಃ ಪೂರ್ಣಿಮಾಯಾಂ ಚ ಜಾಯತೇ ॥೫೦॥

ತಾದೃಶೋ ನ ಭವೇನ್ನಿತ್ಯಂ ಕ್ಷಯಂ ಯಾತಿ ದಿನೇ ದಿನೇ ।
ಪುನಶ್ಚ ಪುಷ್ಟಿಮಾಯಾತಿ ಪರಂ ಕುಹ್ವಾ ದಿನೇ ದಿನೇ ॥೫೨॥

ಸಂಪದ್ಯುಕ್ತಃ ಶುಕ್ಲಪಕ್ಷೇ ಕೃಷ್ಣೇ ಮ್ಲಾನಶ್ಚ ಯಕ್ಷ್ಮಣಾ ।
ರಾಹುಗ್ರಸ್ತೇ ದಿನೇ ಮ್ಲಾನೋ ದುರ್ದಿನೇ ಚ ವಿರೋಚತೇ ॥೫೩॥

ಕಾಲೇ ಚಂದ್ರೋ ಭವೇಚ್ಛುಕ್ಲೋ ಭ್ರಷ್ಟಶ್ರೀಃ ಕಾಲಭೇದತಃ ।
ಭವಿಷ್ಯತಿ ಬಲಿಶ್ಚೇಂದ್ರೋ ಭ್ರಷ್ಟಶ್ರೀಃ ಸುತಲೇಽಧುನಾ ॥೫೪॥

ಕಾಲೇನ ಪೃಥ್ವೀ ಸಸ್ಯಾಢ್ಯಾ ಸರ್ವಾಧಾರಾ ವಸುಂಧರಾ ।
ಕಾಲೇ ಜಲೇ ನಿಮಗ್ನಾ ಸಾ ತಿರೋಭೂತಾಂಬುವಿಪ್ಲುತಾ ॥೫೫॥

---

ಸೂರ್ಯನಾಗುತ್ತಾನೆ. ಕೊನೆಗೆ ಅಸ್ತನಾಗುತ್ತಾನೆ. ಮೇಘದಿಂದ ತುಂಬಿದ ದಿನದಲ್ಲಿ ಮರೆಯಾಗುತ್ತಾನೆ. ॥೪೮-೪೯-೫೦॥

ಗ್ರಹಣಕಾಲದಲ್ಲಿ ನಡುಗುತ್ತಿರುವಂತೆ ಕಾಣುತ್ತಾನೆ. ಮತ್ತೆ ಪ್ರಕಾಶವಾಗಿ ಕಾಣುತ್ತಾನೆ. ಚಂದ್ರನು ಪೂರ್ಣಿಮಾದಿನ ಪೂರ್ಣಮಂಡಲನಾಗಿರುತ್ತಾನೆ. ಪ್ರತಿ ದಿನವೂ ಹಾಗೆಯೇ ಇರುವುದಿಲ್ಲ. ದಿನದಿನಕ್ಕೂ ಕಾಂತಿಹೀನನಾಗುತ್ತಾನೆ. ಅಮಾವಾಸ್ಯೆಯಿಂದ ಮುಂದೆ ದಿನದಿನಕ್ಕೂ ವೃದ್ಧಿಯಾಗುತ್ತಾನೆ. ಶುಕ್ಲಪಕ್ಷದಲ್ಲಿ ಪ್ರಕಾಶನಾಗಿಯೂ, ಕೃಷ್ಣಪಕ್ಷದಲ್ಲಿ ಕ್ಷಯರೋಗದಿಂದ ಮಲಿನವಾಗಿಯೂ ಗ್ರಹಣದಿನದಲ್ಲಿ ಮಾಸಲಾಗಿಯೂ, ಮೇಘತುಂಬಿದ ದಿನದಲ್ಲಿ ಪ್ರಕಾಶವೇ ಇಲ್ಲದವನಾಗಿಯೂ ಇರುತ್ತಾನೆ. ॥೫೧-೫೨-೫೩॥

ಒಂದು ಕಾಲದಲ್ಲಿ ಚಂದ್ರನು ಬೆಳ್ಳಗೆ ಪ್ರಕಾಶಿಸುತ್ತಾನೆ. ಮತ್ತೊಂದು ಕಾಲದಲ್ಲಿ ಕಾಂತಿಹೀನನಾಗುತ್ತಾನೆ. ಬಲಿಯು ದೇವೇಂದ್ರನಾಗುತ್ತಾನೆ. ಈಗ ಆ ಸಂಪತ್ತನ್ನು ಕಳೆದುಕೊಂಡು ಸುತಲಲೋಕದಲ್ಲಿರುತ್ತಾನೆ. ಒಂದು ಕಾಲದಲ್ಲಿ ಭೂಮಿಯು ಸಸ್ಯಗಳಿಂದ ತುಂಬಿ ಸಮಸ್ತ ಪ್ರಾಣಿಗಳಿಗೂ ಆಶ್ರಯವಾಗಿರುತ್ತದೆ. ಮತ್ತೊಂದು ಕಾಲದಲ್ಲಿ ನೀರಿನಲ್ಲಿ ಮುಳುಗಿ ಕಾಣದೆ ಹೋಗುತ್ತದೆ. ಪ್ರಪಂಚವೂ ಒಂದು ಕಾಲದಲ್ಲಿ ನಾಶವಾಗುತ್ತದೆ. ಮತ್ತೊಂದು ಕಾಲದಲ್ಲಿ ಹುಟ್ಟುತ್ತದೆ. ಚರಾಚರಪ್ರಾಣಿಗಳೂ

ಕಾಲೇ ನಶ್ಯಂತಿ ವಿಶ್ವಾನಿ ಪ್ರಭವಂತ್ಯೇವ ಕಾಲತಃ ।
ಚರಾಚರಾಶ್ಚ ಕಾಲೇನ ನಶ್ಯಂತಿ ಪ್ರಭವಂತಿ ಚ ॥೫೬॥

ಈಶ್ವರಸ್ಯೈವ ಸಮತಾ ಬ್ರಹ್ಮಣಃ ಪರಮಾತ್ಮನಃ ।
ಅಹಂ ಮೃತ್ಯುಂಜಯೋ ಯಸ್ಮಾದಸಂಖ್ಯಂ ಪ್ರಾಕೃತಂ ಲಯಂ॥೫೭॥

ಅದರ್ಶಂ ಚಾಪಿ ದ್ರಕ್ಷ್ಯಾಮಿ ವಾರಂ ವಾರಂ ಪುನಃ ಪುನಃ ।
ಸ ಚ ಪ್ರಕೃತಿರೂಪಂ ಚ ಸ ಏವ ಪುರುಷಃ ಸ್ಮೃತಃ ॥೫೮॥

ಸ ಚಾತ್ಮಾ ಸ ಚ ಜೀವಶ್ಚ ನಾನಾರೂಪಧರಃ ಪರಃ ।
ಕರೋತಿ ಸತತಂ ಯೋ ಹಿ ತನ್ನಾಮಗುಣಕೀರ್ತನಂ ॥೫೯॥

ಕಾಲೇ ಮೃತ್ಯುಂ ಸ ಜಯತಿ ಜನ್ಮರೋಗಂ ಭಯಂ ಜರಾಂ ।
ಸ್ರಷ್ಟಾ ಕೃತೋ ವಿಧಿಸ್ತೇನ ಪಾತಾ ವಿಷ್ಣುಃ ಕೃತೋ ಭವೇತ್ ॥೬೦॥

ಅಹಂ ಕೃತಶ್ಚ ಸಂಹರ್ತಾ ವಯಂ ವಿಷಯಿಣಃ ಕೃತಾಃ ।
ಕಾಲಾಗ್ನಿರುದ್ರಂ ಸಂಹಾರೇ ನಿಯೋಜ್ಯ ವಿಷಯೇ ನೃಪ ॥೬೧॥

---

ಕೂಡ ಒಂದು ಕಾಲದಲ್ಲಿ ನಾಶವನ್ನು ಹೊಂದಿ ಮತ್ತೊಂದು ಕಾಲದಲ್ಲಿ ಹುಟ್ಟುತ್ತವೆ. ||೫೪-೫೫-೫೬||

ಪರಮಾತ್ಮನಾದ ಪರಬ್ರಹ್ಮನೇ ಈಶ್ವರನು. ಅವನಿಗೆ ಉತ್ಪತ್ತಿ ನಾಶಗಳಿಲ್ಲ. ಯಾವಾಗಲೂ ಒಂದೇ ಸಮನಾಗಿರುವನು. ಅವನೇ ಪ್ರಕೃತಿರೂಪವಾಗಿಯೂ ಪುರುಷ ರೂಪನಾಗಿಯೂ ಇರುವನು. ಅವನ ಅನುಗ್ರಹದಿಂದಲೇ ನಾನು ಮೃತ್ಯುವನ್ನು ಜಯಿಸಿದುದರಿಂದ ಮೃತ್ಯುಂಜಯನೆಂಬ ಹೆಸರನ್ನು ಹೊಂದಿ ಲೆಕ್ಕವಿಲ್ಲದಷ್ಟು ಪ್ರಾಕೃತ ಪ್ರಳಯಗಳನ್ನು ನೋಡಿರುವೆನು. ಮತ್ತೆ ಮತ್ತೆ ನೋಡುವೆನು. ||೫೭-೫೮||

ನಾನಾರೂಪಧರನಾದ ಆ ಪರಮಾತ್ಮನೇ ಜೀವರೂಪನಾಗಿರುವನು. ಯಾವನು ಆ ಮೂಲಪ್ರಕೃತಿಯ ರೂಪನಾದ ಪರಮಾತ್ಮನ ನಾಮ ಗುಣಕೀರ್ತನ ವನ್ನು ಯಾವಾಗಲೂ ಮಾಡುತ್ತಿರುವನೋ ಅವನು ಮೃತ್ಯುವನ್ನೂ ರೋಗವನ್ನೂ ಜನ್ಮವನ್ನೂ ಭಯವನ್ನೂ ಮುಪ್ಪನ್ನೂ ಜಯಿಸುವನು. ||೫೯||

ಆ ಮೂಲಪ್ರಕೃತಿಯುಕ್ತನಾದ ಪರಬ್ರಹ್ಮನು ಬ್ರಹ್ಮನಿಗೆ ಸೃಷ್ಟಿಮಾಡುವ ಅಧಿಕಾರವನ್ನೂ ವಿಷ್ಣುವಿಗೆ ಪಾಲನ ಮಾಡುವ ಅಧಿಕಾರವನ್ನೂ ನನಗೆ ಸಂಹಾರ ಮಾಡುವ ಅಧಿಕಾರವನ್ನೂ ಕೊಟ್ಟಿರುವನು. ||೬೦||

ಅಹಂ ಕರೋಮಿ ಸತತಂ ತನ್ನಾಮಗುಣಕೀರ್ತನಂ ।
ತೇನ ಮೃತ್ಯುಂಜಯೋಽಹಂ ಚ ಜ್ಞಾನೇನಾನೇನ ನಿರ್ಭಯಃ ॥೬೨॥

ಮೃತ್ಯುರ್ಮೃತ್ಯುಭಯಾದ್ಯಾತಿ ವೈನತೇಯಾದಿವೋರಗಾಃ ।
ಇತ್ಯುಕ್ತ್ವಾ ಸ ಚ ಸರ್ವೇಶಃ ಸರ್ವಭಾವನತತ್ಪರಃ ॥೬೩॥

ವಿರರಾಮ ಚ ಶಂಭುಶ್ಚ ಸಭಾಮಧ್ಯೇ ಚ ನಾರದ ।
ಉವಾಚ ಮಧುರಂ ದೇವಂ ಪರಂ ವಿನಯಪೂರ್ವಕಂ ॥೬೪॥

ರಾಜಾ ತದ್ವಚನಂ ಶ್ರುತ್ವಾ ಪ್ರಶಶಂಸ ಪುನಃ ಪುನಃ ।

॥ ಶಂಖಚೂಡ ಉವಾಚ ॥

ತ್ವಯಾ ಯತ್ಕಥಿತಂ ದೇವ ನಾನ್ಯಥಾ ವಚನಂ ಸ್ಮೃತಂ ॥೬೫॥

ತಥಾಪಿ ಕಿಂಚಿದ್ಯಾಥಾರ್ಥ್ಯಂ ಶ್ರೂಯತಾಂ ಮನ್ನಿವೇದನಂ ।
ಜ್ಞಾತಿದ್ರೋಹೇ ಮಹತ್ಪಾಪಂ ತ್ವಯೋಕ್ತಮಧುನಾ ಚ ಯತ್ ॥೬೬॥

---

ಎಲೈ ರಾಜನೇ, ನಾನು ಸಂಹಾರ ವಿಷಯದಲ್ಲಿ ಕಾಲಾಗ್ನಿರುದ್ರನನ್ನು ಗೊತ್ತು ಮಾಡಿ ಯಾವಾಗಲೂ ಆ ಪರಮಾತ್ಮನ ನಾಮಗುಣಕೀರ್ತನವನ್ನು ಮಾಡುತ್ತಾ ಇರುವೆನು. ಆದುದರಿಂದಲೇ ನಾನು ಮೃತ್ಯುಂಜಯನಾಗಿ ಪರಮಾತ್ಮ ಜ್ಞಾನದಿಂದ ನಿರ್ಭಯನಾಗಿರುವೆನು. ಗರುಡನನ್ನು ಕಂಡು ಸರ್ಪಗಳು ಓಡುವಂತೆ ನನ್ನನ್ನು ಕಂಡು ಮೃತ್ಯುವು ಓಡುವುದು. ॥೬೧-೬೨॥

ನಾರದನೇ, ಕೇಳು. ಶಿವನು ಆ ಸಭಾಮಧ್ಯದಲ್ಲಿ ಹೀಗೆ ಹೇಳಿ ಪರಮಾತ್ಮನನ್ನು ಧ್ಯಾನಮಾಡುತ್ತಾ ಸುಮ್ಮನಾದನು. ಶಂಖಚೂಡನು ಆ ಮಾತನ್ನು ಕೇಳಿ ಮತ್ತೆ ಮತ್ತೆ ಶಿವನನ್ನು ಹೊಗಳಿ ಅವನನ್ನು ಕುರಿತು ವಿನಯದಿಂದ ಕೂಡಿದ ಮಧುರವಾದ ಮಾತನ್ನಾಡಿದನು. ॥೬೩-೬೪॥

ಶಂಖಚೂಡನು ಹೇಳಿದನು — ಓ ಪರಮೇಶ್ವರನೇ, ನೀನು ಹೇಳಿದ ಮಾತುಗಳೆಲ್ಲವೂ ಸತ್ಯವಾದುದು. ನನಗೂ ಜ್ಞಾಪಕಕ್ಕೆ ಬಂದಿತು. ಆದರೂ ಕೆಲವು ನಿಜವಾದ ಮಾತುಗಳನ್ನು ನಾನು ವಿಜ್ಞಾಪಿಸುವೆನು. ಅದನ್ನು ಕೇಳಬೇಕು. ಜ್ಞಾತಿ ದ್ರೋಹವು ಮಹಾಪಾಪವೆಂದು ಈಗ ತಾನೇ ನೀನು ಹೇಳಿದೆಯಷ್ಟೇ. ಬಲಿಚಕ್ರವರ್ತಿಯ ಸರ್ವಸ್ವವನ್ನೂ ತೆಗೆದುಕೊಂಡು ಅವನನ್ನೇಕೆ ದೇವತೆಗಳು ಸುತಲಕ್ಕೆ

ಗೃಹೀತ್ವಾ ತಸ್ಯ ಸರ್ವಸ್ವಂ ಕುತಃ ಪ್ರಸ್ಥಾಪಿತೋ ಬಲಿಃ ।
ಮಯಾ ಸಮುದ್ಧೃತಂ ಸರ್ವಮೂರ್ಧ್ವಮೈಶ್ವರ್ಯಮೀಶ್ವರ ॥೬೭॥

ಸುತಲಾಚ್ಚ ಸಮುದ್ಧರ್ತುಂ ನಾಲಂ ತತ್ರ ಗದಾಧರಃ ।
ಸಭ್ರಾತೃಕೋ ಹಿರಣ್ಯಾಕ್ಷಃ ಕಥಂ ದೇವೈಶ್ಚ ಹಿಂಸಿತಃ ॥೬೮॥

ಶುಂಭಾದಯಶ್ಚಾಸುರಾಶ್ಚ ಕಥಂ ದೇವೈರ್ನಿಪಾತಿತಾಃ ।
ಪುರಾ ಸಮುದ್ರಮಥನೇ ಪೀಯೂಷಂ ಭಕ್ಷಿತಂ ಸುರೈಃ ॥೬೯॥

ಕ್ಲೇಶಭಾಜೋ ವಯಂ ತತ್ರ ತೇ ಸರ್ವೇ ಫಲಭೋಗಿನಃ ।
ಕ್ರೀಡಾಭಾಂಡಮಿದಂ ವಿಶ್ವಂ ಪ್ರಕೃತೇಃ ಪರಮಾತ್ಮನಃ ॥೭೦॥

ಯಸ್ಮೈ ಯತ್ರ ಸ ದದಾತಿ ತಸ್ಯೈಶ್ವರ್ಯಂ ಭವೇತ್ತದಾ ।
ದೇವದಾನವಯೋರ್ವಾದಃ ಶಶ್ವನ್ನೈಮಿತ್ತಿಕಃ ಸದಾ ॥೭೧॥

ಪರಾಜಯೋ ಜಯಸ್ತೇಷಾಂ ಕಾಲೇಽಸ್ಮಾಕಂ ಕ್ರಮೇಣ ಚ ।
ತದಾವಯೋರ್ವಿರೋಧೇ ವಾ ಗಮನಂ ನಿಷ್ಫಲಂ ಪರಂ ॥೭೨॥

---

ಕಳುಹಿಸಿದರು ? ನಾನು ಪಾತಾಲದಲ್ಲಿದ್ದ ಸಮಸ್ತ ಸಂಪತ್ತನ್ನೂ ತಂದೆನು. ಆದರೆ ಸುತಲದಲ್ಲಿದ್ದ ಸಂಪತ್ತನ್ನು ತರಲು ಸಾಧ್ಯವಾಗಲಿಲ್ಲ. ಅಲ್ಲಿ ವಿಷ್ಣುವು ಬಲಿಯ ರಕ್ಷಕನಾಗಿರುವನು. ॥೬೫-೬೬-೬೭॥

ಸಹೋದರನೊಡನೆ ಕೂಡಿದ ಹಿರಣ್ಯಾಕ್ಷನನ್ನು ದೇವತೆಗಳು ಹೇಗೆ ಹಿಂಸಿಸಿದರು ? ಶುಂಭಾದಿ ದೈತ್ಯರನ್ನು ಹೇಗೆ ಕೊಂದರು ? ಪೂರ್ವದಲ್ಲಿ ಸಮುದ್ರಮಥನ ಕಾಲದಲ್ಲಿ ಅಮೃತವನ್ನು ದೇವತೆಗಳು ಕುಡಿದರು. ದೈತ್ಯರಾದ ನಾವು ಕಷ್ಟಕ್ಕೆ ಗುರಿಯಾದೆವು. ಫಲವನ್ನು ಮಾತ್ರ ಅವರು ಅನುಭವಿಸಿದರು. ॥೬೮-೬೯॥

ಈ ಪ್ರಪಂಚವು ಪ್ರಕೃತಿಯ ರೂಪನಾದ ಪರಮಾತ್ಮನಿಗೆ ಆಟದ ಪಾತ್ರೆಯಾಗಿರುವುದು (ವಿಹಾರಸ್ಥಾನ). ಆ ಪರಮಾತ್ಮನು ಯಾರಿಗೆ ಎಲ್ಲಿ ಅನುಗ್ರಹಿಸುವನೋ ಅವನಿಗೆ ಆಗಲೇ ಸಂಪತ್ತು ಬರುವುದು. ದೇವದಾನವರ ವಾದವು ಆಗಾಗ್ಗೆ ಕಾರಣವನ್ನನುಸರಿಸಿ ಉಂಟಾಗುವುದು. ಕಾಲಕ್ಕನುಸಾರವಾಗಿ ಒಬ್ಬರಿಗೆ ಜಯವೂ ಮತ್ತೊಬ್ಬರಿಗೆ ಅಪಜಯವೂ ಉಂಟಾಗುವುದು. ಹೀಗಿರುವಲ್ಲಿ ನಮ್ಮ ವಿರೋಧದ ವಿಷಯದಲ್ಲಿ ನೀನು ಬಂದಿರುವುದು ನಿಷ್ಫಲವಾದುದಾಗಿರುವುದು. ॥೭೦-೭೧-೭೨॥

ಸಮಸಂಬಂಧಿನೋ ಬಂಧೋರೀಶ್ವರಸ್ಯ ಮಹಾತ್ಮನಃ ।
ಇಯಂ ತೇ ಮಹತೀ ಲಜ್ಜಾ ಯುದ್ಧೇಽಸ್ಮಾಭಿಸ್ಸಹಾಧುನಾ ॥೭೩॥

ಜಯೇ ತತೋಽಧಿಕಾ ಕೀರ್ತಿರ್ಹಾನಿಶ್ಚೈವ ಪರಾಜಯೇ ।
ಇತ್ಯೇತದ್ವಚನಂ ಶ್ರುತ್ವಾ ಪ್ರಹಸ್ಯ ಚ ತ್ರಿಲೋಚನಃ ॥೭೪॥

ಯಥೋಚಿತಮುತ್ತರಂ ತಮುವಾಚ ದಾನವೇಶ್ವರಂ ।

॥ ಮಹಾದೇವ ಉವಾಚ ॥

ಯುಷ್ಮಾಭಿಃ ಸಹ ಯುದ್ಧೇ ಮೇ ಬ್ರಹ್ಮವಂಶಸಮುದ್ಭವೈಃ ॥೭೫॥

ಕಾ ಲಜ್ಜಾ ಮಹತೀ ರಾಜನ್ನಕೀರ್ತಿರ್ವಾ ಪರಾಜಯೇ ।
ಯದ್ಧಮಾದೌ ಹರೇರೇವ ಮಧುನಾ ಕೈಟಭೇನ ಚ ॥೭೬॥

ಹಿರಣ್ಯಕಶಿಪೋಶ್ಚೈವ ಸಹ ತೇನಾತ್ಮನಾ ನೃಪ ।
ಹಿರಣ್ಯಾಕ್ಷಸ್ಯ ಯುದ್ಧಂ ಚ ಪುನಸ್ತೇನ ಗದಾಭೃತಾ ॥೭೭॥

ತ್ರಿಪುರೈಸ್ಸಹಯುದ್ಧಂ ಚ ಮಯಾಽಪಿ ಚ ಪುರಾಕೃತಂ ।
ಸರ್ವೇಶ್ವರ್ಯಾಃ ಸರ್ವಮಾತುಃ ಪ್ರಕೃತ್ಯಾಶ್ಚ ಬಭೂವ ಹ ॥೭೮॥
ಸಹ ಶುಂಭಾದಿಭಿಃ ಪೂರ್ವಂ ಸಮರಃ ಪರಮಾದ್ಭುತಃ ।

---

ದೇವತೆಗಳಿಗೂ ಅಸುರರಿಗೂ ಸಮವಾಗಿ ಮಿತ್ರನಾದ, ಮಹಾತ್ಮನೂ ಸ್ವಾಮಿಯೂ ಬಂಧುವೂ ಆದ, ನೀನು ಈಗ ನಮ್ಮೊಡನೆ ಯುದ್ಧಕ್ಕೆ ಬಂದಿರುವುದು ನಿನಗೆ ಹೆಚ್ಚು ನಾಚಿಕೆಯನ್ನುಂಟುಮಾಡುವುದು. ॥೭೩॥

ನಮಗೆ ಜಯವಾದರೆ ಮಹಾಯಶಸ್ಸು ಬರುವುದು. ನಿನಗೆ ಜಯವಾದರೆ ಅಂತಹ ಕೀರ್ತಿಯಿಲ್ಲ. ನಿನಗೆ ಸೋಲಾದರೆ ಮಹಾಹಾನಿಯಾಗುವುದು. ನಮಗೆ ಅಷ್ಟು ಹಾನಿಯಾಗುವುದಿಲ್ಲ. ಹೀಗೆಂದ ಮಾತನ್ನು ಕೇಳಿ ಈಶ್ವರನು ನಕ್ಕು ಆ ದಾನವೇಶ್ವರನನ್ನು ಕುರಿತು ಉಚಿತವಾದ ಉತ್ತರವನ್ನು ಹೇಳಿದನು. ॥೭೪॥

ಮಹಾದೇವನು ಹೇಳಿದನು—ಎಲೈ ರಾಜನೇ, ಬ್ರಹ್ಮನ ವಂಶದಲ್ಲಿ ಹುಟ್ಟಿದ ನಿಮ್ಮೊಡನೆ ಯುದ್ಧ ಮಾಡಿದರೆ ನನಗೆ ನಾಚಿಕೆ ಎಂತಹುದು? ಸೋಲಾದರೆ ಅಪಯಶಸ್ಸೆಂತಹುದು? ಮೊದಲು ಹರಿಯು ಮಧುಕೈಟಭರೊಡನೆಯೂ ಹಿರಣ್ಯಾಕ್ಷ ಹಿರಣ್ಯಕಶಿಪುಗಳೊಡನೆಯೂ ಯುದ್ಧ ಮಾಡಿದನು. ಪೂರ್ವದಲ್ಲಿ ನಾನು ತ್ರಿಪುರಾಸುರರೊಡನೆ ಯುದ್ಧ ಮಾಡಿದೆನು. ಸರ್ವೇಶ್ವರಿಯೂ ಜಗದಂಬೆಯೂ ಆದ ಪ್ರಕೃತಿ

ಪಾರ್ಷದಪ್ರವರಸ್ತ್ವಂ ಚ ಕೃಷ್ಣಸ್ಯ ಪರಮಾತ್ಮನಃ ॥೭೯॥

ಯೇ ಯೇ ಹತಾಶ್ಚ ದೈತೇಯಾ ನಹಿ ತೇಽಪಿ ತ್ವಯಾ ಸಮಾಃ ।
ಕಾ ಲಜ್ಜಾ ಮಹತೀ ರಾಜನ್ಮಮ ಯುದ್ಧೇ ತ್ವಯಾ ಸಹ ॥೮೦॥

ಸುರಾಣಾಂ ಶರಣಸ್ಯೈ(ಶ್ಚೈ)ವ ಪ್ರೇಷಿತಶ್ಚ ಹರೇರಹೋ ।
ದೇಹಿ ರಾಜ್ಯಂ ಚ ದೇವಾನಾಮಿತಿ ಮೇ ನಿಶ್ಚಿತಂ ವಚಃ ॥೮೧॥

ಯುದ್ಧಂ ವಾ ಕುರು ಮತ್ಸಾರ್ಧಂ ವಾಗ್ವ್ಯಯೇ ಕಿಂ ಪ್ರಯೋಜನಂ।
ಇತ್ಯುಕ್ತ್ವಾ ಶಂಕರಸ್ತತ್ರ ವಿರರಾಮ ಚ ನಾರದ ।
ಉತ್ತಸ್ಥೌ ಶಂಖಚೂಡಶ್ಚ ಹ್ಯಮಾತ್ಯೈಃ ಸಹ ಸತ್ವರಂ ॥೮೨॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಏಕವಿಂಶೋಽಧ್ಯಾಯಃ

---

ದೇವಿಯು ಶುಂಭಾದಿ ದೈತ್ಯರೊಡನೆ ಆಶ್ಚರ್ಯಕರವಾದ ಯುದ್ಧವನ್ನು ಮಾಡಿದಳು. ॥೭೫-೭೬-೭೭-೭೮॥

ನೀನು ಪರಮಾತ್ಮನಾದ ಕೃಷ್ಣನ ಸೇವಕನಾಗಿರುವೆ. ಹಿಂದೆ ಯಾವ ದೈತ್ಯರು ನಾಶವಾದರೋ ಅವರಾರೂ ನಿನ್ನ ಸಮಾನರಲ್ಲ. ಹೀಗಿರುವಲ್ಲಿ ನಿನ್ನೊಡನೆ ಯುದ್ಧ ಮಾಡುವುದಕ್ಕೆ ನನಗೆ ನಾಚಿಕೆ ಎಂತಹುದು. ॥೭೯-೮೦॥

ವಿಷ್ಣುವು, ದೇವತೆಗಳಿಗೆ ಆಶ್ರಯವಾಗಿ ರಕ್ಷಿಸಬೇಕೆಂದು ನನ್ನನ್ನು ಕಳುಹಿಸಿರುವನು. ದೇವತೆಗಳಿಗೆ ರಾಜ್ಯವನ್ನು ಕೊಡು ಎಂದು ಹೇಳುವುದೇ ನನ್ನ ಖಂಡಿತವಾದ ಮಾತು. ನನ್ನೊಡನೆ ಯುದ್ಧವನ್ನಾದರೂ ಮಾಡು. ಬರಿಯ ಮಾತಿನಿಂದ ಏನು ಪ್ರಯೋಜನ? ಆಗಾಗ್ಗೆ ಅವಶ್ಯಕವಾದ ಧರ್ಮವಿರೋಧಿಗಳಾದ ರಾಕ್ಷಸರೊಡನೆ ಯುದ್ಧವನ್ನು ಮಾಡಿ ಅವರನ್ನು ನಿಗ್ರಹಿಸಿ ಧರ್ಮವನ್ನು ಕಾಪಾಡುವುದು ದೇವತೆಗಳ ಕಾರ್ಯವಾಗಿದೆ, ಎಂಬುದು ಸನಾತನವಾದ ಧರ್ಮಾಚರಣೆಯಾಗಿದೆ. ಹೀಗೆಂದು ಹೇಳಿ ಶಿವನು ಸುಮ್ಮನಾದನು. ಒಡನೆಯೇ ಶಂಖಚೂಡನು ತನ್ನ ಮಂತ್ರಿಗಳೊಡನೆ ಎದ್ದು ನಿಂತನು. ॥೮೧-೮೨॥

ಇಲ್ಲಿಗೆ ದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### || ದ್ವಾವಿಂಶೋಽಧ್ಯಾಯಃ ||

### ಇಪ್ಪತ್ತೆರಡನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

ಶಿವಂ ಪ್ರಣಮ್ಯ ಶಿರಸಾ ದಾನವೇಂದ್ರಃ ಪ್ರತಾಪವಾನ್ ।
ಸಮಾರುರೋಹ ಯಾನಂ ಚ ಸಹಾಮಾತ್ಯೈಃ ಸ ಸತ್ವರಂ ||೧||

ಶಿವಃ ಸ್ವಸೈನ್ಯಂ ದೇವಾಂಶ್ಚ ಪ್ರೇರಯಾಮಾಸ ಸತ್ವರಂ ।
ದಾನವೇಂದ್ರಃ ಸಸೈನ್ಯಶ್ಚ ಯುದ್ಧಾರಂಭೇ ಬಭೂವ ಹ ||೨||

ಸ್ವಯಂ ಮಹೇಂದ್ರೋ ಯುಯುಧೇ ಸಾರ್ಧಂ ಚ ವೃಷಪರ್ವಣಾ ।
ಭಾಸ್ಕರೋ ಯುಯುಧೇ ವಿಪ್ರಚಿತ್ತಿನಾ ಸಹ ಸತ್ವರಃ ||೩||

ದಂಭೇನ ಸಹ ಚಂದ್ರಶ್ಚ ಚಕಾರ ಪರಮಂ ರಣಂ ।
ಕಾಲಸ್ವರೇಣ ಕಾಲಶ್ಚ ಗೋಕರ್ಣೇನ ಹುತಾಶನಃ ||೪||

ಕುಬೇರಃ ಕಾಲಕೇಯೇನ ವಿಶ್ವಕರ್ಮಾ ಮಯೇನ ಚ ।
ಭಯಂಕರೇಣ ಮೃತ್ಯುಶ್ಚ ಸಂಹಾರೇಣ ಯಮಸ್ತಥಾ ||೫||

---

ನಾರಾಯಣನು ಹೇಳಿದನು—ದಾನವರ ದೊರೆಯಾದ ಪರಾಕ್ರಮಿಯಾದ ಶಂಖಚೂಡನು ಶಿವನಿಗೆ ನಮಸ್ಕಾರಮಾಡಿ ಬೇಗನೆ ಮಂತ್ರಿಗಳೊಡನೆ ವಿಮಾನವನ್ನೇರಿದನು. ಶಿವನೂ ತನ್ನ ಸೇನೆಯನ್ನೂ ದೇವತೆಗಳನ್ನೂ ಯುದ್ಧಕ್ಕೆ ಪ್ರೇರಿಸಿದನು. ಶಂಖಚೂಡನೂ ಯುದ್ಧಾರಂಭದಲ್ಲಿ ಸಿದ್ಧನಾದನು. ||೧-೨||

ದೇವೇಂದ್ರನು ವೃಷಪರ್ವನೊಡನೆಯೂ ಸೂರ್ಯನು ವಿಪ್ರಚಿತ್ತಿಯೊಡನೆಯೂ ಚಂದ್ರನು ದಂಭನೊಡನೆಯೂ ಯಮನು ಕಾಲಸ್ವರನೊಡನೆಯೂ

ವಿಕಂಕಣೇನ ವರುಣಶ್ಚಂಚಲೇನ ಸಮೀರಣಃ ।
ಬುಧಶ್ಚ ಘೃತಪೃಷ್ಠೇನ ರಕ್ತಾಕ್ಷೇಣ ಶನೈಶ್ಚರಃ ॥೬॥

ಜಯಂತೋ ರತ್ನಸಾರೇಣ ವಸವೋ ವರ್ಚಸಾಂ ಗಣೈಃ ।
ಅಶ್ವಿನೌ ಚ ದೀಪ್ತಿಮತಾ ಧೂಮ್ರೇಣ ನಲಕೂಬರಃ ॥೭॥

ಧುರಂಧರೇಣ ಧರ್ಮಶ್ಚ ಉಷಾಕ್ಷೇಣ ಚ ಮಂಗಲಃ ।
ಶೋಭಾಕರೇಣ ವೈ ಭಾನುಃ ಪಿಠರೇಣ ಚ ಮನ್ಮಥಃ ॥೮॥

ಗೋದಾಮುಖೇನ ಚೂರ್ಣೇನ ಖಡ್ಗೇನ ಚ ಧ್ವಜೇನ ಚ ।
ಕಾಂಚೀಮುಖೇನ ಪಿಂಡೇನ ಧೂಮ್ರೇಣ ಸಹ ನಂದಿನಾ ॥೯॥

ವಿಶ್ವೇನ ಚ ಪಲಾಶೇನಾದಿತ್ಯಾದ್ಯಾ ಯುಯುಧುಃ ಪರೇ ।
ಏಕಾದಶ ಚ ರುದ್ರಾ ವೈ ಏಕಾದಶಭಯಂಕರೈಃ ॥೧೦॥

ಮಹಾಮಾರೀ ಚ ಯುಯುಧೇ ಚೋಗ್ರಚಂಡಾದಿಭಿಃ ಸಹ ।
ನಂದೀಶ್ವರಾದಯಃ ಸರ್ವೇ ದಾನವಾನಾಂ ಗಣೈಃ ಸಹ ॥೧೧॥

---

ಅಗ್ನಿಯು ಗೋಕರ್ಣನೊಡನೆಯೂ ಕುಬೇರನು ಕಾಲಕೇಯನೊಡನೆಯೂ ವಿಶ್ವಕರ್ಮನು ಮಯನೊಡನೆಯೂ ಮೃತ್ಯುವು ಭಯಂಕರನೊಡನೆಯೂ ಯುದ್ಧ ಮಾಡಿದರು. ॥೩-೪-೫॥

ವರುಣ-ವಿಕಂಕಣ, ವಾಯು-ಚಂಚಲ, ಬುಧ-ಘೃತಪೃಷ್ಠ, ಶನಿ-ರಕ್ತಾಕ್ಷ, ಜಯಂತ-ರತ್ನಸಾರ, ಅಷ್ಟವಸುಗಳು-ವರ್ಚಸ್ವಿಗಳ ಗುಂಪು, ಅಶ್ವಿನೀದೇವ-ದುರಂಧರ, ಅಂಗಾರಕ-ಉಷಾಕ್ಷ, ಭಾನು-ಶೋಭಾಕರ, ಮನ್ಮಥ-ಪಿಠರ, ಇವರುಗಳು ಪರಸ್ಪರ ವಾಗಿ ಯುದ್ಧಮಾಡಿದರು. ॥೬-೭-೮॥

ಗೋದಾಮುಖ, ಚೂರ್ಣ, ಖಡ್ಗ, ಧ್ವಜ, ಕಾಂಚೀಮುಖ, ಪಿಂಡ, ಧೂಮ್ರ, ನಂದಿ, ವಿಶ್ವ, ಪಲಾಶ, ಇವರುಗಳೊಡನೆ ಆದಿತ್ಯಾದಿ ದೇವತೆಗಳೂ ಹನ್ನೊಂದು ಜನ ಭಯಂಕರರೆಂಬ ರಾಕ್ಷಸರೊಡನೆ ಏಕಾದಶರುದ್ರರೂ ಯುದ್ಧಮಾಡಿದರು. ॥೯-೧೦॥

ದೈತ್ಯ ಪಕ್ಷದ ಮಹಾಮಾರಿಯು ಉಗ್ರಚಂಡಾದಿ ದೇವತೆಗಳೊಡನೆಯೂ ನಂದೀಶ್ವರನೇ ಮೊದಲಾದ ದೇವತೆಗಳು ದಾನವರ ಗುಂಪಿನೊಡನೆಯೂ ಪ್ರಲಯ

ಯುಯುಧುಶ್ಚ ಮಹಾಯುದ್ಧೇ ಪ್ರಲಯೇಽಪಿ ಭಯಂಕರೇ ।
ವಟಮೂಲೇ ಚ ಶಂಭುಶ್ಚ ತಸ್ಥೌ ಕಾಲ್ಯಾ ಸುತೇನ ಚ ॥೧೨॥

ಸರ್ವೇ ಚ ಯುಯುಧುಃ ಸೈನ್ಯಸಮೂಹಾಃ ಸತತಂ ಮುನೇ ।
ರತ್ನಸಿಂಹಾಸನೇ ರಮ್ಯೇ ಕೋಟಿಭಿರ್ದಾನವೈಃ ಸಹ ॥೧೩॥

ಉವಾಸ ಶಂಖಚೂಡಶ್ಚ ರತ್ನಭೂಷಣಭೂಷಿತಃ ।
ಶಂಕರಸ್ಯ ಚ ಯೇ ಯೋಧಾ ದಾನವೈಶ್ಚ ಪರಾಜಿತಾಃ ॥೧೪॥

ದೇವಾಶ್ಚ ದುದ್ರುವುಃ ಸರ್ವೇ ಭೀತಾಶ್ಚ ಕ್ಷತವಿಗ್ರಹಾಃ ।
ಚಕಾರ ಕೋಪಂ ಸ್ಕಂದಶ್ಚ ದೇವೇಭ್ಯಶ್ಚಾಭಯಂ ದದೌ ॥೧೫॥

ಬಲಂ ಚ ಸ್ವಗಣಾನಾಂ ಚ ವರ್ಧಯಾಮಾಸ ತೇಜಸಾ ।
ಸೋಽಯಮೇಕಶ್ಚ ಯುಯುಧೇ ದಾನವಾನಾಂ ಗಣೈಃ ಸಹ ॥೧೬॥

ಅಕ್ಷೌಹಿಣೀನಾಂ ಶತಕಂ ಸಮರೇ ಚ ಜಘಾನ ಸಃ ।
ಅಸುರಾನ್ ಪಾತಯಾಮಾಸ ಕಾಲೀ ಕಮಲಲೋಚನಾ ॥೧೭॥

---

ಕಾಲದಲ್ಲಿಯೂ ಭಯವನ್ನುಂಟುಮಾಡುವ ದೊಡ್ಡ ರಣಾಂಗಣದಲ್ಲಿ ಯುದ್ಧಮಾಡು ತ್ತಿದ್ದರು. ಆಲದ ಮರದ ಬುಡದಲ್ಲಿ ಶಿವನು ಭದ್ರಕಾಲಿ ಮತ್ತು ಕುಮಾರಸ್ವಾಮಿ ಯೊಡನೆ ಕುಳಿತಿದ್ದನು. ||೧೧-೧೨||

ನಾರದಮುನಿಯೇ, ಸಮಸ್ತ ಸೈನ್ಯಗಳೂ ಯುದ್ಧಮಾಡುತ್ತಿರುವಲ್ಲಿ ಮನೋ ಹರವಾದ ರತ್ನಖಚಿತವಾದ ಸಿಂಹಾಸನದಲ್ಲಿ ಅನೇಕ ದಾನವರೊಡನೆ ಕೂಡಿ ರತ್ನಾ ಭರಣಗಳನ್ನು ಧರಿಸಿ ಶಂಖಚೂಡನು ಕುಳಿತಿದ್ದನು. ||೧೩||

ಶಿವನ ಕಡೆಯ ಯುದ್ಧವೀರರನ್ನು ದಾನವರು ಸೋಲಿಸಿದರು. ದೇವತೆಗಳು ಶರೀರದಲ್ಲಿ ಗಾಯಗಳನ್ನು ಹೊಂದಿ ಭಯದಿಂದ ಎಲ್ಲರೂ ಓಡಿದರು. ಕುಮಾರ ಸ್ವಾಮಿಯು ಕೋಪಗೊಂಡು ದೇವತೆಗಳಿಗೆ ಧೈರ್ಯವನ್ನು ಹೇಳುತ್ತಾ ತನ್ನ ತೇಜಸ್ಸಿನಿಂದ ತನ್ನ ಸೈನ್ಯಕ್ಕೆ ಬಲವನ್ನು ಹೆಚ್ಚಿಸಿದನು. ||೧೪-೧೫||

ಆ ಕುಮಾರಸ್ವಾಮಿಯೊಬ್ಬನೇ ದಾನವರ ಗುಂಪಿನೊಡನೆ ಯುದ್ಧಮಾಡಿ ಒಂದುನೂರು ಅಕ್ಷೌಹಿಣೀ ಸೈನ್ಯವನ್ನು ನಾಶಮಾಡಿದನು. ಕಮಲದಂತೆ ಕಣ್ಣುಳ್ಳ ಭದ್ರಕಾಲಿಯು ಮಹಾಕೋಪದಿಂದ ಅನೇಕ ದಾನವರನ್ನು ಕೊಂದು ಅವರ ರಕ್ತ

ಪಪೌ ರಕ್ತಂ ದಾನವಾನಾಮತಿಕ್ರುದ್ಧಾ ತತಃ ಪರಂ ।
ದಶಲಕ್ಷಂ ಗಜೇಂದ್ರಾಣಾಂ ಶತಲಕ್ಷಂ ಚ ಕೋಟಿಶಃ ॥೧೮॥

ಸಮಾದಾಯ್ಯೈಕಹಸ್ತೇನ ಮುಖೇ ಚಿಕ್ಷೇಪ ಲೀಲಯಾ ।
ಕಬಂಧಾನಾಂ ಸಹಸ್ರಂ ಚ ನನರ್ತ ಸಮರೇ ಮುನೇ ॥೧೯॥

ಸ್ಕಂದಸ್ಯ ಶರಜಾಲೇನ ದಾನವಾಃ ಕ್ಷತವಿಗ್ರಹಾಃ ।
ಭೀತಾಶ್ಚ ದುದ್ರುವುಃ ಸರ್ವೇ ಮಹಾರಣಪರಾಕ್ರಮಾಃ ॥೨೦॥

ವೃಷಪರ್ವಾ ವಿಪ್ರಚಿತ್ತಿರ್ದಂಭಶ್ಚಾಪಿ ವಿಕಂಕಣಃ ।
ಸ್ಕಂದೇನ ಸಾರ್ಧಂ ಯುಯುಧುಃ ತೇ ಸರ್ವೇ ವಿಕ್ರಮೇಣ ಚ॥೨೧॥

ಮಹಾಮಾರೀ ಚ ಯುಯುಧೇ ನ ಬಭೂವ ಪರಾಙ್ಮುಖೀ ।
ಬಭೂವುಸ್ತೇ ಚ ಸಂಕ್ಷುಬ್ಧಾಃ ಸ್ಕಂದಸ್ಯ ಶಕ್ತಿಪೀಡಿತಾಃ ॥೨೨॥

ನ ದುದ್ರುವುರ್ಭಯಾತ್ಸ್ವರ್ಗೇ ಪುಷ್ಪವೃಷ್ಟಿರ್ಬಭೂವ ಹ ।
ಸ್ಕಂದಸ್ಯ ಸಮರಂ ದೃಷ್ಟ್ವಾ ಮಹಾರುದ್ರಂ ಸಮುಲ್ಬಣಂ ॥೨೩॥
ದಾನವಾನಾಂ ಕ್ಷಯಕರಂ ಯಥಾ ಪ್ರಾಕೃತಿಕೋ ಲಯಃ ।

---

ವನ್ನು ಪಾನಮಾಡಿದಳು. ಮತ್ತೆ ಲೆಕ್ಕವಿಲ್ಲದಷ್ಟು ಆನೆಗಳನ್ನೂ ಒಂದೇ ಕೈಯಿಂದ ತೆಗೆದುಕೊಂಡು ಬಾಯಲ್ಲಿ ಹಾಕಿಕೊಂಡಳು. ಆ ಯುದ್ಧದಲ್ಲಿ ಸಾವಿರಾರು ತಲೆಯಿಲ್ಲದ ಮುಂಡಗಳು ಕುಣಿಯುತ್ತಿದ್ದವು. ॥೧೬-೧೭-೧೮-೧೯॥

ಕುಮಾರಸ್ವಾಮಿಯ ಬಾಣಗಳಿಂದ ಪರಾಕ್ರಮಶಾಲಿಗಳಾದ ದಾನವರೆಲ್ಲರೂ ಗಾಯವನ್ನು ಹೊಂದಿ ಹೆದರಿ ಓಡಿದರು. ವೃಷಪರ್ವ, ವಿಪ್ರಚಿತ್ತಿ, ದಂಭ, ವಿಕಂಕಣ ಇವರು ಪರಾಕ್ರಮದಿಂದ ಕುಮಾರಸ್ವಾಮಿಯೊಡನೆ ಯುದ್ಧಮಾಡಿದರು. ಮಹಾಮಾರಿಯೂ ಕೂಡ ಹಿಂದೆಗೆಯದೆ ಯುದ್ಧ ಮಾಡಿದಳು. ಆದರೆ ಅವರೆಲ್ಲರೂ ಕುಮಾರಸ್ವಾಮಿಯ ಶಕ್ತ್ಯಾಯುಧದಿಂದ ಕಳವಳವನ್ನು ಹೊಂದಿದರು. ॥೨೦-೨೧-೨೨॥

ಆದರೆ ಭಯದಿಂದ ಓಡಿಹೋಗಲಿಲ್ಲ. ಪ್ರಾಕೃತಿಕವಾದ ಪ್ರಲಯದಂತೆ ದಾನವರಿಗೆ ನಾಶಕರವಾದ ಭಯಂಕರವಾದ ಆ ಕುಮಾರಸ್ವಾಮಿಯ ಯುದ್ಧವನ್ನು ನೋಡಿ ಸ್ವರ್ಗದಲ್ಲಿ ದೇವತೆಗಳು ಹೂಮಳೆಗರೆದರು. ॥೨೩॥

ರಾಜಾ ವಿಮಾನಮಾರುಹ್ಯ ಚಕಾರ ಬಾಣವರ್ಷಣಂ ॥೨೪॥

ನೃಪಸ್ಯ ಶರವೃಷ್ಟಿಶ್ಚ ಘನಸ್ಯ ವರ್ಷಣಂ ಯಥಾ ।
ಮಹಾಘೋರಾಂಧಕಾರಶ್ಚ ವಹ್ನ್ಯುತ್ಥಾನಂ ಬಭೂವ ಚ ॥೨೫॥

ದೇವಾಃ ಪ್ರದುದ್ರುವುಸ್ಸರ್ವೇಽಪ್ಯನ್ಯೇ ನಂದೀಶ್ವರಾದಯಃ ।
ಏಕ ಏವ ಕಾರ್ತಿಕೇಯಸ್ತಸ್ಥೌ ಸಮರಮೂರ್ಧನಿ ॥೨೬॥

ಪರ್ವತಾನಾಂ ಚ ಸರ್ಪಾಣಾಂ ಶಿಲಾನಾಂ ಶಾಖಿನಾಂ ತಥಾ ।
ನೃಪಶ್ಚಕಾರ ವೃಷ್ಟಿಂ ಚ ದುರ್ವಾರಾಂ ಚ ಭಯಂಕರೀಂ ॥೨೭॥

ನೃಪಸ್ಯ ಶರವೃಷ್ಟ್ಯಾ ಚ ಪ್ರಹಿತಃ ಶಿವನಂದನಃ ।
ನೀಹಾರೇಣ ಚ ಸಾಂದ್ರೇಣ ಪ್ರಹಿತೋ ಭಾಸ್ಕರೋ ಯಥಾ ॥೨೮॥

ಧನುಶ್ಚಿಚ್ಛೇದ ಸ್ಕಂದಸ್ಯ ದುರ್ವಹಂ ಚ ಭಯಂಕರಂ ।
ಬಭಂಜ ಚ ರಥಂ ದಿವ್ಯಂ ಚಿಚ್ಛೇದ ರಥಪೀಠಕಾನ್ ॥೨೯॥

ಮಯೂರಂ ಜರ್ಜರೀಭೂತಂ ದಿವ್ಯಾಸ್ತ್ರೇಣ ಚಕಾರ ಸಃ ।
ಶಕ್ತಿಂ ಚಿಚ್ಛೇದ ಸೂರ್ಯಾಭಾಂ ತಸ್ಯವಕ್ಷಸ್ಯ ಘಾತಿನೀಂ ॥೩೦॥

---

ಶಂಖಚೂಡನು ವಿಮಾನವನ್ನೇರಿ ಬಾಣದ ಮಳೆಯನ್ನು ಸುರಿಸಿದನು. ಮೇಘದಿಂದ ಮಳೆಸುರಿಯುವಂತೆ ಬಾಣದ ಮಳೆಯು ಸುರಿದು ಭಯಂಕರವಾದ ಕತ್ತಲೆ ಕವಿದು ಆಯುಧಗಳ ಘರ್ಷಣೆಯಿಂದ ಬೆಂಕಿಯೂ ಉಂಟಾಯಿತು. ||೨೪-೨೫||

ನಂದೀಶ್ವರನೇ ಮುಂತಾದ ದೇವತೆಗಳೆಲ್ಲರೂ ಓಡಿಹೋದರು. ಕುಮಾರಸ್ವಾಮಿಯೊಬ್ಬನೇ ಯುದ್ಧದಲ್ಲಿ ನಿಂತನು. ಶಂಖಚೂಡನು, ಪರ್ವತಗಳು, ಸರ್ಪಗಳು, ಕಲ್ಲುಬಂಡೆಗಳು, ಮರಗಳು, ಇವುಗಳ ಮಳೆಯನ್ನು ತಡೆ ಇಲ್ಲದೆ ಸುರಿಸಿದನು. ಸೂರ್ಯನನ್ನು ಒತ್ತಾದ ಹಿಮವು ಮುಚ್ಚುವಂತೆ ಕುಮಾರಸ್ವಾಮಿಯನ್ನು ಶಂಖಚೂಡನ ಬಾಣಗಳ ಮಳೆಯು ಮುಚ್ಚಿಕೊಂಡಿತು. ||೨೬-೨೭-೨೮||

ಬಳಿಕ ಎತ್ತುವುದಕ್ಕಾಗದ ಭಯಂಕರವಾದ ಕುಮಾರಸ್ವಾಮಿಯ ಬಿಲ್ಲನ್ನು ಕತ್ತರಿಸಿ ರಥವನ್ನು ಮುರಿದು ಕ್ರೂರವಾದ ಮಂತ್ರಾಸ್ತ್ರದಿಂದ ವಾಹನವಾದ ನವಿಲನ್ನು ನೋಯಿಸಿ ತನ್ನ ಎದೆಗೆ ಹೊಡೆಯುತ್ತಿದ್ದ ಸೂರ್ಯನಂತೆ ಪ್ರಕಾಶಿಸುತ್ತಿದ್ದ ಶಕ್ತ್ಯಾಯುಧವನ್ನೂ ಶಂಖಚೂಡನು ಕತ್ತರಿಸಿದನು. ||೨೯-೩೦||

ಕ್ಷಣಂ ಮೂರ್ಛಾಂ ಚ ಸಂಪ್ರಾಪ ಬಭೂವ ಚೇತನಃ ಪುನಃ ।
ಗೃಹೀತ್ವಾ ತದ್ಧನುರ್ದಿವ್ಯಂ ಯದ್ದತ್ತಂ ವಿಷ್ಣುನಾ ಪುರಾ ॥೩೦॥

ರತ್ನೇಂದ್ರಸಾರನಿರ್ಮಾಣಂ ಯಾನಮಾರುಹ್ಯ ಕಾರ್ತಿಕಃ ।
ಶಸ್ತ್ರಾಸ್ತ್ರಂ ಚ ಗೃಹೀತ್ವಾ ಚ ಚಕಾರ ರಣಮುಲ್ಬಣಂ ॥೩೨॥

ಸರ್ಪಾಂಶ್ಚ ಪರ್ವತಾಂಶ್ಚೈವ ವೃಕ್ಷಾಂಶ್ಚ ಪ್ರಸ್ತರಾಂಸ್ತಥಾ ।
ಸರ್ವಾಂಶ್ಚಿಚ್ಛೇದ ಕೋಪೇನ ದಿವ್ಯಾಸ್ತ್ರೇಣ ಶಿವಾತ್ಮಜಃ ॥೩೩॥

ವಹ್ನಿಂ ನಿರ್ವಾಪಯಾಮಾಸ ಪಾರ್ಜನ್ಯೇನ ಪ್ರತಾಪವಾನ್ ।
ರಥಂ ಧನುಶ್ಚ ಚಿಚ್ಛೇದ ಶಂಖಚೂಡಸ್ಯ ಲೀಲಯಾ ॥೩೪॥

ಸನ್ನಾಹಂ ಸಾರಥಿಂ ಚೈವ ಕಿರೀಟಂ ಮುಕುಟೋಜ್ವಲಂ ।
ಚಿಕ್ಷೇಪ ಶಕ್ತಿಂ ಶುಕ್ಲಾಭಾಂ ದಾನವೇಂದ್ರಸ್ಯ ವಕ್ಷಸಿ ॥೩೫॥

ಮೂರ್ಛಾಂ ಸಂಪ್ರಾಪ್ಯ ರಾಜಾ ಚ ಚೇತನಶ್ಚ ಬಭೂವ ಹ ।
ಆರುರೋಹ ಯಾನಮನ್ಯದ್ಧನುರ್ಜಗ್ರಾಹ ಸತ್ವರಃ ॥೩೬॥

---

ಕುಮಾರಸ್ವಾಮಿಯು ಒಂದು ಕ್ಷಣ ಮೂರ್ಛೆಯನ್ನು ಹೊಂದಿ ಮತ್ತೆ ಎಚ್ಚತ್ತವನಾಗಿ ಪೂರ್ವದಲ್ಲಿ ತನಗೆ ವಿಷ್ಣುವು ಕೊಟ್ಟ ಶ್ರೇಷ್ಠವಾದ ರತ್ನಗಳ ಸಾರದಿಂದ ಮಾಡಿದ ದಿವ್ಯವಾದ ಧನುಸ್ಸನ್ನು ಹಿಡಿದು ನವಿಲನ್ನೇರಿ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಭಯಂಕರವಾದ ಯುದ್ಧವನ್ನು ಮಾಡಿದನು. ॥೩೦-೩೨॥

ಶಿವಪುತ್ರನು ಸರ್ಪಗಳನ್ನೂ ಪರ್ವತಗಳನ್ನೂ ಮರಗಳನ್ನೂ ಕಲ್ಲುಬಂಡೆಗಳನ್ನೂ ಕೋಪದಿಂದ ತನ್ನ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಕತ್ತರಿಸಿದನು. ॥೩೩॥

ಪರಾಕ್ರಮಿಯಾದ ಸ್ಕಂದನು ಮಳೆಯ ಅಸ್ತ್ರದಿಂದ ಅಗ್ನಿಯನ್ನು ನಿವಾರಣೆ ಮಾಡಿ ಸುಲಭವಾಗಿ ಶಂಖಚೂಡನ ರಥವನ್ನೂ ಧನುಸ್ಸನ್ನೂ ಕತ್ತರಿಸಿ ಕುದುರೆಗಳನ್ನೂ ಸಾರಥಿಯನ್ನೂ ಪ್ರಕಾಶಮಾನವಾದ ಅವನ ಕಿರೀಟವನ್ನೂ ಕೆಡವಿ ಅವನ ಎದೆಗೆ ಬೆಳ್ಳಗೆ ಪ್ರಕಾಶಮಾನವಾದ ಶಕ್ತ್ಯಾಯುಧದಿಂದ ಹೊಡೆದನು. ॥೩೪-೩೫॥

ಶಂಖಚೂಡನು ಮೂರ್ಛೆಯನ್ನು ಹೊಂದಿ ಮತ್ತೆ ಎಚ್ಚರಗೊಂಡು ಬೇರೊಂದು ರಥವನ್ನು ಹತ್ತಿ ಬೇಗನೆ ಬಿಲ್ಲನ್ನು ತೆಗೆದುಕೊಂಡನು. ॥೩೬॥

ಚಕಾರ ಶರಜಾಲಂ ಚ ಮಾಯಯಾ ಮಾಯಿನಾಂ ವರಃ ।
ಗುಹಂ ಚಚ್ಛಾದ ಸಮರೇ ಶರಜಾಲೇನ ನಾರದ ॥೩೭॥

ಜಗ್ರಾಹ ಶಕ್ತಿಮವ್ಯಗ್ರಾಂ ಶತಸೂರ್ಯಸಮಪ್ರಭಾಂ ।
ಪ್ರಲಯಾಗ್ನಿ ಶಿಖಾರೂಪಾಂ ವಿಷ್ಣೋಶ್ಚ ತೇಜಸಾವೃತಾಂ ॥೩೮॥

ಚಿಕ್ಷೇಪ ತಾಂ ಚ ಕೋಪೇನ ಮಹಾವೇಗೇನ ಕಾರ್ತಿಕೇ ।
ಪಪಾತ ಶಕ್ತಿಸ್ತದ್ಗಾತ್ರೇ ವಹ್ನಿರಾಶಿರಿವೋಜ್ವಲಾ ॥೩೯॥

ಮೂರ್ಛಾಂ ಸಂಪ್ರಾಪ ಶಕ್ತ್ಯಾ ಚ ಕಾರ್ತಿಕೇಯೋ ಮಹಾಬಲಃ ।
ಕಾಲೀ ಗೃಹೀತ್ವಾ ತಂ ಕ್ರೋಡೇ ನಿನಾಯ ಶಿವಸನ್ನಿಧೌ ॥೪೦॥

ಶಿವಸ್ತಂ ಚಾಪಿ ಜ್ಞಾನೇನ ಜೀವಯಾಮಾಸ ಲೀಲಯಾ ।
ದದೌ ಬಲಮನಂತಂ ಚ ಸಮುತ್ತಸ್ಥೌ ಪ್ರತಾಪವಾನ್ ॥೪೧॥

ಕಾಲೀ ಜಗಾಮ ಸಮರಂ ರಕ್ಷಿತುಂ ಕಾರ್ತಿಕಸ್ಯ ಯಾ ।
ವೀರಾಸ್ತಾಮನುಜಗ್ಮುಶ್ಚ ತೇ ಚ ನಂದೀಶ್ವರಾದಯಃ ॥೪೨॥

---

ಮಾಯಾವಿದ್ಯೆಯನ್ನು ಬಲ್ಲವರಲ್ಲಿ ಶ್ರೇಷ್ಠನಾದ ಶಂಖಚೂಡನು ಮಾಯೆಯಿಂದ ಬಾಣಗಳನ್ನು ಬಿಟ್ಟು ಅವುಗಳಿಂದ ಗುಹನನ್ನು ಮುಚ್ಚಿದನು. ಮತ್ತು ನೂರು ಸೂರ್ಯರ ಕಾಂತಿಯಂತೆ ಪ್ರಕಾಶಮಾನವಾಗಿರುವ ಪ್ರಲಯಕಾಲದ ಬೆಂಕಿಯಂತೆ ಉರಿಯುವ ವಿಷ್ಣುವಿನ ತೇಜಸ್ಸಿನಿಂದ ಕೂಡಿದ ಶಕ್ತ್ಯಾಯುಧವನ್ನು ತೆಗೆದುಕೊಂಡು ತುಂಬ ಕೋಪದಿಂದ ಮಹಾವೇಗವಾಗಿ ಕುಮಾರಸ್ವಾಮಿಗೆ ಹೊಡೆದನು. ॥೩೭-೩೮॥

ಆ ಶಕ್ತಿಯು ಬೆಂಕಿಯ ರಾಶಿಯಂತೆ ಉರಿಯುತ್ತಾ ಕುಮಾರಸ್ವಾಮಿಯ ಶರೀರಕ್ಕೆ ತಗುಲಿತು. ವಿಶೇಷಬಲಶಾಲಿಯಾದ ಸ್ವಾಮಿಯು ಆ ಶಕ್ತ್ಯಾಯುಧದ ಏಟಿನಿಂದ ಮೂರ್ಛಿತನಾದನು. ಭದ್ರಕಾಲಿಯು ಅವನನ್ನೆತ್ತಿಕೊಂಡು ಶಿವನ ಸಮೀಪಕ್ಕೆ ಬಂದಳು. ಶಿವನು ಅವನಿಗೆ ಜ್ಞಾನವನ್ನುಂಟುಮಾಡಿ ವಿಶೇಷ ಬಲವನ್ನು ಕೊಟ್ಟನು. ಪರಾಕ್ರಮಿಯಾದ ಕುಮಾರಸ್ವಾಮಿಯು ಎದ್ದುಕುಳಿತನು. ॥೩೯-೪೦-೪೧॥

ಸ್ಕಂದನು ಮಾಡುತ್ತಿದ್ದ ಯುದ್ಧವನ್ನು ಮುಂದುವರಿಸಲು ಭದ್ರಕಾಲೀದೇವಿಯು ಹೊರಟಳು. ನಂದೀಶ್ವರನೇ ಮೊದಲಾದ ಸಮಸ್ತಶೂರರೂ ಆಕೆಯನ್ನು

ಸರ್ವೇ ದೇವಾಶ್ಚ ಗಂಧರ್ವಾ ಯಕ್ಷರಾಕ್ಷಸಕಿನ್ನರಾಃ ।
ವಾದ್ಯಭಾಂಡಶ್ಚ ಬಹುಶಃ ಶತಶೋ ಮಧುವಾಹಕಾಃ ॥೪೩॥

ಸಾ ಚ ಗತ್ವಾಽಥ ಸಂಗ್ರಾಮಂ ಸಿಂಹನಾದಂ ಚಕಾರ ಚ ।
ಅಟ್ಟಾಟ್ಟಹಾಸಮಶಿವಂ ಚಕಾರ ಚ ಪುನಃ ಪುನಃ ।
ದೃಷ್ಟ್ವಾ ಪಪೌ ಚ ಮಾಧ್ವೀಕಂ ನನರ್ತ ರಣಮೂರ್ಧನಿ ॥೪೫॥

ಉಗ್ರದಂಷ್ಟ್ರಾ ಚೋಗ್ರದಂಡಾ ಕೋಟಿಕೀ ಚ ಪಪೌ ಮಧು ।
ಯೋಗಿನೀ ಡಾಕಿನೀನಾಂ ಚ ಗಣಾಃ ಸುರಗಣಾದಯಃ ॥೪೬॥

ದೃಷ್ಟ್ವಾ ಕಾಲೀಂ ಶಂಖಚೂಡಃ ಶೀಘ್ರಮಾಜೌ ಸಮಾಯಯೌ ।
ದಾನವಾಶ್ಚ ಭಯಂ ಪ್ರಾಪ್ತಾ ರಾಜಾ ತೇಭ್ಯೋಽಭಯಂ ದದೌ ॥೪೭॥

ಕಾಲೀ ಚಿಕ್ಷೇಪ ವಹ್ನಿಂ ಚ ಪ್ರಲಯಾಗ್ನಿಶಿಖೋಪಮಂ ।
ರಾಜಾ ನಿರ್ವಾಪಯಾಮಾಸ ಪಾರ್ಜನ್ಯೇನ ಚ ಲೀಲಯಾ ॥೪೮॥

---

ಅನುಸರಿಸಿದರು. ಸಮಸ್ತ ದೇವತೆಗಳೂ, ಗಂಧರ್ವರೂ, ಯಕ್ಷರೂ, ರಾಕ್ಷಸರೂ, ಕಿನ್ನರರೂ, ವಾದ್ಯಗಾರರ ಸಮುದಾಯವೂ ವೀರಪಾನವಾದ ಮಧುವನ್ನು ತರುವವರೂ ಕಾಲಿಯನ್ನನುಸರಿಸಿದರು. ||೪೨-೪೩||

ದೇವಿಯು ಯುದ್ಧರಂಗಕ್ಕೆ ಹೋಗಿ ಸಿಂಹನಾದವನ್ನು ಮಾಡಿದಳು. ಆ ಸಿಂಹನಾದದಿಂದ ದಾನವರು ಮೂರ್ಛೆಯನ್ನು ಹೊಂದಿದರು. ||೪೪||

ಭದ್ರಕಾಲಿಯು ಮತ್ತೆ ಮತ್ತೆ ಅಮಂಗಲಕರವಾಗುವಂತೆ ನಕ್ಕು ಯುದ್ಧ ರಂಗದಲ್ಲಿ ಮದ್ಯಪಾನಮಾಡಿ ಕುಣಿಯುತ್ತಿದ್ದಳು. ಉಗ್ರದಂಷ್ಟ್ರಾ ಎಂಬ ದೇವಿಯೂ ಉಗ್ರದಂಡಾದೇವಿಯೂ ಕೋಟಕಿಯೂ ಯೋಗಿನಿಗಳೂ ಡಾಕಿನೀಗಣಗಳೂ ದೇವಗಣಗಳೂ ವೀರಪಾನಮಾಡಿದರು. ||೪೫-೪೬||

ಶಂಖಚೂಡನು ಕಾಲಿಯನ್ನು ನೋಡಿ ಬೇಗನೆ ಯುದ್ಧಕ್ಕೆ ಬಂದನು. ಭಯವನ್ನು ಹೊಂದಿದ್ದ ದಾನವರಿಗೆ ಅಭಯವನ್ನು ಕೊಟ್ಟನು. ||೪೭||

ಕಾಲಿಯು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದಳು. ರಾಜನು ಪಾರ್ಜನ್ಯಾಸ್ತ್ರ ದಿಂದ ಅದನ್ನು ನಿವಾರಿಸಿದನು. ಆಕೆಯು ವಾರುಣಾಸ್ತ್ರವನ್ನು ಪ್ರಯೋಗಿಸಲು

ಚಿಕ್ಷೇಪ ವಾರುಣಂ ಸಾ ಚ ತೀವ್ರಂ ಚ ಮಹದದ್ಭುತಂ ।
ಗಾಂಧರ್ವೇಣ ಚ ಚಿಚ್ಛೇದ ದಾನವೇಂದ್ರಶ್ಚ ಲೀಲಯಾ ॥೪೯॥

ಮಾಹೇಶ್ವರಂಚ ಚಿಕ್ಷೇಪ ಕಾಲೇ ವಹ್ನಿಶಿಖೋಪಮಂ ।
ರಾಜಾ ಜಘಾನ ತಂ ಶೀಘ್ರಂ ವೈಷ್ಣವೇನ ಚ ಲೀಲಯಾ ॥೫೦॥

ನಾರಾಯಣಾಸ್ತ್ರಂ ಸಾ ದೇವೀ ಚಿಕ್ಷೇಪ ಮಂತ್ರಪೂರ್ವಕಂ ।
ರಾಜಾ ನನಾಮ ತದ್ದೃಷ್ಟ್ವಾ ಚಾವರುಹ್ಯ ರಥಾದಸೌ ॥೫೧॥

ಊರ್ಧ್ವಂ ಜಗಾಮ ತಚ್ಚಾಸ್ತ್ರಂ ಪ್ರಲಯಾಗ್ನಿಶಿಖೋಪಮಂ ।
ಪಪಾತ ಶಂಖಚೂಡಶ್ಚ ಭಕ್ತ್ಯಾ ತಂ ದಂಡವದ್ಭುವಿ ॥೫೨॥

ಬ್ರಹ್ಮಾಸ್ತ್ರಂ ಸಾ ಚ ಚಿಕ್ಷೇಪ ಯತ್ನತೋ ಮಂತ್ರಪೂರ್ವಕಂ ।
ಬ್ರಹ್ಮಾಸ್ತ್ರೇಣ ಮಹಾರಾಜೋ ನಿರ್ವಾಪಂ ಚ ಚಕಾರ ಸಃ ॥೫೩॥

ತದಾ ಚಿಕ್ಷೇಪ ದಿವ್ಯಾಸ್ತ್ರಂ ಸಾ ದೇವೀ ಮಂತ್ರಪೂರ್ವಕಂ ।
ರಾಜಾ ದಿವ್ಯಾಸ್ತ್ರಜಾಲೇನ ತನ್ನಿರ್ವಾಣಂ ಚಕಾರ ಚ ॥೫೪॥

ದೇವೀ ಚಿಕ್ಷೇಪ ಶಕ್ತಿಂ ಚ ಯತ್ನತೋ ಯೋಜನಾಯತಾಂ ।
ರಾಜಾ ದಿವ್ಯಾಸ್ತ್ರಜಾಲೇನ ಶತಖಂಡಾಂ ಚಕಾರ ಹ ॥೫೫॥

---

ಗಾಂಧರ್ವಾಸ್ತ್ರದಿಂದ ಅದನ್ನು ನಿವಾರಿಸಿದನು. ಮಹೇಶ್ವರಾಸ್ತ್ರವನ್ನು ಪ್ರಯೋಗಿಸುತ್ತಲೂ ಪರ್ಜನ್ಯಾಸ್ತ್ರದಿಂದ ನಿವಾರಿಸಿದನು. ||೪೮-೪೯-೫೦||

ದೇವಿಯು ಮಂತ್ರಪೂರ್ವಕವಾಗಿ ನಾರಾಯಣಾಸ್ತ್ರವನ್ನು ಪ್ರಯೋಗಿಸಿದಳು. ರಾಜನು ಅದನ್ನು ನೋಡಿ ರಥದಿಂದ ಇಳಿದು ಅದಕ್ಕೆ ನಮಸ್ಕಾರಮಾಡಿದನು. ಆ ಅಸ್ತ್ರವು ಪ್ರಲಯಕಾಲದ ಅಗ್ನಿಯಂತೆ ಉರಿಯುತ್ತಾ ಮೇಲಕ್ಕೆ ಹೋಯಿತು. ಶಂಖಚೂಡನು ಭೂಮಿಯಮೇಲೆ ಭಕ್ತಿಯಿಂದ ಸಾಷ್ಟಾಂಗನಮಸ್ಕಾರವನ್ನು ಮಾಡಿದನು. ||೫೧ ೫೨||

ದೇವಿಯು ಬಿಟ್ಟ ಬ್ರಹ್ಮಾಸ್ತ್ರವನ್ನು ಬ್ರಹ್ಮಾಸ್ತ್ರದಿಂದಲೂ ದಿವ್ಯಾಸ್ತ್ರವನ್ನು ದಿವ್ಯಾಸ್ತ್ರದಿಂದಲೂ ರಾಜನು ನಿವಾರಣೆಮಾಡಿದನು. ||೫೩-೫೪||

ದೇವಿಯು ಒಂದು ಗಾವುದ ಉದ್ದವಾದ ಶಕ್ತ್ಯಾಯುಧವನ್ನು ಪ್ರಯೋಗಿಸಲು ರಾಜನು ದಿವ್ಯಾಸ್ತ್ರಗಳಿಂದ ಅದನ್ನು ನೂರು ತುಂಡುಮಾಡಿದನು. ||೫೫||

ಜಗ್ರಾಹ ಮಂತ್ರಪೂತಂ ಚ ದೇವೀ ಪಾಶುಪತಂ ರುಷಾ
ನಿಕ್ಷೇಪಣಂ ನಿರೋದ್ಧುಂ ಚ ವಾಗ್ಬಭೂವಾಶರೀರಿಣೀ ॥೫೬॥

ಮೃತ್ಯುಃ ಪಾಶುಪತೇ ನಾಸ್ತಿ ನೃಪಸ್ಯ ಚ ಮಹಾತ್ಮನಃ ।
ಯಾವದಸ್ತಿ ಚ ಮಂತ್ರಸ್ಯ ಕವಚಂ ಚ ಹರೇರಿತಿ ॥೫೭॥

ಯಾವತ್ಸತೀತ್ವಮಸ್ತ್ಯೇವ ಸತ್ಯಾಶ್ಚ ನೃಪಯೋಷಿತಃ ।
ತಾವದಸ್ಯ ಜರಾ ಮೃತ್ಯುರ್ನಾಸ್ತೀತಿ ಬ್ರಹ್ಮಣೋ ವಚಃ ॥೫೮॥

ಇತ್ಯಾಕರ್ಣ್ಯ ಭದ್ರಕಾಲೀ ನ ತಚ್ಚಿಕ್ಷೇಪ ಶಸ್ತ್ರಕಂ ।
ಶತಲಕ್ಷಂ ದಾನವಾನಾಂ ಜಗ್ರಾಸ ಲೀಲಯಾ ಕ್ಷುಧಾ ॥೫೯॥

ಗ್ರಸ್ತುಂ ಜಗಾಮ ವೇಗೇನ ಶಂಖಚೂಡಂ ಭಯಂಕರೀ ।
ದಿವ್ಯಾಸ್ತ್ರೇಣ ಸುತೀಕ್ಷ್ಣೇನ ವಾರಯಾಮಾಸ ದಾನವಃ ॥೬೦॥

ಖಡ್ಗಂ ಚಿಕ್ಷೇಪ ಸಾ ದೇವೀ ಗ್ರೀಷ್ಮಸೂರ್ಯೋಪಮಂ ಯಥಾ ।
ದಿವ್ಯಾಸ್ತ್ರೇಣ ದಾನವೇಂದ್ರಃ ಶತಖಂಡಂ ಚಕಾರ ಸಃ ॥೬೧॥

---

ದೇವಿಯು ಕೋಪದಿಂದ ಮಂತ್ರದಿಂದ ಪರಿಶುದ್ಧವಾದ ಪಾಶುಪತಾಸ್ತ್ರವನ್ನು ಹಿಡಿದಳು. ಅದನ್ನು ತಡೆಯುವುದಕ್ಕಾಗಿ ಆಕಾಶವಾಣಿಯೊಂದು ಕೇಳಿಸಿತು. ॥೫೬॥

ಮಹಾತ್ಮನಾದ ಶಂಖಚೂಡನಲ್ಲಿ ಹರಿಯ ಮಂತ್ರದಿಂದ ಕೂಡಿದ ಕವಚವು ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೂ ಮತ್ತು ಅವನ ಹೆಂಡತಿಯಾದ ತುಲಸಿಯ ಪಾತಿವ್ರತ್ಯವು ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೂ ಇವನಿಗೆ ಮುಪ್ಪಾಗಲೀ ಮರಣವಾಗಲಿ ಇಲ್ಲ ಎಂದು ಬ್ರಹ್ಮನ ವರವಿರುವುದು. ಆದುದರಿಂದ ಈ ಪಾಶುಪತಾಸ್ತ್ರದಿಂದ ಅವನಿಗೆ ಮರಣವಿಲ್ಲ. ॥೫೭-೫೮॥

ಹೀಗೆಂಬ ಆಕಾಶವಾಣಿಯನ್ನು ಕೇಳಿ ಭದ್ರಕಾಲಿಯು ಪಾಶುಪತಾಸ್ತ್ರವನ್ನು ಬಿಡಲಿಲ್ಲ. ಹಸಿವಿನಿಂದ ನೂರುಲಕ್ಷ ದಾನವರನ್ನು ಸುಲಭವಾಗಿ ನುಂಗಿದಳು. ಆಮೇಲೆ ಶಂಖಚೂಡನನ್ನು ನುಂಗುವುದಕ್ಕೆ ವೇಗವಾಗಿ ಹೋದಳು. ದಾನವನು ಕ್ರೂರವಾದ ದಿವ್ಯಾಸ್ತ್ರಗಳಿಂದ ಅದನ್ನು ತಡೆದನು. ॥೫೯-೬೦॥

ದೇವಿಯು ಗ್ರೀಷ್ಮಕಾಲದ ಸೂರ್ಯನಂತೆ ತೀಕ್ಷ್ಣವಾದ ಖಡ್ಗಾಯುಧವನ್ನು ಪ್ರಯೋಗಿಸಿದಳು. ದಾನವೇಂದ್ರನು ದಿವ್ಯಾಸ್ತ್ರಗಳಿಂದ ಅದನ್ನು ನೂರು ತುಂಡಾಗಿ

ಪುನರ್ಗ್ರಸ್ತುಂ ಮಹಾದೇವೀ ವೇಗೇನ ಚ ಜಗಾಮ ತಂ ।
ಸರ್ವಸಿದ್ಧೇಶ್ವರಃ ಶ್ರೀಮಾನ್ವವೃಧೇ ದಾನವೇಶ್ವರಃ ॥೬೨॥

ವೇಗೇನ ಮುಷ್ಟಿನಾ ಕಾಲೀ ಕೋಪಯುಕ್ತಾ ಭಯಂಕರೀ ।
ಬಭಂಜ ಚ ರಥಂ ತಸ್ಯ ಜಘಾನ ಸಾರಥಿಂ ಸತೀ ॥೬೩॥

ಸಾ ಚ ಶೂಲಂ ಚ ಚಿಕ್ಷೇಪ ಪ್ರಲಯಾಗ್ನಿಶಿಖೋಪಮಂ ।
ವಾಮಹಸ್ತೇನ ಜಗ್ರಾಹ ಶಂಖಚೂಡಃ ಸ್ವಲೀಲಯಾ ॥೬೪॥

ಮುಷ್ಟ್ಯಾ ಜಘಾನ ತಂ ದೇವೀ ಮಹಾಕೋಪೇನ ವೇಗತಃ ।
ಬಭ್ರಾಮ ಚ ತಯಾ ದೈತ್ಯಃ ಕ್ಷಣಂ ಮೂರ್ಛಾಮವಾಪ ಚ ॥೬೫॥

ಕ್ಷಣೇನ ಚೇತನಾಂ ಪ್ರಾಪ್ಯ ಸಮುತ್ತಸ್ಥೌ ಪ್ರತಾಪವಾನ್ ।
ನ ಚಕಾರ ಬಾಹುಯುದ್ಧಂ ದೇವ್ಯಾ ಸಹ ನನಾಮ ತಾಂ ॥೬೬॥

ದೇವ್ಯಾಶ್ಚಾಸ್ತ್ರಂ ಸ ಚಿಚ್ಛೇದ ಜಗ್ರಾಹ ಚ ಸ್ವತೇಜಸಾ ।
ನಾಸ್ತ್ರಂ ಚಿಕ್ಷೇಪ ತಾಂ ಭಕ್ತ್ಯಾ ಮಾತೃಭಕ್ತ್ಯಾ ತು ವೈಷ್ಣವಃ ॥೬೭॥

---

ಮಾಡದನು. ಮತ್ತೆ ಅವನನ್ನು ನುಂಗಲು ವೇಗವಾಗಿ ಹೋದಳು. ಸಮಸ್ತ ಸಿದ್ಧಿಗಳಿಗೂ ಒಡೆಯನಾದ ಶಂಖಚೂಡನು ದೊಡ್ಡ ಶರೀರವಾಗಿ ಬೆಳೆದನು. ||೬೧-೬೨||

ಕೋಪದಿಂದ ಭಯಂಕರಳಾದ ಕಾಲಿಯು ವೇಗವಾದ ಮುಷ್ಟಿಯಿಂದ ಶಂಖಚೂಡನ ರಥವನ್ನು ಮುರಿದು ಸಾರಥಿಯನ್ನು ಕೊಂದು ಪ್ರಳಯಕಾಲದ ಅಗ್ನಿಯಂತೆ ಉರಿಯುತ್ತಾ ಇರುವ ಶೂಲಾಯುಧವನ್ನು ಪ್ರಯೋಗಿಸಿದಳು. ಶಂಖಚೂಡನು ಸುಲಭವಾಗಿ ಅದನ್ನು ಎಡಗೈಯಲ್ಲಿ ಹಿಡಿದನು. ಆ ದೇವಿಯು ಕೋಪದಿಂದ ಅವನನ್ನು ಮುಷ್ಟಿಯಿಂದ ಹೊಡೆದಳು. ಆ ಏಟಿನಿಂದ ದೈತ್ಯನು ತಲೆತಿರುಗಿ ಕ್ಷಣಕಾಲ ಮೂರ್ಛೆಹೋದನು. ||೬೩-೬೪-೬೫||

ಉತ್ತರಕ್ಷಣದಲ್ಲಿಯೇ ಎದ್ದು ದೇವಿಯೊಡನೆ ಬಾಹುಯುದ್ಧವನ್ನು ಮಾಡದೆ ಅವಳಿಗೆ ನಮಸ್ಕಾರಮಾಡಿದನು. ದೇವಿಯು ಪ್ರಕೃತಿದೇವಿಯ ಅಸ್ತ್ರವನ್ನು ಪ್ರಯೋಗಿಸಲು ಅಸ್ತ್ರವನ್ನು ತನ್ನ ತೇಜಸ್ಸಿನಿಂದಲೇ ಹಿಡಿದನು. ವೈಷ್ಣವನಾದುದರಿಂದ ಭದ್ರ

ಗೃಹೀತ್ವಾ ದಾನವಂ ದೇವೀ ಭ್ರಾಮಯಿತ್ವಾ ಪುನಃ ಪುನಃ ।
ಊರ್ಧ್ವಂ ಚ ಪ್ರಾಪಯಾಮಾಸ ಮಹಾವೇಗೇನ ಕೋಪಿತಾ ॥೬೮॥

ಊರ್ಧ್ವಾತ್ಪಪಾತ ವೇಗೇನ ಶಂಖಚೂಡಃ ಪ್ರತಾಪವಾನ್ ।
ನಿಪತ್ಯ ಚ ಸಮುತ್ತಸ್ಥೌ ಪ್ರಣಮ್ಯ ಭದ್ರಕಾಲಿಕಾಂ ॥೬೯॥

ರತ್ನೇಂದ್ರಸಾರನಿರ್ಮಾಣಂ ವಿಮಾನಂ ಸುಮನೋಹರಂ ।
ಆರುರೋಹ ಹರ್ಷಯುಕ್ತೋ ನ ವಿಶ್ರಾಂತೋ ಮಹಾರಣೇ ॥೭೦॥

ದಾನವಾನಾಂ ಚ ಕ್ಷತಜಂ ಸಾ ದೇವೀ ಚ ಪಪೌ ಕ್ಷುಧಾ ॥
ಪೀತ್ವಾ ಭುಕ್ತ್ವಾ ಭದ್ರಕಾಲೀ ಜಗಾಮ ಶಂಕರಾಂತಿಕಂ ॥೭೧॥

ಉವಾಚ ರಣವೃತ್ತಾಂತಂ ಪೌರ್ವಾಪರ್ಯಂ ಯಥಾಕ್ರಮಂ ।
ಶ್ರುತ್ವಾ ಜಹಾಸ ಶಂಭುಶ್ಚ ದಾನವಾನಾಂ ವಿನಾಶನಂ ॥೭೨॥

---

ಕಾಲಿಯನ್ನು ತಾಯಿಯೆಂದು ತಿಳಿದು ಮಾತೃಭಕ್ತಿಯಿಂದ ದೇವಿಯ ಮೇಲೆ ಅಸ್ತ್ರವನ್ನು ಪ್ರಯೋಗಿಸಲಿಲ್ಲ. ॥೬೬-೬೭॥

ಭದ್ರಕಾಲೀದೇವಿಯು ಶಂಖಚೂಡನನ್ನು ಹಿಡಿದುಕೊಂಡು ಕೋಪದಿಂದ ತಿರುಗಿಸಿ ವೇಗದಿಂದ ಎಸೆದಳು. ಪರಾಕ್ರಮಶಾಲಿಯಾದ ಶಂಖಚೂಡನು ಮೇಲಿನಿಂದ ಬಿದ್ದು ಭದ್ರಕಾಲಿಗೆ ನಮಸ್ಕರಿಸಿ ಎದ್ದು ನಿಂತನು. ॥೬೮-೬೯॥

ಆಮೇಲೆ ಶ್ರೇಷ್ಠವಾದ ರತ್ನಗಳಿಂದ ಮಾಡಿದ ಮನೋಹರವಾದ ವಿಮಾನವನ್ನೇರಿ ಶಂಖಚೂಡನು ಸಂತೋಷದಿಂದ ಆ ಯುದ್ಧದಲ್ಲಿ ವಿಶ್ರಾಂತಿಯಿಲ್ಲದವನಾಗಿದ್ದನು. ॥೭೦॥

ಆ ದೇವಿಯು ಹಸಿವಿನಿಂದ ದಾನವರ ರಕ್ತವನ್ನು ಪಾನಮಾಡಿದಳು. ಯುದ್ಧದಲ್ಲಿ ಭದ್ರಕಾಲಿಯು ಮಧುಪಾನಮಾಡಿ ಸೇನೆಯನ್ನು ನುಂಗಿ ಶಿವನ ಸಮೀಪಕ್ಕೆ ಹೋದಳು. ಹಿಂದಿನ ಮುಂದಿನ ಯುದ್ಧವೃತ್ತಾಂತವನ್ನೆಲ್ಲವನ್ನೂ ಕ್ರಮವಾಗಿ ಶಿವನಿಗೆ ಹೇಳಿದಳು. ಶಿವನು ದಾನವರ ನಾಶವನ್ನು ಕೇಳಿ ನಗುತ್ತಿದ್ದನು. ॥೭೧-೭೨॥

ಲಕ್ಷಂ ಚ ದಾನವೇಂದ್ರಾಣಾಮವಶಿಷ್ಟಂ ರಣೇಽಧುನಾ ।
ಭುಂಜಂತ್ಯಾ ನಿರ್ಗತಂ ವಕ್ತ್ರಾತ್ತದನ್ಯಂ ಭುಕ್ತಮೀಶ್ವರ ॥೭೩॥

ಸಂಗ್ರಾಮೇ ದಾನವೇಂದ್ರಂ ಚ ಹಂತುಂ ಪಾಶುಪತೇನ ವೈ ।
ಅವಧ್ಯಸ್ತವ ರಾಜೇತಿ ವಾಗ್ಬಭೂವಾಶರೀರಿಣೀ ॥೭೪॥

ರಾಜೇಂದ್ರಶ್ಚ ಮಹಾಜ್ಞಾನೀ ಮಹಾಬಲಪರಾಕ್ರಮಃ ।
ನ ಚ ಚಿಕ್ಷೇಪ ಮಯ್ಯಸ್ತ್ರಂ ಚಿಚ್ಛೇದ ಮಮ ಸಾಯಕಂ ॥೭೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ದ್ವಾವಿಂಶೋಽಧ್ಯಾಯಃ

---

ಶಿವನೇ ಕೇಳು, ಯುದ್ಧದಲ್ಲಿ ನಾನು ರಾಕ್ಷಸರನ್ನು ತಿನ್ನುತ್ತಿರುವಾಗ ನನ್ನ ಬಾಯಿಯಿಂದ ಬಿದ್ದ ಒಂದುಲಕ್ಷದಾನವರು ಉಳಿದಿರುವರು. ಮಿಕ್ಕವರನ್ನೆಲ್ಲರನ್ನೂ ತಿಂದುಬಿಟ್ಟೆನು. ॥೭೩॥

ಯುದ್ಧದಲ್ಲಿ ಶಂಖಚೂಡನನ್ನು ಕೊಲ್ಲಲು ಪಾಶುಪತಾಸ್ತ್ರವನ್ನು ಪ್ರಯೋಗಿಸ ಬೇಕೆಂದಿರಲು ಇವನು ನಿನ್ನಿಂದ ಅವಧ್ಯನೆಂದು ಆಕಾಶವಾಣಿಯು ಆಯಿತು! ॥೭೪॥

ಆ ಶಂಖಚೂಡನು ಮಹಾಜ್ಞಾನಿಯಾದವನು. ವಿಶೇಷ ಬಲಪರಾಕ್ರಮ ವುಳ್ಳವನು. ನಾನು ಬಿಟ್ಟ ಬಾಣಗಳನ್ನೆಲ್ಲವನ್ನೂ ಕತ್ತರಿಸಿದನು. ನನಗೆ ಬಾಣ ಪ್ರಯೋಗವನ್ನು ಮಾಡಲಿಲ್ಲ. ॥೭೫॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

## || ತ್ರಯೋವಿಂಶೋಽಧ್ಯಾಯಃ ||

### ಇಪ್ಪತ್ತುಮೂರನೆಯ ಅಧ್ಯಾಯವು

|| ಶ್ರೀನಾರಾಯಣ ಉವಾಚ ||

ಶಿವಸ್ತತ್ತ್ವಂ ಸಮಾಕರ್ಣ್ಯ ತತ್ತ್ವಜ್ಞಾನವಿಶಾರದಃ ।
ಯಯೌ ಸ್ವಯಂ ಚ ಸಮರೇ ಸ್ವಗಣೈಸ್ಸಹ ನಾರದ ||೧||

ಶಂಖಚೂಡಃ ಶಿವಂ ದೃಷ್ಟ್ವಾ ವಿಮಾನಾದವರುಹ್ಯ ಚ ।
ನನಾಮ ಪರಯಾ ಭಕ್ತ್ಯಾ ಶಿರಸಾ ದಂಡವದ್ಭುವಿ ||೨||

ತಂ ಪ್ರಣಮ್ಯ ಚ ವೇಗೇನ ವಿಮಾನಮಾರುರೋಹ ಸಃ ।
ತೂರ್ಣಂ ಚಕಾರ ಸನ್ನಾಹಂ ಧನುರ್ಜಗ್ರಾಹ ದುರ್ವಹಂ ||೩||

ಶಿವದಾನವಯೋರ್ಯುದ್ಧಂ ಪೂರ್ಣಮಬ್ದಶತಂ ಪುರಾ ।
ನ ಬಭೂವತುರನ್ಯೋನ್ಯಂ ಬ್ರಹ್ಮನ್ ಜಯಪರಾಜಯೌ ||೪||

---

ತತ್ತ್ವವನ್ನು ಚನ್ನಾಗಿ ಬಲ್ಲ ಶಿವನು ಯುದ್ಧವೃತ್ತಾಂತರೂಪವಾದ ತತ್ತ್ವವನ್ನು ಕೇಳಿ ತನ್ನ ಗಣಗಳೊಡನೆ ತಾನೇ ಯುದ್ಧಕ್ಕೆ ಹೋದನು. ||೧||

ಶಂಖಚೂಡನು ಶಿವನನ್ನು ಕಂಡು ವಿಮಾನದಿಂದ ಇಳಿದು ಬಹಳ ಭಕ್ತಿಯಿಂದ ಭೂಮಿಯ ಮೇಲೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಒಡನೆಯೇ ವಿಮಾನವನ್ನೇರಿ ಬೇಗನೆ ಯುದ್ಧಕ್ಕೆ ಸಿದ್ಧನಾಗಿ ಬಲವಾದ ಬಿಲ್ಲನ್ನು ಹಿಡಿದುಕೊಂಡನು. ||೨-೩||

ಆ ಶಿವದಾನವರ ಯುದ್ಧ ಒಂದುನೂರು ವರ್ಷಗಳವರೆಗೆ ನಡೆದರೂ ಯಾರಿಗೂ ಜಯವಾಗಲೀ ಸೋಲಾಗಲೀ ಆಗಲಿಲ್ಲ. ||೪||

ನ್ಯಸ್ತಶಸ್ತ್ರಶ್ಚ ಭಗವಾನ್ ನ್ಯಸ್ತಶಸ್ತ್ರಶ್ಚ ದಾನವಃ ।
ರಥಸ್ಥಃ ಶಂಖಚೂಡಶ್ಚ ವೃಷಸ್ಥೋ ವೃಷಭಧ್ವಜಃ ॥೫॥

ದಾನವಾನಾಂ ಚ ಶತಕಮುದ್ಧೃತಂ ಚ ಬಭೂವ ಹ ।
ರಣೇ ಯೇ ಯೇ ಮೃತಾಃ ಶಂಭುರ್ಜೀವಯಾಮಾಸ ತಾನ್ವಿಭುಃ॥೬॥

ಏತಸ್ಮಿನ್ನಂತರೇ ವೃದ್ಧಬ್ರಾಹ್ಮಣಃ ಪರಮಾತುರಃ ।
ಆಗತ್ಯ ಚ ರಣಸ್ಥಾನಮುವಾಚ ದಾನವೇಶ್ವರಂ ॥೭॥

॥ ವೃದ್ಧಬ್ರಾಹ್ಮಣ ಉವಾಚ ॥

ದೇಹಿ ಭಿಕ್ಷಾಂ ಚ ರಾಜೇಂದ್ರ ಮಹ್ಯಂ ವಿಪ್ರಾಯ ಸಾಂಪ್ರತಂ ।
ತ್ವಂ ಸರ್ವಸಂಪದಾಂ ದಾತಾ ಯನ್ಮೇ ಮನಸಿ ವಾಂಛಿತಂ ॥೮॥

ನಿರೀಹಾಯ ಚ ವೃದ್ಧಾಯ ತೃಷಿತಾಯ ಚ ಸಾಂಪ್ರತಂ ।
ಪಶ್ಚಾತ್ತ್ವಾಂ ಕಥಯಿಷ್ಯಾಮಿ ಪುರಃ ಸತ್ಯಂ ಚ ಕುರ್ವಿತಿ ॥೯॥

---

ಶಿವನೂ ಆಯುಧವನ್ನು ಬಿಟ್ಟು ಎತ್ತಿನ ಮೇಲೆ ಕುಳಿತಿದ್ದನು. ಶಂಖಚೂಡನು ಆಯುಧವನ್ನು ಬಿಟ್ಟು ರಥದ ಮೇಲೆ ಕುಳಿತಿದ್ದನು. ಯುದ್ಧದಲ್ಲಿ ಅನೇಕದಾನವರು ನಾಶವಾದರು. ತನ್ನ ಕಡೆ ಯುದ್ಧದಲ್ಲಿ ಸತ್ತವರನ್ನೆಲ್ಲರನ್ನೂ ಶಿವನು ಬದುಕಿಸಿದನು. ||೫-೬||

ಈ ಸಮಯದಲ್ಲಿ ಮುದುಕನಾದ ಬ್ರಾಹ್ಮಣನೊಬ್ಬನು ಆತುರದಿಂದ ಯುದ್ಧ ರಂಗಕ್ಕೆ ಬಂದು ಶಂಖಚೂಡನನ್ನು ಕುರಿತು ಹೇಳಿದನು. ||೭||

ಮುದುಕಬ್ರಾಹ್ಮಣನು ಹೇಳಿದನು—ಎಲೈ ರಾಜೇಂದ್ರನೇ, ಬ್ರಾಹ್ಮಣನೂ ಮುದುಕನೂ ಆಸೆಯಿಲ್ಲದವನೂ ಹಸಿವಿನಿಂದ ಕೂಡಿದವನೂ ಆದ ನನಗೆ ಈಗ ಭಿಕ್ಷೆಯನ್ನು ಕೊಡು. ನನ್ನ ಮನಸ್ಸಿನಲ್ಲಿ ಅಪೇಕ್ಷಿಸುವ ಸಕಲಸಂಪತ್ತುಗಳನ್ನೂ ನೀನು ಕೊಡಬಲ್ಲವನಾಗಿರುವೆ. ಮೊದಲು ಕೊಡುತ್ತೇನೆಂದು ಮಾತುಕೊಡು. ಆಮೇಲೆ ನನ್ನ ಇಷ್ಟವನ್ನು ಹೇಳುವೆನು ಎಂದನು. ||೮-೯||

ಓಮಿತ್ಯುವಾಚ ರಾಜೇಂದ್ರಃ ಪ್ರಸನ್ನವದನೇಕ್ಷಣಃ ।
ಕವಚಾರ್ಥೀ ಜನಶ್ಚಾಹ ಮಿತ್ಯುವಾಚಾತಿಮಾಯಯಾ ॥೧೦॥

ತಚ್ಛ್ರುತ್ವಾ ಕವಚಂ ದಿವ್ಯಂ ಜಗ್ರಾಹ ಹರಿರೇವ ಚ ।
ಶಂಖಚೂಡಸ್ಯ ರೂಪೇಣ ಜಗಾಮ ತುಲಸೀಂ ಪ್ರತಿ ॥೧೧॥

ಗತ್ವಾ ತಸ್ಯಾಂ ಮಾಯಯಾ ಚ ವೀರ್ಯಾಧಾನಂ ಚಕಾರ ಚ ।
ಅಥ ಶಂಭುರ್ಹರೇಃ ಶೂಲಂ ಜಗ್ರಾಹ ದಾನವಂ ಪ್ರತಿ ॥೧೨॥

ಗ್ರೀಷ್ಮಮಧ್ಯಾಹ್ನ-ಮಾರ್ತಾಂಡ ಪ್ರಲಯಾಗ್ನಿಶಿಖೋಪಮಂ ।
ದುರ್ನಿವಾರ್ಯಂ ಚ ದುರ್ಧರ್ಷಮವ್ಯರ್ಥಂ ವೈರಿಘಾತಕಂ ॥೧೩॥

ತೇಜಸಾಂ ಚಕ್ರತುಲ್ಯಂ ಚ ಸರ್ವಶಸ್ತ್ರಾಸ್ತ್ರಸಾರಕಂ ।
ಶಿವಕೇಶವಯೋರನ್ಯದುರ್ವಹಂ ಚ ಭಯಂಕರಂ ॥೧೪॥

---

ರಾಜನು ಸಂತೋಷವಾದ ಮುಖಭಾವದಿಂದ ಕೊಡುತ್ತೇನೆಂದು ಮಾತು ಕೊಟ್ಟನು. ಬ್ರಾಹ್ಮಣನು ಮಾಯೆಯಿಂದ ನನಗೆ ಕವಚವು ಬೇಕು ಎಂದನು. (ಕವಚವನ್ನು) ಭುಜಪತ್ರೆಯಲ್ಲಿ ಬರೆದು ಚಿನ್ನದ ಭರಣಿಯಲ್ಲಿ ಹಾಕಿ ಕುತ್ತಿಗೆಯಲ್ಲಿ ಕಟ್ಟಿಕೊಂಡಿದ್ದನು. ॥೧೦॥

ಬ್ರಾಹ್ಮಣರೂಪನಾದ ಹರಿಯು ರಾಜನು ಮಾತುಕೊಟ್ಟದ್ದನ್ನು ಕೇಳಿ ದಿವ್ಯವಾದ ಕೃಷ್ಣಕವಚವನ್ನು ತೆಗೆದುಕೊಂಡು ಶಂಖಚೂಡನ ರೂಪದಿಂದ ತುಲಸಿಯ ಸಮೀಪಕ್ಕೆ ಹೋದನು. ॥೧೧॥

ಹರಿಯು ಮಾಯೆಯಿಂದ ತುಲಸಿಯ ಸಮೀಪಕ್ಕೆ ಹೋಗಿ ಅವಳ ಸಂಗವನ್ನು ಮಾಡಿದನು. ಬಳಿಕ ಶಿವನು ಶಂಖಚೂಡನನ್ನು ಸಂಹರಿಸುವುದಕ್ಕಾಗಿ ಹರಿಯು ಕೊಟ್ಟಿದ್ದ ಶೂಲಾಯುಧವನ್ನು ಹಿಡಿದುಕೊಂಡನು. ಆ ಶೂಲವು ಗ್ರೀಷ್ಮ ಋತುವಿನ ಮಧ್ಯಾಹ್ನಸೂರ್ಯನ ತಾಪ ಉಳ್ಳದಾಗಿಯೂ ಪ್ರಳಯಕಾಲದ ಬೆಂಕಿಯ ಉರಿಗೆ ಸಮಾನವಾಗಿದ್ದು ತಡೆಯುವುದಕ್ಕೂ ಅಸಾಧ್ಯವಾಗಿಯೂ ವ್ಯರ್ಥವಾಗದೆ ಶತ್ರುವನ್ನು ಸಂಹರಿಸುವುದಾಗಿಯೂ ಇದ್ದಿತು. ॥೧೨-೧೩॥

ಆ ಶೂಲಾಯುಧವು ಚಕ್ರಾಯುಧಕ್ಕೆ ಸಮಾನವಾದ ತೇಜಸ್ಸುಳ್ಳುದಾಗಿಯೂ, ಸಮಸ್ತ ಶಸ್ತ್ರಾಸ್ತ್ರಗಳ ಬಲವುಳ್ಳುದಾಗಿಯೂ ಹರಿಹರರಿಬ್ಬರು ಹೊರತಾಗಿ

ಧನುಃ ಸಹಸ್ರಂ ದೈರ್ಘ್ಯೇಣ ಪ್ರಸ್ಥೇನ ಶತಹಸ್ತಕಂ ।
ಸಜೀವಂ ಬ್ರಹ್ಮರೂಪಂ ಚ ನಿತ್ಯರೂಪಮನಿರ್ದಿಶಂ ॥೧೫॥

ಸಂಹರ್ತುಂ ಸರ್ವಬ್ರಹ್ಮಾಂಡಮಲಂ ಯತ್ಸ್ತ್ರೀಯ ಲೀಲಯಾ ।
ಚಿಕ್ಷೇಪ ತೋಲನಂ ಕೃತ್ವಾ ಶಂಖಚೂಡೇ ಚ ನಾರದ ॥೧೬॥

ರಾಜಾ ಚಾಪಂ ಪರಿತ್ಯಜ್ಯ ಶ್ರೀಕೃಷ್ಣಚರಣಾಂಬುಜಂ ।
ಧ್ಯಾನೇ ಚಕಾರ ಭಕ್ತ್ಯಾ ಚ ಕೃತ್ವಾ ಯೋಗಾಸನಂ ಧಿಯಾ ॥೧೭॥

ಶೂಲಂ ಚ ಭ್ರಮಣಂ ಕೃತ್ವಾ ಪಪಾತ ದಾನವೋಪರಿ ।
ಚಕಾರ ಭಸ್ಮಸಾತ್ತಂ ಚ ಸರಥಂ ಚಾಥ ಲೀಲಯಾ ॥೧೮॥

ರಾಜಾ ಧೃತ್ವಾ ದಿವ್ಯರೂಪಂ ಕಿಶೋರಂ ಗೋಪವೇಷಕಂ ।
ದ್ವಿಭುಜಂ ಮುರಲೀಹಸ್ತಂ ರತ್ನಭೂಷಣಭೂಷಿತಂ ॥೧೯॥

ರತ್ನೇಂದ್ರಸಾರನಿರ್ಮಾಣಂ ವೇಷ್ಟಿತಂ ಗೋಪಕೋಟಿಭಿಃ ।
ಗೋಲೋಕಾದಾಗತಂ ಯಾನಮಾರುರೋಹ ಪುರಂ ಯಯೌ॥೨೦॥

---

ಇತರರು ಧರಿಸಲಾಗದುದಾಗಿಯೂ ಭಯಂಕರವಾಗಿಯೂ ಇದ್ದಿತು. ಅದು ಸಾವಿರ ಧನುಸ್ಸಿನ ಉದ್ದವಾದುದು. ನೂರು ಮೊಳ ಅಗಲವಾದುದು. ಸಚೇತನವಾಗಿ ಬ್ರಹ್ಮಸ್ವರೂಪವಾದುದು. ಶಾಶ್ವತವಾದುದು. ಅದು ಆಯಾಸವಿಲ್ಲದೆ ಆಟದಿಂದಲೇ ಸಮಸ್ತ ಬ್ರಹ್ಮಾಂಡಗಳನ್ನೂ ನಾಶಮಾಡಲು ಸಮರ್ಥವಾದುದು. ಇಂತಹ ಶೂಲಾಯುಧವನ್ನು ಶಿವನು ತಿರುಗಿಸಿ ಶಂಖಚೂಡನ ಮೇಲೆ ಎಸೆದನು. ||೧೪-೧೫-೧೬||

*ಶಂಖಚೂಡನು* ಬಿಲ್ಲನ್ನು ಬಿಟ್ಟು ಭಕ್ತಿಯಿಂದ ಶ್ರೀಕೃಷ್ಣನ ಪಾದಕಮಲವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಯೋಗಾಸನದಲ್ಲಿ ಕುಳಿತನು. ಶೂಲವು ತಿರುಗುತ್ತಾ ಬಂದು ಅವನ ಮೇಲೆ ಬಿದ್ದಿತು. ರಥಸಹಿತನಾದ ಅವನನ್ನು ಸುಲಭವಾಗಿ ಬೂದಿಮಾಡಿಬಿಟ್ಟಿತು. ||೧೭-೧೮||

ಶಂಖಚೂಡನು ದಿವ್ಯವಾದ ಗೋಪವೇಷವನ್ನು ಧರಿಸಿ ಚಿಕ್ಕ ವಯಸ್ಸಿನವನೂ ಎರಡು ತೋಳು ಉಳ್ಳವನೂ ಕೈಯಲ್ಲಿ ಕೊಳಲೂ ರತ್ನದ ಆಭರಣಗಳೂ ಉಳ್ಳವನಾಗಿ ಶ್ರೇಷ್ಠವಾದ ರತ್ನಗಳಿಂದ ಮಾಡಿದ ಅನೇಕ ಗೋಪರಿಂದ ಕೂಡಿದ ಗೋಲೋಕದಿಂದ ಬಂದ ವಿಮಾನವನ್ನೇರಿ ಗೋಲೋಕಕ್ಕೆ ಹೋದನು. ||೧೯-೨೦||

ಗತ್ವಾ ನನಾಮ ಶಿರಸಾ ಸ ರಾಧಾಕೃಷ್ಣಯೋರ್ಮುನೇ ।
ಭಕ್ತ್ಯಾ ಚ ಚರಣಾಂಭೋಜಂ ರಾಸೇ ವೃಂದಾವನೇ ವನೇ ॥೨೧॥

ಸುದಾಮಾನಂ ಚ ತೌ ದೃಷ್ಟ್ವಾ ಪ್ರಸನ್ನವದನೇಕ್ಷಣೌ ।
ಕ್ರೋಡೇ ಚಕ್ರತುರತ್ಯಂತಂ ಪ್ರೇಮ್ಣಾತಿಪರಿಸಂಯುತೌ ॥೨೨॥

ಅಥ ಶೂಲಂ ಚ ವೇಗೇನ ಪ್ರಯಯೌ ತಂ ಚ ಸಾದರಂ ।
ಅಸ್ಥಿಭಿಃ ಶಂಖಚೂಡಸ್ಯ ಶಂಖಜಾತಿರ್ಬಭೂವ ಹ ॥೨೩॥

ನಾನಾಪ್ರಕಾರರೂಪೇಣ ಶಶ್ವತ್ಪೂತಾ ಸುರಾರ್ಚನೇ ।
ಪ್ರಶಸ್ತಂ ಶಂಖತೋಯಂ ಚ ದೇವಾನಾಂ ಪ್ರೀತಿದಂ ಪರಂ ॥೨೪॥

ತೀರ್ಥತೋಯಸ್ವರೂಪಂ ಚ ಪವಿತ್ರಂ ಶಂಭುನಾ ವಿನಾ ।
ಶಂಖಶಬ್ದೋ ಭವೇದ್ಯತ್ರ ತತ್ರ ಲಕ್ಷ್ಮೀಃ ಸುಸಂಸ್ಥಿರಾ ॥೨೫॥

ಸ ಸ್ನಾತಃ ಸರ್ವತೀರ್ಥೇಷು ಯಃ ಸ್ನಾತಃ ಶಂಖವಾರಿಣಾ ।
ಶಂಖೋ ಹರೇರಧಿಷ್ಠಾನಂ ಯತ್ರ ಶಂಖಸ್ತತೋ ಹರಿಃ ॥೨೬॥
ತತ್ರೈವ ವಸತೇ ಲಕ್ಷ್ಮೀಃ ದೂರೀಭೂತಮಮಂಗಲಂ ।

---

ನಾರದನೇ, ಕೇಳು ಸುದಾಮನು ವೃಂದಾವನವೆಂಬ ವನದಲ್ಲಿ ರಾಸಮಂಡಲದಲ್ಲಿರುವ ರಾಧಾಕೃಷ್ಣರಿಗೆ ಭಕ್ತಿಯಿಂದ ನಮಸ್ಕಾರಮಾಡಿದನು. ರಾಧಾಕೃಷ್ಣರು ಅವನನ್ನು ನೋಡಿ ಪ್ರಸನ್ನಮುಖಭಾವದಿಂದ ಕೂಡಿ ವಿಶೇಷವಾದ ಪ್ರೀತಿಯಿಂದ ಅವನನ್ನು ತಬ್ಬಿಕೊಂಡರು. ॥೨೧-೨೨॥

ಆಮೇಲೆ ಶೂಲಾಯುಧವು ವೇಗವಾಗಿ ಕೃಷ್ಣನ ಸಮೀಪಕ್ಕೆ ಹೋಯಿತು. ಶಂಖಚೂಡನ ಮೂಳೆಗಳಿಂದ ಶಂಖಜಾತಿಗಳುತ್ಪನ್ನವಾದುವು. ॥೨೩॥

ಶಂಖಗಳು ಬಗೆಬಗೆಯ ರೂಪಗಳಿಂದ ಇರುವುವು. ದೇವರಪೂಜೆಗೆ ಶುದ್ಧವಾದ ವಸ್ತುವಾಗಿರುವುವು. ಶಂಖದ ನೀರು ಶಿವನ ಹೊರತು ಇತರ ದೇವತೆಗಳಿಗೆ ಸಂತೋಷವನ್ನುಂಟುಮಾಡುವುದು. ಇದು ಪರಿಶುದ್ಧವಾದ ಕ್ಷೇತ್ರದ ಜಲದಂತೆ ಪವಿತ್ರವಾದುದು. ॥೨೪॥

ಎಲ್ಲಿ ಶಂಖದ ಧ್ವನಿಯಾಗುವುದೋ ಅಲ್ಲಿ ಸಂಪತ್ತು ಸ್ಥಿರವಾಗಿರುವುದು. ಶಂಖದ ನೀರಿನಿಂದ ಸ್ನಾನಮಾಡಿದರೆ ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡಿದ ಫಲವು ಬರುವುದು. ಶಂಖವು ಹರಿಗೆ ಆಶ್ರಯಸ್ಥಾನವಾದುದರಿಂದ ಎಲ್ಲಿ ಶಂಖವಿರು

ಸ್ತ್ರೀಣಾಂ ಚ ಶಂಖಧ್ವನಿಭಿಃ ಶೂದ್ರಾಣಾಂ ಚ ವಿಶೇಷತಃ ॥೨೭॥

ಭೀತಾ ರುಷ್ಟಾ ಯ್ಯಾತಿ ಲಕ್ಷ್ಮೀಸ್ತತ್ಸ್ಥಲಾದನ್ಯದೇಶತಃ ।
ಶಿವೋಽಪಿ ದಾನವಂ ಹತ್ವಾ ಶಿವಲೋಕಂ ಜಗಾಮ ಹ ॥೨೮॥

ಪ್ರಹೃಷ್ಟೋ ವೃಷಭಾರೂಢಃ ಸ್ವಗಣೈಶ್ಚ ಸಮಾವೃತಃ ।
ಸುರಾಃ ಸ್ವವಿಷಯಂ ಪ್ರಾಪುಃ ಪರಮಾನಂದಸಂಯುತಾಃ ॥೨೯॥

ನೇದುಃ ದುಂದುಭಯಃ ಸ್ವರ್ಗೇ ಜಗುರ್ಗಂಧರ್ವಕಿನ್ನರಾಃ ।
ಬಭೂವ ಪುಷ್ಪವೃಷ್ಟಿಶ್ಚ ಶಿವಸ್ಯೋಪರಿ ಸಂತತಂ ॥೩೦॥
ಪ್ರಶಶಂಸುಃ ಸುರಾಸ್ತಂ ಚ ಮುನೀಂದ್ರಪ್ರವರಾದಯಃ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ತ್ರಯೋವಿಂಶೋಽಧ್ಯಾಯಃ

---

ವುದೋ ಅಲ್ಲಿ ಹರಿಯು ಇರುವನು. ಅಲ್ಲಿಯೇ ಲಕ್ಷ್ಮಿಯು ವಾಸಮಾಡುವಳು. ಅಮಂಗಲಗಳು ದೂರವಾಗುವುವು. ॥೨೫-೨೬॥

ಸ್ತ್ರೀಯರೂ ಶೂದ್ರರೂ ಶಂಖಧ್ವನಿಯನ್ನು ಮಾಡಿದರೆ ಲಕ್ಷ್ಮಿಯು ಭಯಪಟ್ಟು ಕೋಪದಿಂದ ಆ ಸ್ಥಲವನ್ನು ಬಿಟ್ಟು ಬೇರೇ ಕಡೆಗೆ ಹೋಗುವಳು. ಆದುದರಿಂದ ಅವರು ಅದನ್ನು ಮುಟ್ಟಬಾರದು. ॥೨೭॥

ಶಿವನು ಶಂಖಚೂಡನನ್ನು ಸಂಹರಿಸಿ ಸಂತೋಷದಿಂದ ನಂದಿಯನ್ನೇರಿ ತನ್ನ ಗಣಗಳೊಡನೆ ಕೈಲಾಸಕ್ಕೆ ಹೋದನು. ದೇವತೆಗಳೆಲ್ಲರೂ ಬಹಳ ಸಂತೋಷದಿಂದ ತಂತಮ್ಮ ಸ್ಥಾನಗಳಿಗೆ ಹೋದರು. ॥೨೮-೨೯॥

ಸ್ವರ್ಗದಲ್ಲಿ ದೇವತೆಗಳ ನಗಾರಿ ಮುಂತಾದ ವಾದ್ಯಗಳ ಧ್ವನಿಗಳಾದುವು. ಗಂಧರ್ವರೂ ಗಾನಮಾಡಿದರು. ಶಿವನ ಮೇಲೆ, ಬಿಡದೆ ಹೂಮಳೆಗರೆಯಿತು. ಆ ಶಿವನನ್ನು ದೇವತೆಗಳೂ ಮುನಿಶ್ರೇಷ್ಠರೇ ಮೊದಲಾದವರೂ ಹೊಗಳಿದರು. ॥೩೦॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಚತುರ್ವಿಂಶೋಽಧ್ಯಾಯಃ ॥

### ಇಪ್ಪತ್ತುನಾಲ್ಕನೆಯ ಅಧ್ಯಾಯವು

॥ ನಾರದ ಉವಾಚ ॥

**ನಾರಾಯಣಶ್ಚ ಭಗವಾನ್ ವೀರ್ಯಾಧಾನಂ ಚಕಾರ ಹ ।**
**ತುಲಸ್ಯಾಂ ಕೇನ ರೂಪೇಣ ತನ್ಮೇ ವ್ಯಾಖ್ಯಾತುಮರ್ಹಸಿ ॥೧॥**

॥ ಶ್ರೀ ನಾರಾಯಣ ಉವಾಚ ॥

**ನಾರಾಯಣಶ್ಚ ಭಗವಾನ್ ದೇವಾನಾಂ ಸಾಧನೇಷು ಚ ।**
**ಶಂಖಚೂಡಸ್ಯ ಕವಚಂ ಗೃಹೀತ್ವಾ ವಿಷ್ಣುಮಾಯಯಾ ॥೨॥**

**ಪುನರ್ವಿಧಾಯ ತದ್ರೂಪಂ ಜಗಾಮ ತತ್ಸತೀಗೃಹಂ ।**
**ಪಾತಿವ್ರತ್ಯಸ್ಯ ನಾಶೇನ ಶಂಖಚೂಡಜಿಘಾಂಸಯಾ ॥೩॥**

---

ನಾರದನು ಹೇಳಿದನು—ಮಹಾಮಹಿಮನಾದ ನಾರಾಯಣನು ಯಾವ ರೂಪದಿಂದ ತುಲಸಿಯ ಸಂಗವನ್ನು ಮಾಡಿದನು. ಅದನ್ನು ವಿಸ್ತರಿಸಿ ಹೇಳು ಎಂದು ನಾರದನು ಕೇಳಿದನು. ॥೧॥

ನಾರಾಯಣನು ಹೇಳಿದನು—ಮಹಾಮಹಿಮೆಯುಳ್ಳ ನಾರಾಯಣನು ದೇವತೆಗಳ ಕಾರ್ಯಸಿದ್ಧಿಗಾಗಿ ಶಂಖಚೂಡನಲ್ಲಿದ್ದ ಕೃಷ್ಣಕವಚವನ್ನು ಮಾಯೆಯಿಂದ ಅಪಹರಿಸಿ ಪುನಃ ಶಂಖಚೂಡನ ರೂಪವನ್ನು ಹೊಂದಿ ಅವನ ಹೆಂಡತಿಯ ಪಾತಿವ್ರತ್ಯಧರ್ಮನಾಶದಿಂದ ಶಂಖಚೂಡನನ್ನು ಕೊಲ್ಲಿಸಬೇಕೆಂಬ ಅಪೇಕ್ಷೆಯಿಂದ ಆ ದೈತ್ಯನ ಹೆಂಡತಿಯಾದ ತುಲಸಿಯ ಮನೆಗೆ ಹೋದನು. ॥೨-೩॥

ದುಂದುಭಿಂ ನಾದಯಾಮಾಸ ತುಲಸೀ-ದ್ವಾರಸನ್ನಿಧೌ ।
ಜಯಶಬ್ದಂ ಚ ತದ್ವಾರೇ ಬೋಧಯಾಮಾಸ ಸುಂದರೀಂ ॥೪॥

ತಚ್ಛ್ರುತ್ವಾ ಚ ರವಂ ಸಾಧ್ವೀ ಪರಮಾನಂದಸಂಯುತಾ ।
ರಾಜಮಾರ್ಗಂ ಗವಾಕ್ಷೇಣ ದದರ್ಶ ಪರಮಾದರಾತ್ ॥೫॥

ಬ್ರಾಹ್ಮಣೇಭ್ಯೋ ಧನಂ ದತ್ವಾ ಕಾರಯಾಮಾಸ ಮಂಗಲಂ ।
ಬಂದಿಭ್ಯೋ ಭಿಕ್ಷುಕೇಭ್ಯಶ್ಚ ವಾಚಿಭ್ಯಶ್ಚ ಧನಂ ದದೌ ॥೬॥

ಅವರುಹ್ಯ ರಥಾದ್ದೇವಃ ದೇವ್ಯಾಶ್ಚ ಭವನಂ ಯಯೌ ।
ಅಮೂಲ್ಯರತ್ನನಿರ್ಮಾಣಂ ಸುಂದರಂ ಸುಮನೋಹರಂ ॥೭॥

ದೃಷ್ಟ್ವಾ ಚ ಪುರತಃ ಕಾಂತಂ ಸಾ ತಂ ಕಾಂತಂ ಮುದಾನ್ವಿತಂ ।
ತತ್ಪಾದಂ ಕ್ಷಾಲಯಾಮಾಸ ನನಾಮ ಚ ರುರೋದ ಚ ॥೮॥

---

ತುಲಸಿಯು ಇದ್ದ ಮನೆಯ ಬಾಗಿಲಲ್ಲಿ ನಗಾರಿಯನ್ನು ಬಡಿಸಿ ಜಯಶಬ್ದವನ್ನು ಮಾಡಿಸಿದನು. ಆ ಧ್ವನಿಯನ್ನು ಕೇಳಿ ಪತಿವ್ರತೆಯಾದ ತುಲಸಿಯು ಪತಿಯು ಜಯಿಸಿದನೆಂಬ ಹೆಚ್ಚಾದ ಸಂತೋಷದಿಂದ ಕೂಡಿ ಬಹಳ ಪ್ರೀತಿಯಿಂದ ರಾಜಮಾರ್ಗವನ್ನು ಕಿಟಕಿಯ ಮೂಲಕವಾಗಿ ನೋಡಿದಳು. ॥೪-೫॥

ಮತ್ತು ಬ್ರಾಹ್ಮಣರಿಗೆ ಧನವನ್ನು ದಾನಮಾಡಿ ಮಂಗಲಕಾರ್ಯಗಳನ್ನು ಮಾಡಿಸಿದಳು. ಹೊಗಳಭಟರಿಗೂ ಭಿಕ್ಷುಕರಿಗೂ ಶುಭವರ್ತಮಾನವನ್ನು ಹೇಳಿದವರಿಗೂ ಧನವನ್ನು ಕೊಟ್ಟಳು. ॥೬॥

ಶಂಖಚೂಡನಾದ ನಾರಾಯಣನು ರಥದಿಂದಿಳಿದು ಬಹಳ ಬೆಲೆಯುಳ್ಳ ರತ್ನಗಳಿಂದ ಕಟ್ಟಿದ ಸುಂದರವೂ ಮನೋಹರವೂ ಆದ ತುಲಸಿಯ ಮನೆಗೆ ಹೋದನು. ಆ ತುಲಸಿಯು ಸುಂದರನಾದ ತನ್ನ ಪತಿಯನ್ನು ತನ್ನೆದುರಿಗೆ ಕಂಡು ಪ್ರೀತಿಯಿಂದ ಅವನ ಪಾದವನ್ನು ತೊಳೆದು ನಮಸ್ಕಾರಮಾಡಿ ಅತ್ತಳು. (ಇಲ್ಲಿ ಅತ್ತುದು ದುಃಖದಿಂದಲ್ಲ. ಅಪಾಯಕರವಾದ ಯುದ್ಧದಲ್ಲಿ ದೈವಯೋಗದಿಂದ ಲಭಿಸಿದ ಜಯದ ಒಂದು ವಿಧವಾದ ಸಂತೋಷಾತಿಶಯದ ಭಾವದಿಂದ). ॥೭-೮॥

ರತ್ನಸಿಂಹಾಸನೇ ರಮ್ಯೇ ವಾಸಯಾಮಾಸ ಕಾಮುಕೀ ।
ತಾಂಬೂಲಂ ಚ ದದೌ ತಸ್ಮೈ ಕರ್ಪೂರಾದಿಸುವಾಸಿತಂ ॥೯॥

ಅದ್ಯ ಮೇ ಸಫಲಂ ಜನ್ಮ ಜೀವನಂ ಚ ಬಭೂವ ಹ ।
ರಣೇ ಗತಂ ಚ ಪ್ರಾಣೇಶಂ ಪಶ್ಯಂತ್ಯಾಶ್ಚ ಪುನರ್ಗೃಹೇ ॥೧೦॥

ಸಸ್ಮಿತಾ ಸಕಟಾಕ್ಷಂ ಚ ಸಕಾಮಾ ಪುಲಕಾಂಕಿತಾ ।
ಪಪ್ರಚ್ಛ ರಣವೃತ್ತಾಂತಂ ಕಾಂತಂ ಮಧುರಯಾ ಗಿರಾ ॥೧೧॥

॥ ತುಲಸ್ಯುವಾಚ ॥

ಅಸಂಖ್ಯವಿಶ್ವಸಂಹರ್ತ್ರಾ ಸಾರ್ಧಮಾಜೌ ತವ ಪ್ರಭೋ ।
ಕಥಂ ಬಭೂವ ವಿಜಯಸ್ತನ್ಮೇ ಬ್ರೂಹಿ ಕೃಪಾನಿಧೇ ॥೧೨॥

ತುಲಸೀವಚನಂ ಶ್ರುತ್ವಾ ಪ್ರಹಸ್ಯ ಕಮಲಾಪತಿಃ ।
ಶಂಖಚೂಡಸ್ವರೂಪೇಣ ತಾಮುವಾಚಾಮೃತಂ ವಚಃ ॥೧೩॥

---

ಕಾಮಾತುರಳಾದ ತುಲಸಿಯು ತನ್ನ ಪತಿಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಉಪಾಹಾರವಾದ ಮೇಲೆ ಪಚ್ಚಕರ್ಪೂರದಿಂದ ಕೂಡಿದ ಸುವಾಸನೆಯಾದ ತಾಂಬೂಲವನ್ನು ಕೊಟ್ಟಳು. ಯುದ್ಧಕ್ಕೆ ಹೋದ ಪ್ರಾಣಪ್ರಿಯನನ್ನು ಪುನಃ ಮನೆಯಲ್ಲಿ ನೋಡುವ ಭಾಗ್ಯದಿಂದ ನನ್ನ ಹುಟ್ಟೂ ಜೀವನವೂ ಇಂದು ಸಾರ್ಥಕವಾಯಿತು. ಎಂದು ತಿಳಿದು ನಗುತ್ತಾ ಕಾಮಾತುರಳಾಗಿ ಮೈಯೆಲ್ಲವೂ ರೋಮಾಂಚವನ್ನು ಹೊಂದಿ ಕಡೆಗಣ್ಣಿನಿಂದ ಪತಿಯನ್ನು ನೋಡುತ್ತಾ ಮೃದುವಾದ ಮಾತಿನಿಂದ ಯುದ್ಧವೃತ್ತಾಂತವನ್ನು ಪ್ರಶ್ನೆಮಾಡಿದಳು. ॥೯-೧೦-೧೧॥

ತುಲಸಿಯು ಹೇಳಿದಳು—ಲೆಕ್ಕವಿಲ್ಲದಷ್ಟು ಪ್ರಪಂಚವನ್ನು ಸಂಹಾರ ಮಾಡುವ ಶಿವನೊಡನೆ ನಿನಗೆ ಯುದ್ಧವು ಪ್ರಾಪ್ತವಾಗಿದ್ದಿತು. ಈ ಯುದ್ಧದಲ್ಲಿ ನಿನಗೆ ಜಯವು ಹೇಗೆ ಪ್ರಾಪ್ತವಾಯಿತು ? ಅದನ್ನು ದಯವಿಟ್ಟು ಹೇಳು ಎಂದಳು. ॥೧೨॥

ತುಲಸಿಯ ಮಾತನ್ನು ಕೇಳಿ ನಾರಾಯಣನು ನಕ್ಕು ಶಂಖಚೂಡನ ರೂಪಧ್ವನಿಗಳಿಂದ ಅವಳನ್ನು ಕುರಿತು ಅಮೃತಕ್ಕೆ ಸಮಾನವಾದ ಮಾತನ್ನಾಡಿದನು. ॥೧೩॥

|| ಶ್ರೀಭಗವಾನುವಾಚ ||

ಆವಯೋಃ ಸಮರಃ ಕಾಂತೇ ಪೂರ್ಣಮಬ್ದಂ ಬಭೂವ ಹ ।
ನಾಶೋ ಬಭೂವ ಸರ್ವೇಷಾಂ ದಾನವಾನಾಂ ಚ ಕಾಮಿನೀ ||೧೪||

ಪ್ರೀತಿಂ ಚ ಕಾರಯಾಮಾಸ ಬ್ರಹ್ಮಾ ಚ ಸ್ವಯಮಾವಯೋಃ ।
ದೇವಾನಾಮಧಿಕಾರಶ್ಚ ಪ್ರದತ್ತೋ ಬ್ರಹ್ಮಣಾಽಽಜ್ಞಯಾ ||೧೫||

ಮಯಾ ಗತಂ ಸ್ವಭವನಂ ಶಿವಲೋಕಂ ಶಿವೋ ಗತಃ ।
ಇತ್ಯುಕ್ತ್ವಾ ಜಗತಾಂ ನಾಥಃ ಶಯನಂ ಚ ಚಕಾರ ಹ ||೧೬||

ರೇಮೇ ರಮಾಪತಿಸ್ತತ್ರ ರಾಮಯಾ ಸಹ ನಾರದ ।
ಸಾ ಸಾಧ್ವೀ ಸುಖಸಂಭೋಗಾದಾಕರ್ಷಣ-ವ್ಯತಿಕ್ರಮಾತ್ ||೧೭||

ಸರ್ವಂ ವಿತರ್ಕಯಾಮಾಸ ಕಸ್ತ್ವಮೇವೇತ್ಯುವಾಚ ಸಾ ।

|| ತುಲಸ್ಯುವಾಚ ||

ಕೋ ವಾ ತ್ವಂ ವದ ಮಾಯೇಶ ಭುಕ್ತಾಽಹಂ ಮಾಯಯಾ ತ್ವಯಾ ||೧೮||

---

ಭಗವಂತನು ಹೇಳಿದನು — ಪ್ರಿಯೇ, ನಮ್ಮಿಬ್ಬರಿಗೂ ಒಂದುನೂರು ವರ್ಷ ಪೂರ್ತಿಯಾಗುವವರೆಗೂ ಯುದ್ಧವಾಯಿತು. ಆ ಯುದ್ಧದಲ್ಲಿ ಸಮಸ್ತದಾನವರೂ ನಾಶವನ್ನು ಹೊಂದಿದರು. ಬ್ರಹ್ಮನೂ ಬಂದು ನಮ್ಮಿಬ್ಬರಿಗೂ ಸ್ನೇಹವನ್ನು ಮಾಡಿಸಿದನು. ಬ್ರಹ್ಮನ ಅಪ್ಪಣೆಯಿಂದ ದೇವತೆಗಳ ಅಧಿಕಾರವನ್ನು ಅವರಿಗೆ ಕೊಟ್ಟು ಬಿಟ್ಟೆನು. ನಾನು ನನ್ನ ಮನೆಗೆ ಬಂದೆನು. ಶಿವನು ತನ್ನ ಲೋಕಕ್ಕೆ ಹೋದನು. ಹೀಗೆಂದು ಹೇಳಿ ಶಂಖಚೂಡರೂಪನಾದ ನಾರಾಯಣನು ಸಿದ್ಧಮಾಡಿದ್ದ ಹಾಸಿಗೆಯಲ್ಲಿ ಮಲಗಿಕೊಂಡನು. ||೧೪-೧೫-೧೬||

ನಾರಾಯಣನು ಅಲ್ಲಿ ಆ ತುಲಸಿಯೊಡನೆ ಕ್ರೀಡಿಸಿದನು. ಆ ಪತಿವ್ರತೆಯು ಸುಖಸಂಭೋಗರೀತಿ ಮತ್ತು ವಿಲಾಸಗಳಲ್ಲಿ ಭೇದದಿಂದ ವಿಚಾರಮಾಡಿ ನೀನು ಯಾರು? ಎಂದು ಪ್ರಶ್ನೆ ಮಾಡಿದಳು. ||೧೭||

ತುಲಸಿಯು ಹೇಳಿದಳು— ಎಲೈ ಮಾಯಾವಿಯೇ, ನೀನು ಯಾರು? ಮಾಯೆಯಿಂದ ನನ್ನನ್ನು ಭೋಗಿಸಿದೆ. ನನ್ನ ಪಾತಿವ್ರತ್ಯವನ್ನು ನಾಶಮಾಡಿದೆ, ಆ ಕಾರಣ

ದೂರೀಕೃತಂ ಮತ್ಸತೀತ್ವಂ ಯದತಸ್ತ್ವಾಂ ಶಪಾಮಿ ಹೇ ।
ತುಲಸೀವಚನಂ ಶ್ರುತ್ವಾ ಹರಿಃ ಶಾಪಭಯೇನ ಚ ॥೧೯॥

ದಧಾರ ಲೀಲಯಾ ಬ್ರಹ್ಮನ್ಸ್ವಮೂರ್ತಿಂ ಸುಮನೋಹರಾಂ ।
ದದರ್ಶ ಪುರತೋ ದೇವೀ ದೇವದೇವಂ ಸನಾತನಂ ॥೨೦॥

ನವೀನನೀರದಶ್ಯಾಮಂ ಶರತ್ಪಂಕಜಲೋಚನಾ ।
ಕೋಟಿಕಂದರ್ಪಲೀಲಾಭಂ ರತ್ನಭೂಷಣಭೂಷಿತಂ ॥೨೧॥

ಈಷದ್ಧಾಸ್ಯಂ ಪ್ರಸನ್ನಾಸ್ಯಂ ಶೋಭಿತಂ ಪೀತವಾಸಸಂ ।
ತಂ ದೃಷ್ಟ್ವಾ ಕಾಮಿನೀ ಕಾಮಂ ಮೂರ್ಛಾಂ ಸಂಪ್ರಾಪ ಲೀಲಯಾ ॥೨೨॥

ಪುನಶ್ಚ ಚೇತನಾಂ ಪ್ರಾಪ್ಯ ಪುನಃ ಸಾ ತಮುವಾಚ ಹ ।
ಹೇ ನಾಥ ತೇ ದಯಾ ನಾಸ್ತಿ ಪಾಷಾಣ ಸದೃಶಸ್ಯ ಚ ॥೨೩॥

ಛಲೇನ ಧರ್ಮಭಂಗೇನ ಮಮ ಸ್ವಾಮೀ ತ್ವಯಾ ಹತಃ ।
ಪಾಷಾಣಹೃದಯಸ್ತ್ವಂ ಹಿ ದಯಾ ಹಿ ನೋ ಯತಃ ಪ್ರಭೋ ॥೨೪॥
ತಸ್ಮಾತ್ಪಾಷಾಣರೂಪಸ್ತ್ವಂ ಭವೇ ದೇವ ಭವಾಧುನಾ ।

---

ನಿನಗೆ ಶಾಪವನ್ನು ಕೊಡುವೆನು. ಎಂದು ಹೇಳಿದ ತುಲಸಿಯ ಮಾತನ್ನು ಕೇಳಿ, ಹರಿಯು ಶಾಪದ ಭಯದಿಂದ ಮನೋಹರವಾದ ಸುಂದರಮೂರ್ತಿಯ ರೂಪದಿಂದ ತುಲಸಿಗೆ ಕಾಣಿಸಿದನು. ||೧೮-೧೯||

ತುಲಸಿಯು ತನ್ನೆದುರಿಗೆ ಅನಾದಿಯಾದ ದೇವತೆಗಳಿಗೆಲ್ಲರಿಗೂ ದೇವನಾದ ಹೊಸ ನೀರುಳ್ಳ ಮೇಘದಂತೆ ಮೈಬಣ್ಣವುಳ್ಳ ಕಮಲದಂತೆ ಕಣ್ಣುಳ್ಳ ಕೋಟಿಜನ ಮನ್ಮಥರಂತೆ ಸುಂದರನಾದ ರತ್ನಾಭರಣಗಳನ್ನು ಧರಿಸಿರುವ, ನಗುತ್ತಿರುವ, ಪೀತಾಂಬರವನ್ನುಟ್ಟಿರುವ, ಆ ನಾರಾಯಣನನ್ನು ನೋಡಿ ಮೂರ್ಛೆಯನ್ನು ಹೊಂದಿ ಮತ್ತೆ ಎಚ್ಚೆತ್ತು ಆ ನಾರಾಯಣನನ್ನು ಕುರಿತು ಹೇಳಿದಳು. ||೨೦-೨೧-೨೨||

ತುಲಸಿಯು ಹೇಳಿದಳು—ಎಲೈ ಸ್ವಾಮಿಯೇ, ಕಲ್ಲಿನ ಸಮಾನನಾದ ನಿನಗೆ ಕರುಣೆಯಿಲ್ಲ. ಮೋಸದಿಂದಲೂ ಧರ್ಮನಾಶ ಮಾಡಿಯೂ ನನ್ನ ಪತಿಯನ್ನು ಕೊಂದೆ. ನೀನು ದಯಾಹೀನನಾಗಿ ಕಲ್ಲಿನ ಮನಸ್ಸಿನವನಾದುದರಿಂದ ಈ ಪ್ರಪಂಚದಲ್ಲಿ ನೀನು ಈಗ ಕಲ್ಲಿನ ರೂಪವಾಗು. ||೨೩-೨೪||

ಯೇ ವದಂತಿ ಚ ಸಾಧುಂ ತ್ವಾಂ ತೇ ಭ್ರಾಂತಾ ಹಿ ನ ಸಂಶಯಃ॥೨೫॥
ಭಕ್ತೋ ವಿನಾಽಪರಾಧೇನ ಪರಾರ್ಥೇ ಚ ಕಥಂ ಹತಃ ।
ಭೃಶಂ ರುರೋದ ಶೋಕಾರ್ತಾ ವಿಲಲಾಪ ಮುಹುರ್ಮುಹುಃ ॥೨೬॥

ತತಶ್ಚ ಕರುಣಾಂ ದೃಷ್ಟ್ವಾ ಕರುಣಾರಸಸಾಗರಃ ।
ನಯೇನ ತಾಂ ಬೋಧಯಿತುಮುವಾಚ ಕಮಲಾಪತಿಃ ॥೨೭॥

ತಪಸ್ತ್ವಯಾ ಕೃತಂ ಭದ್ರೇ ಮದರ್ಥೇ ಭಾರತೇ ಚಿತಂ ।
ತ್ವದರ್ಥೇ ಶಂಖಚೂಡಶ್ಚ ಚಕಾರ ಸುಚಿರಂ ತಪಃ ॥೨೮॥

ಕೃತ್ವಾ ತ್ವಾಂ ಕಾಮಿನೀಂ ಸೋಽಪಿ ವಿಜಹಾರ ಚ ತತ್ಕ್ಷಣಾತ್ ।
ಅಧುನಾ ದಾತುಮುಚಿತಂ ತವೈವ ತಪಸಃ ಫಲಂ ॥೨೯॥

ಇದಂ ಶರೀರಂ ತ್ಯಕ್ತ್ವಾ ಚ ದಿವ್ಯಂ ದೇಹಂ ವಿಧಾಯ ಚ ।
ರಾಮೇ ರಮ ಮಯಾ ಸಾರ್ಧಂ ತ್ವಂ ರಮಾಸದೃಶೀ ಭವ ॥೩೦॥

---

ಯಾರು ನಿನ್ನನ್ನು ಸಜ್ಜನನೆಂದು ಹೇಳುವರೋ ಅವರು ಹುಚ್ಚರು. ನಿನ್ನ ಭಕ್ತನಾದ ಶಂಖಚೂಡನನ್ನು ಯಾವ ತಪ್ಪೂ ಇಲ್ಲದೆ ದೇವತೆಗಳ ಪ್ರಯೋಜನಕ್ಕಾಗಿ ಹೇಗೆ ಕೊಂದೆ? ಎಂದು ಹೇಳಿ ತುಲಸಿಯು ದುಃಖದಿಂದ ಮತ್ತೆ ಮತ್ತೆ ವಿಶೇಷವಾಗಿ ಅತ್ತಳು. ॥೨೫-೨೬॥

ಆಮೇಲೆ ಅವಳ ದುಃಖವನ್ನು ನೋಡಿ ದಯಾಸಾಗರನಾದ ಲಕ್ಷ್ಮೀಪತಿಯು ನೀತಿಯಿಂದ ಆ ತುಲಸೀದೇವಿಗೆ ತಿಳುವಳಿಕೆಯನ್ನುಂಟುಮಾಡಲು ಮಾತನಾಡಿದನು. ॥೨೭॥

ಭಗವಂತನು ಹೇಳಿದನು—ಎಲೌ ಮಂಗಳೆಯೇ, ಈ ಭರತಖಂಡದಲ್ಲಿ ನೀನು ನನ್ನನ್ನು ಪತಿಯಾಗಿ ಪಡೆಯಬೇಕೆಂದು ಬಹುಕಾಲ ತಪಸ್ಸುಮಾಡಿದೆ. ಶಂಖಚೂಡನು ನಿನ್ನನ್ನು ಪತ್ನಿಯಾಗಿ ಪಡೆಯಲು ಬಹುಕಾಲ ತಪಸ್ಸು ಮಾಡಿದನು. ಅವನಿಗೆ ತಪಸ್ಸಿನ ಫಲವುಂಟಾಗಿ ನಿನ್ನನ್ನು ಪತ್ನಿಯನ್ನಾಗಿ ಪಡೆದನು. ಈಗ ನಿನ್ನ ತಪಸ್ಸಿಗೆ ಫಲವನ್ನು ಕೊಡುವುದು ಉಚಿತವಾದುದೆಂದು ನಾನು ಹೀಗೆ ಮಾಡಿದೆನು. ॥೨೮-೨೯॥

ಈ ಶರೀರವನ್ನು ಬಿಟ್ಟು ದಿವ್ಯದೇಹವನ್ನು ಧರಿಸಿ ನನ್ನೊಡನೆ ನೀನು ವಿಹರಿಸುತ್ತಾ ಲಕ್ಷ್ಮಿಯ ಸಮಾನಳಾಗು. ॥೩೦॥

ಇಯಂ ತನುರ್ನದೀರೂಪಾ ಗಂಡಕೀತಿ ಚ ವಿಶ್ರುತಾ ।
ಪೂತಾ ಸುಪುಣ್ಯದಾ ನೃಣಾಂ ಪುಣ್ಯೇ ಭವತು ಭಾರತೇ ॥೩೦॥

ತವ ಕೇಶಸಮೂಹಶ್ಚ ಪುಣ್ಯವೃಕ್ಷೋ ಭವಿಷ್ಯತಿ ।
ತುಲಸೀಕೇಶಸಂಭೂತಾ ತುಲಸೀತಿ ಚ ವಿಶ್ರುತಾ ॥೩೨॥

ತ್ರಿಷು ಲೋಕೇಷು ಪುಷ್ಪಾಣಾಂ ಪತ್ರಾಣಾಂ ದೇವಪೂಜನೇ ।
ಪ್ರಧಾನರೂಪಾ ತುಲಸೀ ಭವಿಷ್ಯತಿ ವರಾನನೇ ॥೩೩॥

ಸ್ವರ್ಗೇ ಮರ್ತ್ಯೇ ಚ ಪಾತಾಲೇ ಗೋಲೋಕೇ ಮಮ ಸನ್ನಿಧೌ ।
ಭವ ತ್ವಂ ತುಲಸೀವೃಕ್ಷವರಾ ಪುಷ್ಪೇಷು ಸುಂದರೀ ॥೩೪॥

ಗೋಲೋಕೇ ವಿರಜಾತೀರೇ ರಾಸೇ ವೃಂದಾವನೇ ವನೇ ।
ಭಾಂಡೀರೇ ಚಂಪಕವನೇ ರಮ್ಯೇ ಚಂದನಕಾನನೇ ॥೩೫॥

ಮಾಧವೀ-ಕೇತಕೀ-ಕುಂದಮಾಲಿಕಾಮಾಲತೀವನೇ ।
ವಾಸಸ್ತೇಽತ್ರೈವ ಭವತು ಪುಣ್ಯಸ್ಥಾನೇಷು ಪುಣ್ಯದಃ ॥೩೬॥

---

ಈ ನಿನ್ನ ಶರೀರವು ಗಂಡಕೀ ಎಂಬ ನದೀರೂಪವಾಗಿ ಪ್ರಸಿದ್ಧಿಯಾಗಲಿ. ಆ ನದಿಯು ಪರಿಶುದ್ಧವಾದುದಾಗಿಯೂ ಭರತಖಂಡದಲ್ಲಿ ಜನರಿಗೆ ಪುಣ್ಯವನ್ನು ಕೊಡತಕ್ಕುದಾಗಿಯೂ ಆಗಲಿ. ||೩೦||

ನಿನ್ನ ಕೂದಲುಗಳು ಪುಣ್ಯಕರವಾದ ತುಲಸಿಯಗಿಡವಾಗಿ ಪ್ರಸಿದ್ಧವಾಗುವುವು. ಮೂರುಲೋಕಗಳಲ್ಲಿಯೂ ತುಲಸಿಯ ಎಲೆಗಳನ್ನೂ ಹೂಗಳನ್ನೂ ದೇವರ ಪೂಜೆಗೆ ಮುಖ್ಯವಾಗಿ ಗ್ರಹಿಸುವರು. ಸುಂದರಿಯಾದ ತುಲಸೀದೇವಿಯೇ, ಸ್ವರ್ಗ ಮರ್ತ್ಯ ಪಾತಾಲ ಲೋಕಗಳಲ್ಲಿಯೂ ಗೋಲೋಕದಲ್ಲಿಯೂ ನನ್ನ ಸಮಿಪದಲ್ಲಿ ಪುಷ್ಪಗಳಲ್ಲಿ ಶ್ರೇಷ್ಠವಾದ ತುಲಸೀಗಿಡವಾಗಿ ನೀನು ಇರು. ||೩೨-೩೩-೩೪||

ಗೋಲೋಕದಲ್ಲಿ ವಿರಜಾನದಿಯ ದಡದಲ್ಲಿಯೂ ರಾಸಮಂಡಲದಲ್ಲಿಯೂ ವೃಂದಾವನವೆಂಬ ವನದಲ್ಲಿಯೂ, ಭಂಡೀರವೆಂಬ ಕ್ಷೇತ್ರದಲ್ಲಿಯೂ ಸಂಪಿಗೆಯ ಕಾಡಿನಲ್ಲಿಯೂ, ಶ್ರೀಗಂಧದ ಕಾಡಿನಲ್ಲಿಯೂ ಮಾಧವೀ, ತಾಳೆ, ಮಲ್ಲೆ, ಇರುವಂತಿಗೆ ಮುಂತಾದ ಹೂಗಳಿರುವ ತೋಟಗಳಲ್ಲಿಯೂ ನೀನು ವಾಸವಾಗಿ ಪುಣ್ಯವನ್ನು ಕೊಡತಕ್ಕವಳಾಗು. ||೩೫-೩೬||

ತುಲಸೀತರುಮೂಲೇಷು ಪುಣ್ಯದೇಶೇಷು ಪುಣ್ಯದಂ ।
ಅಧಿಷ್ಠಾನಂ ಚ ತೀರ್ಥಾನಾಂ ಸರ್ವೇಷಾಂ ಚ ಭವಿಷ್ಯತಿ ॥೩೭॥

ತತ್ರೈವ ಸರ್ವದೇವಾನಾಂ ಮಮಾಧಿಷ್ಠಾನಮೇವ ಚ ।
ತುಲಸೀಪತ್ರಪತನಪ್ರಾಪ್ತ್ಯಯೇ ಚ ವರಾನನೇ ॥೩೮॥

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ತುಲಸೀಪತ್ರತೋಯೇನ ಯೋಽಭಿಷೇಕಂ ಸಮಾಚರೇತ್ ॥೩೯॥

ಸುಧಾಘಟಸಹಸ್ರಾಣಾಂ ಯಾ ತುಷ್ಟಿಸ್ತು ಭವೇದ್ಧರೇಃ ।
ಸಾ ಚ ತುಷ್ಟಿರ್ಭವೇನ್ನೂನಂ ತುಲಸೀಪತ್ರದಾನತಃ ॥೪೦॥

ಗವಾಮಯುತದಾನೇನ ಯತ್ಫಲಂ ತತ್ಫಲಂ ಭವೇತ್ ।
ತುಲಸೀಪತ್ರದಾನೇನ ತತ್ಫಲಂ ಕಾರ್ತಿಕೇ ಸತಿ ॥೪೧॥

ತುಲಸೀಪತ್ರತೋಯಂ ಚ ಮೃತ್ಯುಕಾಲೇ ಚ ಯೋ ಲಭೇತ್ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕೇ ಮಹೀಯತೇ ॥೪೨॥

---

ಪುಣ್ಯದೇಶದಲ್ಲಿರುವ ಪುಣ್ಯಕರವಾದ ಸಮಸ್ತ ತೀರ್ಥಗಳೂ ತುಲಸಿಯ ಗಿಡದ ಬುಡದಲ್ಲಿರುವುವು. ತುಲಸೀಗಿಡದ ಎಲೆಗಳು ಬೀಳುವುವೆಂದು ಸಮಸ್ತ ದೇವತೆಗಳೂ ತುಲಸೀಗಿಡದ ಬುಡದಲ್ಲಿರುವರು. ನಾನೂ ಅಲ್ಲಿರುವೆನು. ||೩೭-೩೮||

ತುಲಸಿಯ ಎಲೆಯ ನೀರಿನಿಂದ ಯಾವನು ಸ್ನಾನಮಾಡುವನೋ ಅವನು ಸಮಸ್ತತೀರ್ಥಗಳಲ್ಲಿ ಸ್ನಾನಮಾಡಿದವನಾಗಿ ಸಮಸ್ತ ಯಜ್ಞಗಳನ್ನೂ ಮಾಡಿದವನಾಗುವನು. ||೩೯||

ಒಂದು ಸಾವಿರಕೊಡ ಅಮೃತದಿಂದ ಹರಿಗೆ ಯಾವ ತೃಪ್ತಿಯುಂಟಾಗುವುದೋ ಅಂತಹ ತೃಪ್ತಿಯು ತುಲಸಿಯ ಎಲೆಯ ದಾನದಿಂದ ಉಂಟಾಗುವುದು. ||೪೦||

ಕಾರ್ತಿಕಮಾಸದಲ್ಲಿ ತುಲಸೀಪತ್ರೆಯನ್ನು ದಾನಮಾಡಿದರೆ ಉತ್ತಮವಾದ ಫಲವು ಬರುವುದು. ||೪೧||

ತುಲಸಿಯಪತ್ರೆಯಿಂದ ಕೂಡಿದ ನೀರು ಮರಣಕಾಲದಲ್ಲಿ ಯಾರಿಗೆ ದೊರೆಯುವುದೋ ಅವರ ಪಾಪಗಳೆಲ್ಲವೂ ನಾಶವಾಗಿ ಅವರಿಗೆ ವಿಷ್ಣುಲೋಕವು ಪ್ರಾಪ್ತಿಯಾಗುವುದು. ||೪೨||

ನಿತ್ಯಂ ಯಸ್ತುಲಸೀತೋಯಂ ಭುಂಕ್ತೇ ಭಕ್ತ್ಯಾ ಚ ಮಾನವಃ ।
ಲಕ್ಷಾಶ್ವಮೇಧಜಂ ಪುಣ್ಯಂ ಸಂಪ್ರಾಪ್ನೋತಿ ಸ ಮಾನವಃ ॥೪೩॥

ತುಲಸೀಂ ಸ್ವಕರೇ ಕೃತ್ವಾ ಧೃತ್ವಾ ದೇಹೇ ಚ ಮಾನವಃ ।
ಪ್ರಾಣಾಂಸ್ತ್ಯಜತಿ ತೀರ್ಥೇಷು ವಿಷ್ಣುಲೋಕಂ ಸ ಗಚ್ಛತಿ ॥೪೪॥

ತುಲಸೀಕಾಷ್ಠನಿರ್ಮಾಣಮಾಲಾಂ ಗೃಹ್ಣಾತಿ ಯೋ ನರಃ ।
ಪದೇ ಪದೇಽಶ್ವಮೇಧಸ್ಯ ಲಭತೇ ನಿಶ್ಚಿತಂ ಫಲಂ ॥೪೫॥

ತುಲಸೀಂ ಸ್ವಕರೇ ಕೃತ್ವಾ ಸ್ವೀಕಾರಂ ಯೋ ನ ರಕ್ಷತಿ ।
ಸ ಯಾತಿ ಕಾಲಸೂತ್ರಂ ಚ ಯಾವಚ್ಚಂದ್ರದಿವಾಕರೌ ॥೪೬॥

ಕರೋತಿ ಮಿಥ್ಯಾಶಪಥಂ ತುಲಸ್ಯಾಂ ಯೋಽತ್ರಮಾನವಃ ॥
ಸ ಯಾತಿ ಕುಂಭೀಪಾಕಂ ಚ ಯಾವದಿಂದ್ರಾಶ್ಚತುರ್ದಶ ॥೪೭॥

ತುಲಸೀತೋಯಕಣಿಕಾಂ ಮೃತ್ಯುಕಾಲೇ ಚ ಯೋ ಲಭೇತ್ ।
ರತ್ನಯಾನಂ ಸಮಾರುಹ್ಯ ವೈಕುಂಠೇ ಪ್ರಾಪ್ಯತೇ ಧ್ರುವಂ ॥೪೮॥

---

ಯಾವ ಮನುಷ್ಯನು ಭಕ್ತಿಯಿಂದ ಪ್ರತಿದಿನವೂ ತುಲಸಿಯ ತೀರ್ಥವನ್ನು ಪಾನಮಾಡುವನೋ ಅವನು ಒಂದುಲಕ್ಷ ಅಶ್ವಮೇಧಯಜ್ಞದ ಫಲವನ್ನು ಪಡೆಯುವನು. ॥೪೩॥

ತುಲಸಿಯ ಕಡ್ಡಿಗಳಿಂದ ಮಾಡಿದ ಮಣಿಗಳ ಮಾಲೆಯನ್ನು ಯಾವನು ಧರಿಸುವನೋ ಅವನು ಅಶ್ವಮೇಧಯಜ್ಞದ ಫಲವನ್ನು ನಿಜವಾಗಿಯೂ ಅನುಭವಿಸುವನು. ॥೪೫॥

ತುಲಸಿಯನ್ನು ಕೈಯಲ್ಲಿ ಹಿಡಿದು ಮಾಡಿದ ಪ್ರತಿಜ್ಞೆಯನ್ನು ಯಾವನು ನಡೆಸುವುದಿಲ್ಲವೋ ಅವನು ಸೂರ್ಯಚಂದ್ರರಿರುವ ವರೆಗೂ ಕಾಲಸೂತ್ರವೆಂಬ ನರಕದಲ್ಲಿರುವನು. ॥೪೬॥

ಯಾವ ಮನುಜನು ತುಲಸಿಯ ವಿಷಯದಲ್ಲಿ ಸುಳ್ಳುಪ್ರತಿಜ್ಞೆಯನ್ನು ಮಾಡುವನೋ ಅವನು ಹದಿನಾಲ್ಕು ಜನ ದೇವೇಂದ್ರರ ಅಧಿಕಾರ ಮುಗಿಯುವ ವರೆಗೂ ಕುಂಭೀಪಾಕವೆಂಬ ನರಕದಲ್ಲಿರುವನು. ॥೪೭॥

ಮರಣಕಾಲದಲ್ಲಿ ಯಾವನ ಮೇಲೆ ತುಲಸಿಯ ಒಂದು ಹನಿನೀರು ಬೀಳುವುದೋ ಅವನು ರತ್ನವಿಮಾನದಲ್ಲಿ ಕುಳಿತು ವೈಕುಂಠಲೋಕಕ್ಕೆ ಹೋಗುವನು.॥೪೮॥

ಪೂರ್ಣಿಮಾಯಾಮಮಾಯಾಂ ಚ ದ್ವಾದಶ್ಯಾಂ ರವಿಸಂಕ್ರಮೇ ।
ತೈಲಾಭ್ಯಂಗಂ ಚ ಕೃತ್ವಾ ಚ ಮಧ್ಯಾಹ್ನೇ ನಿಶಿ ಸಂಧ್ಯಯೋಃ ॥೪೯॥

ಆಶೌಚೇಽಶುಚಿಕಾಲೇ ಯೇ ರಾತ್ರಿವಾಸೋಽನ್ವಿತಾ ನರಾಃ ।
ತುಲಸೀಂ ಯೇ ವಿಚಿನ್ವಂತಿ ತೇ ಛಿಂದಂತಿ ಹರೇಃ ಶಿರಃ ॥೫೦॥

ತ್ರಿರಾತ್ರಂ ತುಲಸೀಪತ್ರಂ ಶುದ್ಧಂ ಪರ್ಯುಷಿತಂ ಸತಿ ।
ಶ್ರಾದ್ಧೇ ವ್ರತೇ ಚ ದಾನೇ ಚ ಪ್ರತಿಷ್ಠಾಯಾಂ ಸುರಾರ್ಚನೇ ॥೫೧॥

ಭೂಗತಂ ತೋಯಪತಿತಂ ಯದ್ದತ್ತಂ ವಿಷ್ಣವೇ ಸತಿ ।
ಶುದ್ಧಂ ಚ ತುಲಸೀಪತ್ರಂ ಕ್ಷಾಲನಾದನ್ಯಕರ್ಮಣಿ ॥೫೨॥

ವೃಕ್ಷಾಧಿಷ್ಠಾತೃದೇವೀ ಯಾ ಗೋಲೋಕೇ ಚ ನಿರಾಮಯೇ ।
ಕೃಷ್ಣೇನ ಸಾರ್ಧಂ ನಿತ್ಯಂ ಚ ನಿತ್ಯಂ ಕ್ರೀಡಾಂ ಕರಿಷ್ಯಸಿ ॥೫೩॥

---

ಪೂರ್ಣಿಮೆ, ಅಮಾವಾಸ್ಯೆ, ದ್ವಾದಶೀ, ಸಂಕ್ರಮಣ, ಮಧ್ಯಾಹ್ನ, ರಾತ್ರಿ, ಸಂಧ್ಯಾಕಾಲಗಳು, ಆಶೌಚ ಬಂದಿರುವಾಗಲೂ, ಅಶುಚಿಕಾಲದಲ್ಲಿಯೂ, ತೈಲಾಭ್ಯಂಗವನ್ನು ಮಾಡಿಕೊಂಡ ಮೇಲೂ, ರಾತ್ರಿ ಉಟ್ಟಿದ್ದ ವಸ್ತ್ರವನ್ನುಟ್ಟುಕೊಂಡೂ ಯಾವ ಮನುಜರು ತುಲಸಿಯನ್ನು ಕೊಯ್ಯುವರೋ ಅವರು ಹರಿಯ ಶಿರಸ್ಸನ್ನು ಕತ್ತರಿಸಿದ ಪಾಪಕ್ಕೆ ಗುರಿಯಾಗುವರು. ॥೪೯-೫೦॥

ಒಂದು ದಿನ ಕೊಯ್ದು ತುಲಸಿಯು ಮೂರು ರಾತ್ರೆ ಕಳೆಯುವವರೆಗೂ ಪರಿಶುದ್ಧವಾದುದು. ಅದನ್ನು ಶ್ರಾದ್ಧ, ವ್ರತ, ದಾನ, ದೇವಪೂಜಾ ಮುಂತಾದುವುಗಳಿಗೆ ಉಪಯೋಗಿಸಬಹುದು. ॥೫೧॥

ನೀರಿನಲ್ಲಿಯೂ ಭೂಮಿಯ ಮೇಲೆಯೂ ಬಿದ್ದ ವಿಷ್ಣುವಿಗೆ ಪೂಜೆಮಾಡಿದ ತುಲಸಿಯನ್ನು ತೊಳೆದರೆ ಶುದ್ಧವಾದುದಾಗಿಯೂ ಬೇರೆ ಕರ್ಮಗಳಿಗೆ ಯೋಗ್ಯವಾದುದೂ ಆಗುವುದು. ॥೫೨॥

ಎಲೈ ತುಲಸಿಯೇ, ಭೂಲೋಕದಲ್ಲಿ ನೀನು ತುಲಸೀವೃಕ್ಷವಾಗಿಯೂ ಗೋಲೋಕದಲ್ಲಿ ಕೃಷ್ಣನೊಡನೆ ದೇಹವನ್ನು ಧರಿಸಿದವಳಾಗಿಯೂ ಪ್ರತಿದಿನವೂ ಕ್ರೀಡಿಸುವೆ. ॥೫೩॥

ನದ್ಯಧಿಷ್ಠಾತೃದೇವೀ ಯಾ ಭಾರತೇ ಚ ಸುಪುಣ್ಯದಾ ।
ಲವಣೋದಸ್ಯ ಸಾ ಪತ್ನೀ ಮದಂಶಸ್ಯ ಭವಿಷ್ಯತಿ ॥೫೪॥

ತ್ವಂ ಚ ಸ್ವಯಂ ಮಹಾಸಾಧ್ವೀ ವೈಕುಂಠೇ ಮಮ ಸನ್ನಿಧೌ ।
ರಮಾಸಮಾ ಚ ರಾಮಾ ಚ ಭವಿಷ್ಯಸಿ ನ ಸಂಶಯಃ ॥೫೫॥

ಅಹಂ ಚ ಶೈಲರೂಪೇಣ ಗಂಡಕೀತೀರಸನ್ನಿಧೌ ।
ಅಧಿಷ್ಠಾನಂ ಕರಿಷ್ಯಾಮಿ ಭಾರತೇ ತವ ಶಾಪತಃ ॥೫೬॥

ಕೋಟಿಸಂಖ್ಯಾಸ್ತತ್ರ ಕೀಟಾಸ್ತೀಕ್ಷ್ಣದಂಷ್ಟ್ರಾ ವರಾಯುಧೈಃ ।
ತಚ್ಛಿಲಾಕುಹರೇ ಚಕ್ರಂ ಕರಿಷ್ಯಂತಿ ಮದೀಯಕಂ ॥೫೭॥

ಏಕದ್ವಾರಂ ಚತುಶ್ಚಕ್ರಂ ವನಮಾಲಾವಿಭೂಷಿತಂ ।
ನವೀನನೀರದಾಕಾರಂ ಲಕ್ಷ್ಮೀನಾರಾಯಣಾಭಿದಂ ॥೫೮॥

---

ಭರತಖಂಡದಲ್ಲಿ ಗಂಡಕೀನದಿಗೆ ಅಭಿಮಾನಿದೇವತೆಯಾಗಿ ನನ್ನ ಅಂಶದ ಲವಣಸಮುದ್ರರಾಜನಿಗೆ ಪತ್ನಿಯಾಗಿ ಜನರಿಗೆ ಪುಣ್ಯವನ್ನು ಕೊಡತಕ್ಕವಳಾಗಿ ಆ ತುಲಸಿಯು ಆಗುವಳು. ॥೫೪॥

ನೀನು ಮಹಾಪತಿವ್ರತೆಯಾಗಿ ವೈಕುಂಠಲೋಕದಲ್ಲಿ ನನ್ನ ಸಮೀಪದಲ್ಲಿ ಲಕ್ಷ್ಮಿಗೆ ಸಮಾನಳಾಗಿರುವೆ. ಸಂದೇಹವಿಲ್ಲವು. ॥೫೫॥

ನಾನು ನಿನ್ನ ಶಾಪದಿಂದ ಭರತಖಂಡದಲ್ಲಿ ಗಂಡಕೀನದಿಯ ತೀರದಲ್ಲಿ ಕಲ್ಲಿನರೂಪದಿಂದಿರುತ್ತೇನೆ. ॥೫೬॥

ಆ ಗಂಡಕೀನದಿಯಲ್ಲಿ ಅನೇಕ ಹುಳುಗಳು ತಮ್ಮ ಕ್ರೂರವಾದ ಹಲ್ಲುಗಳೆಂಬ ಆಯುಧಗಳಿಂದ ಆ ಕಲ್ಲುಗಳಲ್ಲಿ ರಂಧ್ರಗಳನ್ನು ಕೊರೆದು ನನ್ನ ಸಂಬಂಧವಾದ ಚಕ್ರಗಳನ್ನು ಮಾಡುವುವು. ॥೫೭॥

ಒಂದು ಬಾಯಿಯೂ ನಾಲ್ಕು ಚಕ್ರಗಳೂ ವನಮಾಲೆಯೂ (ಮಾಲಾಕಾರವಾದ ರೇಖೆ) ಇದ್ದರೆ ಮೇಘಬಣ್ಣದ ಲಕ್ಷ್ಮೀನಾರಾಯಣ ಸಾಲಿಗ್ರಾಮವು. ವನಮಾಲೆ ಇಲ್ಲದಿದ್ದರೆ ಅದೇ ಲಕ್ಷ್ಮೀಜನಾರ್ದನಸ್ವಾಮಿಯು ಎನ್ನಿಸುವುದು. ॥೫೮-೫೯॥

ಏಕದ್ವಾರಂ ಚತುಶ್ಚಕ್ರಂ ನವೀನನೀರದೋಪಮಂ ।
ಲಕ್ಷ್ಮೀಜನಾರ್ದನೋ ಜ್ಞೇಯೋ ರಹಿತೋ ವನಮಾಲಯಾ ॥೫೯॥

ದ್ವಾರದ್ವಯೇ ಚತುಶ್ಚಕ್ರಂ ಗೋಷ್ಪದೇನ ವಿರಾಜಿತಂ ।
ರಘುನಾಥಾಭಿದಂ ಜ್ಞೇಯಂ ರಹಿತಂ ವನಮಾಲಯಾ ॥೬೦॥

ಅತಿಕ್ಷುದ್ರಂ ದ್ವಿಚಕ್ರಂ ಚ ನವೀನಜಲದಪ್ರಭಂ ।
ತದ್ವಾಮನಾಭಿದಂ ಜ್ಞೇಯಂ ರಹಿತಂ ವನಮಾಲಯಾ ॥೬೧॥

ಅತಿಕ್ಷುದ್ರಂ ದ್ವಿಚಕ್ರಂ ಚ ವನಮಾಲಾವಿಭೂಷಿತಂ ।
ವಿಜ್ಞೇಯಂ ಶ್ರೀಧರಂ ರೂಪಂ ಶ್ರೀಪದಂ ಗೃಹಿಣಾಂ ಸದಾ ॥೬೨॥

ಸ್ಥೂಲಂ ಚ ವರ್ತುಲಾಕಾರಂ ರಹಿತಂ ವನಮಾಲಯಾ ।
ದ್ವಿಚಕ್ರಂ ಸ್ಫುಟಿಮತ್ಯಂತಂ ಜ್ಞೇಯಂ ದಾಮೋದರಾಭಿದಂ ॥೬೩॥

ಮಧ್ಯಮಂ ವರ್ತುಲಾಕಾರಂ ದ್ವಿಚಕ್ರಂ ಬಾಣವಿಕ್ಷತಂ ।
ರಣರಾಮಾಭಿದಂ ಜ್ಞೇಯಂ ಶರತೂಣಸಮನ್ವಿತಂ ॥೬೪॥

---

ಎರಡು ವದನವೂ ನಾಲ್ಕು ಚಕ್ರಗಳಳೂ ಗೋವಿನ ಪಾದದ ಗುರುತೂ ಇದ್ದು ವನಮಾಲೆಯಿಲ್ಲದ್ದರೆ ರಘುನಾಥಸಾಲಿಗ್ರಾಮವು. ॥೬೦॥

ಮೇಘವರ್ಣದ ಕಾಂತಿಯಿಂದ ಕೂಡಿದ ಬಹಳ ಸಣ್ಣದಾಗಿ ಎರಡು ಚಕ್ರಗಳಿದ್ದು ವನಮಾಲೆ ಇಲ್ಲದಿದ್ದರೆ ಅದು ವಾಮನ ಸಾಲಿಗ್ರಾಮವು. ಗೃಹಸ್ಥರಿಗೆ ಸಂಪತ್ತನ್ನು ಕೊಡತಕ್ಕುದು. ॥೬೧-೬೨॥

ಗುಂಡಗೆ ದಪ್ಪವಾಗಿ ವನಮಾಲೆಯಿಲ್ಲದೆ ಎರಡು ಚಕ್ರಗಳು ಸ್ಪಷ್ಟವಾಗಿ ಕಾಣುತ್ತಿದ್ದರೆ ಅದು ದಾಮೋದರ ಸಾಲಿಗ್ರಾಮವು. ॥೬೩॥

ಗುಂಡಗೆ ಸಾಮಾನ್ಯಗಾತ್ರವಾಗಿ ಎರಡು ಚಕ್ರವಿದ್ದು ಬಾಣದ ಏಟಿನ ಗುರುತೂ ಬಾಣ ಮತ್ತು ಬತ್ತಳಿಕೆಯ ಗುರುತೂ ಇದ್ದರೆ ರಣರಾಮಸಾಲಿಗ್ರಾಮವು. ॥೬೪॥

ಮಧ್ಯಮಂ ಸಪ್ತಚಕ್ರಂ ಚ ಛತ್ರಭೂಷಣಭೂಷಿತಂ ।
ರಾಜರಾಜೇಶ್ವರಂ ಜ್ಞೇಯಂ ರಾಜಸಂಪತ್ಪ್ರದಂ ನೃಣಾಂ ॥೬೫॥

ದ್ವಿಸಪ್ತಚಕ್ರಂ ಸ್ಥೂಲಂ ಚ ನವನೀರದಸುಪ್ರಭಂ ।
ಅನಂತಾಖ್ಯಂ ಚ ವಿಜ್ಞೇಯಂ ಚತುರ್ವರ್ಗಫಲಪ್ರದಂ ॥೬೬॥

ಚಕ್ರಾಕಾರಂ ದ್ವಿಚಕ್ರಂ ಚ ಸಶ್ರೀಕಂ ಜಲದಪ್ರಭಂ ।
ಸಗೋಷ್ಪದಂ ಮಧ್ಯಮಂ ಚ ವಿಜ್ಞೇಯಂ ಮಧುಸೂದನಂ ॥೬೭॥

ಸುದರ್ಶನಂ ಚೈಕಚಕ್ರಂ ಗುಪ್ತಚಕ್ರಂ ಗದಾಧರಂ ।
ದ್ವಿಚಕ್ರಂ ಹಯವಕ್ತ್ರಾಭಂ ಹಯಗ್ರೀವಂ ಪ್ರಕೀರ್ತಿತಂ ॥೬೮॥

ಅತೀವವಿಸ್ತೃತಾಸ್ಯಂ ಚ ದ್ವಿಚಕ್ರಂ ವಿಕಟಂ ಸತಿ ।
ನರಸಿಂಹಂ ಸುವಿಜ್ಞೇಯಂ ಸದ್ಯೋ ವೈರಾಗ್ಯದಂ ನೃಣಾಂ ॥೬೯॥

---

ಸಾಮಾನ್ಯ ಗಾತ್ರವಾಗಿ ಏಳು ಚಕ್ರಗಳೂ ಛತ್ರಿಯ ಗುರುತೂ ಇದ್ದು ಅಲಂಕಾರವಾಗಿ ಕಾಣುವುದು ರಾಜರಾಜೇಶ್ವರ ಸಾಲಿಗ್ರಾಮವು. ಜನರಿಗೆ ರಾಜಸಂಪತ್ತನ್ನು ಕೊಡುವುದು. ಹದಿನಾಲ್ಕು ಚಕ್ರವಿದ್ದು ದಪ್ಪವಾಗಿದ್ದರೆ ಅನಂತ ಸಾಲಿಗ್ರಾಮವು. ಚತುರ್ವರ್ಗಫಲಪುರುಷಾರ್ಥಗಳನ್ನು ಕೊಡುವುದು. ॥೬೫-೬೬॥

ಸಾಮಾನ್ಯಗಾತ್ರವಾಗಿ ಚಕ್ರದ ಆಕಾರವಾಗಿ ಎರಡು ಚಕ್ರಗಳಿಂದ ಕೂಡಿ ಗೋವಿನ ಪಾದದ ಗುರುತಿದ್ದು ಮೇಘದ ಬಣ್ಣದಂತೆ ಹೊಳೆಯುವುದು, ಮಧುಸೂದನ ಸಾಲಿಗ್ರಾಮವು. (ಎಡಭಾಗದಲ್ಲಿ ಲಕ್ಷ್ಮೀಚಿಹ್ನೆ ಇರುವುದೆಂದು ಬೇರೇ ವ್ಯಾಖ್ಯಾನದಲ್ಲಿದೆ.) ॥೬೭॥

ಒಂದೇ ಚಕ್ರವಿರುವುದು ಸುದರ್ಶನಸಾಲಿಗ್ರಾಮವು. ಚಕ್ರವು ಕಾಣದಿದ್ದರೆ ಗದಾಧರ ಸಾಲಿಗ್ರಾಮವು. ಎರಡು ಚಕ್ರವಿದ್ದು ಕುದುರೆಯ ಮುಖದಂತಿದ್ದರೆ ಹಯಗ್ರೀವಸಾಲಿಗ್ರಾಮವು. ॥೬೮॥

ಬಹಳ ವಿಸ್ತಾರವಾದ ವದನವೂ ಎರಡು ಚಕ್ರವೂ ವಿಕಾರ (ಭಯಂಕರ) ವೂ ಆಗಿದ್ದರೆ ಅದು ನರಸಿಂಹಸಾಲಿಗ್ರಾಮವು. ಇದರ ಪೂಜೆಯು ಜನರಿಗೆ ಬೇಗನೆ ವೈರಾಗ್ಯವನ್ನು ಹುಟ್ಟಿಸುವುದು. ಮೋಕ್ಷಪ್ರದವಾದುದು ಎಂದು ಅಭಿಪ್ರಾಯವು. ॥೬೯॥

ದ್ವಿಚಕ್ರಂ ವಿಸ್ತೃತಾಸ್ಯಂ ಚ ವನಮಾಲಾಸಮನ್ವಿತಂ ।
ಲಕ್ಷ್ಮೀನೃಸಿಂಹಂ ವಿಜ್ಞೇಯಂ ಗೃಹಿಣಾಂ ಚ ಸುಖಪ್ರದಂ ॥೭೦॥

ದ್ವಾರದೇಶೇ ದ್ವಿಚಕ್ರಂ ಚ ಸಶ್ರೀಕಂ ಚ ಸಮಂ ಸ್ಫುಟಂ ।
ವಾಸುದೇವಂ ತು ವಿಜ್ಞೇಯಂ ಸರ್ವಕಾಮಫಲಪ್ರದಂ ॥೭೧॥

ಪ್ರದ್ಯುಮ್ನಂ ಸೂಕ್ಷ್ಮಚಕ್ರಂ ಚ ನವೀನನೀರದಪ್ರಭಂ ।
ಸುಷಿರಛಿದ್ರಬಹುಲಂ ಗೃಹಿಣಾಂ ಚ ಸುಖಪ್ರದಂ ॥೭೨॥

ದ್ವೇ ಚಕ್ರೇ ಚೈಕಲಗ್ನೇ ಚ ಪೃಷ್ಠಂ ಯತ್ರ ತು ಪುಷ್ಕಲಂ ।
ಸಂಕರ್ಷಣಂ ಸುವಿಜ್ಞೇಯಂ ಸುಖದಂ ಗೃಹಿಣಾಂ ಸದಾ ॥೭೩॥

ಅನಿರುದ್ಧಂ ತು ಪೀತಾಭಂ ವರ್ತುಲಂ ಚಾತಿಶೋಭನಂ ।
ಸುಖಪ್ರದಂ ಗೃಹಸ್ಥಾನಾಂ ಪ್ರವದಂತಿ ಮನೀಷಿಣಃ ॥೭೪॥

---

ವಿಸ್ತಾರವಾದ ವದನವೂ ಎರಡು ಚಕ್ರಗಳೂ ವನಮಾಲೆಯೂ ಇದ್ದರೆ ಲಕ್ಷ್ಮೀನೃಸಿಂಹಸಾಲಿಗ್ರಾಮವು. ಗೃಹಸ್ಥರಿಗೆ ಸುಖವನ್ನು ಕೊಡತಕ್ಕುದು. ॥೭೦॥

ವದನದ ಮುಂಭಾಗದಲ್ಲಿಯೇ ಎರಡು ಚಕ್ರವಿದ್ದು ಸಮವಾಗಿಯೂ ಸ್ಫುಟವಾಗಿಯೂ ಕಾಂತಿಯುಕ್ತವಾಗಿಯೂ ಇದ್ದರೆ ವಾಸುದೇವ ಸಾಲಿಗ್ರಾಮವು. ಸಮಸ್ತ ಇಷ್ಟಾರ್ಥಗಳನ್ನೂ ಕೊಡತಕ್ಕುದು. ॥೭೧॥

ಅನೇಕ ರಂಧ್ರಗಳಿದ್ದು ಸೂಕ್ಷ್ಮವಾದ ಒಂದು ಚಕ್ರವಿದ್ದು ಮೇಘಛಾಯೆಯಿಂದ ಕೂಡಿದ್ದರೆ ಪ್ರದ್ಯುಮ್ನ ಸಾಲಿಗ್ರಾಮವು. ಗೃಹಸ್ಥರಿಗೆ ಸುಖದಾಯಕವಾದುದು. ॥೭೨॥

ಒಂದಕ್ಕೊಂದು ಸೇರಿದ ಎರಡು ಚಕ್ರಗಳಿದ್ದು ಹಿಂಭಾಗವು ವಿಸ್ತಾರವಾಗಿದ್ದರೆ ಅದು ಸಂಕರ್ಷಣಸಾಲಿಗ್ರಾಮವು. ಸುಖಪ್ರದವಾದುದು. ॥೭೩॥

ಹಳದಿಯ ಬಣ್ಣದ ಕಾಂತಿಯಿಂದ ಕೂಡಿ ಗುಂಡಾಗಿ ಮನೋಹರವಾಗಿರುವುದು ಅನಿರುದ್ಧಸಾಲಿಗ್ರಾಮವು. ಗೃಹಸ್ಥರಿಗೆ ಸೌಖ್ಯವನ್ನುಂಟುಮಾಡುವುದು. ॥೭೪॥

ಶಾಲಗ್ರಾಮಶಿಲಾ ಯತ್ರ ತತ್ರ ಸನ್ನಿಹಿತೋ ಹರಿಃ ।
ತತ್ರೈವ ಲಕ್ಷ್ಮೀರ್ವಸತಿ ಸರ್ವತೀರ್ಥಸಮನ್ವಿತಾ ॥೭೫॥

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।
ತಾನಿ ಸರ್ವಾಣಿ ನಶ್ಯಂತಿ ಶಾಲಗ್ರಾಮಶಿಲಾರ್ಚನಾತ್ ॥೭೬॥

ಛತ್ರಾಕಾರೇ ಭವೇದ್ರಾಜ್ಯಂ ವರ್ತುಲೇ ಚ ಮಹಾಶ್ರಿಯಃ ।
ದುಃಖಂ ಚ ಶಕಟಾಕಾರೇ ಶೂಲಾಗ್ರೇ ಮರಣಂ ಧ್ರುವಂ ॥೭೭॥

ವಿಕೃತಾಸ್ಯೇ ಚ ದಾರಿದ್ರ್ಯಂ ಪಿಂಗಲೇ ಹಾನಿರೇವ ಚ ।
ಭಗ್ನಚಕ್ರೇ ಭವೇದ್ವ್ಯಾಧಿರ್ವಿದೀರ್ಣೇ ಮರಣಂ ಧ್ರುವಂ ॥೭೮॥

ವ್ರತಂ ದಾನಂ ಪ್ರತಿಷ್ಠಾ ಚ ಶ್ರಾದ್ಧಂ ಚ ದೇವಪೂಜನಂ ।
ಶಾಲಗ್ರಾಮಸ್ಯ ಸಾನ್ನಿಧ್ಯಾತ್ಪ್ರಶಸ್ತಂ ತದ್ಭವೇದಿತಿ ॥೭೯॥

---

ಎಲ್ಲಿ ಸಾಲಿಗ್ರಾಮವಿರುವುದೋ ಅಲ್ಲಿ ಹರಿಯು ಇರುವನು. ಅಲ್ಲಿಯೇ ಸಮಸ್ತ ತೀರ್ಥಗಳೊಡನೆ ಲಕ್ಷ್ಮಿಯೂ ವಾಸವಾಗಿರುವಳು. ಬ್ರಹ್ಮಹತ್ಯವೇ ಮೊದಲಾದ ಸಮಸ್ತ ಪಾಪಗಳೂ ಸಾಲಗ್ರಾಮಪೂಜೆಯಿಂದ ನಾಶವಾಗುವುವು. ||೭೫-೭೬||

ಸಾಲಿಗ್ರಾಮವು ಛತ್ರಿಯ ಆಕಾರವಾಗಿದ್ದರೆ ರಾಜ್ಯಲಾಭವಾಗುವುದು. ಗುಂಡಾಗಿದ್ದರೆ ಮಹಾಸಂಪತ್ತುಗಳುಂಟಾಗುವುವು. ಬಂಡಿಯ ಗಾಲಿಯ ಆಕಾರವಾಗಿದ್ದರೆ ದುಃಖವೂ, ತುದಿಯು ಶೂಲಾಕಾರವಾಗಿದ್ದರೆ ಮರಣವೂ, ವದನವು ವಿಕಾರವಾಗಿದ್ದರೆ ದರಿದ್ರತೆಯೂ, ಕೆಂಪುಬಣ್ಣದಿಂದಿದ್ದರೆ ಹಾನಿಯೂ, ಚಕ್ರವು ಮುರಿದುಹೋಗಿದ್ದರೆ ರೋಗವೂ, ಶೀಳಿಹೋಗಿದ್ದರೆ ಮರಣವೂ ಉಂಟಾಗುವುದು. ||೭೭-೭೮||

ವ್ರತವನ್ನೂ, ದಾನವನ್ನೂ, ತಟಾಕ, ಆರಾಮಾದಿಗಳ ಪ್ರತಿಷ್ಠೆಯನ್ನೂ ಶ್ರಾದ್ಧವನ್ನೂ ದೇವತೆ ಮುಂತಾದುವುಗಳ ಪೂಜೆಯನ್ನೂ ಸಾಲಿಗ್ರಾಮದ ಸಮೀಪದಲ್ಲಿ ಮಾಡಿದರೆ ಫಲದಾಯಕವಾದುದಾಗಿ ಶ್ರೇಷ್ಠವಾಗುವುದು. ||೭೯||

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ಸರ್ವಯಜ್ಞೇಷು ತೀರ್ಥೇಷು ವ್ರತೇಷು ಚ ತಪಸ್ಸು ಚ ॥೮೦॥

ಪಾಠೇ ಚತುರ್ಣಾಂ ವೇದಾನಾಂ ತಪಸಾಂ ಕರಣೇ ಸತಿ ।
ತತ್ಪುಣ್ಯಂ ಲಭತೇ ನೂನಂ ಶಾಲಗ್ರಾಮ ಶಿಲಾರ್ಚನಾತ್ ॥೮೧॥

ಶಾಲಗ್ರಾಮಶಿಲಾತೋಯಂ ನಿತ್ಯಂ ಭುಙ್ಕ್ತೇ ಚ ಯೋ ನರಃ ।
ಸುರೇಪ್ಸಿತಂ ಪ್ರಸಾದಂ ಚ ಲಭತೇ ನಾಽತ್ರ ಸಂಶಯಃ ॥೮೨॥

ತಸ್ಯ ಸ್ಪರ್ಶಂ ಚ ವಾಂಛಂತಿ ತೀರ್ಥಾನಿ ನಿಖಿಲಾನಿ ಚ ।
ಜೀವನ್ಮುಕ್ತೋ ಮಹಾಪೂತೋಽಪ್ಯಂತೇ ಯಾತಿ ಹರೇಃ ಪದಂ॥೮೩॥

ತತ್ರೈವ ಹರಿಣಾ ಸಾರ್ಧಮಸಂಖ್ಯಂ ಪ್ರಾಕೃತಂ ಲಯಂ ।
ಯಾಸ್ಯತ್ಯೇವ ಹಿ ದಾಸ್ಯೇ ಚ ನಿಯುಕ್ತೋ ದಾಸ್ಯಕರ್ಮಣಿ ॥೮೪॥

---

ಸಾಲಗ್ರಾಮಶಿಲೆಯನ್ನು ಪೂಜೆಮಾಡಿದವನಿಗೆ ಸಕಲತೀರ್ಥಸ್ನಾನಮಾಡಿದ ಸಮಸ್ತ ಯಜ್ಞಗಳನ್ನು ಮಾಡಿದ ಸಕಲ ವ್ರತಗಳನ್ನೂ ತಪಸ್ಸುಗಳನ್ನೂ ಮಾಡಿದ ನಾಲ್ಕು ವೇದಗಳನ್ನೂ ಅಭ್ಯಾಸಮಾಡಿದ ಪುಣ್ಯವು ಬರುವುದು. ಇದು ನಿಶ್ಚಯವಾದುದು. ||೮೦-೮೧||

" ಶಾಲಿಗ್ರಾಮಶಿಲಾತೋಯೈರ್ಯೋಽಭಿಷೇಕಂ ಸದಾ ಚರೇತ್ ।
ಸರ್ವದಾನೇಷು ಯತ್ಪುಣ್ಯಂ ಪ್ರದಕ್ಷಿಣಂ ಭುವೋ ಯಥಾ ॥ "

ಸಾಲಿಗ್ರಾಮಶಿಲೆಯ ಸಂಬಂಧವಾದ ನೀರಿನಿಂದ ಯಾವನು ಪ್ರತಿದಿನವೂ ಸ್ನಾನಮಾಡುವನೋ ಅವನಿಗೆ ಸಮಸ್ತ ದಾನಗಳನ್ನೂ ಮಾಡಿದ ಮತ್ತು ಭೂಪ್ರದಕ್ಷಿಣೆಯನ್ನು ಮಾಡಿದ ಪುಣ್ಯವು ಬರುವುದು.

ಪ್ರತಿದಿನವೂ ಯಾವ ಮನುಷ್ಯನು ಸಾಲಿಗ್ರಾಮತೀರ್ಥವನ್ನು ತೆಗೆದುಕೊಳ್ಳುವನೋ ಅವನು ದೇವತೆಗಳಿಗಿಷ್ಟವಾದ ಪರಮಾತ್ಮನ ಅನುಗ್ರಹವನ್ನು ಪಡೆಯುವನು. ಸಕಲ ತೀರ್ಥಗಳೂ ಅವನ ಸ್ಪರ್ಶವನ್ನಪೇಕ್ಷಿಸುವುವು. ಅವನು ಜೀವನ್ಮುಕ್ತನಾಗಿ ಮಹಾಪರಿಶುದ್ಧನಾಗಿದ್ದು ಕೊನೆಯಲ್ಲಿ ವಿಷ್ಣುಸ್ಥಾನವಾದ ವೈಕುಂಠಕ್ಕೆ ಹೋಗುವನು. ಅಲ್ಲಿ ವಿಷ್ಣುವಿನೊಡನೆಯೇ ಅವನ ಸೇವಾಕಾರ್ಯದಲ್ಲಿದ್ದುಕೊಂಡು ಲೆಕ್ಕವಿಲ್ಲದಷ್ಟು ಪ್ರಾಕೃತಪ್ರಲಯಗಳನ್ನು ಕಳೆಯುವನು. ||೮೨-೮೩-೮೪||

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ ।
ತಂ ದೃಷ್ಟ್ವಾ ಚ ಪಲಾಯಂತೇ ವೈನತೇಯಾದಿವೋರಗಾಃ ॥೮೪॥

ತತ್ಪಾದರಜಸಾ ದೇವೀ ಸದ್ಯಃ ಪೂತಾ ವಸುಂಧರಾ ।
ಪುಂಸಾಂ ಲಕ್ಷಂ ತತ್ಪಿತೄಣಾಂ ನಿಸ್ತರೇತ್ತಸ್ಯ ಜನ್ಮತಃ ॥೮೫॥

ಶಾಲಗ್ರಾಮಶಿಲಾತೋಯಂ ಮೃತ್ಯುಕಾಲೇ ಚ ಯೋ ಲಭೇತ್ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥೮೭॥

ನಿರ್ವಾಣಮುಕ್ತಿಂ ಲಭತೇ ಕರ್ಮಭೋಗಾತ್ಪ್ರಮುಚ್ಯತೇ ।
ವಿಷ್ಣೋಃ ಪದೇ ಪ್ರಲೀನಶ್ಚ ಭವಿಷ್ಯತಿ ನ ಸಂಶಯಃ ॥೮೮॥

ಶಾಲಗ್ರಾಮಶಿಲಾಂ ಧೃತ್ವಾ ಮಿಥ್ಯಾವಾಕ್ಯಂ ವದೇತ್ತು ಯಃ ।
ಸ ಯಾತಿ ಕುಂಭೀಪಾಕೇ ಚ ಯಾವದ್ವೈ ಬ್ರಹ್ಮಣೋ ವಯಃ॥೮೯॥

ಶಾಲಗ್ರಾಮಶಿಲಾಂ ಧೃತ್ವಾ ಸ್ವೀಕಾರಂ ಯೋ ನ ಪಾಲಯೇತ್ ।
ಸ ಪ್ರಯಾತ್ಯಸಿಪತ್ರಂ ಚ ಲಕ್ಷಮನ್ವಂತರಾವಧಿ ॥೯೦॥

---

ಅವನನ್ನು ನೋಡಿ ಬ್ರಹ್ಮಹತ್ಯೆಗೆ ಸಮಾನವಾದ ಪಾಪಗಳೆಲ್ಲವೂ ಗರುಡನನ್ನು ನೋಡಿ ಸರ್ಪಗಳು ಓಡುವಂತೆ ಓಡಿಹೋಗುವುವು. ಅವನ ಪಾದಧೂಳಿಯಿಂದ ಭೂಮಿಯು ಪರಿಶುದ್ಧವಾಗುವುದು. ಅವನು ಯಾವ ವಂಶದಲ್ಲಿ ಹುಟ್ಟಿರುವನೋ ಆ ವಂಶದಲ್ಲಿ ಲಕ್ಷಪಿತೃಗಳು ಮುಕ್ತಿಯನ್ನು ಹೊಂದುವರು. ||೮೪-೮೫||

ಮರಣಕಾಲದಲ್ಲಿ ಸಾಲಿಗ್ರಾಮತೀರ್ಥವು ಯಾವನಿಗೆ ದೊರೆಯುವುದೋ ಅವನು ಸಕಲ ಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕಕ್ಕೆ ಹೋಗುವನು. ಅವನಿಗೆ ಕರ್ಮಭೋಗಗಳೆಲ್ಲಾ ಕಳೆದು ನಿರ್ವಾಣಮುಕ್ತಿಯುಂಟಾಗಿ ವಿಷ್ಣುಸಾಯುಜ್ಯವುಂಟಾಗುವುದು. ಸಂದೇಹವಿಲ್ಲ. ||೮೭-೮೮||

ಸಾಲಿಗ್ರಾಮವನ್ನು ಹಿಡಿದು ಯಾವನು ಸುಳ್ಳನ್ನು ಹೇಳುವನೋ ಅವನು ಬ್ರಹ್ಮನ ಆಯಸ್ಸು ಕಳೆಯುವವರೆಗೂ ಕುಂಭೀಪಾಕವೆಂಬ ನರಕದಲ್ಲಿರುವನು. ಯಾವನು ತಾನು ಮಾಡಿದ ಸಂಕಲ್ಪವನ್ನು ನಡೆಸುವುದಿಲ್ಲವೋ ಅವನು ಲಕ್ಷಮನ್ವಂತರಗಳವರೆಗೂ ಅಸಿಪತ್ರವೆಂಬ ನರಕದಲ್ಲಿರುವನು. ||೮೯-೯೦||

ತುಲಸೀಪತ್ರವಿಚ್ಛೇದಂ ಶಾಲಿಗ್ರಾಮೇ ಕರೋತಿ ಯಃ ।
ತಸ್ಯ ಜನ್ಮಾಂತರೇ ಕಾಂತೇ ಸ್ತ್ರೀವಿಚ್ಛೇದೋ ಭವಿಷ್ಯತಿ ॥೯೧॥

ತುಲಸೀಪತ್ರವಿಚ್ಛೇದಂ ಶಂಖೇ ಯೋ ಹಿ ಕರೋತಿ ಚ ।
ಭಾರ್ಯಾಹೀನೋ ಭವೇತ್ಸೋಽಪಿ ರೋಗೀ ಚ ಸಪ್ತಜನ್ಮಸು ॥೯೨॥

ಶಾಲಿಗ್ರಾಮಂ ಚ ತುಲಸೀಂ ಶಂಖಂ ಚೈಕತ್ರಮೇವ ಚ ।
ಯೋ ರಕ್ಷತಿ ಮಹಾಜ್ಞಾನೀ ಸ ಭವೇಚ್ಛ್ರೀಹರೇಃ ಪ್ರಿಯಃ ॥೯೩॥

ಸಕೃದೇವ ಹಿ ಯೋ ಯಸ್ಯಾಂ ವೀರ್ಯಾಧಾನಂ ಕರೋತಿ ಚ ।
ತದ್ವಿಚ್ಛೇದೇ ತಸ್ಯ ದುಃಖಂ ಭವೇದೇವ ಪರಸ್ಪರಂ ॥೯೪॥

ತ್ವಂ ಪ್ರಿಯಾ ಶಂಖಚೂಡಸ್ಯ ಚೈಕಮನ್ವಂತರಾವಧಿ ।
ಶಂಖೇನ ಸಾರ್ಧಂ ತಚ್ಛೇದಃ ಕೇವಲಂ ದುಃಖದಸ್ತಥಾ ॥೯೫॥

ಇತ್ಯುಕ್ತ್ವಾ ಶ್ರೀಹರಿಸ್ತಾಂ ಚ ವಿರರಾಮ ಚ ನಾರದ ।
ಸಾ ಚ ದೇಹಂ ಪರಿತ್ಯಜ್ಯ ದಿವ್ಯರೂಪಂ ವಿಧಾಯ ಚ ॥೯೬॥

---

ಸಾಲಿಗ್ರಾಮಕ್ಕೂ ತುಲಸಿಗೂ ಸಂಬಂಧವನ್ನು ಯಾರು ತಪ್ಪಿಸುವರೋ ಅವರಿಗೆ ಜನ್ಮಾಂತರದಲ್ಲಿ ಪತ್ನಿಯಿಲ್ಲದೆ ಹೋಗುವಳು. ತುಲಸಿಗೂ ಶಂಖಕ್ಕೂ ಸಂಬಂಧವನ್ನು ತಪ್ಪಿಸಿದವನು ಏಳು ಜನ್ಮಗಳ ವರೆಗೆ ಹೆಂಡಿತಿಯಿಲ್ಲದವನಾಗಿ ರೋಗಿಯಾಗುವನು. ॥೯೧-೯೨॥

ಸಾಲಿಗ್ರಾಮವನ್ನೂ ತುಲಸಿಯನ್ನೂ ಶಂಖವನ್ನೂ ಒಂದೇ ಎಡೆಯಲ್ಲಿ ಯಾರು ಇಟ್ಟು ಕಾಪಾಡಿಕೊಂಡು ಬರುವರೋ ಅವರು ಮಹಾಜ್ಞಾನಿಗಳಾಗಿ ವಿಷ್ಣುವಿಗೆ ಪ್ರೀತಿಪಾತ್ರರಾಗುವರು. ॥೯೩॥

ಒಂದಾವೃತ್ತಿ ಒಬ್ಬನು ಒಬ್ಬ ಸ್ತ್ರೀಯಲ್ಲಿ ಸಂಬಂಧವನ್ನು ಮಾಡಿದರೆ ಅವರಿಬ್ಬರಿಗೂ ಅಗಲಿಕೆಯುಂಟಾದಲ್ಲಿ ಇಬ್ಬರಿಗೂ ದುಃಖವುಂಟಾಗುವುದು. ॥೯೪॥

ನೀನು ಶಂಖಚೂಡನಿಗೆ ಒಂದು ಮನ್ವಂತರದಿಂದ ಪತ್ನಿಯಾಗಿರುವೆ. ಆದುದರಿಂದ ಶಂಖಚೂಡನೊಡನೆ ನಿನ್ನ ಅಗಲುವಿಕೆಯು ನಿನಗೆ ವಿಶೇಷ ದುಃಖವನ್ನುಂಟುಮಾಡಿರುವುದು. ಹೀಗೆಂದು ತುಲಸಿಗೆ ಹೇಳಿ ನಾರಾಯಣನು ಸುಮ್ಮನಾದನು.॥೯೫॥

ತುಲಸಿಯು ಆ ಶರೀರವನ್ನು ಬಿಟ್ಟು ದಿವ್ಯರೂಪವನ್ನು ಪಡೆದು ಲಕ್ಷ್ಮಿಯಂತೆ

ಯಥಾ ಶ್ರೀಶ್ಚ ತಥಾ ಸಾ ಚಾಪ್ಯುವಾಸ ಹರಿವಕ್ಷಸಿ ।
ಸ ಜಗಾಮ ತಯಾ ಸಾರ್ಧಂ ವೈಕುಂಠಂ ಕಮಲಾಪತಿಃ ॥೯೭॥

ಲಕ್ಷ್ಮೀಃ ಸರಸ್ವತೀ ಗಂಗಾ ತುಲಸೀ ಚಾಪಿ ನಾರದ ।
ಹರೇಃ ಪ್ರಿಯಾಶ್ಚತಸ್ರಶ್ಚ ಬಭೂವುರೀಶ್ವರಸ್ಯ ಚ ॥೯೮॥

ಸದ್ಯಸ್ತದ್ದೇಹಜಾತಾ ಚ ಬಭೂವ ಗಂಡಕೀ ನದೀ ।
ಈಶ್ವರಸ್ಸೋಽಪಿ ಶೈಲಶ್ಚ ತತ್ತೀರೇ ಪುಣ್ಯದೋ ನೃಣಾಂ ॥೯೯॥

ಕುರ್ವಂತಿ ತತ್ರಕೀಟಾಶ್ಚ ಶಿಲಾಂ ಬಹುವಿಧಾಂ ಮುನೇ ।
ಜಲೇ ಪತಂತಿ ಯಾ ಯಾಶ್ಚ ಫಲದಾಸ್ತಾಶ್ಚ ನಿಶ್ಚಿತಂ ॥೧೦೦॥

ಸ್ಥಲಸ್ಥಾಃ ಪಿಂಗಲಾ ಜ್ಞೇಯಾಶ್ಶೋಪತಾಪಾದ್ರವೇರಿತಿ ।
ಇತ್ಯೇವಂ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೧೦೧॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಚತುರ್ವಿಂಶೋಽಧ್ಯಾಯಃ

---

ಯೇ ಅವಳೂ ಕೂಡ ಹರಿಯ ಹೃದಯದಲ್ಲಿಯೇ ವಾಸವಾಗಿದ್ದಳು. ಆ ವಿಷ್ಣುವು ಆ ತುಲಸಿಯೊಡನೆ ವೈಕುಂಠಕ್ಕೆ ಪ್ರಯಾಣ ಮಾಡಿದನು. ||೯೬-೯೭||

ನಾರದನೇ, ಕೇಳು. ಲಕ್ಷ್ಮೀ, ಸರಸ್ವತೀ, ಗಂಗೆ, ತುಲಸೀ, ಈ ನಾಲ್ವರು ಹರಿಯ ಪತ್ನಿಯರು. ತುಲಸಿಯ ದೇಹದಿಂದ ಗಂಡಕೀನದಿಯು ಹುಟ್ಟಿತು. ವಿಷ್ಣುವು ಆ ನದೀತೀರದಲ್ಲಿ ಕಲ್ಲಾಗಿ ಜನರಿಗೆ ಪುಣ್ಯವನ್ನು ಕೊಡತಕ್ಕವನಾದನು. ಆ ನದಿಯ ದಡದಲ್ಲಿ ಹುಳುಗಳು ಅನೇಕ ಬಗೆಯ ಕಲ್ಲುಗಳನ್ನು ಮಾಡುವುವು. ಯಾವ ಯಾವ ಕಲ್ಲುಗಳು ನೀರಿನೊಳಗೆ ಬೀಳುವುವೋ ಅವೆಲ್ಲವೂ ಫಲದಾಯಕಗಳು. ನೆಲದ ಮೇಲಿರುವುವು ಸೂರ್ಯನ ತಾಪದಿಂದ ಪಿಂಗಳವರ್ಣವಾಗಿರುವುವು. ಈ ರೀತಿಯಲ್ಲಿ ಎಲ್ಲವನ್ನೂ ಹೇಳಿರುವೆನು. ಮತ್ತೇನನ್ನು ಕೇಳಬೇಕೆಂದಿರುವೆ? ಎಂದು ನಾರಾಯಣ ಮುನಿಯು ಹೇಳಿದನು. ||೯೮-೯೯-೧೦೦-೧೦೧||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ನವಮಸ್ಕಂಧೇ

### ॥ ಪಂಚವಿಂಶೋಽಧ್ಯಾಯಃ ॥

### ಇಪ್ಪತ್ತೈದನೆಯ ಅಧ್ಯಾಯವು

॥ ನಾರದ ಉವಾಚ ॥

**ತುಲಸೀ ಚ ಯದಾ ಪೂಜ್ಯಾ ಕೃತಾ ನಾರಾಯಣಪ್ರಿಯಾ ।**
**ಅಸ್ಯಾಃ ಪೂಜಾವಿಧಾನಂ ಚ ಸ್ತೋತ್ರಂ ಚ ವದ ಸಾಂಪ್ರತಂ ॥೧॥**

**ಕೇನ ಪೂಜಾ ಕೃತಾ ಕೇನ ಸ್ತುತಾ ಪ್ರಥಮತೋ ಮುನೇ ।**
**ತತ್ರ ಪೂಜ್ಯಾ ಸಾ ಬಭೂವ ಕೇನ ವಾ ವದ ಮಾಮಹೋ ॥೨॥**

**ನಾರದಸ್ಯ ವಚಃ ಶ್ರುತ್ವಾ ಪ್ರಹಸ್ಯ ಮುನಿಪುಂಗವಃ ।**
**ಕಥಾಂ ಕಥಿತುಮಾರೇಭೇ ಪುಣ್ಯಾಂ ಪಾಪಹರಾಂ ಪರಾಂ ॥೩॥**

---

ಎಲೈ ನಾರಾಯಣ ಮುನಿಯೇ, ನಾರಾಯಣನಿಗೆ ಪ್ರೀತಿಪಾತ್ರಳಾದ ತುಲಸಿಯು ಯಾವಾಗ ಪೂಜಾರ್ಹಳಾದಳು? ಆ ತುಲಸಿಯ ಪೂಜಾವಿಧಾನವನ್ನೂ, ಸ್ತೋತ್ರವನ್ನೂ ನನಗೆ ಹೇಳಬೇಕು. ಮೊದಲು ತುಲಸಿಯನ್ನು ಯಾರು ಪೂಜಿಸಿದರು? ಯಾರು ಸ್ತೋತ್ರವನ್ನು ಮಾಡಿದರು? ಅವಳು ಯಾರಿಂದ ಪೂಜ್ಯಳಾಗಿಮಾಡಲ್ಪಟ್ಟಳು? ಇವೆಲ್ಲವನ್ನೂ ನನಗೆ ಹೇಳಬೇಕು. ಎಂದು ನಾರದನು ಪ್ರಶ್ನೆ ಮಾಡಿದನು. ॥೧-೨॥

ಸೂತ ಉವಾಚ—ನಾರದನ ಮಾತನ್ನು ಕೇಳಿ ನಾರಾಯಣಮುನಿಯು ನಕ್ಕು ಪಾಪನಾಶಕರವಾದ ಮತ್ತು ಪುಣ್ಯವನ್ನುಂಟುಮಾಡುವ ಕಥೆಯನ್ನು ಹೇಳುವುದಕ್ಕೆ ಪ್ರಾರಂಭಿಸಿದನು. ॥೩॥

|| ನಾರಾಯಣ ಉವಾಚ ||

**ಹರಿಃ ಸಂಪೂಜ್ಯ ತುಲಸೀಂ ರೇಮೇ ಚ ರಮಯಾ ಸಹ ।**
**ರಮಾ ಸಮಾನಸೌಭಾಗ್ಯಾಂ ಚಕಾರ ಗೌರವೇಣ ಚ ||೪||**

**ಸೇಹೇ ಚ ಲಕ್ಷ್ಮೀರ್ಗಂಗಾ ಚ ತಸ್ಯಾಶ್ಚ ನವಸಂಗಮಂ ।**
**ಸೌಭಾಗ್ಯಗೌರವಂ ಕೋಪಾತ್ತನ್ನ ಸೇಹೇ ಸರಸ್ವತೀ ||೫||**

**ಸಾ ತಾಂ ಜಘಾನ ಕಲಹೇ ಮಾನಿನೀ ಹರಿಸನ್ನಿಧೌ ।**
**ವ್ರೀಡಯಾ ಚಾಽಪಮಾನೇನ ಸಾಽಂತರ್ಧಾನಂ ಚಕಾರ ಹ ||೬||**

**ಸರ್ವಸಿದ್ಧೇಶ್ವರೀ ದೇವೀ ಜ್ಞಾನಿನಾಂ ಸಿದ್ಧಯೋಗಿನೀ ।**
**ಜಗಾಮಾದರ್ಶನಂ ಕೋಪಾತ್ಸರ್ವತ್ರ ಚ ಹರೇರಹೋ ||೭||**

**ಹರಿರ್ನ ದೃಷ್ಟ್ವಾ ತುಲಸೀಂ ಬೋಧಯಿತ್ವಾ ಸರಸ್ವತೀಂ ।**
**ತದನುಜ್ಞಾಂ ಗೃಹೀತ್ವಾ ಚ ಜಗಾಮ ತುಲಸೀವನಂ ||೮||**

**ತತ್ರ ಗತ್ವಾ ಚ ಸುಸ್ನಾತಃ ಹರಿಃ ಸ ತುಲಸೀಂ ಸತೀಂ ।**
**ಪೂಜಯಾಮಾಸ ತಾಂ ಧ್ಯಾತ್ವಾ ಸ್ತೋತ್ರಂ ಭಕ್ತ್ಯಾ ಚಕಾರ ಹ ||೯||**

---

ಹರಿಯು ತುಲಸಿಯನ್ನು ಪೂಜಿಸಿ ಗೌರವದಲ್ಲಿ ಅವಳನ್ನು ಲಕ್ಷ್ಮಿಗೆ ಸಮಾನಳನ್ನಾಗಿ ಮಾಡಿ ಅವಳೊಡನೆ ಕ್ರೀಡಿಸಿದನು. ಲಕ್ಷ್ಮಿಯೂ ಗಂಗೆಯೂ ನಾರಾಯಣನಿಗೆ ಉಂಟಾದ ತುಲಸಿಯ ಹೊಸ ಸಂಬಂಧವನ್ನು ಸಹಿಸಿದರು. ಸರಸ್ವತಿಯು ಮಾತ್ರ ಕೋಪದಿಂದ ಅವಳಿಗುಂಟಾದ ಗೌರವವನ್ನೂ ಕಂಡು ಸಹಿಸಲಿಲ್ಲ. ||೪-೫||

ಕೋಪವುಳ್ಳ ಆ ಸರಸ್ವತಿಯು ನಾರಾಯಣನ ಎದುರಿಗೆ ಜಗಳಮಾಡಿ ಆ ತುಲಸಿಯನ್ನು ಹೊಡೆದಳು. ತುಲಸಿಯು ನಾಚಿಕೆಯಿಂದಲೂ ಅಪಮಾನದಿಂದಲೂ ಯಾರಿಗೂ ಕಾಣದಂತೆ ಮರೆಯಾದಳು. ಸರ್ವಸಿದ್ಧಿಗೂ ಅಭಿಮಾನಿದೇವತೆಯೂ ಜ್ಞಾನಿಗಳಿಗೆ ಸಿದ್ಧಿಯನ್ನು ಕೊಡತಕ್ಕವಳೂ ಆದ ತುಲಸಿಯು ಕೋಪದಿಂದ ಎಲ್ಲೆಡೆಯಲ್ಲಿಯೂ ಯಾರಿಗೂ ಕಾಣದಂತೆ ಹೋದಳು. ||೬-೭||

ಹರಿಯು ತುಲಸಿಯನ್ನು ಕಾಣದೆ ಸರಸ್ವತಿಗೆ ತಿಳಿವಳಿಕೆಯನ್ನು ಹೇಳಿ ಅವಳಪ್ಪಣೆಯನ್ನು ಪಡೆದು ತುಲಸಿಯ ವನಕ್ಕೆ ಹೋಗಿ ಸ್ನಾನಮಾಡಿ ಪತಿವ್ರತೆ

ಲಕ್ಷ್ಮೀ ಮಾಯಾ ಕಾಮವಾಣೀ ಬೀಜಪೂರ್ವಂ ದಶಾಕ್ಷರಂ ।
ವೃಂದಾವನೀತಿ ಙೇಽಂತಂ ಚ ವಹ್ನಿಜಾಯಾಂತಮೇವ ಚ ॥೧೦॥

ಅನೇಕಕಲ್ಪತರುಣಾ ಮಂತ್ರರಾಜೇನ ನಾರದ ।
ಪೂಜಯೇದ್ಯೋ ವಿಧಾನೇನ ಸರ್ವಸಿದ್ಧಿಂ ಲಭೇತ್ ಧ್ರುವಂ ॥೧೧॥

ಘೃತದೀಪೇನ ಧೂಪೇನ ಸಿಂಧೂರಚಂದನನೇನ ಚ ।
ನೈವೇದ್ಯೇನ ಚ ಪುಷ್ಪೇಣ ಚೋಪಚಾರೇಣ ನಾರದ ॥೧೨॥

ಹರಿಸ್ತೋತ್ರೇಣ ತುಷ್ಟಾ ಸಾ ಚಾಽಽವಿರ್ಭೂತಾ ಮಹೀರುಹಾತ್ ।
ಪ್ರಸನ್ನಾ ಚರಣಾಂಭೋಜೇ ಜಗಾಮ ಶರಣಂ ಶುಭಾ ॥೧೩॥

ವರಂ ತಸ್ಯೈ ದದೌ ವಿಷ್ಣುಃ ಸರ್ವಪೂಜ್ಯಾ ಭವೇರಿತಿ ।
ಅಹಂ ತ್ವಾಂ ಧಾರಯಿಷ್ಯಾಮಿ ಸುರೂಪಾಂ ಮೂರ್ಧ್ನಿ ವಕ್ಷಸಿ ॥೧೪॥

---

ಯಾದ ತುಲಸಿಯನ್ನು ಪೂಜಿಸಿ ಧ್ಯಾನಮಾಡಿ ಭಕ್ತಿಯಿಂದ ಸ್ತೋತ್ರಮಾಡಿದನು. ||೮-೯||

ಶ್ರೀ, ಭುವನೇಶ್ವರೀ, ಕಾಮ, ಸರಸ್ವತೀಬೀಜಾಕ್ಷರಗಳನ್ನುಚ್ಚರಿಸಿ ಚತುರ್ಥೀ ವಿಭಕ್ತ್ಯಂತವಾದ ವೃಂದಾವನೀ ಶಬ್ದವನ್ನೂ ಕೊನೆಯಲ್ಲಿ ಅಗ್ನಿಪತ್ನಿಯಾದ ಸ್ವಾಹಾ ದೇವಿಯ ಶಬ್ದವನ್ನೂ ಹೇಳಿ ಹತ್ತು ಅಕ್ಷರಗಳಿಂದ ಕೂಡಿದ ಕಲ್ಪವೃಕ್ಷಗಳಂತೆ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ಶ್ರೇಷ್ಠವಾದ ಮಂತ್ರದಿಂದ ಯಾರು ಪೂಜಿಸುವರೋ ಅವರು ಸಕಲ ಸಿದ್ಧಿಗಳನ್ನೂ ಪಡೆಯುವರು. ಇದು ನಿಜವು. ||೧೦-೧೧||

ತುಪ್ಪದ ದೀಪ, ಧೂಪ, ಶ್ರೀಗಂಧ, ಸಿಂಧೂರಾದಿ ಮಂಗಳದ್ರವ್ಯಗಳು ನೈವೇದ್ಯ, ಪುಷ್ಪ, ಉಪಚಾರ ಇವುಗಳಿಂದ ಪೂಜಿಸಿ ಹರಿಯು ಸ್ತೋತ್ರಮಾಡುತ್ತಾ ಇರಲು, ತುಲಸಿಯ ಗಿಡದಲ್ಲಿ ದೇವಿಯು ಮಂಗಳಕರವಾಗಿ ಕಾಣಿಸಿಕೊಂಡಳು. ಮತ್ತು ಪ್ರಸನ್ನಳಾಗಿ (ಕೋಪವನ್ನು ಬಿಟ್ಟು) ಹರಿಯಪಾದಕ್ಕೆ ನಮಸ್ಕರಿಸಿ ಶರಣಾಗತಳಾದಳು. ||೧೨-೧೩||

ವಿಷ್ಣುವು ಆ ತುಲಸಿಗೆ " ನೀನು ಸರ್ವರಿಂದಲೂ ಪೂಜೆಯನ್ನು ಹೊಂದು." ಎಂದು ವರವನ್ನು ಕೊಟ್ಟು ರೂಪವತಿಯಾದ ನಿನ್ನನ್ನು ನಾನು ತಲೆಯ ಮೇಲೂ

**ಸರ್ವೇ ತ್ವಾಂ ಧಾರಯಿಷ್ಯಂತಿ ಸ್ವಮೂರ್ಧ್ನಿ ಚ ಸುರಾದಯಃ ।**
**ಇತ್ಯುಕ್ತ್ವಾ ತಾಂ ಗೃಹೀತ್ವಾ ಚ ಪ್ರಯಯೌ ಸ್ವಾಲಯಂ ವಿಭುಃ ॥೧೫॥**

**॥ ನಾರದ ಉವಾಚ ॥**

**ಕಿಂ ಧ್ಯಾನಂ ಸ್ತವನಂ ಕಿಂ ವಾ ಕಿಂ ವಾ ಪೂಜಾವಿಧಾನಕಂ ।**
**ತುಲಸ್ಯಾಶ್ಚ ಮಹಾಭಾಗ ತನ್ಮೇ ವ್ಯಾಖ್ಯಾತುಮರ್ಹಸಿ ॥೧೬॥**

**॥ ಶ್ರೀನಾರಾಯಣ ಉವಾಚ ॥**

**ಅಂತರ್ಹಿತಾಯಾಂ ತಸ್ಯಾಂ ಚ ಹರಿರ್ವೃಂದಾವನೇ ತದಾ ।**
**ತಸ್ಯಾಶ್ಚಕ್ರೇ ಸ್ತುತಿಂ ಗತ್ವಾಂ ತುಲಸೀಂ ವಿರಹಾತುರಃ ॥೧೭॥**

**॥ ಶ್ರೀಭಗವಾನುವಾಚ ॥**

**ವೃಂದರೂಪಾಶ್ಚ ವೃಕ್ಷಾಶ್ಚ ಯದೈಕತ್ರ ಭವಂತಿ ಚ ।**
**ವಿದುರ್ಬುಧಾಸ್ತೇನ ವೃಂದಾಂ ಮತ್ಪ್ರಿಯಾಂ ತಾಂ ಭಜಾಮ್ಯಹಂ ॥೧೮॥**

---

ಹೃದಯದಲ್ಲಿಯೂ ಧರಿಸುವೆನು. ದೇವತೆಗಳೇ ಮೊದಲಾದವರೆಲ್ಲರೂ ನಿನ್ನನ್ನು ತಮ್ಮ ತಲೆಯ ಮೇಲಿಟ್ಟು ಗೌರವಿಸುವರು. ಎಂದು ಹೇಳಿ ಆಕೆಯನ್ನು ಕರೆದು ಕೊಂಡು ವೈಕುಂಠಕ್ಕೆ ಪ್ರಯಾಣಮಾಡಿದನು. ॥೧೪-೧೫॥

ಎಲೈ ನಾರಾಯಣ ಮುನಿಯೇ, ತುಲಸಿಯ ಪೂಜಾವಿಧಾನವೆಂತು? ಧ್ಯಾನ ವೆಂತು? ಸ್ತೋತ್ರವಾವುದು? ಇವೆಲ್ಲವನ್ನೂ ವಿಸ್ತಾರವಾಗಿ ಹೇಳಬೇಕು. ಎಂದು ನಾರದನು ನಾರಾಯಣ ಮುನಿಯನ್ನು ಪ್ರಶ್ನಿಸಿದನು. ॥೧೬॥

ನಾರಾಯಣನು ಹೇಳಿದನು— ತುಲಸಿಯು ಅಂತರ್ಧಾನವಾದಾಗ ಹರಿಯು ವೃಂದಾವನದಲ್ಲಿ ಅವಳ ವಿರಹದಿಂದ ಕೂಡಿದವನಾಗಿ ಸ್ತೋತ್ರಮಾಡಿದನು. ॥೧೭॥

ಭಗವಂತನು ಹೇಳಿದನು—ಗುಂಪಾಗಿ ಒಂದೇ ಕಡೆ ತುಲಸಿಯ ವೃಕ್ಷಗಳಿರು ವೆಡೆಯಲ್ಲಿ ನನ್ನ ಪ್ರಿಯೆಗೆ ವೃಂದೆ ಎಂದು ಹೆಸರಿರುವುದು. ಆ ತುಲಸಿಯನ್ನು ನಾನು ಧ್ಯಾನಿಸುವೆನು. ॥೧೮॥

ಪುರಾ ಬಭೂವ ಯಾ ದೇವೀ ತ್ವಾದೌ ವೃಂದಾವನೇ ವನೇ ।
ತೇನ ವೃಂದಾವನಾ ಖ್ಯಾತಾ ಸೌಭಾಗ್ಯಾಂ ತಾಂ ಭಜಾಮ್ಯಹಂ ॥೧೯॥

ಅಸಂಖ್ಯೇಷು ಚ ವಿಶ್ವೇಷು ಪೂಜಿತಾ ಯಾ ನಿರಂತರಂ ।
ತೇನ ವಿಶ್ವಪೂಜಿತಾಖ್ಯಾ ಪೂಜಿತಾಂ ಚ ಭಜಾಮ್ಯಹಂ ॥೨೦॥

ಅಸಂಖ್ಯಾನಿ ಚ ವಿಶ್ವಾನಿ ಪವಿತ್ರಾಣಿ ತ್ವಯಾ ಸದಾ ।
ತ್ವಾಂ ವಿಶ್ವಪಾವನೀಂ ದೇವೀಂ ವಿರಹೇಣ ಸ್ಮರಾಮ್ಯಹಂ ॥೨೧॥

ದೇವಾ ನ ತುಷ್ಟಾಃ ಪುಷ್ಪಾಣಾಂ ಸಮೂಹೇನ ಯಯಾ ವಿನಾ ।
ತಾಂ ಪುಷ್ಪಸಾರಾಂ ಶುದ್ಧಾಂ ಚ ದ್ರಷ್ಟುಮಿಚ್ಛಾಮಿ ಶೋಕತಃ ॥೨೨॥

ವಿಶ್ವೇ ಯತ್ಪ್ರಾಪ್ತಿಮಾತ್ರೇಣ ಭಕ್ತಾನಂದೋ ಭವೇದ್ಧ್ರುವಂ ।
ನಂದಿನೀ ತೇನ ವಿಖ್ಯಾತಾ ಸಾ ಪ್ರೀತಾ ಭವತಾದಿಹ ॥೨೩॥

---

ಪೂರ್ವದಲ್ಲಿ ತುಲಸಿಯು ವೃಂದೆಯಿಂದ ರಕ್ಷಿಸಿದ ವನದಲ್ಲಿದ್ದುದರಿಂದ ವೃಂದಾವನಾ ಎಂಬ ಹೆಸರನ್ನು ಹೊಂದಿದಳು. ಸೌಭಾಗ್ಯವತಿಯಾದ ಅವಳನ್ನು ಧ್ಯಾನಿಸುತ್ತೇನೆ. ॥೧೯॥

ಲೆಕ್ಕವಿಲ್ಲದಷ್ಟು ಪ್ರಪಂಚದಲ್ಲಿ ಯಾವಾಗಲೂ ಪೂಜೆಯನ್ನು ಪಡೆಯುವಳಾದುದರಿಂದ ವಿಶ್ವಪೂಜಿತಾ ಎಂಬ ಹೆಸರನ್ನು ಪಡೆದ ತುಲಸೀದೇವಿಯನ್ನು ನಾನು ಧ್ಯಾನಿಸುವೆನು. ॥೨೦॥

ನಿನ್ನಿಂದ ಯಾವಾಗಲೂ ಅನೇಕ ಪ್ರಕಾರವಾದ ಪ್ರಪಂಚಗಳು ಪರಿಶುದ್ಧವಾಗುವುವು. ಆದುದರಿಂದ ವಿಶ್ವಪಾವನಿ ಎಂಬ ಹೆಸರನ್ನು ಪಡೆದ ನಿನ್ನನ್ನು ಅಗಲಿದ ದುಃಖದಿಂದ ಧ್ಯಾನಮಾಡುತ್ತೇನೆ. ॥೨೧॥

ಯಾವ ತುಲಸಿಯಿಲ್ಲದೆ ಮಿಕ್ಕ ಪುಷ್ಪಗಳ ಸಮೂಹದಿಂದ ದೇವತೆಗಳು ತೃಪ್ತಿಪಡುವುದಿಲ್ಲವೋ ಅಂತಹ ಹೂಗಳಲ್ಲೆಲ್ಲಾ ಶ್ರೇಷ್ಠಳೂ ಪವಿತ್ರಳೂ ಆದ ತುಲಸಿಯನ್ನು ವಿರಹಶೋಕದಿಂದ ನೋಡಲಪೇಕ್ಷಿಸುವೆನು. ॥೨೨॥

ಪ್ರಪಂಚದಲ್ಲಿ ಯಾವ ತುಲಸಿಯ ಪ್ರಾಪ್ತಿಯಿಂದ ಭಕ್ತರಿಗೆಲ್ಲರಿಗೂ ಆನಂದ ವುಂಟಾಗುವುದೋ ಆ ಕಾರಣದಿಂದ ನಂದಿನೀ ಎಂಬ ಹೆಸರನ್ನು ಪಡೆದ ತುಲಸಿಯು ಸಂತೋಷವನ್ನು ಹೊಂದಲಿ. ॥೨೩॥

ಯಸ್ಯಾ ದೇವ್ಯಾಸ್ತುಲಾ ನಾಸ್ತಿ ವಿಶ್ವೇಷು ನಿಖಿಲೇಷು ಚ ।
ತುಲಸೀ ತೇನ ವಿಖ್ಯಾತಾ ತಾಂ ಯಾಮಿ ಶರಣಂ ಪ್ರಿಯಾಂ ॥೨೪॥

ಕೃಷ್ಣಜೀವನರೂಪಾ ಸಾ ಶಶ್ವತ್ಪ್ರಿಯತಮಾ ಸತೀ ।
ತೇನ ಕೃಷ್ಣಜೀವನೀ ಸಾ ಸಾ ಮೇ ರಕ್ಷತು ಜೀವನಂ ॥೨೫॥

ಇತ್ಯೇವಂ ಸ್ತವನಂ ಕೃತ್ವಾ ತಸ್ಥೌ ತತ್ರ ರಮಾಪತಿಃ ।
ದದರ್ಶ ತುಲಸೀಂ ಸಾಕ್ಷಾತ್ಪಾದಪದ್ಮನತಾಂ ಸತೀಂ ॥೨೬॥

ರುದತೀಮವಮಾನೇನ ಮಾನಿನೀಂ ಮಾನಪೂಜಿತಾಂ ।
ಪ್ರಿಯಾಂ ದೃಷ್ಟ್ವಾ ಪ್ರಿಯಃ ಶೀಘ್ರಂ ವಾಸಯಾಮಾಸ ವಕ್ಷಸಿ॥೨೭॥

ಭಾರತ್ಯಾಜ್ಞಾಂ ಗೃಹೀತ್ವಾ ಚ ಸ್ವಾಲಯಂ ಚ ಯಯೌ ಹರಿಃ ।
ಭಾರತ್ಯಾ ಸಹ ತತ್ಪ್ರೀತಿಂ ಕಾರಯಾಮಾಸ ಸತ್ವರಂ ॥೨೮॥

---

ಸಮಸ್ತ ಪ್ರಪಂಚಗಳಲ್ಲಿಯೂ ಯಾವ ದೇವಿಗೆ ಸಮಾನರಾದವರಿಲ್ಲವೋ ಆ ಕಾರಣದಿಂದ ತುಲಸೀ ಎಂಬ ಪ್ರಸಿದ್ಧಿಯನ್ನು ಪಡೆದ ದೇವಿಯನ್ನು ಶರಣು ಹೊಂದಿರುವೆನು. ॥೨೪॥

ಬಾರಿಬಾರಿಗೂ ಪ್ರೀತಿಪಾತ್ರಳಾದ ಪತಿವ್ರತೆಯಾಗಿ ಕೃಷ್ಣನ ಜೀವಸ್ವರೂಪಳಾದುದರಿಂದ ಕೃಷ್ಣಜೀವನೀ ಎಂಬ ಹೆಸರನ್ನು ಪಡೆದ ಆ ತುಲಸೀದೇವಿಯು ನನ್ನ ಜೀವನವನ್ನು ಕಾಪಾಡಲಿ. ॥೨೫॥

ಈ ರೀತಿಯಾದ ಸ್ತೋತ್ರಮಾಡಿ ಲಕ್ಷ್ಮೀಪತಿಯಾದ ನಾರಾಯಣನು ಅಲ್ಲಿಯೇ ನಿಂತಿದ್ದನು. ತರುವಾಯ ತಾನಾಗಿಯೇ ಬಂದು ತನ್ನ ಪಾದಗಳಿಗೆ ನಮಸ್ಕಾರಮಾಡಿದ ಪತಿವ್ರತೆಯಾದ ತುಲಸೀದೇವಿಯನ್ನು ನಾರಾಯಣನು ನೋಡಿದನು. ॥೨೬॥

ಪ್ರಣಯಕೋಪದಿಂದ ಕೂಡಿದ ತನಗೆ ಮಾಡಿದ ಅಪಮಾನದಿಂದ ಅಳುತ್ತಿರುವ ಪ್ರೀತಿಪಾತ್ರಳಾದ ತುಲಸಿಯನ್ನು ನೋಡಿ ನಾರಾಯಣನು ಆಕೆಯನ್ನು ತನ್ನ ಎದೆಯಲ್ಲಿ ಯಾವಾಗಲೂ ನೆಲಸಿರುವಂತೆ ಮಾಡಿದನು. (ಇಟ್ಟುಕೊಂಡನು). ॥೨೭॥

ಸರಸ್ವತಿಯ ಅಪ್ಪಣೆಯನ್ನು ತೆಗೆದುಕೊಂಡು ಹರಿಯು ತನ್ನ ಮನೆಗೆ ಹೋದನು. ಬೇಗನೆ ಸರಸ್ವತಿಯೊಡನೆ ತುಲಸಿಗೆ ಪ್ರೀತಿಯನ್ನುಂಟುಮಾಡಿಸಿದನು.

ವರಂ ವಿಷ್ಣುರ್ದದೌ ತಸ್ಯೈ ಸರ್ವಪೂಜ್ಯಾ ಭವೇರಿತಿ ।
ಶಿರೋಧಾರ್ಯಾ ಚ ಸರ್ವೇಷಾಂ ವಂದ್ಯಾ ಮಾನ್ಯಾ ಮಮೇತಿ ಚ॥೨೯॥

ವಿಷ್ಣೋರ್ವರೇಣ ಸಾ ದೇವೀ ಪರಿತುಷ್ಟಾ ಬಭೂವ ಚ ॥
ಸರಸ್ವತೀ ತಾಮಾಕೃಷ್ಯ ವಾಸಯಾಮಾಸ ಸನ್ನಿಧೌ ॥೩೦॥

ಲಕ್ಷ್ಮೀರ್ಗಂಗಾ ಸಸ್ಮಿತಾ ಚ ತಾಂ ಸಮಾಕೃಷ್ಯ ನಾರದ ।
ಗೃಹಂ ಪ್ರವೇಶಯಾಮಾಸ ವಿನಯೇನ ಸತೀಂ ಸದಾ ॥೩೧॥

ವೃಂದಾ ವೃಂದಾವನೀ ವಿಶ್ವಪೂಜಿತಾ ವಿಶ್ವಪಾವನೀ ।
ಪುಷ್ಪಸಾರಾಽಽನಂದಿನೀ ಚ ತುಲಸೀ ಕೃಷ್ಣಜೀವನೀ ॥೩೨॥

ಏತನ್ನಾಮಾಷ್ಟಕಂ ಚೈವ ಸ್ತೋತ್ರಂ ನಾಮಾರ್ಥಸಂಯುತಂ ।
ಯಃ ಪಠೇತ್ತಾಂ ಚ ಸಂಪೂಜ್ಯ ಸೋಽಶ್ವಮೇಧಫಲಂ ಲಭೇತ್॥೩೩॥

ಕಾರ್ತಿಕ್ಯಾಂ ಪೂರ್ಣಿಮಾಯಾಂ ಚ ತುಲಸ್ಯಾ ಜನ್ಮಮಂಗಲಂ ।
ತತ್ರ ತಸ್ಯಾಶ್ಚ ಪೂಜಾ ಚ ವಿಹಿತಾ ಹರಿಣಾ ಪುರಾ ॥೩೪॥

---

ತುಲಸಿಗೆ "ಸಮಸ್ತರಿಂದಲೂ ಪೂಜೆಯನ್ನು ಹೊಂದು" ಎಂದು ವರವನ್ನು ಕೊಟ್ಟನು. ಸರ್ವರೂ ನಿನ್ನನ್ನು ತಲೆಯಲ್ಲಿ ಧರಿಸುವರು. ನನ್ನ ಗೌರವಕ್ಕೂ ನೀನು ಪಾತ್ರಳು. ಎಂದು ಹೇಳಿದನು. ||೨೮-೨೯||

ವಿಷ್ಣುವಿನ ವರದಿಂದ ತುಲಸೀದೇವಿಯು ಸಂತೋಷಹೊಂದಿದಳು. ಸರಸ್ವತಿಯು ಆಕೆಯನ್ನು ಕೈಹಿಡಿದು ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡಳು. ಲಕ್ಷ್ಮೀ ಮತ್ತು ಗಂಗೆಯರು ನಗುತ್ತಾ ಆಕೆಯನ್ನು ಕರೆದುಕೊಂಡು ಮನೆಗೆ ಹೋದರು. ||೩೦-೩೧||

ವೃಂದಾ, ವೃಂದಾವನೀ, ವಿಶ್ವಪೂಜಿತಾ, ವಿಶ್ವಪಾವನೀ, ಪುಷ್ಪಸಾರಾ, ಆನಂದಿನೀ, ತುಲಸೀ, ಕೃಷ್ಣಜೀವನೀ, ಈ ಎಂಟು ನಾಮಗಳ ಅರ್ಥಗಳಿಂದ ಕೂಡಿದ ಸ್ತೋತ್ರವನ್ನು, ತುಲಸಿಯನ್ನು ಪೂಜೆಮಾಡಿ ಯಾರು ಹೇಳುವರೋ ಅವರಿಗೆ ಅಶ್ವಮೇಧ ಯಜ್ಞದ ಫಲವು ಬರುವುದು. ||೩೨-೩೩||

ಕಾರ್ತಿಕಮಾಸದಲ್ಲಿ ಪೂರ್ಣಿಮೆಯ ದಿವಸ ತುಲಸಿಯು ಹುಟ್ಟಿದುದು. ಆ ದಿನ ತುಲಸಿಯ ಪೂಜೆಯನ್ನು ಮಾಡಬೇಕೆಂದು ಹರಿಯು ನಿಯಮಿಸಿರುವನು.

ತಸ್ಯಾಂ ಯಃ ಪೂಜಯೇತ್ತಾಂ ಚ ಭಕ್ತ್ಯಾ ಚ ವಿಶ್ವಪಾವನೀಂ ।
ಸರ್ವಪಾಪಾದ್ವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥೩೫॥

ಕಾರ್ತಿಕೇ ತುಲಸೀಪತ್ರಂ ಯೋ ದದಾತಿ ಚ ವೈಷ್ಣವೇ ।
ಗವಾಮಯುತದಾನಸ್ಯ ಫಲಂ ಪ್ರಾಪ್ನೋತಿ ನಿಶ್ಚಿತಂ ॥೩೬॥

ಅಪುತ್ರೋ ಲಭತೇ ಪುತ್ರಂ ಪ್ರಿಯಾಹೀನೋ ಲಭೇತ್ಪ್ರಿಯಾಂ ।
ಬಂಧುಹೀನೋ ಲಭೇದ್ಬಂಧುಂ ಸ್ತೋತ್ರಶ್ರವಣಮಾತ್ರತಃ ॥೩೭॥

ರೋಗೀ ಪ್ರಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ।
ಭಯಾನ್ಮುಚ್ಯೇತ ಭೀರುಸ್ತು ಪಾಪಾನ್ಮುಚ್ಯೇತ ಘಾತಕೀ ॥೩೮॥

ಇತ್ಯೇವಂ ಕಥಿತಂ ಸ್ತೋತ್ರಂ ಧ್ಯಾನಂ ಪೂಜಾವಿಧಿಂ ಶೃಣು ।
ತ್ವಮೇವ ವೇದ ಜಾನಾಸಿ ಕಣ್ವಶಾಖೋಕ್ತಮೇವ ಚ ॥೩೯॥

ತದ್ವೃಕ್ಷೇ ಪೂಜಯೇತ್ತಾಂ ಚ ಭಕ್ತ್ಯಾ ಚಾವಾಹನಂ ವಿನಾ ।
ತಾಂ ಧ್ಯಾತ್ವಾ ಚೋಪಚಾರೇಣ ಧ್ಯಾನಂ ಪಾತಕನಾಶನಂ ॥೪೦॥

---

ಪ್ರಪಂಚವನ್ನು ಪರಿಶುದ್ಧವನ್ನಾಗಿ ಮಾಡುವ ತುಲಸಿಯನ್ನು ಆ ದಿನ ಯಾರು ಭಕ್ತಿಯಿಂದ ಪೂಜಿಸುವರೋ ಅವರು ಸಮಸ್ತ ಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕಕ್ಕೆ ಹೋಗುವರು. ॥೩೪-೩೫॥

ಕಾರ್ತಿಕಮಾಸದಲ್ಲಿ ತುಲಸಿಯನ್ನು ವಿಷ್ಣುಭಕ್ತನಿಗೆ ಕೊಟ್ಟರೆ ಹತ್ತುಸಾವಿರ ಗೋದಾನ ಮಾಡಿದ ಫಲವು ಬರುವುದು. ತುಲಸಿಯ ಸ್ತೋತ್ರವನ್ನು ಕೇಳಿದ ಮಾತ್ರದಿಂದಲೇ ಮಕ್ಕಳಿಲ್ಲದವನು ಮಕ್ಕಳನ್ನೂ, ಹೆಂಡಿತಿಯಿಲ್ಲದವನು ಹೆಂಡಿತಿಯನ್ನೂ ನೆಂಟರಿಲ್ಲದವನು ನೆಂಟರನ್ನೂ ಪಡೆವರು. ॥೩೬-೩೭॥

ರೋಗಿಗೆ ರೋಗಬಿಡುವುದು. ಬಂಧನಕ್ಕೆ ಸಿಕ್ಕಿದವನು ಬಂಧನದಿಂದ ಬಿಡಲ್ಪಡುವನು. ಭಯಪಟ್ಟವನ ಭಯವು ನಾಶವಾಗಿಬಿಡುವುದು. ಪಾಪಿಯ ಪಾಪವೂ ನಾಶವಾಗುವುದು. ॥೩೮॥

ತುಲಸಿಯ ಸ್ತೋತ್ರವನ್ನು ಹೇಳಿಯಾಯ್ತು. ಇನ್ನು ಧ್ಯಾನವನ್ನೂ ಪೂಜಾವಿಧಿಯನ್ನೂ ಕೇಳು. ನೀನೇ ವೇದದಲ್ಲಿ ಕಣ್ವಶಾಖೆಯಲ್ಲಿ ಹೇಳಿದುದನ್ನು ತಿಳಿದಿ

ತುಲಸೀಂ ಪುಷ್ಪಸಾರಂ ಚ ಸತೀಂ ಪೂತಾಂ ಮನೋಹರಾಂ ।
ಕೃತಪಾಪೇಧ್ಮದಾಹಾಯ ಜ್ವಲದಗ್ನಿಶಿಖೋಪಮಾಂ ॥೪೦॥

ಪುಷ್ಪೇಷು ತುಲನಾ ಯಸ್ಯಾ ನಾಸ್ತಿ ವೇದೇಷು ಭಾಷಿತಂ ।
ಪವಿತ್ರರೂಪಾ ಸರ್ವಾಸು ತುಲಸೀ ಸಾ ಚ ಕೀರ್ತಿತಾ ॥೪೨॥

ಶಿರೋಧಾರ್ಯಾ ಚ ಸರ್ವೇಷಾಮೀಪ್ಸಿತಾ ವಿಶ್ವಪಾವನೀ ।
ಜೀವನ್ಮುಕ್ತಾಂ ಮುಕ್ತಿದಾಂ ಚ ಭಜೇ ತಾಂ ಹರಿಭಕ್ತಿದಾಂ ॥೪೩॥

ಇತಿಧ್ಯಾತ್ವಾ ಚ ಸಂಪೂಜ್ಯ ಸ್ತುತ್ವಾ ಚ ಪ್ರಣಮೇತ್ಸುಧೀಃ ।
ಉಕ್ತಂ ತುಲಸ್ಯುಪಾಖ್ಯಾನಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೪೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ನವಮಸ್ಕಂಧೇ
ಪಂಚವಿಂಶೋಽಧ್ಯಾಯಃ

---

ರುವೆ. ತುಲಸೀವೃಕ್ಷದಲ್ಲಿ ಭಕ್ತಿಯಿಂದ ತುಲಸೀದೇವಿಯನ್ನು ಪೂಜಿಸಬೇಕು. ತುಲಸಿಯ ಧ್ಯಾನವು ಪಾಪನಾಶಕವಾದುದು. ॥೩೯-೪೦॥

ತುಲಸಿಯು ಪುಷ್ಪಗಳಲ್ಲಿ ಶ್ರೇಷ್ಠವಾದುದು. ಅವಳು ಮನೋಹರಳಾದ ಪತಿವ್ರತೆಯು. ಪಾಪವೆಂಬ ಕಟ್ಟಿಗೆಗೆ ಅಗ್ನಿಸ್ವರೂಪಳು. ಪುಷ್ಪಗಳಲ್ಲಿ ತುಲಸಿಗೆ ಸಮಾನವಾದುದಿಲ್ಲವೆಂದು ವೇದದಲ್ಲಿ ಹೇಳಿರುವುದು. ಸಮಸ್ತ ಪದಾರ್ಥಗಳಲ್ಲಿಯೂ ತುಲಸಿಯು ಪರಿಶುದ್ಧವಾದುದು. ॥೪೧-೪೨॥

ಸಮಸ್ತರೂ ತುಲಸಿಯನ್ನು ತಲೆಯಲ್ಲಿ ಧರಿಸುವರು. ತುಲಸಿಯು ಪ್ರಪಂಚವನ್ನು ಶುದ್ಧಿಮಾಡುವಳು. ಜೀವನ್ಮುಕ್ತಳು. ಮುಕ್ತಿಯನ್ನು ಕೊಡತಕ್ಕವಳು. ಹರಿಯ ಪ್ರೀತಿಗೆ ಪಾತ್ರಳಾದವಳು. ಇಂತಹವಳನ್ನು ಭಕ್ತಿಯಿಂದ ಹೀಗೆಂದು ಧ್ಯಾನಿಸಿ ಪೂಜಿಸಿ ಸ್ತೋತ್ರಮಾಡಿ ನಮಸ್ಕರಿಸಬೇಕು. ತುಲಸಿಯ ಉಪಾಖ್ಯಾನವನ್ನು ಹೇಳಿಯಾಯಿತು. ಮತ್ತೇನನ್ನು ಕೇಳಬಯಸುವೆ? ಎಂದು ನಾರಾಯಣಮುನಿಯು ನಾರದನನ್ನು ಕುರಿತು ಹೇಳಿದನು. ॥೪೩-೪೪॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಒಂಬತ್ತನೆಯ ಸ್ಕಂಧದಲ್ಲಿ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.